ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ

## ಸಂಪುಟ – ೩

# ತೈತ್ತಿರೀಯ ಸಂಹಿತಾ

(ಪ್ರಥಮಕಾಂಡ; 3–4–5 ಪ್ರಪಾಠಕಗಳು)

ಪ್ರಧಾನ ಸಂಪಾದಕ
ವಿದ್ವಾನ್ ಪಿ.ಎಸ್. ರಾಮೇಶ್ವರಾವಧಾನಿ

ಸಹಾಯಕ ಸಂಪಾದಕ
ವಿದ್ವಾನ್ ಸೋ. ತಿ. ನಾಗರಾಜ



ಪ್ರಕಾಶನ
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ
ಬೆಂಗಳೂರು

**KRISHNA YAJURVEDA KANNADA PRAKASHANA**-VOLUME-3
CHIEF EDITOR, VIDWAN **P.S. RAMESHWARA AVADHANI,**
PUBLISHED BY **JYOTHI SAMSKRITIKA PRATISHTHANA (REGD),**
NO. 31, PAMPA MAHAKAVI ROAD, BANGALORE-560 004

**THIRD EDITION : 2011**

**PAGES : 640**



ತೃತೀಯ ಮುದ್ರಣ : 2011

ಮುದ್ರಕರು :
ಪರಿಮಳ ಮುದ್ರಣಾಲಯ
ಬ್ಯಾಟರಾಯನಪುರ, ಮೈಸೂರು ರಸ್ತೆ
ಬೆಂಗಳೂರು-26. ದೂರವಾಣಿ : 26758058

# ಪರಿವಿಡಿ



## ತೃತೀಯಃ ಪ್ರಶ್ನಃ ಮಂತ್ರಪಾಠ

# ಚತುರ್ಥಃ ಪ್ರಶ್ನಃ ಮಂತ್ರಪಾಠ



* * *

## ಪಂಚಮಃ ಪ್ರಶ್ನಃ ಮಂತ್ರಪಾಠ



* * *

# ಆಶೀರ್ವಚನ

## ಶ್ರೀ ಗುರುಭ್ಯೋ ನಮಃ

ಚತುರ್ವೇದಭಾಷ್ಯಕಾರರಾದ ಶ್ರೀ ಸಾಯಣಾಚಾರ್ಯರು ಕೃಷ್ಣಯಜುರ್ವೇದ ಭಾಷ್ಯಭೂಮಿಕೆಯಲ್ಲಿ "ನನು ಕೋಽಯಂ ವೇದೋ ನಾಮ?" ಎಂದು ಪ್ರಶ್ನೆ ಮಾಡಿ ಅದಕ್ಕೆ "ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ" ಎಂದು ಸಮಾಧಾನವನ್ನು ತಿಳಿಸಿದರು. ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳ ಅಲೌಕಿಕೋಪಾಯ ತಿಳಿಸುವ ಗ್ರಂಥವೇ ವೇದ. ಅಲೌಕಿಕೋ-ಪಾಯವು ಧರ್ಮವು. ನಮ್ಮ ಶ್ರೇಯಃಪ್ರೇಯಸ್ಸುಗಳಿಗೂ ದುಃಖಪರಿಹಾರಕ್ಕೂ ಸಾಧಕವಾದ ಧರ್ಮವನ್ನು ವೇದಗಳಿಂದಲೇ ತಿಳಿಯಬೇಕು.

ನಾವು ವೇದಾಧ್ಯಯನವನ್ನು ಮಾಡುತ್ತೇವೆ. ಅರ್ಥಜ್ಞಾನವಿಲ್ಲದೆ ಮಾಡಿದ ಅಧ್ಯಯನವು ವಿಶಿಷ್ಟವಾದ ಫಲವನ್ನು ಕೊಡಲು ಅಸಮರ್ಥ. ಅರ್ಥಜ್ಞಾನಕ್ಕಾಗಿ ಭಾಷ್ಯಗಳನ್ನು ಪರಿಶೀಲಿಸಬೇಕು. ಈ ಪರಿಶೀಲನೆಗೆ ಸಂಸ್ಕೃತಭಾಷಾಪಾಂಡಿತ್ಯ, ಮೀಮಾಂಸಾಪರಿಚಯ ಎರಡೂ ಬೇಕು. ಇವೆರಡನ್ನೂ ಸಾಧಿಸುವುದಕ್ಕೆ ನಾಲ್ಕಾರು ವರುಷಗಳ ಸತತ ಪ್ರಯತ್ನ ಆವಶ್ಯಕ. ಸರ್ವರಿಂದಲೂ ಸುಲಭವಾಗಿ ಸಾಧಿಸಲಶಕ್ಯ.

ನಮ್ಮ ಶಿಷ್ಯರಾದ ಶ್ರೀ ಬಿ.ಎನ್.ವಿ. ಸುಬ್ರಹ್ಮಣ್ಯಂ ಅವರು "ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ"ವೆಂಬ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ವೇದಮಂತ್ರಗಳ ತಾತ್ಪರ್ಯವನ್ನು ಎಲ್ಲರೂ ಸುಲಭವಾಗಿ ಅರಿಯಲು ಅನುಕೂಲವಾಗಲೆಂಬ ಉದ್ದೇಶದಿಂದ ಯಜುರ್ವೇದ ಕನ್ನಡಪ್ರಕಾಶನವನ್ನು ಆರಂಭಿಸಿದ್ದಾರೆ. ಈ ಕಾರ್ಯವು ಬೃಹತ್ತರವಾದುದು. ಶ್ರೀ ಸುಬ್ರಹ್ಮಣ್ಯಂ ಅವರು ಪರಹಿತಮತಿಯಿಂದ ಆರಂಭಿಸಿರುವ ಈ ಪ್ರಕಾಶನ ಕಾರ್ಯವು ಸುಲಭವಾಗಿ ಮುಂದುವರಿಯಲಿ. ಆಸ್ತಿಕಜನಸ್ತೋಮದ ಸಹಾಯ ಸಹಕಾರಗಳು ನಿರಂತರವಾಗಿ ಪ್ರವಹಿಸಲಿ. ಪ್ರಕಾಶನಗ್ರಂಥಗಳು ಆಸ್ತಿಕರ ಹೃದಯಗಳಲ್ಲಿ ಪ್ರಕಾಶವನ್ನು ಬೀರಲಿ. ತಮೋಗ್ರಂಥಿಗಳು ನಿರ್ಮೂಲಗೊಳ್ಳಲಿ ಮತ್ತು ಪ್ರಕಾಶಕರು ಭವಭಯಪ್ರಶಮನಕರನಾದ ಪರಮೇಶ್ವರನ ಕೃಪೆಯಿಂದ ಮಂಗಲಪರಂಪರೆಗಳನ್ನು ಅನುಭವಿಸಲೆಂದು ಹಾರೈಸುತ್ತೇವೆ.

ಪ್ರಭವ ಫಾಲ್ಗುಣ ಶುಕ್ಲದಶಮೀ — ಇತಿ ನಾರಾಯಣ ಸ್ಮರಣಂ

27-2-88 — ವಿದ್ಯಾತೀರ್ಥಃ

ಶೃಂಗಗಿರಿ.

श्री गुरुभ्यो नमः



"धर्मो विश्वस्य जगतः प्रतिष्ठेति" श्रुतिः सर्वस्यापि जगतः प्रतिष्ठा-साधनं धर्ममेव ब्रूते। स च धर्मः श्रुत्या अवगन्तव्यः इति "वेदोऽखिलो धर्ममूलं" इत्यादि वचनानि एककण्ठ्येन प्रतिपादयन्ति। यद्यपि स्मृत्याचारादीनामपि धर्म प्रमाजनकत्वमस्ति तथापि वेदमूलकत्वेनैव तासां धर्मे प्रामाण्यं न स्वातन्त्र्येण। अत एव श्रुतिस्मृत्योर्विरोधे स्मृतिरेव बाध्येति निर्णीतं पूर्वतन्त्रे।

स च वेदः 'अनन्ता वै वेदा' इति वचनानुसारेण अनन्तोऽपि ऋग्यजुस्सामाथर्वरूपेण चतुर्धा विभक्तो विराजते। एकैकस्यापि वेदस्य बह्व्यः शाखा आसन्निति 'एकशतमध्वर्यु शाखा' इत्यादिभिर्वाक्यैः प्रतीयते। परन्तु तासु नैकाः अधुना उत्सन्नाः केवलं अङ्गुलिमेयाः काश्चन शाखा एव अवशिष्टाः

तत्र 'स्वाध्यायोऽध्येतव्यः' इति विधिः स्वशाखाध्ययनं विधत्ते। अत एव विहितस्य वेदाध्ययनस्याकरणेन प्रत्यवायः समापतितीति "विहितस्याननुष्ठानान्निन्दितस्य च सेवनात्। अनिग्रहाच्चेन्द्रियाणां नरः पतनमृच्छति" इत्यादीनि वाक्यानि स्पष्टं ब्रुवते। एतेन वेदाध्ययनेनास्माकं किं



फलमिति केषांचिच्छङ्कापि निरस्ता वेदितव्या। 'ब्राह्मणेन निष्कारणं षडङ्गो वेदोऽध्येयो ज्ञेयश्च' इति महाभाष्यकारोदाहृतस्मात् वचनमप्येत देवोपोद्बलयति। अत उपनीतेन ब्राह्मणेन स्वशाखाध्ययनमवश्यं कर्तव्यम्।

वेदाध्ययनोत्तरमर्थज्ञानमवश्यं सम्पादनीयम्। तत्र अर्थज्ञान हीनस्य निन्दा, अर्थज्ञानवतः स्तुतिश्च शास्त्रे दृश्यते। तथाहि "स्थाणुरयं भारहरः किलाभूदधीत्यवेदं न विजानाति योर्थम्। योर्थज्ञ इत्सकलं भद्रमश्नुते नाकमेति ज्ञानविधूत पाप्मा" इत्युक्तम्। अत्र चन्दनकाष्ठ भारवाही गर्दभः स्वेनोह्यमानस्य चन्दनकाष्ठस्य गन्धं मनागपि न जानातीति। अर्थज्ञानहीनस्तेनोपमीयमानो निन्द्यत इति प्रतीयते। अर्थज्ञानवतस्तु शुभावाप्तिः दुरित निवृत्तिः इत्यादि फलकथनेन संस्तूयते। अतो वेदार्थज्ञानमवश्यं सम्पाद्यम्।

तत्र च मितम्पचमतयः वेदस्यार्थं वेत्तुं न पारयन्ति इति सर्वज्ञकल्पास्सायणाचार्याः लोकानुजिघृक्षया



चतुरोपि वेदान् व्याचचक्षिरे। वेदार्थं जिज्ञासमानानां सायणभाष्यं कल्पवृक्षायत इति नात्युक्तिः। वेदेषु वेदाङ्गेषु दर्शनेषु च सर्वेषु अप्रतिहता खलु गतिस्सायणाचार्याणाम्। अतस्सायणभाष्यमवलम्ब्यैव वेदार्थो ज्ञेयो जिज्ञासुभिः।

तत्र यजुर्वेदस्य सायणभाष्यानुसारेण कर्णाटक भाषया अनुवादं विधाप्य सुब्रह्मण्यार्यः प्रकाशयतीति विदित्वा मोदामहे। अस्यायं प्रयत्नः फलेग्रहिर्भूयात् सुब्रह्मण्यार्यश्च श्रेयः परम्पराभिस्समभिवर्धतामित्याशास्महे।

इति नारायणस्मरणम्

यात्रास्थानम् दिण्डिगल्

प्रभववर्षीय महाशिवरात्रिः भौमवासरः

भारती तीर्थः

ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯಮಹಾಸಂಸ್ಥಾನಂ ಶಾರದಾಪೀಠಮ್
ಶೃಂಗೇರಿ

# ಮುನ್ನುಡಿ

## ಶ್ರೀಗುರುಭ್ಯೋ ನಮಃ

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬುದಾಗಿ ಶ್ರುತಿಯು ಧರ್ಮವನ್ನೇ ಜಗತ್ತಿನ ಸ್ಥಿತಿಗೆ ಸಾಧನವನ್ನಾಗಿ ಹೇಳುತ್ತದೆ. ಆ ಧರ್ಮವು ವೇದದಿಂದಲೇ ತಿಳಿಯಲ್ಪಡತಕ್ಕದ್ದು ಎಂಬುದಾಗಿ 'ವೇದೋಽಖಿಲೋ ಧರ್ಮಮೂಲಮ್' ಮೊದಲಾದ ಉಕ್ತಿಗಳು ಒಕ್ಕೊರಲಿನಿಂದ ಹೇಳುತ್ತವೆ. ಸ್ಮೃತಿಗಳೂ, ಆಚಾರವೂ ಧರ್ಮದ ಯಥಾರ್ಥಜ್ಞಾನವನ್ನು ಉಂಟುಮಾಡಿಕೊಡತಕ್ಕವುಗಳಾಗಿದ್ದರೂ ಅವುಗಳಿಗೆ ಧರ್ಮದ ವಿಷಯದಲ್ಲಿ ವೇದದ ಮೂಲಕ ಪ್ರಾಮಾಣ್ಯವೇ ಹೊರತು ಸ್ವತಂತ್ರವಾಗಿ ಅಲ್ಲ. ಆದುದರಿಂದಲೇ ಶ್ರುತಿ ಮತ್ತು ಸ್ಮೃತಿಗಳಿಗೆ ವಿರೋಧವೊದಗಿದಾಗ ಸ್ಮೃತಿಯೇ ಬಾಧಿಸಲ್ಪಡತಕ್ಕದ್ದು ಎಂಬುದಾಗಿ ಪೂರ್ವಮೀಮಾಂಸಾಶಾಸ್ತ್ರದಲ್ಲಿ ನಿರ್ಣಯಿಸಲ್ಪಟ್ಟಿದೆ.

ಅಂತಹ ವೇದವು 'ಅನಂತಾ ವೈ ವೇದಾಃ' ಎಂಬ ವಚನವನ್ನು ಅನುಸರಿಸಿ ಅನಂತವಾಗಿದ್ದರೂ ಋಕ್, ಯಜುಸ್, ಸಾಮ ಮತ್ತು ಅಥರ್ವ ಎಂಬುದಾಗಿ ನಾಲ್ಕು ರೀತಿ ವಿಂಗಡಿಸಲ್ಪಟ್ಟು ಬೆಳಗುತ್ತಾ ಇದೆ. 'ಏಕಶತಮಧ್ವರ್ಯುಶಾಖಾಃ' ಮೊದಲಾದ ವಾಕ್ಯಗಳಿಂದ ಒಂದೊಂದು ವೇದಕ್ಕೂ ಬಹಳ ಶಾಖೆಗಳಿದ್ದವು ಎಂಬುದಾಗಿ ತಿಳಿದುಬರುತ್ತದೆ. ಆದರೆ ಅವುಗಳಲ್ಲಿ ಅನೇಕ ಶಾಖೆಗಳು ಲುಪ್ತವಾಗಿದ್ದು ಕೇವಲ ಬೆರಳೆಣಿಕೆಯಷ್ಟು ಕೆಲವು ಶಾಖೆಗಳೇ ಉಳಿದಿವೆ.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಪ್ರತಿಯೊಬ್ಬನೂ ತನ್ನ ತನ್ನ ಶಾಖೆಯ ಅಧ್ಯಯನವನ್ನು ಮಾಡಬೇಕೆಂದು ವಿಧಿಸುತ್ತದೆ. ವಿಧಿಸಲ್ಪಟ್ಟ ವೇದಾಧ್ಯಯನವನ್ನು ಮಾಡದಿದ್ದರೆ ಪ್ರತ್ಯವಾಯವು ಉಂಟಾಗುವುದೆಂಬುದಾಗಿ

ವಿಹಿತಸ್ಯಾನನುಷ್ಠಾನಾನ್ನಿಂದಿತಸ್ಯ ಚ ಸೇವನಾತ್ ।
ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥

ಇತ್ಯಾದಿ ವಚನಗಳು ಸ್ಪಷ್ಟವಾಗಿ ತಿಳಿಸುತ್ತಾ ಇವೆ. (ಶಾಸ್ತ್ರವಿಹಿತವಾದುದನ್ನು ಮಾಡದಿದ್ದರೂ ಶಾಸ್ತ್ರದಿಂದ ನಿಂದಿತವಾದುದನ್ನು ಮಾಡಿದರೂ, ಮತ್ತು ಇಂದ್ರಿಯ ಗಳನ್ನು ನಿಗ್ರಹಿಸದಿದ್ದರೂ ಮಾನವನು ಕೇಡಿಗೀಡಾಗುವನು.) ಇದರಿಂದ ವೇದಗಳ ಅಧ್ಯಯನದಿಂದ ನಮಗೇನು ಪ್ರಯೋಜನ?ಎಂಬ ಕೆಲವರ ಸಂಶಯವು ದೂರ ವಾದಂತಾಯಿತು. 'ಬ್ರಾಹ್ಮಣೇನ ನಿಷ್ಕಾರಣಂ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ" ಎಂಬ ಮಹಾಭಾಷ್ಯಕಾರರ ಮಾತೂ ಇದನ್ನೇ ಪುಷ್ಟೀಕರಿಸುತ್ತದೆ. ಆದುದರಿಂದ ಉಪನೀತನಾದ ಬ್ರಾಹ್ಮಣನು ತನ್ನ ವೇದದ ಶಾಖೆಯ ಅಧ್ಯಯನವನ್ನು ಅವಶ್ಯವಾಗಿ ಮಾಡಲೇಬೇಕು.

ವೇದಾಧ್ಯಯನದ ಬಳಿಕ ವೇದಾರ್ಥಜ್ಞಾನವನ್ನು ಅವಶ್ಯವಾಗಿ ಗಳಿಸಬೇಕು. ಈ ವಿಷಯದಲ್ಲಿ ಅರ್ಥಜ್ಞಾನವಿಲ್ಲದವನ ಬಗ್ಗೆ ನಿಂದೆಯೂ, ಅರ್ಥವನ್ನರಿತವನ ಬಗ್ಗೆ ಪ್ರಶಂಸೆಯೂ ಶಾಸ್ತ್ರದಲ್ಲಿ ಕಾಣಬರುತ್ತದೆ.

ಸ್ಥಾಣುರಯಂ ಭಾರಹಾರಃ ಕಿಲಾಭೂತ್
ಅಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ ।
ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ
ನಾಕಮೇತಿ ಜ್ಞಾನವಿಧೂತಪಾಪ್ಮಾ ॥

ವೇದವನ್ನು ಅಧ್ಯಯನ ಮಾಡಿ ಅರ್ಥವನ್ನರಿಯದವನು ಗಂಧದ ಮರದ ಭಾರವನ್ನು ಹೊರುವ ಕತ್ತೆಯಂತೆ. ಅರ್ಥವನ್ನರಿತವನು ಎಲ್ಲ ಮಂಗಳವನ್ನು ಪಡೆದು ಪಾಪರಹಿತನಾಗಿ ಸ್ವರ್ಗವನ್ನೇರುವನು.

ಗಂಧದ ಕಟ್ಟಿಗೆಯ ಭಾರವನ್ನು ಹೊತ್ತ ಕತ್ತೆಯು ತಾನು ಹೊತ್ತಿರುವ ಗಂಧದ ಕಟ್ಟಿಗೆಯ ಪರಿಮಳವನ್ನು ಸ್ವಲ್ಪವೂ ತಿಳಿಯಲಾರದು. ಅದರೊಡನೆ ಹೋಲಿಸಲ್ಪಟ್ಟ ಅರ್ಥಜ್ಞಾನವಿಲ್ಲದವನು ನಿಂದಿಸಲ್ಪಟ್ಟಂತೆಯೇ. ಅರ್ಥಜ್ಞಾನ ಉಳ್ಳವನಿಗೆ ಶುಭಪ್ರಾಪ್ತಿ, ದುಃಖನಿವೃತ್ತಿ ಮೊದಲಾದ ಪ್ರಯೋಜನವನ್ನು ಹೇಳಿರುವುದರಿಂದ ಅವನು ಸ್ತುತಿಸಲ್ಪಟ್ಟಂತೆಯೇ. ಆದುದರಿಂದ ವೇದಾರ್ಥಜ್ಞಾನವನ್ನು ಅವಶ್ಯವಾಗಿ ಗಳಿಸಬೇಕು.

ಹೀಗಿರುವಾಗ ವೇದಾರ್ಥವನ್ನು ಅಲ್ಪಬುದ್ಧಿಯುಳ್ಳವರು ತಿಳಿಯಲಾರರೆಂದು ಸರ್ವಜ್ಞರಂತೆಯೇ ಇರುವ ಸಾಯಣಾಚಾರ್ಯರು ಲೋಕವನ್ನು ಅನುಗ್ರಹಿಸಲು ನಾಲ್ಕು

ವೇದಗಳನ್ನೂ ವ್ಯಾಖ್ಯಾನಿಸಿದರು. ವೇದಾರ್ಥವನ್ನು ತಿಳಿಯಬಯಸುವವರಿಗೆ ಸಾಯಣ ಭಾಷ್ಯವು ಕಲ್ಪವೃಕ್ಷದಂತಿದೆಯೆಂದರೆ ಅದು ಹೆಚ್ಚಿನ ಮಾತಲ್ಲ. ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ಮತ್ತು ಎಲ್ಲ ದರ್ಶನಗಳಲ್ಲಿಯೂ ತಡೆಯಿಲ್ಲದ ನಡೆ ಅವರದು. ಆದುದರಿಂದ ಜಿಜ್ಞಾಸುಗಳಾದವರು ಸಾಯಣಭಾಷ್ಯವನ್ನವಲಂಬಿಸಿಯೇ ವೇದಾರ್ಥವನ್ನು ತಿಳಿಯಬೇಕು.

ಹೀಗಿರುವಲ್ಲಿ ಯಜುರ್ವೇದಕ್ಕೆ ಸಾಯಣಭಾಷ್ಯವನ್ನನುಸರಿಸಿದ ಕನ್ನಡ ಅನುವಾದವನ್ನು ಮಾಡಿಸಿ, ಶ್ರೀ ಸುಬ್ರಹ್ಮಣ್ಯಂರವರು ಪ್ರಕಟಿಸುವರೆಂದು ತಿಳಿದು ಸಂತೋಷಗೊಂಡಿದ್ದೇವೆ. ಇವರ ಈ ಪ್ರಯತ್ನವು ಫಲಪ್ರದವಾಗಲೆಂದೂ ಶ್ರೀಸುಬ್ರಹ್ಮಣ್ಯಂರವರು ಶ್ರೇಯಃಪರಂಪರೆಯಿಂದ ವರ್ಧಿಸಲೆಂದೂ ಆಶಿಸುತ್ತೇನೆ.

ಮೊಕ್ಕಾಂ-ದಿಂಡಿಗಲ್
ಪ್ರಭವ ಸಂವತ್ಸರದ ಮಹಾಶಿವರಾತ್ರಿ
ಮಂಗಳವಾರ

ಇತಿ ನಾರಾಯಣಸ್ಮರಣಂ
**ಭಾರತೀತೀರ್ಥಃ**

# ಪ್ರತಿಷ್ಠಾನದ ಅಧ್ಯಕ್ಷರ ನುಡಿ

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।**
**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥**

ಎಲ್ಲ ಶಕ್ತಿಗಳ ಗಣಿಯಂತಿರುವ ಯಾವನು ಅಂತಃಕರಣದಲ್ಲಿದ್ದುಕೊಂಡು ತನ್ನ ಶಕ್ತಿಯಿಂದ ಅಡಗಿರುವ ನನ್ನ ಮಾತನ್ನೂ, ಅಂಗಗಳಾದ ಕೈ-ಕಾಲು ಮೊದಲಾದವುಗಳನ್ನೂ, ಪ್ರಾಣವನ್ನೂ ಚೈತನ್ಯದಿಂದ ತುಂಬುತ್ತಿರುವನೋ ಅಂತಹ ಭಗವಂತನಿಗೆ ನಮಸ್ಕಾರಗಳು.

ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನದ ಪ್ರಧಾನಕಾರ್ಯವನ್ನಾಗಿ ಈ ಕೃಷ್ಣ ಯಜುರ್ವೇದ ಕನ್ನಡಪ್ರಕಾಶನವನ್ನು ಕೈಗೆತ್ತಿಕೊಂಡಿರುವುದು ನಮ್ಮ ಒಂದು ಸುಕೃತವಿಶೇಷವೇ ಸರಿ. ವೈಯಕ್ತಿಕವಾಗಿ ನನ್ನ ಜೀವನದಲ್ಲಿ ಸಂಭವಿಸಿದ ಘಟನೆಯಿಂದ ಒಂದು ರೀತಿಯ ಸಾತ್ವಿಕಸ್ಫೂರ್ತಿಯು ಒದಗಿ, ಈ ಮಹಾಕಾರ್ಯಕ್ಕೆ ನನ್ನನ್ನೇ ತೊಡಗಿಸಿಕೊಳ್ಳುವಂತೆ ಮಾಡಿತು. ಈ ರೀತಿಯ ವೈಶಿಷ್ಟ್ಯಪೂರ್ಣವಾದ ಮಂತ್ರಾನುವಾದವನ್ನು ಪ್ರಕಾಶನಗೊಳಿಸುವ ಕಾರ್ಯವು ಗುರುತರವಾದುದಾದರೂ ಭಗವಂತನ ಕೃಪೆಯಿಂದಲೂ, ಶೃಂಗೇರಿಯ ಶ್ರೀ ಶಾರದಾಪೀಠಾಧೀಶ್ವರರ ಅಸದೃಶವಾದ ಆಶೀರ್ವಾದದೊಡನೆಯೂ ಈ ಮಹಾ ಕಾರ್ಯಕ್ಕೆ ಕೈ ಹಾಕಿದ್ದಾಗಿದೆ. ಬ್ರಹ್ಮೀಭೂತರಾದ ಜಗದ್ಗುರು ಶ್ರೀಶ್ರೀ ವಿದ್ಯಾತೀರ್ಥ ಮಹಾಸ್ವಾಮಿಗಳವರನ್ನು ವಂದಿಸಿ, ಈಗ ಜಗದ್ಗುರುಪೀಠದಲ್ಲಿ ವಿರಾಜಮಾನರಾಗಿರುವ ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರ ಪಾದಕಮಲಗಳಲ್ಲಿ ಭಕ್ತಿಪೂರ್ವಕವಾದ ಪ್ರಣಾಮವನ್ನು ಈ ಸಂದರ್ಭದಲ್ಲಿ ಸಲ್ಲಿಸುತ್ತೇವೆ. ಇಂತಹ ಪವಿತ್ರಕಾರ್ಯಕ್ಕೆ ನಾಡಿನ ಕನ್ನಡಿಗರ ಬೆಂಬಲ-ಪ್ರೋತ್ಸಾಹಗಳನ್ನು ಕೋರುತ್ತೇವೆ.

ಈ ಪ್ರಕಾಶನದ ಗ್ರಂಥಮಾಲೆಯಲ್ಲಿ ಪರಿಚಯಾತ್ಮಕವಾದ ಮೂರು ಭಾಗವುಳ್ಳ ಮೊದಲನೆಯ ಸಂಪುಟವನ್ನು 1988, 1990ರಲ್ಲಿ ಹೊರತರಲಾಗಿದೆ. ತೈತ್ತಿರೀಯ ಸಂಹಿತೆಯ ಒಂದನೆಯ ಕಾಂಡದ ಒಂದು ಮತ್ತು ಎರಡನೆಯ ಪ್ರಪಾಠಕಗಳನ್ನು

ಒಳಗೊಂಡ, ಭಾಷ್ಯವಿವರಣೆಯಿಂದೊಡಗೂಡಿದ ಎರಡನೆಯ ಸಂಪುಟವನ್ನು 1994ರಲ್ಲಿ ಪ್ರಕಾಶನಗೊಳಿಸಿರುತ್ತೇವೆ. ಈ ಎರಡು ಸಂಪುಟಗಳಿಗೆ ನಾಡಿನಲ್ಲಿ ದೊರೆತ ಸ್ವಾಗತವು ನಮಗೆ ಉತ್ತೇಜನ ನೀಡಿದೆ. ನಾಡಿನ ಪತ್ರಿಕೆಗಳಲ್ಲಿ ನಮ್ಮ ಪ್ರಕಾಶನದ ಬಗೆಗಿನ ಉದ್ದಾಮ ವಿದ್ವಾಂಸರ ವಿಮರ್ಶೆಯು ನಮಗೆ ಪ್ರೋತ್ಸಾಹ ನೀಡಿದೆ. ನಮ್ಮ ಸಂಪುಟಗಳನ್ನು ನಾಡಿನ ಜನರಿಗೆ ವಿತರಣೆ ಮಾಡುವಲ್ಲಿ ನಮ್ಮೊಡನೆ ಸಹಕರಿಸಿದ ಕರ್ನಾಟಕ ಸರ್ಕಾರದ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರಿನ ವೇದಾಂತ ಬುಕ್ ಹೌಸ್, ಮೈಸೂರಿನ ಗೀತಾ ಬುಕ್ ಹೌಸ್ ಮತ್ತು ಮಂಗಳೂರಿನ ಅತ್ರಿ ಬುಕ್ ಸೆಂಟರ್ ಇವರುಗಳಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಇದೀಗ ನಮ್ಮ ಪ್ರಕಾಶನಮಾಲೆಯ ಮೂರನೆಯ ಸಂಪುಟವನ್ನು ನಾಡಿಗೆ ನಾವು ಅರ್ಪಿಸುತ್ತಿದ್ದು ಆಸ್ತಿಕ ಮಹಾಜನರು ಆದರದಿಂದ ಅದನ್ನು ಬರಮಾಡಿಕೊಳ್ಳಲು ಆಶಿಸುತ್ತೇವೆ. ಮಹಾಜನರ ಪ್ರೋತ್ಸಾಹದಿಂದ ಮುಂದಿನ ಸಂಪುಟಗಳನ್ನೂ ಶೀಘ್ರವಾಗಿ ಪ್ರಕಟಿಸುವೆವು.

ಯಾವುದೇ ವಾಣಿಜ್ಯದೃಷ್ಟಿಯಿಲ್ಲದೆ ಕೇವಲ ವೇದಮಾತೆಯ ಸೇವೆಯೆಂದು ಆರಂಭಿಸಿರುವ ಈ ಕಾರ್ಯಕ್ಕೆ ಎಲ್ಲರ ಬೆಂಬಲ-ಪ್ರೋತ್ಸಾಹ-ಸಹಕಾರಗಳನ್ನು ಕೋರಿ, ಗ್ರಂಥಪ್ರಕಾಶನದಲ್ಲಿ ನೆರವಾದ ಮತ್ತು ಹೆಚ್ಚಿನ ಜವಾಬ್ದಾರಿಯನ್ನು ನಿರ್ವಹಿಸಿದ ಪ್ರಧಾನಸಂಪಾದಕರಾದ ವಿದ್ವಾನ್ ರಾಮೇಶ್ವರಾವಧಾನಿಗಳವರಿಗೂ, ಸಹಾಯಕ ಸಂಪಾದಕರಾದ ವಿದ್ವಾನ್ ಸೋ.ತಿ. ನಾಗರಾಜ ಅವರಿಗೂ, ಪ್ರತಿಷ್ಠಾನಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞತೆಗಳನ್ನು ಸಲ್ಲಿಸಿ, ಗ್ರಂಥವನ್ನು ಅಂದವಾಗಿ ಮುದ್ರಿಸಿದ ಪರಿಮಳ ಮುದ್ರಣಾಲಯದವರಿಗೆ ಧನ್ಯವಾದಗಳನ್ನು ಅರ್ಪಿಸಿ, ಶ್ರೀ ಶಾರದಾ-ಚಂದ್ರ ಮೌಳೀಶ್ವರ-ರತ್ನಗರ್ಭಗಣಪತಿಯ ಸನ್ನಿಧಿಯಲ್ಲಿಯೂ ಪೂಜ್ಯ ಗುರುವರ್ಯರ ಸನ್ನಿಧಿಯಲ್ಲಿಯೂ ಅನಂತ ಪ್ರಣಾಮಗಳನ್ನು ಸಲ್ಲಿಸುವೆವು.

ಬಿ.ಎನ್.ವಿ. ಸುಬ್ರಹ್ಮಣ್ಯಂ
ಅಧ್ಯಕ್ಷರು
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

ಬೆಂಗಳೂರು-4
20-07-1997
ಈಶ್ವರ ಸಂವತ್ಸರ
ವ್ಯಾಸ ಪೂರ್ಣಿಮಾ

# ನಿವೇದನೆ

ಒಂದು ವಿಶಿಷ್ಟವಾದ ಸನ್ನಿವೇಶದಲ್ಲಿ ನಾವು ಕೃಷ್ಣಯಜುರ್ವೇದದ ಕನ್ನಡ ಪ್ರಕಾಶನದ ಕಾರ್ಯಕ್ಕೆ ಕೈ ಹಾಕಿದ್ದೇವೆ.

ಇಂದು ನಮ್ಮ ಸಮಾಜದ ರೀತಿ, ನೀತಿ, ಆಚಾರ ಮತ್ತು ವಿಚಾರಗಳನ್ನು ಗಮನಿಸಿದಾಗ ಒಂದು ಅಂಶವು ಎದ್ದು ಕಾಣುತ್ತದೆ. ಪರಂಪರಾಗತವಾಗಿ ಬಂದ ನಡವಳಿಕೆಯನ್ನೂ, ಚಿಂತನೆಯನ್ನೂ ಕೈ ಬಿಡಲಾಗದ ಅತ್ಯಂತ ನವೀನವಾದ ಪಾಶ್ಚಾತ್ಯ ನಡವಳಿಕೆ ಮತ್ತು ಚಿಂತನೆಯೊಡನೆಯೂ ಪೂರ್ಣ ಬೆರೆಯಲಾಗದ ಮಧ್ಯಮಸ್ಥಿತಿ ಅದು. ಸಮಾಜದ ಚಿತ್ತವನ್ನು ಹೀಗೆ ಹಿಂದಕ್ಕೂ ಮುಂದಕ್ಕೂ ಎಳೆಯುತ್ತಾ ಎರಡು ಶಕ್ತಿಗಳೂ ಸ್ಪರ್ಧಿಸುವಂತೆ ಕಾಣುತ್ತಿವೆ. ಆದರೆ ಭಾವನಾತ್ಮಕ ಸಂದರ್ಭಗಳಲ್ಲಿ ನಮ್ಮ ಸಮಾಜದ ಚಿಂತನೆಯು ಪರಂಪರೆಯನ್ನೇ ಬಹುತೇಕ ಅವಲಂಬಿಸುತ್ತದೆ. ಹೊರದೃಷ್ಟಿಯಿಂದ ಸಮಾಜದಲ್ಲಿ ನಮ್ಮತನದ ಕೊರತೆ ಕಾಣುವುದಾದರೂ ಚಿರಂತನವಾದ ನಂಬಿಕೆ ಮತ್ತು ನಡವಳಿಕೆಯ ವಿಚಾರಗಳು ಅಂತರಗಂಗೆಯಂತೆ ಪ್ರವಹಿಸುತ್ತಲೇ ಇವೆ. ಈ ರೀತಿಯ ಅಂತಃಪ್ರವಾಹದ ಸೆಲೆಯು ಋಷಿಗಳು ಕಂಡುಕೊಂಡ ಆರ್ಷಸಾಹಿತ್ಯವಾದ ವೇದಗಳೇ.

ವ್ಯಕ್ತಿಜೀವನದಲ್ಲಿ ಮಾತ್ರವಲ್ಲದೆ ರಾಷ್ಟ್ರಜೀವನ ಮತ್ತು ರಾಷ್ಟ್ರೀಯಚಿಂತನವು ವೇದದ ಪ್ರಭಾವಕ್ಕೆ ಹೊರತಲ್ಲ. ಭಾರತ ಎಂದೊಡನೆ ಪ್ರಪಂಚದ ಜನಮಾನಸದಲ್ಲಿ ಮೂಡುವುದು ವೇದೋಪನಿಷತ್ತಿನ ಸಂದೇಶದ ಚಿತ್ರಗಳೇ. ಪ್ರಪಂಚದ ಉಳಿದ ಜನಾಂಗದವರು ಬದುಕು, ಜೀವನದ ಗುರಿ ಇವುಗಳ ಬಗ್ಗೆ ತಳೆದಿರುವ ಅಭಿಪ್ರಾಯಗಳಿಗಿಂತ ತೀರ ಭಿನ್ನವಾದ ಅಭಿಪ್ರಾಯಗಳು ನಮ್ಮವು. ಆ ಅಭಿಪ್ರಾಯಕ್ಕೆ ವೇದವೇ ಮೂಲ. ಅಂತೆಯೇ ನಮ್ಮತ್ತ ಪಾಶ್ಚಾತ್ಯರ ದೃಷ್ಟಿ. ಜೀವನದ ಬಗ್ಗೆ ಇರುವ ನಮ್ಮ ದೃಷ್ಟಿಕೋನವು ನೆಮ್ಮದಿ ತಂದೀತೆಂದು ಅವರ ಹಂಬಲ. ಇಂದಿಗೂ ಅನೇಕ ಸಾಧುಗಳು ವಿದೇಶಗಳಲ್ಲಿ ಗೌರವಕ್ಕೆ ಪಾತ್ರರಾಗುವ ಹಿನ್ನೆಲೆಯೂ ಇದೇ ಆಗಿದೆ. ಇಂತಹ ರಾಷ್ಟ್ರೀಯ ಸಂಪತ್ತು ನಮ್ಮ ಪೂರ್ವಜರಿಂದ ನಮಗೆ ಒದಗಿ

ಬಂದಿದೆ. ವೇದವು ಅನೇಕ ಸಾವಿರ ವರ್ಷಗಳ ಕಾಲದಿಂದ ನಾವು ನಡೆಸಿಕೊಂಡು ಬರುತ್ತಿರುವ ಜೀವನ ನೌಕೆಯನ್ನು ಸರಿಯಾದ ದಿಕ್ಕಿಗೆ ಒಯ್ಯಬಲ್ಲ ಚುಕ್ಕಾಣಿ.

ಇಂತಹ ವೇದಗಳ ಬಗ್ಗೆ ನಾವೆಲ್ಲರೂ ತಿಳಿಯಲೇಬೇಕು. ಕಾಲದ ಪರಿಮಿತಿ, ಜೀವನಸಂದರ್ಭಗಳ ಬದಲಾವಣೆ ಇವುಗಳ ದೆಸೆಯಿಂದ ಸಂಸ್ಕೃತಭಾಷೆಯನ್ನು ಅರಿತು ವೇದಗಳ ವ್ಯಾಸಂಗ ಮಾಡುವುದು ಕೊಂಚ ಕಷ್ಟಸಾಧ್ಯವೇ. ಅಲ್ಲದೆ ನಮ್ಮವರೇ ಆದ ಕೆಲವರು ವೇದಗಳು ವಿಚ್ಛಿದ್ರಕಾರಕಗಳೆಂಬ ಮುದ್ರೆಯನ್ನೊತ್ತಿದ್ದಾರೆ. ಒಂದೆಡೆ ಗಾಢನಂಬಿಕೆಗೂ ಮತ್ತೊಂದೆಡೆ ಅಪವಾದಕ್ಕೂ ಗುರಿಯಾಗಿರುವ ವೇದಗಳಲ್ಲಿರುವ ಸತ್ಯಾಂಶವನ್ನು ಹೊರತರುವುದು ಪ್ರಸಕ್ತವೇ ಹೌದು. ತಾಯ್ನುಡಿಯಲ್ಲಿ ವೇದವನ್ನು ಕನ್ನಡಿಗರಿಗೆ ನೀಡಬೇಕೆಂಬ ಹಂಬಲಕ್ಕೆ ಇದೇ ಪ್ರೇರಕ. ಹೀಗೆ ವೇದದ ಬಗೆಗಿನ ಭಕ್ತಿಮಿಶ್ರಿತ ಅಮೂರ್ತಭಾವನೆಗೆ ಆಕಾರವನ್ನು ಕೊಡಲು, ಭೌತಿಕ ಆಕರ್ಷಣೆಗೂ ಶಾಶ್ವತವಾದ ಸುಖಸಮೃದ್ಧಿಗಳಿಗೂ ನಡುವೆ ಇರುವ ಅಂತರದ ವಿವೇಕವನ್ನು ಮನಗಾಣಿಸಲು ಈ ಯತ್ನವನ್ನು ಕೈಗೊಳ್ಳಲಾಗಿದೆ.

ಒಂದಾನೊಂದು ಕಾಲದಲ್ಲಿ ಜಗಜ್ಜೀವನದ ಸಾರ್ವಭೌಮಸ್ಥಾನವನ್ನು ಅಲಂಕರಿಸಿದ ನಮ್ಮ ಸಮಾಜಜೀವನವನ್ನು ಹಸನುಗೊಳಿಸಲು ಈ ಪ್ರಕಾಶನವು ನೆರವಾಗುವುದಾದರೆ ನಮ್ಮ ಯತ್ನವು ಸಾರ್ಥಕ. ಈ ಬಗ್ಗೆ ಸಹೃದಯರಾದ ವಾಚಕರ ಹೃದಯವೇ ನಮಗೆ ರನ್ನಗನ್ನಡಿ.

ಈ ಗ್ರಂಥವನ್ನು ಮತ್ತಷ್ಟು ಉಪಯುಕ್ತಗೊಳಿಸುವತ್ತ ಸಹೃದಯರಾದ ವಾಚಕರ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

**ಪ್ರಕಾಶಕರು**

ವೇದನಾರಾಯಣಾಯ ನಮಃ

# ಸಂಪಾದಕನ ಬಿನ್ನಹ

'ಶ್ರೇಯಾಂಸಿ ಬಹುವಿಘ್ನಾನಿ' ಎಂಬ ಪ್ರಾಚೀನವಚನವಿದೆ. ಈ ವಚನವನ್ನು ಬರೆದ ಮಹಾಶಯನು ಎದುರಿಸಿದ ವಿಘ್ನಪರಂಪರೆಯೆಷ್ಟೋ! ಹಾಗೆಯೇ ಈ ಅನುವಾದ ಭಾಗದ ಪ್ರಕಾಶನದಲ್ಲಿಯೂ ವಿಘ್ನಗಳು ಒದಗಿ ವಿಲಂಬವಾಯಿತು. ಅದಕ್ಕಾಗಿ ಆಸ್ತಿಕಮಹನೀಯರ ಕ್ಷಮೆಯನ್ನು ಬೇಡುತ್ತೇವೆ. ದಯಾಮಯನಾದ ಪರಮಾತ್ಮನ ಕರುಣೆಯಿಂದ ಮುಂದೆ ವಿಲಂಬವಾಗದಿರಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ.

ಈ ಭಾಗದಲ್ಲಿ ಸೋಮಯಾಗಕ್ಕೆ ಸಂಬಂಧಿಸಿದ ಸದೋನಿರ್ಮಾಣಾದಿ ಮಂತ್ರಗಳು, ಪಾಶುಕಮಂತ್ರಗಳು, ಅಭಿಷವಮಂತ್ರಗಳು, ಕಾಮ್ಯೇಷ್ಟಿಮಂತ್ರಗಳು (3ನೆಯ ಪ್ರಶ್ನೆ), ಅಭಿಷವಮಂತ್ರಗಳು, ಗ್ರಹಣಸಾದನಮಂತ್ರಗಳು, ದಾಕ್ಷಿಣಹೋಮಾದಿ ಮಂತ್ರಗಳು, ಕಾಮ್ಯೇಷ್ಟಿಮಂತ್ರಗಳು (4ನೆಯ ಪ್ರಶ್ನೆ), ಪುನರಾಧೇಯ, ಅಗ್ನ್ಯುಪಸ್ಥಾನ, ಇವುಗಳಿಗೆ ಸಂಬಂಧಿಸಿದ ಮಂತ್ರ ಬ್ರಾಹ್ಮಣ ಭಾಗಗಳು, ದಾರ್ಶಿಕ ಯಾಜಮಾನ ಶೇಷಮಂತ್ರಗಳು, ಕಾಮ್ಯೇಷ್ಟಿಮಂತ್ರಗಳು (5ನೆಯ ಪ್ರಶ್ನೆ) ಅಡಕವಾಗಿವೆ.

ಹಿಂದಿನ ಪುಸ್ತಕಗಳಿಗೆ ಸಂಬಂಧಿಸಿದಂತೆ ಸಹೃದಯರು ಉತ್ತಮವಾದ ಸಲಹೆ-ಸೂಚನೆಗಳನ್ನು ಕೊಟ್ಟಿರುತ್ತಾರೆ. ಅವರಿಗೆ ಧನ್ಯವಾದಗಳು. ಲೇಖನಕ್ಕೆ ಸಂಬಂಧಿಸಿದಂತೆ ಕೆಲವು ಸಲಹೆಗಳಿವೆ. ಅವುಗಳನ್ನು ಮುಂದಿನ ಪ್ರಕಾಶನಗಳಲ್ಲಿ ಅಳವಡಿಸಲಾಗುವುದು. ವೇದಗಳಲ್ಲಿ ವಿಜ್ಞಾನವಿಲ್ಲವೆಂದು ಹಿಂದಿನ ಸಂಪುಟದ ಮಾತನ್ನು ಮಿತ್ರರು ಆಕ್ಷೇಪಿಸಿರುತ್ತಾರೆ. ಮಂಥನದಿಂದ ಅಗ್ನಿಯನ್ನು ಉತ್ಪಾದಿಸುವುದೂ ವಿಜ್ಞಾನವೇ. ಹಾಗೆಯೇ ಆಯುರ್ವೇದಕ್ಕೆ, ಮನೋವಿಜ್ಞಾನಕ್ಕೆ, ಜ್ಯೋತಿಶ್ಶಾಸ್ತ್ರಕ್ಕೆ, ಗಣಿತಶಾಸ್ತ್ರಕ್ಕೆ ಇನ್ನೂ ಹಲವು ಶಾಸ್ತ್ರಗಳಿಗೆ ಸಂಬಂಧಿಸಿದ ಅಂಶಗಳು ವೇದಗಳಲ್ಲಿವೆ. ಆದರೆ 'ಧರ್ಮಬೋಧನೆ—ಬ್ರಹ್ಮಬೋಧನೆಗಳೇ ವೇದದ ಗುರಿ' ಎಂದು ಹೇಳುವುದು ಮಾತ್ರ ನಮ್ಮ ಆಶಯ; ವಿಜ್ಞಾನಬೋಧನೆಗಾಗಿಯೇ ವೇದವು ಪ್ರವೃತ್ತವಾಗಿಲ್ಲವೆಂದು ತಿಳಿಸುವುದು ಹಿಂದಿನ ಸಂಪುಟದ ಮಾತಿನ ತಾತ್ಪರ್ಯವೆಂದು ತಿಳಿಸಲು ಇಚ್ಛಿಸುತ್ತೇವೆ. ಸಹೃದಯರು ಮುಂದೆಯೂ ಒಳ್ಳೆಯ ಸಲಹೆಗಳನ್ನು ನೀಡಬೇಕೆಂದು ಕೋರುತ್ತೇವೆ.

ಈ ಪ್ರಕಾಶನಕ್ಕೆ ನೆರವಾದ ಎಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ. ವಿಶೇಷವಾಗಿ ನಮ್ಮ ಮಿತ್ರರಾದ ವೇ|| ಬ್ರ|| ಶ್ರೀ ವಿದ್ವಾನ್, ಸೋ.ತಿ. ನಾಗರಾಜರವರು

ಮುದ್ರಣಕ್ಕೆ ಸಂಬಂಧಿಸಿದ ಕಾರ್ಯಗಳೆಲ್ಲವನ್ನೂ ಶ್ರಮವಹಿಸಿ ನಿರ್ವಹಿಸಿರುತ್ತಾರೆ, ಅವರಿಗೆ ಧನ್ಯವಾದಗಳು.

ಈ ಪ್ರಕಾಶನದ ಹೊರೆಯನ್ನು ಹೊತ್ತಿರುವ ಶ್ರೀಮಾನ್ ಬಿ.ಎನ್.ವಿ. ಸುಬ್ರಹ್ಮಣ್ಯಂ ಅವರಿಗೆ ಆಸ್ತಿಕರೆಲ್ಲರ ಧನ್ಯವಾದಗಳು. ಪರಮಾತ್ಮನ ಕೃಪೆಯಿಂದ ಅವರು ಆರಂಭಿಸಿರುವ ಈ ಮಹಾಕಾರ್ಯವು ಆದಷ್ಟು ಬೇಗ ಸಫಲವಾಗುವಂತೆ ಮಾಡಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ.

ಇಂತು ತಮ್ಮವ,

—ರಾಮೇಶ್ವರಾವಧಾನೀ

# ಗ್ರಂಥದ ಅಧ್ಯಯನಕ್ಕೆ ಮುನ್ನ......

¤ ವೇದಾಧ್ಯಯನಪರಂಪರೆಯಲ್ಲಿ 'ಹನಸ್ಸು' ಎಂದು ಹೇಳಲ್ಪಡುವ ಕಡೆ ಸಂಧಿಯನ್ನು ಮಾಡಿಯೇ ಅದರ ಸ್ವರದೊಡನೆ ನಿರ್ದೇಶಿಸಲಾಗಿದೆ. ಅಧ್ಯಯನಸೌಕರ್ಯಕ್ಕಾಗಿ ಕಂಸದಲ್ಲಿ ಪದವಿಭಾಗವನ್ನೂ ನೀಡಿದೆ.

¤ ಪದಪಾಠದಲ್ಲಿ ಮಂತ್ರಗಳು ಪ್ರಾರಂಭವಾಗುವ ಕಡೆ ಮೊದಲ ಪದವನ್ನು ಕೊಂಚ ಸ್ಥೂಲ ಅಕ್ಷರಗಳಿಂದ ಮುದ್ರಿಸಿದೆ.

¤ ಪದಶಃ ಅರ್ಥವನ್ನು ತಿಳಿಸುವಾಗ ಮಂತ್ರವು ಪ್ರಾರಂಭವಾಗುವ ಕಡೆ ✣ ಚಿಹ್ನೆಯನ್ನು ನೀಡಿದೆ.

¤ ಮಂತ್ರ, ಪದಪಾಠ ಮತ್ತು ಪದಶಃ ಅರ್ಥ ಈ ಮೂರನ್ನೂ ಆಯಾ ಪುಟದಲ್ಲಿಯೇ ಸಮನ್ವಯವಾಗಿರುಂತೆ ಯತ್ನಿಸಲಾಗಿದೆ.

¤ ಮಂತ್ರಗಳ ವಿನಿಯೋಗ ಮತ್ತು ತಾತ್ಪರ್ಯ ಇವುಗಳು ಬೇರೆ ಪುಟದಲ್ಲಿದ್ದಾಗ ಹೊಂದಿಸಿಕೊಂಡು ಅಧ್ಯಯನ ಮಾಡಲು ಕೋರಿದೆ.

¤ ಕೇವಲ ಮಂತ್ರಭಾಗದ ಅಧ್ಯಯನಸೌಕರ್ಯಕ್ಕಾಗಿ ಮೂರು ಪ್ರಪಾಠಕಗಳನ್ನೂ ಪ್ರತ್ಯೇಕವಾಗಿ ಮುದ್ರಿಸಲಾಗಿದೆ.

¤ ಬ್ರಾಹ್ಮಣಭಾಗದಲ್ಲಿ ಬ್ರಾಹ್ಮಣವಾಕ್ಯಗಳ ತಾತ್ಪರ್ಯವನ್ನು ಮಾತ್ರ ನೀಡಿದೆ.

# ಸಂಕೇತಾಕ್ಷರಗಳ ವಿವರಣೆ

| | |
|---|---|
| ತೈ. ಸಂ. | ತೈತ್ತಿರೀಯ ಸಂಹಿತೆ |
| ತೈ.ಬ್ರಾ. | ತೈತ್ತಿರೀಯ ಬ್ರಾಹ್ಮಣ |
| ತೈ. ಆ. | ತೈತ್ತಿರೀಯ ಆರಣ್ಯಕ |
| ಆಪ. ಶ್ರೌ.ಸೂ. | ಆಪಸ್ತಂಬ ಶ್ರೌತಸೂತ್ರ |
| ಬೌ. ಶ್ರೌ.ಸೂ. | ಬೌಧಾಯನ ಶ್ರೌತಸೂತ್ರ |
| ಜೈ. ಸೂ. | ಜೈಮಿನಿಸೂತ್ರ |
| ಬ್ರ.ಸೂ. | ಬ್ರಹ್ಮಸೂತ್ರ |
| ಪಾ.ಸೂ. | ಪಾಣಿನಿಸೂತ್ರ |
| ವೈ. | ವೈಶ್ವದೇವಕಾಂಡ |
| ಸೌ. | ಸೌಮ್ಯಕಾಂಡ |
| ಶ.ಬ್ರಾ. | ಶತಪಥ ಬ್ರಾಹ್ಮಣ |
| ತಾಂ.ಬ್ರಾಂ. | ತಾಂಡ್ಯಬ್ರಾಹ್ಮಣ |
| ಕೃ.ಯ.ವೇದ | ಕೃಷ್ಣಯಜುರ್ವೇದ |
| ಮೈ.ಸಂ. | ಮೈತ್ರಾಯಣೀಯಸಂಹಿತೆ |
| ಐ.ಬ್ರಾ. | ಐತರೇಯ ಬ್ರಾಹ್ಮಣ |

ನಾಲ್ಕನೆಯ ಪ್ರಶ್ನೆಯ 46ನೆಯ ಅನುವಾಕವೂ, 5ನೆಯ ಪ್ರಶ್ನೆಯ ಹನ್ನೊಂದನೆ ಅನುವಾಕವೂ ವೈಶ್ವದೇವಕಾಂಡಕ್ಕೆ ಸೇರಿದೆ. 5ನೆಯ ಪ್ರಶ್ನೆಯ 10ನೆಯ ಅನುವಾಕದಲ್ಲಿ ಪ್ರಾಜಾಪತ್ಯಕಾಂಡದ ಮಂತ್ರಗಳೂ ಇವೆ.

# ಪ್ರಾರ್ಥನೆ

ಸಂ ತ್ವಮಗ್ನೇ ಸೂರ್ಯಸ್ಯ ವರ್ಚಸಾಽಗಥಾಃ
ಸಮೃಷೀಣಾಗ್ಂ ಸ್ತುತೇನ ಸಂ ಪ್ರಿಯೇಣ ಧಾಮ್ನಾ ।
ತ್ವಮಗ್ನೇ ಸೂರ್ಯವರ್ಚಾ ಅಸಿ ಸಂ
ಮಾಮಾಯುಷಾ ವರ್ಚಸಾ ಪ್ರಜಯಾ ಸೃಜ ॥

ಅಗ್ನಿಯೇ! ನೀನು ಸೂರ್ಯನ ತೇಜಸ್ಸಿನಿಂದ ಕೂಡಿರುವೆ. ಋಷಿಗಳ ಸ್ತೋತ್ರಗಳಿಂದಲೂ ಕೂಡಿರುವೆ. ಪ್ರಿಯವಾದ ಆಹವನೀಯಪ್ರದೇಶದಿಂದಲೂ ಕೂಡಿರುವೆ. ನೀನು ಸೂರ್ಯನಂತೆ ತೇಜಸ್ವಿಯು. ನನಗೂ (ನಮಗೂ) ಆಯುಸ್ಸು, ವರ್ಚಸ್ಸು, ಪ್ರಜೆ-ಇವೆಲ್ಲವೂ ಒದಗುವಂತೆ ಮಾಡು.

# ಶ್ರುತಿಪ್ರಶಂಸೆ

ಹೃದಯೇಷ್ವೇವ ತಿಷ್ಠಂತಿ ವೇದಾ ಯೇ ನಃ ಪರಂ ಧನಮ್ ।

ನಮ್ಮ ಪರಮಶ್ರೇಷ್ಠಧನವಾಗಿರುವ ವೇದಗಳು ನಮ್ಮ ಹೃದಯದಲ್ಲಿಯೇ ಇರುತ್ತವೆ. [ಈ ಧನವನ್ನು ಯಾರೂ ಅಪಹರಿಸುವಂತಿಲ್ಲ.]

ಶ್ರೀಮದ್ರಾಮಾಯಣ, ಅಯೋಧ್ಯಾಕಾಂಡ

[ವನವಾಸಕ್ಕೆ ಶ್ರೀರಾಮನನ್ನು ಅನುಸರಿಸಿ ಹೊರಟ ವೇದವಿದರ ನುಡಿ]

ಶ್ರೀ ವೇದಪರಬ್ರಹ್ಮಣೇ ನಮಃ

ಶ್ರೀ ಶಾರದಾಗುರುಗಣಪತಿಭ್ಯೋ ನಮಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ತೃತೀಯಃ ಪ್ರಶ್ನಃ



ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಾದದೇಽಭ್ರಿರಸಿ ನಾರಿರಸಿ ಪರಿಲಿಖಿತಗ್ಂ ರಕ್ಷಃ ಪರಿಲಿಖಿತಾ ಅರಾತಯ ಇದಮಹಗ್ಂ ರಕ್ಷಸೋ ಗ್ರೀವಾ ಅಪಿ ಕೃಂತಾಮಿ ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮ ಇದಮಸ್ಯ ಗ್ರೀವಾ ಅಪಿ ಕೃಂತಾಮಿ ದಿವೇ ತ್ವಾಂತರಿಕ್ಷಾಯ ತ್ವಾ ಪೃಥಿವ್ಯೈ ತ್ವಾ ಶುಂಧತಾಂ ಲೋಕಃ ಪಿತೃಷದನೋ ಯವೋಽಸಿ ಯವಯಾಸ್ಮದ್ದ್ವೇಷೋ [ದ್ವೇಷಃ (೧)]ಯವಯಾರಾತೀಃ ಪಿತೃಣಾಗ್ಂ ಸದನಮಸ್ಯುದ್ದಿವಗ್ಗ್ಂ ಸ್ತಭಾನಾಂತರಿಕ್ಷಂ ಪೃಣ ಪೃಥಿವೀಂ ದೃಗ್ಂಹ ದ್ಯುತಾನಸ್ತ್ವಾ ಮಾರುತೋ ಮಿ-

ನೋತು ಮಿತ್ರಾವರುಣಯೋರ್ಧ್ರುವೇಣ ಧರ್ಮಣಾ ಬ್ರಹ್ಮವನಿಂ ತ್ವಾ
ಕ್ಷತ್ರವನಿಗ್ಂ ಸುಪ್ರಜಾವನಿಗ್ಂ ರಾಯಸ್ಪೋಷವನಿಂ ಪರ್ಯೂಹಾಮಿ
ಬ್ರಹ್ಮ ದೃಗ್ಂಹ ಕ್ಷತ್ರಂ ದೃಗ್ಂಹ ಪ್ರಜಾಂ ದೃಗ್ಂಹ ರಾಯಸ್ಪೋಷಂ
ದೃಗ್ಂಹ ಘೃತೇನ ದ್ಯಾವಾಪೃಥಿವೀ ಆ ಪೃಣೇಥಾಮಿಂದ್ರಸ್ಯ ಸದೋಽಸಿ
ವಿಶ್ವಜನಸ್ಯ ಛಾಯಾ ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು
ವಿಶ್ವತೋ ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯ
ಇಂದ್ರಸ್ಯ ಸ್ಯೂರಸೀಂದ್ರಸ್ಯ ಧ್ರುವಮಸ್ಯೈಂದ್ರಮಸೀಂದ್ರಾಯ ತ್ವಾ ||೧-2||

[ದ್ರೇಷ ಇಮಾ ಅಷ್ಟಾದಶ ಚ ||]



ರಕ್ಷೋಹಣೋ ವಲಗಹನೋ ವೈಷ್ಣವಾನ್ನನಾಮೀದಮಹಂ ತಂ ವಲಗ
ಮುದ್ವಪಾಮಿ ಯಂ ನಸ್ಸಮಾನೋ ಯಮಸಮಾನೋ ನಿಚಖಾನೇ-
ದಮೇನಮಧರಂ ಕರೋಮಿ ಯೋ ನಃ ಸಮಾನೋ ಯೋಽಸಮಾನೋಽ
ರಾತೀಯತಿ ಗಾಯತ್ರೇಣ ಛಂದಸಾವಬಾಢೋ ವಲಗಃ ಕಿಮತ್ರ ಭದ್ರಂ
ತನ್ನೌ ಸಹ ವಿರಾಡಸಿ ಸಪತ್ನಹಾ ಸಮ್ರಾಡಸಿ ಭ್ರಾತೃವ್ಯಹಾ ಸ್ವರಾಡಸ್ಯಭಿ

श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श್ರೀ: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री:

ಮಾತಿಹಾ ವಿಶ್ವಾರಾಡಸಿ ವಿಶ್ವಾಸಾಂ ನಾಷ್ಟ್ರಾಣಾಗ್ಂ ಹಂತಾ [(೧)

ರಕ್ಷೋಹಣೋ]ರಕ್ಷೋಹಣೋ ವಲಗಹನಃ ಪ್ರೋಕ್ಷಾಮಿ ವೈಷ್ಣವಾನ್ರಕ್ಷೋ

ಹಣೋ ವಲಗಹನೋಽವನಯಾಮಿ ವೈಷ್ಣವಾನ್, ಯವೋಽಸಿ ಯವ

ಯಾಸ್ಮದ್ದ್ವೇಷೋ ಯವಯಾರಾತೀ ರಕ್ಷೋಹಣೋ ವಲಗಹನೋಽ

ವಸ್ತೃಣಾಮಿ ವೈಷ್ಣವಾನ್ರಕ್ಷೋಹಣೋ ವಲಗಹನೋಽಭಿಜುಹೋಮಿ

ವೈಷ್ಣವಾನ್ರಕ್ಷೋಹಣೌ ವಲಗಹನಾವುಪದಧಾಮಿ ವೈಷ್ಣವೀ ರಕ್ಷೋಹಣೌ

ವಲಗಹನೌ ಪರ್ಯೂಹಾಮಿ ವೈಷ್ಣವೀ ರಕ್ಷೋಹಣೌ ವಲಗಹನೌ

ಪರಿಸ್ತೃಣಾಮಿ ವೈಷ್ಣವೀ ರಕ್ಷೋಹಣೌ ವಲಗಹನೌ ವೈಷ್ಣವೀ ಬೃಹನ್ನಸಿ

ಬೃಹದ್ಗ್ರಾವಾ ಬೃಹತೀಮಿಂದ್ರಾಯ ವಾಚಂ ವದ ॥ ೩ - 4 ॥



[ಹಂತೇಂದ್ರಾಯ ದ್ವೇ ಚ ]

ವಿಭೂರಸಿ ಪ್ರವಾಹಣೋ* ವಹ್ನಿರಸಿ ಹವ್ಯವಾಹನಃ* ಶ್ವಾತ್ರೋಽಸಿ

ಪ್ರಚೇತಾ*ಸ್ತುಥೋಽಸಿ ವಿಶ್ವವೇದಾ* ಉಶಿಗಸಿ ಕವಿ*ರಂಘಾರಿರಸಿ

ಬಂಭಾರಿ*ರವಸ್ಯುರಸಿ ದುವಸ್ವಾ*ಞ್ಛುಂಧ್ಯೂರಸಿ ಮಾರ್ಜಾಲೀಯಃ*

श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री:

ಸಮ್ರಾಡಸಿ ಕೃಶಾನುಃ* ಪರಿಷದ್ಯೋಽಸಿ ಪವಮಾನಃ* ಪ್ರತಕ್ವಾಸಿ ನಭ
ಸ್ವಾನ*ಸಂಮೃಷ್ಟೋಽಸಿ ಹವ್ಯಸೂದ*ಋತಧಾಮಾಸಿ ಸುವರ್ಜ್ಯೋತಿ*ರ್ಬ್ರ
ಹ್ಮಜ್ಯೋತಿರಸಿ ಸುವರ್ಧಾಮಾ*ಽಜೋಽಸ್ಯೇಕಪಾದ*ಹಿರಸಿ ಬುಧ್ನಿಯೋ
ರೌದ್ರೇಣಾನೀಕೇನ ಪಾಹಿ ಮಾಗ್ನೇ ಪಿಪೃಹಿ ಮಾ ಮಾ ಮಾ ಹಿಗ್ಂಸೀಃ
|| ೩ - 5 ||

[ಅನೀಕೇನಾಷ್ಟೌ ಚ ||]



ತ್ವಗ್ಂ ಸೋಮ ತನೂಕೃದ್ಭ್ಯೋ ದ್ವೇಷೋಭ್ಯೋಽನ್ಯಕೃತೇಭ್ಯ ಉರು
ಯಂತಾಸಿ ವರೂಥಗ್ಂ ಸ್ವಾಹಾ ಜುಷಾಣೋ ಅಪ್ತುರಾಜ್ಯಸ್ಯ ವೇತು
ಸ್ವಾಹಾಽಯಂ ನೋ ಅಗ್ನಿರ್ವರಿವಃ ಕೃಣೋತ್ವಯಂ ಮೃಧಃ ಪುರ ಏತು
ಪ್ರಭಿಂದನ್ನ್। ಅಯಗ್ಂ ಶತ್ರೂಞ್ಜಯತು ಜರ್ಹೃಷಾಣೋಽಯಂ ವಾಜಂ
ಜಯತು ವಾಜಸಾತೌ || ಉರು ವಿಷ್ಣೋ ವಿಕ್ರಮಸ್ವೋರು ಕ್ಷಯಾಯ
ನಃ ಕೃಧಿ । ಘೃತಂ ಘೃತಯೋನೇ ಪಿಬ ಪ್ರಪ್ರ ಯಜ್ಞಪತಿಂ ತಿರ ||
ಸೋಮೋ ಜಿಗಾತಿ ಗಾತುವಿ [ಗಾತುವಿತ್ (೧)ದೇವಾ....]ದ್ದೇವಾನಾಮೇತಿ

ನಿಷ್ಟ್ಯತಮ್ಮೃತಸ್ಯ ಯೋನಿಮಾಸದಮದಿತ್ಯಾಃ ಸದೋಽಸ್ಯದಿತ್ಯಾಃ ಸದ ಆ

ಸೀದೈಷ ವೋ ದೇವ ಸವಿತಃ ಸೋಮಸ್ತಗ್ಂ ರಕ್ಷಧ್ವಂ ಮಾ ವೋ

ದಭದೇತತ್ತ್ವಗ್ಂ ಸೋಮ ದೇವೋ ದೇವಾನುಪಾಗಾ ಇದಮಹಂ

ಮನುಷ್ಯೋ ಮನುಷ್ಯಾನ್ತ್ಸಹ ಪ್ರಜಯಾ ಸಹ ರಾಯಸ್ಪೋಷೇಣ

ನಮೋ ದೇವೇಭ್ಯಃ ಸ್ವಧಾ ಪಿತೃಭ್ಯ ಇದಮಹಂ ನಿರ್ವರುಣಸ್ಯ ಪಾಶಾ

ತ್ಸುವರಭಿ (೨)ವಿ ಖ್ಯೇಷಂ ವೈಶ್ವಾನರಂ ಜ್ಯೋತಿರಗ್ನೇ ವ್ರತಪತೇ



ತ್ವಂ ವ್ರತಾನಾಂ ವ್ರತಪತಿರಸಿ ಯಾ ಮಮ ತನೂಸ್ತ್ವಯ್ಯಭೂದಿ

ಯಗ್ಂ ಸಾ ಮಯಿ ಯಾ ತವ ತನೂರ್ಮಯ್ಯಭೂದೇಷಾ ಸಾ

ತ್ವಯಿ ಯಥಾಯಥಂ ನೌ ವ್ರತಪತೇ ವ್ರತಿನೋರ್ವ್ರತಾನಿ ॥ ೪-8 ॥

[ ಗಾತುವಿದಭ್ಯೇಕತ್ರಿಗ್ಂಶಚ್ಚ ।]

ಅತ್ಯನ್ಯಾನಗಾಂ ನಾನ್ಯಾನುಪಾಗಾಮರ್ವಾಕ್ತ್ವಾ ಪರೈರವಿದಂ ಪರೋಽ

ವರೈಸ್ತಂ ತ್ವಾ ಜುಷೇ ವೈಷ್ಣವಂ ದೇವಯಜ್ಯಾಯೈ ದೇವಸ್ತ್ವಾ

ಸವಿತಾ ಮಧ್ವಾನಕ್ತ್ವೋಷಧೇ ತ್ರಾಯಸ್ವೈನಗ್ಂ ಸ್ವಧಿತೇ ಮೈನಗ್ಂ

ಹಿಗ್ಂಸೀರ್ದಿವಮಗ್ರೇಣ ಮಾ ಲೇಖೀರಂತರಿಕ್ಷಂ ಮಧ್ಯೇನ ಮಾ

ಹಿಗ್ಂಸೀಃ ಪೃಥಿವ್ಯಾ ಸಂಭವ ವನಸ್ಪತೇ ಶತವಲ್ಶೋ ವಿರೋಹ

ಸಹಸ್ರವಲ್ಶಾ ವಿ ವಯಗ್ಂ ರುಹೇಮ ಯಂ ತ್ವಾಽಯಗ್ಂ

ಸ್ವಧಿತಿಸ್ತೇತಿಜಾನಃ ಪ್ರಣಿನಾಯ ಮಹತೇ ಸೌಭಗಾಯಾಚ್ಛಿನ್ನೋ ರಾಯಃ

ಸುವೀರಃ ॥ ೫ - 9 ॥

[ಯಂ ದಶ ಚ ॥]



ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವಾ ಶುಂಧತಾಂ ಲೋಕಃ

ಪಿತೃಷದನೋ ಯವೋಽಸಿ ಯವಯಾಸ್ಮದ್ದ್ವೇಷೋ ಯವಯಾರಾತೀಃ

ಪಿತೄಣಾಗ್ಂ ಸದನಮಸಿ ಸ್ವಾವೇಶೋಽಸ್ಯಗ್ರೇಗಾ ನೇತೄಣಾಂ ವನಸ್ಪತಿರಧಿ

ತ್ವಾ ಸ್ಥಾಸ್ಯತಿ ತಸ್ಯ ವಿತ್ತಾದ್ದೇವಸ್ತ್ವಾ ಸವಿತಾ ಮಧ್ವಾನಕ್ತು ಸುಪಿ

ಪ್ಪಲಾಭ್ಯಸ್ತ್ವೌಷಧೀಭ್ಯ ಉದ್ದಿವಗ್ಂ ಸ್ತಭಾನಾಂತರಿಕ್ಷಂ ಪೃಣ ಪೃಥಿವೀ-

ಮುಪರೇಣ ದೃಗ್ಂಹ ತೇ ತೇ ಧಾಮಾನ್ಯುಶ್ಮಸೀ [ಶ್ಮಸಿ (೧)]

ಗಮಧ್ಯೇ ಗಾವೋ ಯತ್ರ ಭೂರಿಶೃಂಗಾ ಅಯಾಸಃ । ಅತ್ರಾ ಹ ತದುರು

ಗಾಯಸ್ಯ ವಿಷ್ಣೋಃ ಪರಮಂ ಪದಮವಭಾತಿ ಭೂರೇಃ ॥ ವಿಷ್ಣೋಃ

ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ । ಇಂದ್ರಸ್ಯ ಯುಜ್ಯಃ

ಸಖಾ ॥ ತದ್ವಿಷ್ಣೋಃ ಪರಮಂ ಪದಗ್ಂ ಸದಾ ಪಶ್ಯಂತಿ ಸೂರಯಃ ।

ದಿವೀವ ಚಕ್ಷುರಾತತಮ್ ॥ ಬ್ರಹ್ಮವನಿಂ ತ್ವಾ ಕ್ಷತ್ರವನಿಗ್ಂ ಸುಪ್ರ

ಜಾವನಿಗ್ಂ ರಾಯಸ್ಪೋಷವನಿಂ ಪರ್ಯೂಹಾಮಿ ಬ್ರಹ್ಮ ದೃಗ್ಂಹ

ಕ್ಷತ್ರಂ ದೃಗ್ಂಹ ಪ್ರಜಾಂ ದೃಗ್ಂಹ ರಾಯಸ್ಪೋಷಂ ದೃಗ್ಂಹ

ಪರಿವೀರಸಿ ಪರಿ ತ್ವಾ ದೈವೀರ್ವಿಶೋ ವ್ಯಯಂತಾಂ ಪರೀಮಗ್ಂ

ರಾಯಸ್ಪೋಷೋ ಯಜಮಾನಂ ಮನುಷ್ಯಾ ಅಂತರಿಕ್ಷಸ್ಯ ತ್ವಾ ಸಾನಾವವ

ಗೂಹಾಮಿ ॥ ೬ - 11 ॥

[ಉಶ್ಮಸೀ ಪೋಷಮೇಕಾನ್ನವಿಗ್ಂಶತಿಶ್ಚ ॥]

ಇಷೇ ತ್ವೋಪವೀರಸ್ಯುಪೋ ದೇವಾನ್ದೈವೀರ್ವಿಶಃ ಪ್ರಾಗುರ್ವಹ್ನೀರು

ಶಿಕ್ಷೋ ಬೃಹಸ್ಪತೇ ಧಾರಯಾ ವಸೂನಿ ಹವ್ಯಾ ತೇ ಸ್ವದಂತಾಂ

ದೇವತ್ವಷ್ಟರ್ವಸು ರಣ್ವ ರೇವತೀ ರಮಧ್ವಮಗ್ನೇರ್ಜನಿತ್ರಮಸಿ ವೃಷಣೌ

ಸ್ಥ ಉರ್ವಶ್ಯಸ್ಯಾಯುರಸಿ ಪುರೂರವಾ ಘೃತೇನಾಕ್ತೇ ವೃಷಣಂ ದಧಾ

ಥಾಂ ಗಾಯತ್ರಂ ಛಂದೋಽನು ಪ್ರಜಾಯಸ್ವ ತ್ರೈಷ್ಟುಭಂ* ಜಾಗತಂ

ಛಂದೋಽನು ಪ್ರಜಾಯಸ್ವ ಭವತಂ [೧] ನಃ ಸಮನಸೌ ಸಮೋಕಸಾ

ವರೇಪಸೌ । ಮಾ ಯಜ್ಞಗ್‌ಂ ಹಿಗ್‌ಂಸಿಷ್ಟಂ ಮಾ ಯಜ್ಞಪತಿಂ

ಜಾತವೇದಸೌ ಶಿವೌ ಭವತಮದ್ಯ ನಃ ॥ ಅಗ್ನಾವಗ್ನಿಶ್ಚರತಿ ಪ್ರವಿಷ್ಟ

ಋಷೀಣಾಂ ಪುತ್ರೋ ಅಧಿರಾಜ ಏಷಃ । ಸ್ವಾಹಾಕೃತ್ಯ ಬ್ರಹ್ಮಣಾ ತೇ

ಜುಹೋಮಿ ಮಾ ದೇವಾನಾಂ ಮಿಥುಯಾ ಕರ್ಭಾಗಧೇಯಮ್॥ ೭-13॥

[ಭವತಮೇಕತ್ರಿಗ್‌ಂಶಚ್ಚ॥]

ಆ ದದ ಋತಸ್ಯ ತ್ವಾ ದೇವಹವಿಃ ಪಾಶೇನಾರಭೇ ಧರ್‌ಷಾ ಮಾನು

ಷಾನದ್ಭ್ಯಸ್ತ್ವೌಷಧೀಭ್ಯಃ ಪ್ರೋಕ್ಷಾಮ್ಯಪಾಂ ಪೇರುರಸಿ ಸ್ವಾತ್ತಂ ಚಿತ್ಸ

ದೇವಗ್ಂ ಹವ್ಯಮಾಪೋ ದೇವೀಃ ಸ್ವದತೈನಗ್ಂ ಸಂ ತೇ ಪ್ರಾಣೋ

ವಾಯುನಾ ಗಚ್ಛತಾಗ್ಂ ಸಂಯಜತ್ರೈರಂಗಾನಿ ಸಂ ಯಜ್ಞಪತಿರಾಶಿಷಾ

ಘೃತೇನಾಕ್ತೌ ಪಶುಂ ತ್ರಾಯೇಥಾಗ್ಂ ರೇವತೀರ್ಯಜ್ಞಪತಿಂ ಪ್ರಿಯ

ಧಾಽಽವಿಶತೋರೋ ಅಂತರಿಕ್ಷ ಸಜೂರ್ದೇವೇನ [ದೇವೇನ (೧)]

ವಾತೇನಾಸ್ಯ ಹವಿಷಸ್ತ್ಮನಾ ಯಜ ಸಮಸ್ಯ ತನುವಾ ಭವ ವರ್ಷೀಯೋ

ವರ್ಷೀಯಸಿ ಯಜ್ಞೇ ಯಜ್ಞಪತಿಂ ಧಾಃ ಪೃಥಿವ್ಯಾಃ ಸಂಪೃಚಃ ಪಾಹಿ

ನಮಸ್ತ ಆತಾನಾನರ್ವಾ ಪ್ರೇಹಿ ಘೃತಸ್ಯ ಕುಲ್ಯಾಮನು ಸಹ ಪ್ರಜಯಾ

ಸಹ ರಾಯಸ್ಪೋಷೇಣಾಪೋ ದೇವೀಃ ಶುದ್ಧಾ ಯುವಃ ಶುದ್ಧಾ ಯೂಯಂ

ದೇವಾಗ್ಂ ಊಢ್ವಗ್ಂ ಶುದ್ಧಾ ವಯಂ ಪರಿವಿಷ್ಟಾಃ ಪರಿವೇಷ್ಟಾರೋ

ವೋ ಭೂಯಾಸ್ಮ ॥ ೮-15 ॥

[ದೇವೇನ ಚತುಶ್ಚತ್ವಾರಿಗ್ಂಶಚ್ಚ ।]

ವಾಕ್ತ ಆಪ್ಯಾಯತಾಂ ಪ್ರಾಣಸ್ತ ಆಪ್ಯಾಯತಾಂ ಚಕ್ಷುಸ್ತ ಆಪ್ಯಾಯತಾಗ್ಂ

ಶ್ರೋತ್ರಂ ತ ಆಪ್ಯಾಯತಾಂ ಯಾ ತೇ ಪ್ರಾಣಾಞ್ಛುಗ್ಜಗಾಮ ಯಾ
ಚಕ್ಷುರ್ಯಾ ಶ್ರೋತ್ರಂ ಯತ್ತೇ ಕ್ರೂರಂ ಯದಾಸ್ಥಿತಂ ತತ್ತ ಆಪ್ಯಾ
ಯತಾಂ ತತ್ತ ಏತೇನ ಶುಂಧತಾಂ ನಾಭಿಸ್ತ ಆಪ್ಯಾಯತಾಂ ಪಾಯುಸ್ತ
ಆಪ್ಯಾಯತಾಗ್ಂ ಶುದ್ಧಾಶ್ಚರಿತ್ರಾಃ ಶಮದ್ಭ್ಯಃ (೧) ಶಮೋಷಧೀಭ್ಯಃ
ಶಂ ಪೃಥಿವ್ಯೈ ಶಮಹೋಭ್ಯಾಮೋಷಧೇ ತ್ರಾಯಸ್ವೈನಗ್ಗ್ಂ ಸ್ವಧಿತೇ
ಮೈನಗ್ಂ ಹಿಗ್ಂಸೀ ರಕ್ಷಸಾಂ ಭಾಗೋಽಸೀದಮಹಗ್ಂ ರಕ್ಷೋಽಧಮಂ
ತಮೋ ನಯಾಮಿ ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮ ಇದ
ಮೇನಮಧಮಂ ತಮೋ ನಯಾಮೀಷೇ ತ್ವಾ ಘೃತೇನ ದ್ಯಾವಾಪೃಥಿವೀ
ಪ್ರೋರ್ಣ್ವಾಥಾಮಚ್ಛಿನ್ನೋ ರಾಯಃ ಸುವೀರ ಉರ್ವಂತರಿಕ್ಷಮನ್ವಿಹಿ
ವಾಯೋ ವೀಹಿ ಸ್ತೋಕಾನಾಗ್ಂ ಸ್ವಾಹೋರ್ಧ್ವನಭಸಂ ಮಾರುತಂ
ಗಚ್ಛತಮ್ ॥ ೬-17 ॥

[ಅದ್ಭ್ಯೋ ವೀಹಿ ಪಂಚ ಚ ।]

ಸಂ ತೇ ಮನಸಾ ಮನಸ್ಸಂ ಪ್ರಾಣೇನ ಪ್ರಾಣೋ ಜುಷ್ಟಂ ದೇವೇಭ್ಯೋ

ಸ್ವಯಂ ಘೃತವತ್ಸ್ವಾಹೈಂದ್ರಃ ಪ್ರಾಣೋ ಅಂಗೇಽಂಗೇ ನಿದೇಧ್ಯ

ದೈಂದ್ರೋಽಪಾನೋ ಅಂಗೇಅಂಗೇ ವಿಬೋಭುವದ್ದೇವ ತ್ವಷ್ಟರ್ಭೂರಿ

ತೇ ಸಗ್ಂಸಮೇತು ವಿಷುರೂಪಾ ಯತ್ಸಲಕ್ಷ್ಮಾಣೋ ಭವಥ ದೇವ

ತ್ರಾ ಯಂತಮವಸೇ ಸಖಾಯೋಽನು ತ್ವಾ ಮಾತಾ ಪಿತರೋ ಮದಂತು

ಶ್ರೀರಸ್ಯಗ್ನಿಸ್ತ್ವಾ ಶ್ರೀಣಾತ್ವಾಪಸ್ಸಮರಿಣನ್ವಾತಸ್ಯ (೧) ತ್ವಾ ಧ್ರಜ್ಯೈ

ಪೂಷ್ಣೋ ರಗ್ಂಹ್ಯಾ ಅಪಾಮೋಷಧೀನಾಗ್ಂ ರೋಹಿಷ್ಯೈ ಘೃತಂ

ಘೃತಪಾವಾನಃ ಪಿಬತ ವಸಾಂ ವಸಾಪಾವಾನಃ ಪಿಬತಾಂತರಿಕ್ಷಸ್ಯ ಹವಿರಸಿ

ಸ್ವಾಹಾ ತ್ವಾಂಽತರಿಕ್ಷಾಯ ದಿಶಃ ಪ್ರದಿಶ ಆದಿಶೋ ವಿದಿಶ ಉದ್ದಿಶಃ

ಸ್ವಾಹಾ ದಿಗ್ಭ್ಯೋ ನಮೋ ದಿಗ್ಭ್ಯಃ ॥ ೧೧ - ೨ ॥



[ವಾತಸ್ಯಾಷ್ಟಾವಿಗ್ಂಶತಿಶ್ಚ ॥]

ಸಮುದ್ರಂ ಗಚ್ಛ ಸ್ವಾಹಾಂಽತರಿಕ್ಷಂ ಗಚ್ಛ ಸ್ವಾಹಾ ದೇವಗ್ಂ ಸವಿತಾರಂ

ಗಚ್ಛ ಸ್ವಾಹಾಽಹೋರಾತ್ರೇ ಗಚ್ಛ ಸ್ವಾಹಾ ಮಿತ್ರಾವರುಣೌ ಗಚ್ಛ ಸ್ವಾಹಾ

ಸೋಮಂ ಗಚ್ಛ ಸ್ವಾಹಾ ಯಜ್ಞಂ ಗಚ್ಛ ಸ್ವಾಹಾ ಛಂದಾಗ್ಂಸಿ ಗಚ್ಛ
ಸ್ವಾಹಾ ದ್ಯಾವಾಪೃಥಿವೀ ಗಚ್ಛ ಸ್ವಾಹಾ ನಭೋ ದಿವ್ಯಂ ಗಚ್ಛ ಸ್ವಾಹಾಗ್ನಿಂ
ವೈಶ್ವಾನರಂ ಗಚ್ಛ ಸ್ವಾಹಾಽದ್ಭ್ಯಸ್ತ್ವೌಷಧೀಭ್ಯೋ ಮನೋ ಮೇ ಹಾರ್ದಿ
ಯಚ್ಛ ತನೂಂ ತ್ವಚಂ ಪುತ್ರಂ ನಪ್ತಾರಮಶೀಯ ಶುಗಸಿ ತಮಭಿಶೋಚ
ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮೋ ಧಾಮ್ನೋ ಧಾಮ್ನೋ
ರಾಜನ್ನಿತೋ ವರುಣ ನೋ ಮುಂಚ ಯದಾಪೋ ಅಘ್ನಿಯಾ ವರುಣೇತಿ
ಶಪಾಮಹೇ ತತೋ ವರುಣ ನೋ ಮುಂಚ ॥ ೧೧-20 ॥



[ಅಸಿ ಷಡ್ವಿಗ್ಂಶತಿಶ್ಚ ॥]

ಹವಿಷ್ಮತೀರಿಮಾ ಆಪೋ ಹವಿಷ್ಮಾನ್ದೇವೋ ಅಧ್ವರೋ ಹವಿಷ್ಮಾಗ್ಂ
ಆವಿವಾಸತಿ ಹವಿಷ್ಮಾಗ್ಂ ಅಸ್ತು ಸೂರ್ಯಃ ॥ ಅಗ್ನೇರ್ವೋಽಪನ್ನ
ಗೃಹಸ್ಯ ಸದಸಿ ಸಾದಯಾಮಿ ಸುಮ್ನಾಯ ಸುಮ್ನಿನೀಃ ಸುಮ್ನೇ ಮಾ
ಧತ್ತೇಂದ್ರಾಗ್ನಿಯೋರ್ಭಾಗಧೇಯೀಃ ಸ್ಥ ಮಿತ್ರಾವರುಣಯೋರ್ಭಾಗ-

ಧೇಯೀಃ ಸ್ಥ ವಿಶ್ವೇಷಾಂ ದೇವಾನಾಂ ಭಾಗಧೇಯೀಃ ಸ್ಥ ಯಜ್ಞೇ ಜಾಗೃತ

|| ೧೨-21 ||

[ಹವಿಷ್ಮತೀಶ್ಚತುಸ್ತ್ರಿಗ್ಂಶತ್ ।]

ಹೃದೇ ತ್ವಾ ಮನಸೇ ತ್ವಾ ದಿವೇ ತ್ವಾ ಸೂರ್ಯಾಯ ತ್ವೋರ್ಧ್ವಮಿಮ
ಮಧ್ವರಂ ಕೃಧಿ ದಿವಿ ದೇವೇಷು ಹೋತ್ರಾ ಯಚ್ಛ ಸೋಮ ರಾಜನ್ನೇಹ್ಯ
ವರೋಹ ಮಾ ಭೇರ್ಮಾ ಸಂ ವಿಕ್ಥಾ ಮಾ ತ್ವಾ ಹಿಗ್ಂಸಿಷಂ
ಪ್ರಜಾಸ್ತ್ವಮುಪಾವರೋಹ ಪ್ರಜಾಸ್ತ್ವಾ ಮುಪಾವರೋಹಂತು ಶೃಣೋ
ತ್ವಗ್ನಿಃ ಸಮಿಧಾ ಹವಂ ಮೇ ಶೃಣ್ವಂತ್ವಾಪೋ ಧಿಷಣಾಶ್ಚ ದೇವೀಃ।
ಶೃಣೋತ ಗ್ರಾವಾಣೋ ವಿದುಷೋ ನು (೧) ಯಜ್ಞಗ್ಂ ಶೃಣೋತು
ದೇವಃ ಸವಿತಾ ಹವಂ ಮೇ || ದೇವೀರಾಪೋ ಅಪಾಂ ನಪಾದ್ಯ
ಊರ್ಮಿರ್ ಹವಿಷ್ಯ ಇಂದ್ರಿಯಾವಾನ್ಮದಿಂತಮಸ್ತಂ ದೇವೇಭ್ಯೋ
ದೇವತ್ರಾ ಧತ್ತ ಶುಕ್ರಗ್ಂ ಶುಕ್ರಪೇಭ್ಯೋ ಯೇಷಾಂ ಭಾಗಸ್ಸ್ಥ ಸ್ವಾಹಾ
ಕಾರ್ಷಿ ರಸ್ಯಪಾಪಾಂ ಮೃಧ್ರುಗ್ಂ ಸಮುದ್ರಸ್ಯ ವೋಽಕ್ಷಿತ್ಯಾ ಉನ್ನಯೇ।



ಯಮಗ್ನೇ ಪ್ರತ್ಸು ಮರ್ತ್ಯ್ಯಮಾ ವ್ರೋ ವಾಜೇಷು ಯಂ ಜುನಾಃ । ಸ

ಯಂತಾ ಶಶ್ವತೀರಿಷಃ ॥ ೧೩-23 ॥

[ ನು ಸಪ್ತಚತ್ವಾರಿಗ್ಂಶಚ್ಚ ]

ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಗ್ಂ ಶರ್ಧೋ

ಮಾರುತಂ ಪ್ರಕ್ಷ ಈಶಿಷೇ । ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ

ಪೂಷಾ ವಿಧತಃ ಪಾಸಿ ನು ತ್ಮನಾ ॥ ಆ ವೋ ರಾಜಾನಮಧ್ವರಸ್ಯ

ರುದ್ರಗ್ಂ ಹೋತಾರಗ್ಂ ಸತ್ಯಯಜಗ್ಗ್ಂ ರೋದಸ್ಯೋಃ । ಅಗ್ನಿಂ

ಪುರಾ ತನಯಿತ್ನೋರಚಿತ್ತಾದ್ಧಿರಣ್ಯರೂಪಮವಸೇ ಕೃಣುಧ್ವಮ್ ॥

ಅಗ್ನಿರ್ ಹೋತಾ ನಿಷಸಾದಾ ಯಜೀಯಾನುಪಸ್ಥೇ ಮಾತುಃ ಸುರಭಾವು

ಲೋಕೇ । ಯುವಾ ಕವಿಃ ಪುರುನಿಷ್ಠ [ಪುರುನಿಷ್ಠಃ(೧) ಋತಾವಾ] ಋತಾವಾ

ಧರ್ತಾ ಕೃಷ್ಟೀನಾಮುತ ಮಧ್ಯ ಇದ್ಧಃ ॥ ಸಾಧ್ವೀಮಕರ್ದೇವವೀತಿಂ ನೋ

ಅದ್ಯ ಯಜ್ಞಸ್ಯ ಜಿಹ್ವಾಮವಿದಾಮ ಗುಹ್ಯಾಮ್ । ಸ ಆಯುರಾಗಾ-

ತ್ಸುರಭಿರ್ವಸಾನೋ ಭದ್ರಾಮಕರ್ದೇವಹೂತಿಂ ನೋ ಅದ್ಯ ॥ ಆಕ್ರಂದ

ದಗ್ನಿಃ ಸ್ತನಯನ್ನಿವ ದ್ಯೌಃ ಕ್ಷಾಮಾ ರೇರಿಹದ್ವೀರುಧಃ ಸಮಂಜನ್ನ್।

ಸದ್ಯೋ ಜಜ್ಞಾನೋ ವಿಹೀಮಿದ್ಧೋ ಅಖ್ಯದಾರೋದಸೀ ಭಾನುನಾ

ಭಾತ್ಯಂತಃ ॥ ತ್ವೇ ವಸೂನಿ ಪುರ್ವಣೀಕ [(೨) ಹೋತರ್ದೋಷಾ]

ಹೋತರ್ದೋಷಾ ವಸ್ತೋರೇರಿರೇ ಯಜ್ಞಿಯಾಸಃ । ಕ್ಷಾಮೇವ ವಿಶ್ವಾ



ಭುವನಾನಿ ಯಸ್ಮಿಂಥ್ಸಗ್‌ಂ ಸೌಭಗಾನಿ ದಧಿರೇ ಪಾವಕೇ । ತುಭ್ಯಂ

ತಾ ಅಂಗಿರಸ್ತಮ ವಿಶ್ವಾಸ್ಸುಕ್ಷಿತಯಃ ಪೃಥಕ್ । ಅಗ್ನೇ ಕಾಮಾಯ

ಯೇಮಿರೇ ॥ ಅಶ್ಯಾಮ ತಂ ಕಾಮಮಗ್ನೇ ತವೋತ್ಯಶ್ಯಾಮ ರಯಿಗ್‌ಂ

ರಯಿವಃ ಸುವೀರಮ್ । ಅಶ್ಯಾಮ ವಾಜಮಭಿವಾಜಯಂತೋಽಶ್ಯಾಮ

ದ್ಯುಮ್ನಮಜರಾಜರಂ ತೇ ॥ ಶ್ರೇಷ್ಠಂ ಯವಿಷ್ಠ ಭಾರತಾಗ್ನೇ

ದ್ಯುಮಂತಮಾಭರ (೩) । ವಸೋ ಪುರುಸ್ಪೃಹಗ್‌ಂ ರಯಿಮ್ ।

ಸಶ್ವಿತ್ರಾನಸ್ತನ್ಯತೂ ರೋಚನಸ್ಥಾ ಅಜರೇಭಿರ್ನಾನದದ್ಭಿರ್ಯವಿಷ್ಠಃ ।

ಯಃ ಪಾವಕಃ ಪುರುತಮಃ ಪುರೂಣಿ ಪೃಥೂನ್ಯಗ್ನಿರನುಯಾತಿ ಭರ್ವನ್ನ್।

ಆಯುಷ್ಟೇ ವಿಶ್ವತೋ ದಧದಯಮಗ್ನಿರ್ವರೇಣ್ಯಃ । ಪುನಸ್ತೇ ಪ್ರಾಣ ಆಯತಿ ಪರಾ ಯಕ್ಷ್ಮಗ್‍ಂ ಸುವಾಮಿ ತೇ ॥ ಆಯುರ್ದಾ ಅಗ್ನೇ ಹವಿಷೋ ಜುಷಾಣೋ ಘೃತಪ್ರತೀಕೋ ಘೃತಯೋನಿರೇಧಿ । ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ ಪುತ್ರಮಭಿ [ಪುತ್ರಮಭಿ (ಳ) ರಕ್ಷತಾದಿಮಮ್॥] ರಕ್ಷತಾದಿಮಮ್ ॥ ತಸ್ಮೈ ತೇ ಪ್ರತಿಹರ್ಯತೇ ಜಾತವೇದೋ ವಿಚರ್ಷಣೇ । ಅಗ್ನೇ ಜನಾಮಿ ಸುಷ್ಟುತಿಮ್ ॥ ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ । ತೃತೀಯ ಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥



ಶುಚಿಃ ಪಾವಕ ವಂದ್ಯೋಽಗ್ನೇ ಬೃಹದ್ವಿರೋಚಸೇ । ತ್ವಂ ಘೃತೇಭಿ ರಾಹುತಃ ॥ ದೃಶಾನೋ ರುಕ್ಮ ಉರ್ವ್ಯಾ ವ್ಯದ್ಯೌದ್ದುರ್ಮರ್‍ಷಮಾಯುಃ ಶ್ರಿಯೇ ರುಚಾನಃ । ಅಗ್ನಿರಮೃತೋ ಅಭವದ್ವಯೋಭಿ [ವಯೋಭಿಃ (ಱ)ಯದೇನಂ..] ರ್ಯದೇನಂ ದ್ಯೌರಜನಯತ್ಸುರೇತಾಃ ॥ ಆ ಯದಿಷೇ ನೃಪತಿಂ ತೇಜ ಆನಟ್ಛುಚಿ ರೇತೋ ನಿಷಿಕ್ತಂ ದ್ಯೌರಭೀಕೇ । ಅಗ್ನಿಃ ಶರ್ಧಮನವದ್ಯಂ ಯುವಾನಗ್‍ಂ ಸ್ವಾಧಿಯಂ ಜನಯತ್ಸೂದಯಚ್ಚ ॥

ಸ ತೇಜೀಯಸಾ ಮನಸಾ ತ್ವೋತ ಉತ ಶಿಕ್ಷ ಸ್ವಪತ್ಯಸ್ಯ ಶಿಕ್ಷೋಃ ।
ಅಗ್ನೇ ರಾಯೋ ನೃತಮಸ್ಯ ಪ್ರಭೂತೌ ಭೂಯಾಮ ತೇ ಸುಷ್ಟುತಯಶ್ಚ
ವಸ್ವಃ ॥ ಅಗ್ನೇ ಸಹಂತಮಾಭರ ದ್ಯುಮ್ನಸ್ಯ ಪ್ರಾಸಹಾ ರಯಿಮ್।
ವಿಶ್ವಾ ಯ [ವಿಶ್ವಾ ಯಃ(೬)ಚರ್ಷಣೀ] ಶ್ಚರ್ಷಣೀರಭ್ಯಾಸಾ ವಾಜೇಷು
ಸಾಸಹತ್॥ ತಮಗ್ನೇ ಪೃತನಾಸಹಗ್ಂ ರಯಿಗ್ಂ ಸಹಸ್ವ ಆ ಭರ ।
ತ್ವಗ್ಂ ಹಿ ಸತ್ಯೋ ಅದ್ಭುತೋ ದಾತಾ ವಾಜಸ್ಯ ಗೋಮತಃ॥ ಉಕ್ಷಾ
ನ್ನಾಯ ವಶಾನ್ನಾಯ ಸೋಮಪೃಷ್ಠಾಯ ವೇಧಸೇ । ಸ್ತೋಮೈರ್ವಿಧೇ
ಮಾಗ್ನಯೇ ॥ ವದ್ಮಾ ಹಿ ಸೂನೋ ಅಸ್ಯದ್ಮಸದ್ವಾ ಚಕ್ರೇ ಅಗ್ನಿರ್ಜನು
ಷಾಜ್ಮಾನ್ನಮ್ । ಸ ತ್ವಂ ನ ಊರ್ಜಸನ ಊರ್ಜಂ ಧಾ ರಾಜೇವ
ಜೇರವೃಕೇ ಕ್ಷೇಷ್ಯಂತಃ ॥ ಅಗ್ನ ಆಯೂಗ್ಂಷಿ [ಆಯೂಗ್ಂಷಿ (೭)
ಪವಸ] ಪವಸ ಆ ಸುವೋರ್ಜಮಿಷಂ ಚ ನಃ। ಆರೇ ಬಾಧಸ್ವ
ದುಚ್ಛುನಾಮ್॥ ಅಗ್ನೇ ಪವಸ್ವ ಸ್ವಪಾ ಅಸ್ಮೇ ವರ್ಚಃ ಸುವೀರ್ಯಮ್।
ದಧತ್ಪೋಷಗ್ಂ ರಯಿಂ ಮಯಿ ॥ ಅಗ್ನೇ ಪಾವಕ ರೋಚಿಷಾ
ಮಂದ್ರಯಾ ದೇವ ಜಿಹ್ವಯಾ। ಆ ದೇವಾನ್, ವಕ್ಷಿ ಯಕ್ಷಿ ಚ॥



ಸ ನಃ ಪಾವಕ ದೀದಿವೋಽಗ್ನೇ ದೇವಾಗ್ಂ ಇಹಾವಹ । ಉಪ ಯಜ್ಞಗ್ಂ ಹವಿಶ್ಚ ನಃ ॥ ಅಗ್ನಿಃ ಶುಚಿವ್ರತತಮಃ ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ ॥ ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಗ್ಂಷ್ಯರ್ಚಯಃ ॥ ೧೪ - 31 ॥

[ಪುರುನಿಷ್ಠಃ ಪುರ್ವಣೀಕ ಭರಾಭಿ ವಯೋಭಿರ್ಯ ಆಯೂಗ್ಂಷಿ ವಿಪ್ರಃ

ಶುಚಿಶ್ಚತುರ್ದಶ ಚ ।]

ದೇವಸ್ಯ ರಕ್ಷೋಹಣೋ ವಿಭೂಸ್ತ್ವಗ್ಂ ಸೋಮಾತ್ಯನ್ಯಾನಗಾಂ ಪೃಥಿವ್ಯಾ ಇಷೇ ತ್ವಾಽಽದದೇ ಪಾಕ್ತೇ ಸಂತೇ ಸಮುದ್ರಗ್ಂ ಹವಿಷ್ಮತೀರ್ ಹೃದೇ ತ್ವಮಗ್ನೇ ರುದ್ರಶ್ಚತುರ್ದಶ ॥ ೧೪ ॥

ದೇವಸ್ಯ ಗಮಧ್ಯೇ ಹವಿಷ್ಮತೀಃ ಪವಸ ಏಕತ್ರಿಗ್ಂಶತ್ ॥ 31 ॥

॥ ದೇವಸ್ಯಾರ್ಚಯಃ ॥

ಹರಿಃ ಓಂ । ಶ್ರೀಕೃಷ್ಣಾರ್ಪಣಮಸ್ತು.

ಇತಿ ಪ್ರಥಮಕಾಂಡೇ ತೃತೀಯಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ತೃತೀಯಃ ಪ್ರಶ್ನಃ

ಹರಿಃ ಓಮ್ ॥

**ದೇವಸ್ಯ ತ್ವಾ ಸವಿತುಃ**



---

✣ ಸೌ ✣ ದೇವಸ್ಯ । ತ್ವಾ । ಸವಿತುಃ ।

---

| ಮಂತ್ರ | ವಿನಿಯೋಗ |
|---|---|
| ದೇವಸ್ಯ....... ದದೇ । | ಅಭ್ರಿ (ಅಗೆಯುವ ಸಾಧನ)ಯನ್ನು ತೆಗೆದುಕೊಳ್ಳಲು |

---

ಎರಡನೆಯ ಪ್ರಶ್ನೆಯಲ್ಲಿ ಮುಖ್ಯವಾಗಿ ಸೋಮಕ್ರಯಣವನ್ನು ಹೇಳಿ ಬಳಿಕ ಹವಿರ್ಧಾನಮಂಡಪನಿರ್ಮಾಣದವರೆಗಿನ ಕರ್ಮಗಳನ್ನು ಹೇಳಲಾಯಿತು. ಈಗ ಮೂರನೆಯ ಪ್ರಶ್ನೆಯಲ್ಲಿ ಅಗ್ನೀಷೋಮೀಯಪಶುಯಾಗವನ್ನು ಮುಖ್ಯವಾಗಿ ಹೇಳಲಾಗುತ್ತದೆ. ಅದಕ್ಕೆ ಮೊದಲು ಹಿಂದಿನ ಕರ್ಮಗಳಿಗೆ ಹೊಂದಿಕೊಂಡಿರುವ ಸದೋಮಂಡಪನಿರ್ಮಾಣಾದಿಗಳು ಹೇಳಲ್ಪಡುತ್ತವೆ. ಈ ಪ್ರಶ್ನೆಗೆ '**ಪಶುಪ್ರಶ್ನೆ**' ಯೆಂದು ಹೆಸರು. ಇದರಲ್ಲಿ 14 ಅನುವಾಕಗಳು ಇವೆ. ಆ ಅನುವಾಕಗಳಲ್ಲಿ ಹೇಳಿರುವ ವಿಷಯಗಳು ಹೀಗಿವೆ.

| ಅನುವಾಕ | ವಿಷಯ |
|---|---|
| ೧ | ಸದೋಮಂಡಪನಿರ್ಮಾಣ |
| ೨ | ಉಪರವಗಳು |
| ೩ | ಧಿಷ್ಣ್ಯಗಳು |

| | |
|---|---|
| ೪ | ವೈಸರ್ಜನಹೋಮ |
| ೫ | ಯೂಪಚ್ಛೇದ |
| ೬ | ಯೂಪಪ್ರತಿಷ್ಠಾ |
| ೭ | ಪಶೂಪಾಕರಣ |
| ೮ | ಪಶುಹಿಂಸನ |
| ೯ | ವಪೋತ್ಖೇದ |
| ೧೦ | ವಪಾಹೋಮ |
| ೧೧ | ಗುದಕಾಂಡಾಹುತಿ |
| ೧೨ | ವಸತೀವರ್ಯುಪಾದಾನ |
| ೧೩ | ಸೋಮೋಪಾವಹರಣ |
| ೧೪ | ಕಾಮ್ಯೇಷ್ಟಿಯಾಜ್ಯೆಗಳು |



**ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾ ಮಾದದೇಽಭ್ರಿರಸಿ ನಾರಿರಸಿ**

---

ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಪೂಷ್ಣಃ। ಹಸ್ತಾಭ್ಯಾಮ್ । ಆ । ದದೇ । ಅಭ್ರಿಃ । ಅಸಿ । ನಾರಿಃ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಅಭ್ರಿರಸಿ ನಾರಿರಸಿ । | ಅಭ್ರಿಯ ಅಭಿಮಂತ್ರಣ ಮಾಡಲು |

---

**ಪದಶಃ ಅರ್ಥ** :- [ಎಲೈ ಅಭ್ರಿಯೇ!] **ತ್ವಾ** = ನಿನ್ನನ್ನು; **ದೇವಸ್ಯ ಸವಿತುಃ** = ಸರ್ವಪ್ರೇರಕನಾದ ಸವಿತೃದೇವನ; **ಪ್ರಸವೇ** (ಸತಿ) = ಅನುಮತಿಯಾಗಲಾಗಿ; **ಅಶ್ವಿನೋಃ** = ಅಶ್ವಿನೀದೇವತೆಗಳ; **ಬಾಹುಭ್ಯಾಂ** = ತೋಳುಗಳಿಂದ; **ಪೂಷ್ಣಃ** = ಪೋಷಕನಾದ ಪೂಷದೇವನ; **ಹಸ್ತಾಭ್ಯಾಮ್** = ಕೈಗಳಿಂದ; **ಆ ದದೇ** = ತೆಗೆದುಕೊಳ್ಳುತ್ತೇನೆ; ✣ [ನೀನು] **ಅಭ್ರಿಃ ಅಸಿ** = [ಕಠಿಣವಾಗಿಯೂ ಇರುವ ಪ್ರದೇಶವನ್ನು ಭೇದಿಸಬಲ್ಲ ತೀಕ್ಷ್ಣವಾದ ಅಗ್ರಭಾಗ (ದಸಿ)ವುಳ್ಳ] ಅಭ್ರಿಯಾಗಿರುವೆ; [ಆದರೂ ನಮ್ಮ ವಿಷಯದಲ್ಲಿ] **ನಾರಿಃ ಅಸಿ** = ಶತ್ರುವಾಗಿಲ್ಲ, ಮಿತ್ರನಾಗಿರುವೆ.

---

**ತಾತ್ಪರ್ಯ** :- ಎಲೈ ಅಭ್ರಿಯೇ! ಸವಿತೃದೇವನ ಅನುಮತಿಯಾಗಲಾಗಿ, ಅಶ್ವಿನೀದೇವತೆಗಳ ತೋಳುಗಳಿಂದಲೂ, ಪೂಷದೇವನ ಕೈಗಳಿಂದಲೂ ನಿನ್ನನ್ನು ತೆಗೆದುಕೊಳ್ಳುತ್ತೇನೆ.

ಕಠಿಣಪ್ರದೇಶವನ್ನೂ ಭೇದಿಸಬಲ್ಲ ತೀಕ್ಷ್ಣವಾದ ಅಗ್ರವನ್ನು ಹೊಂದಿದ್ದರೂ ನೀನು ನಮ್ಮ ವಿಷಯದಲ್ಲಿ ಶತ್ರುವಾಗಿಲ್ಲ. ಸ್ನೇಹಿತನಂತೆ ಹಿತಕಾರಿಯಾಗಿರುವೆ.

ರಾಕ್ಷಸರು ಈ ಪರಿಲೇಖನದಿಂದ ನಾಶಹೊಂದಲಿ. ಶತ್ರುಗಳು ನಾಶ ಹೊಂದಲಿ. ನಾನು ಹೀಗೆ ಪರಿಲೇಖನ ಮಾಡಿ ರಾಕ್ಷಸರ ಕುತ್ತಿಗೆಗಳನ್ನು ಕತ್ತರಿಸುತ್ತೇನೆ. ನಮ್ಮನ್ನು ಯಾರು ದ್ವೇಷಿಸುವರೋ, ಯಾವನನ್ನು ನಾವು ದ್ವೇಷಿಸುತ್ತೇವೆಯೋ, ಅಂತಹ

ಪರಿಲಿಖಿತಗ್ಂ ರಕ್ಷಃ ಪರಿಲಿಖಿತಾ ಅರಾತಯ ಇದಮಹಗ್ಂ ರಕ್ಷಸೋ ಗ್ರೀವಾ ಅಪಿ ಕೃಂತಾಮಿ ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮ ಇದಮಸ್ಯ ಗ್ರೀವಾ ಅಪಿ ಕೃಂತಾಮಿ

---

ಪರಿಲಿಖಿತಮಿತಿ ಪರಿ-ಲಿಖಿತಮ್ । ರಕ್ಷಃ । ಪರಿಲಿಖಿತಾ ಇತಿ ಪರಿ-ಲಿಖಿತಾಃ । ಅರಾತಯಃ। ಇದಮ್ । ಅಹಮ್ । ರಕ್ಷಸಃ । ಗ್ರೀವಾಃ । ಅಪೀತಿ । ಕೃಂತಾಮಿ । ಯಃ । ಅಸ್ಮಾನ್। ದ್ವೇಷ್ಟಿ । ಯಮ್ । ಚ । ವಯಮ್ । ದ್ವಿಷ್ಮಃ । ಇದಮ್ । ಅಸ್ಯ । ಗ್ರೀವಾಃ । ಅಪೀತಿ । ಕೃಂತಾಮಿ ।

---

| ಮಂತ್ರ | ವಿನಿಯೋಗ |
|---|---|
| ಪರಿಲಿಖಿತಮ್..... ಅಸ್ಯಗ್ರೀವಾ ಅಪಿ ಕೃಂತಾಮಿ । | ಔದುಂಬರಿಯನ್ನು ನೆಡುವುದಕ್ಕಾಗಿ ಹಳ್ಳವನ್ನು ಸುತ್ತಲೂ ಗೀರಲು. |

---

❖ ರಕ್ಷಃ = ರಾಕ್ಷಸರು; ಪರಿಲಿಖಿತಮ್ = ನಾಶಪಡಿಸಲ್ಪಟ್ಟಿದ್ದಾರೆ. [ನಾಶ ಪಡಿಸಲ್ಪಡಲಿ]; ಅರಾತಯಃ= ಶತ್ರುಗಳು; ಪರಿಲಿಖಿತಾಃ = ನಾಶಪಡಿಸಲ್ಪಟ್ಟಿದ್ದಾರೆ; [ನಾಶಪಡಿಸಲ್ಪಡಲಿ]; ಅಹಮ್ = ನಾನು; ಇದಮ್ = ಇದೋ; ರಕ್ಷಸಃ = ರಾಕ್ಷಸರ; ಗ್ರೀವಾಃ = ಕಂಠಗಳನ್ನು; ಅಪಿಕೃಂತಾಮಿ = ಛೇದಿಸುತ್ತೇನೆ. ಯಃ = ಯಾವನು; ಅಸ್ಮಾನ್ = ನಮ್ಮನ್ನು; ದ್ವೇಷ್ಟಿ = ದ್ವೇಷಿಸುತ್ತಾನೆಯೋ; ಚ = ಮತ್ತು; ಯಮ್ = ಯಾವನನ್ನು; ವಯಮ್ = ನಾವು; ದ್ವಿಷ್ಮಃ = ದ್ವೇಷಿಸುತ್ತೇವೆಯೋ; ಅಸ್ಯ = ಈ ದ್ವೇಷಿಯ ಮತ್ತು ದ್ವೇಷ್ಯನ; ಗ್ರೀವಾಃ = ಕುತ್ತಿಗೆಗಳನ್ನು; ಇದಮ್ = ಇದೋ ಹೀಗೆ; ಅಪಿಕೃಂತಾಮಿ = ಕತ್ತರಿಸುತ್ತೇನೆ;

---

ದ್ವೇಷಿಯ (ದ್ವೇಷಿಸುವವನ) ಮತ್ತು ದ್ವೇಷ್ಯನ (ನಮ್ಮಿಂದ ದ್ವೇಷಿಸಲ್ಪಡುವವನ) ಕಂಠಗಳನ್ನು ಹೀಗೆ ಪರಿಲೇಖನ ಮಾಡಿ ಕತ್ತರಿಸುತ್ತೇನೆ.

ದಿವೇ ತ್ವಾಂತರಿಕ್ಷಾಯ ತ್ವಾ ಪೃಥಿವ್ಯೈ ತ್ವಾ ಶುಂಧತಾಂ ಲೋಕಃ ಪಿತೃಷದನೋ ಯವೋಽಸಿ ಯವಯಾಸ್ಮದ್ದ್ವೇಷೋ [ದ್ವೇಷಃ (೧)]

---

ದಿವೇ । ತ್ವಾ । ಅಂತರಿಕ್ಷಾಯ । ತ್ವಾ । ಪೃಥಿವ್ಯೈ । ತ್ವಾ । ಶುಂಧತಾಮ್ । ಲೋಕಃ। ಪಿತೃಷದನ ಇತಿ ಪಿತೃ-ಸದನಃ । ಯವಃ । ಅಸಿ । ಯವಯ । ಅಸ್ಮತ್ । ದ್ವೇಷಃ [೧]

---



| ಮಂತ್ರ | ವಿನಿಯೋಗ |
|---|---|
| ದಿವೇ..... ಪೃಥಿವ್ಯೈ ತ್ವಾ । | ಔದುಂಬರಿಯ ಅಗ್ರ, ಮಧ್ಯ ಮತ್ತು ಮೂಲ ಭಾಗಗಳಲ್ಲಿ ಕ್ರಮವಾಗಿ ಪ್ರೋಕ್ಷಿಸಲು. |
| ಶುಂಧತಾಂ.....ಪಿತೃಷದನಃ । | ಹಳ್ಳದಲ್ಲಿ ನೀರನ್ನು ಹಾಕಲು. |
| ಯವೋಽಸಿ.....ಯವಯಾಸ್ಮದ್ದ್ವೇಷಃ । | ಯವಧಾನ್ಯವನ್ನು ಹಳ್ಳದಲ್ಲಿ ಹಾಕಲು. |

---

✣ [ಲೋಕತ್ರಯಾತ್ಮಕವಾದ ಔದುಂಬರಿಯೇ!] ದಿವೇ = ಸ್ವರ್ಗಲೋಕಕ್ಕಾಗಿ; ತ್ವಾ = ನಿನ್ನನ್ನು[ಅಗ್ರಭಾಗದಲ್ಲಿ]; ಪ್ರೋಕ್ಷಾಮಿ = ಪ್ರೋಕ್ಷಿಸುತ್ತೇನೆ; ಅಂತರಿಕ್ಷಾಯ = ಅಂತರಿಕ್ಷಕ್ಕಾಗಿ; ತ್ವಾ = ನಿನ್ನನ್ನು; [ಮಧ್ಯಭಾಗದಲ್ಲಿ] ಪ್ರೋಕ್ಷಾಮಿ = ಪ್ರೋಕ್ಷಿಸುತ್ತೇನೆ; ಪೃಥಿವ್ಯೈ = ಭೂಲೋಕಕ್ಕಾಗಿ; ತ್ವಾ = ನಿನ್ನನ್ನು; [ಮೂಲಭಾಗದಲ್ಲಿ] ಪ್ರೋಕ್ಷಾಮಿ = ಪ್ರೋಕ್ಷಿಸುತ್ತೇನೆ; ✣ ಪಿತೃಷದನಃ ಲೋಕಃ = ಪಿತೃಗಳು ಕುಳಿತುಕೊಳ್ಳುವ ಪ್ರದೇಶವಾದ ಹಳ್ಳವು; ಶುಂಧತಾಮ್ = ಶುದ್ಧವಾಗಲಿ. ✣ ಯವಃ ಅಸಿ = [ಎಲೈ ಯವಧಾನ್ಯವೇ!] [ನೀನು] ಯವ [ಬೇರ್ಪಡಿಸುವ ಶಕ್ತಿಯುಳ್ಳದ್ದು]ವಾಗಿರುವೆ. [ಆದುದರಿಂದ] ಅಸ್ಮತ್ = ನಮ್ಮ ದೆಸೆಯಿಂದ [ನಮಗೆ]; ದ್ವೇಷಃ = (ದ್ವೇಷಿಗಳಾದ)ರಾಕ್ಷಸರನ್ನು;

---

ಲೋಕತ್ರಯರೂಪವಾದ ಔದುಂಬರಿಯೇ! ಸ್ವರ್ಗಲೋಕ, ಅಂತರಿಕ್ಷಲೋಕ ಮತ್ತು ಭೂಲೋಕಗಳಿಗಾಗಿ ನಿನ್ನನ್ನು ಅಗ್ರ, ಮಧ್ಯ, ಮೂಲಭಾಗಗಳಲ್ಲಿ ಕ್ರಮವಾಗಿ ಪ್ರೋಕ್ಷಿಸುತ್ತೇನೆ.

**ಯವಯಾರಾತೀಃ ಪಿತ್ರೃಣಾಗ್ಂ ಸದನಮಸ್ಯುದ್ದಿವಗ್ಂ**

**ಸ್ತಭಾನಾಂತರಿಕ್ಷಂ ಪೃಣ ಪೃಥಿವೀಂ ದೃಗ್ಂಹ**

---

ಯವಯ । ಅರಾತೀಃ । ಪಿತೃಣಾಮ್ । ಸದನಮ್ । ಅಸಿ । ಉದಿತಿ । ದಿವಮ್ ।

ಸ್ತಭಾನ । ಏತಿ । ಅಂತರಿಕ್ಷಮ್ । ಪೃಣ । ಪೃಥಿವೀಮ್ । ದೃಗ್ಂಹ ।

---

| ಮಂತ್ರ | ವಿನಿಯೋಗ |
|---|---|
| ಪಿತೃಣಾಗ್ಂ.... ಅಸಿ । | ಹಳ್ಳದಲ್ಲಿ ಬರ್ಹಿಸ್ಸನ್ನು ಹಾಕಲು |
| ಉದ್ದಿವಗ್ಂ....ದೃಗ್ಂಹ । | ಔದುಂಬರಿಯನ್ನು ಮೇಲೆತ್ತಲು |

---

ಯವಯ = ದೂರಮಾಡು; ಅರಾತೀಃ = ಬೇರೆಯ ಶತ್ರುಗಳನ್ನೂ; ಯವಯ = ದೂರಮಾಡು. ✢ [ಎಲೈ ದರ್ಭವೇ!] [ನೀನು] ಪಿತೃಣಾಮ್ = ಪಿತೃದೇವತೆಗಳಿಗೆ; ಸದನಮ್ ಅಸಿ = ಆಸನವಾಗಿದ್ದೀಯೆ. [ನಿನ್ನನ್ನು ಈ ಅವಟದಲ್ಲಿ ಹರಡುತ್ತೇನೆ.] ✢ [ಎಲೈ ಔದುಂಬರಿಯೇ! ನೀನು] ದಿವಮ್ = ದ್ಯುಲೋಕವನ್ನು; ಉತ್ ಸ್ತಭಾನ = ಮೇಲೆ ಧರಿಸು; ಅಂತರಿಕ್ಷಮ್ = ಆಕಾಶವನ್ನು; ಆ ಪೃಣ= ತುಂಬು; ಪೃಥಿವೀಮ್ = ಭೂಮಿಯನ್ನು; ದೃಗ್ಂಹ = ದೃಢಪಡಿಸು.

---

ಈ ಅವಟವು ಪಿತೃಗಳು ಕುಳಿತುಕೊಳ್ಳುವ ಪ್ರದೇಶವಾಗಿದೆ. ಇದು ನೀರಿನಿಂದ ಶುದ್ಧವಾಗಲಿ.

ಎಲೈ! ಯವಧಾನ್ಯವೇ! ನೀನು ಬೇರ್ಪಡಿಸುವ ಶಕ್ತಿಯುಳ್ಳವನು. ನಮ್ಮಿಂದ ರಾಕ್ಷಸರನ್ನೂ, ಇತರ ಶತ್ರುಗಳನ್ನೂ ದೂರಮಾಡು. (ನಾಶಪಡಿಸು).

ಎಲೈ ಬರ್ಹಿಸ್ಸೇ! ನೀನು ಪಿತೃಗಳ ಆಸನವಾಗಿದ್ದೀಯೆ. ನಿನ್ನನ್ನು ಪಿತೃದೇವತಾಕವಾದ ಈ ಹಳ್ಳದಲ್ಲಿ ಹರಡುತ್ತೇನೆ.

ಎಲೈ! ಔದುಂಬರಿಯೇ! ನೀನು ದ್ಯುಲೋಕವನ್ನು ಬೀಳದಂತೆ ಮೇಲೆ ಧರಿಸು. ಅಂತರಿಕ್ಷವನ್ನು ವ್ಯಾಪಿಸು. ಭೂಮಿಯನ್ನು ದೃಢವಾಗಿರುವಂತೆ ಮಾಡು.

**ದ್ಯುತಾನಸ್ತ್ವಾ ಮಾರುತೋ ಮಿನೋತು ಮಿತ್ರಾವರುಣಯೋ-**
**ರ್ಧ್ರುವೇಣ ಧರ್ಮಣಾ ಬ್ರಹ್ಮವನಿಂ ತ್ವಾ ಕ್ಷತ್ರವನಿಗ್ಂ**
**ಸುಪ್ರಜಾವನಿಗ್ಂ ರಾಯಸ್ಪೋಷವನಿಂ ಪರ್ಯೂಹಾಮಿ**

---

ದ್ಯುತಾನಃ । ತ್ವಾ । ಮಾರುತಃ । ಮಿನೋತು । ಮಿತ್ರಾವರುಣಯೋರಿತಿ ಮಿತ್ರಾ - ವರುಣಯೋಃ । ಧ್ರುವೇಣ । ಧರ್ಮಣಾ । ಬ್ರಹ್ಮವನಿಮಿತಿ ಬ್ರಹ್ಮ-ವನಿಮ್ । ತ್ವಾ । ಕ್ಷತ್ರವನಿಮಿತಿ ಕ್ಷತ್ರ-ವನಿಮ್ । ಸುಪ್ರಜಾವನಿಮಿತಿ ಸುಪ್ರಜಾ - ವನಿಮ್ । ರಾಯಸ್ಪೋಷವನಿಮಿತಿ ರಾಯಸ್ಪೋಷ-ವನಿಮ್ । ಪರೀತಿ । ಊಹಾಮಿ ।

---

| ಮಂತ್ರ | ವಿನಿಯೋಗ |
|---|---|
| ದ್ಯುತಾನಸ್ತ್ವಾ.... ಧರ್ಮಣಾ । | ಔದುಂಬರಿಯನ್ನು ಹಳ್ಳದಲ್ಲಿ ನೆಡಲು |
| ಬ್ರಹ್ಮವನಿಂ.... ಪರ್ಯೂಹಾಮಿ । | ಔದುಂಬರಿಯ ಸುತ್ತಲೂ ಪ್ರದಕ್ಷಿಣವಾಗಿ ಮಣ್ಣನ್ನು ಹಾಕಲು. |

---

✣ [ಎಲೈ ಔದುಂಬರಿಯೇ!] **ಮಿತ್ರಾವರುಣಯೋಃ** = ಮಿತ್ರಾವರುಣ ದೇವತೆಗಳಿಗೆ ಸಂಬಂಧಿಸಿದ; **ಧ್ರುವೇಣ** = ದೃಢವಾದ; **ಧರ್ಮಣಾ** = ಧಾರಣೆಯಿಂದ; **ತ್ವಾ** = [ಇಲ್ಲಿಂದಲ್ಲಿಗೆ ಬೀಳುತ್ತಿರುವ] ನಿನ್ನನ್ನು; **ಮಾರುತಃ** = ಮರುತ್ಪುತ್ರನಾದ; **ದ್ಯುತಾನಃ** = ದ್ಯುತಾನನು; **ಮಿನೋತು** = [ಈ ಹಳ್ಳದಲ್ಲಿ] ನೆಡಲಿ; ✣ ಎಲೈ ಔದುಂಬರಿಯೇ!

---

ಎಲೈ! ಔದುಂಬರಿಯೇ! ಮರುತ್ಪುತ್ರನಾದ ದ್ಯುತಾನನು ದೇವತೆಗಳಲ್ಲಿ ಔದುಂಬರಿಯನ್ನು ದೃಢವಾಗಿ ನೆಡುವವನು. ಆತನು ಮಿತ್ರಾವರುಣರ ದೃಢವಾದ ಧಾರಣೆಯಿಂದ ಅತ್ತ ಇತ್ತ ವಾಲದಂತೆ ನಿನ್ನನ್ನು ದೃಢವಾಗಿ ನೆಡಲಿ.

**ಬ್ರಹ್ಮ ದೃಗ್ಂಹ ಕ್ಷತ್ರಂ ದೃಗ್ಂಹ ಪ್ರಜಾಂ ದೃಗ್ಂಹ ರಾಯ ಸ್ಪೋಷಂ ದೃಗ್ಂಹ ಘೃತೇನ ದ್ಯಾವಾಪೃಥಿವೀ ಆ ಪೃಣೇಥಾ**

---

ಬ್ರಹ್ಮ । ದೃಗ್ಂಹ । ಕ್ಷತ್ರಮ್ । ದೃಗ್ಂಹ । ಪ್ರಜಾಮಿತಿ ಪ್ರ-ಜಾಮ್ । ದೃಗ್ಂಹ । ರಾಯಃ । ಪೋಷಮ್ । ದೃಗ್ಂಹ । ಘೃತೇನ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಐತಿ । ಪೃಣೇಥಾಮ್ ।

---

| ಮಂತ್ರ | ವಿನಿಯೋಗ |
|---|---|
| ಬ್ರಹ್ಮ..... ರಾಯಸ್ಪೋಷಂ ದೃಗ್ಂಹ । | ಮೈತ್ರಾವರುಣದಂಡದಿಂದ ಮಣ್ಣನ್ನು ಬಲವಾಗಿ ಕುಟ್ಟಲು |
| ಘೃತೇನ....ಆ ಪೃಣೇಥಾಮ್ । | ಔದುಂಬರಿಯಲ್ಲಿ ಸ್ರುವದಿಂದ ಆಜ್ಯವನ್ನು ಹೋಮ ಮಾಡಲು |

---

ಬ್ರಹ್ಮವನಿಮ್ = ಬ್ರಾಹ್ಮಣ್ಯವನ್ನು ಕೊಡುವ; ಕ್ಷತ್ರವನಿಮ್ = ಕ್ಷತ್ರಿಯತ್ವವನ್ನು ಕೊಡುವ; ಸುಪ್ರಜಾವನಿಮ್ = ಒಳ್ಳೆಯ ಪ್ರಜೆ [ಮಕ್ಕಳು]ಗಳನ್ನು ಕೊಡುವ; ರಾಯಸ್ಪೋಷವನಿಮ್ = ಧನಸಮೃದ್ಧಿಯನ್ನು ಕೊಡುವ; ತ್ವಾ = ನಿನ್ನನ್ನು; ಪರ್ಯೂಹಾಮಿ = [ಸುತ್ತಲೂ ಮಣ್ಣನ್ನು ಹಾಕಿ] ದೃಢಪಡಿಸುತ್ತೇನೆ; ❖ [ಎಲ್ಲೈ! ಮೈತ್ರಾವರುಣದಂಡವೇ] ಬ್ರಹ್ಮ = ಬ್ರಾಹ್ಮಣ್ಯವನ್ನು; ದೃಗ್ಂಹ = ದೃಢಪಡಿಸು; ಕ್ಷತ್ರಮ್ = ಕ್ಷತ್ರಿಯತ್ವವನ್ನು; ದೃಗ್ಂಹ = ದೃಢಪಡಿಸು; ಪ್ರಜಾಮ್ = ಸಂತಾನವನ್ನೂ; ದೃಗ್ಂಹ = ಬಲಪಡಿಸು; ರಾಯಸ್ಪೋಷಮ್=ಧನಸಮೃದ್ಧಿಯನ್ನೂ; ದೃಗ್ಂಹ-ದೃಢಪಡಿಸು. ❖ದ್ಯಾವಾಪೃಥಿವೀ = ಎಲ್ಲೈ! ದ್ಯುಲೋಕ-ಭೂಲೋಕರೂಪವಾದ ಔದುಂಬರಿಯ ಅಗ್ರಮೂಲ ಭಾಗಗಳೇ! ಘೃತೇನ = ಈ ಆಜ್ಯದಿಂದ; ಆ ಪೃಣೇಥಾಮ್ = ಸುತ್ತಲೂ ತೃಪ್ತಿಹೊಂದಿರಿ.

---

ಎಲ್ಲೈ ಔದುಂಬರಿಯೇ! ನೀನು ಬ್ರಾಹ್ಮಣ್ಯವನ್ನೂ, ಕ್ಷತ್ರಿಯತ್ವವನ್ನೂ, ಒಳ್ಳೆಯ ಮಕ್ಕಳನ್ನೂ ಧನಸಮೃದ್ಧಿಯನ್ನೂ ಕೊಡತಕ್ಕವಳು. ಇಂತಹ ನಿನ್ನ ಸುತ್ತಲೂ ಮಣ್ಣನ್ನು ಹಾಕುತ್ತೇನೆ. ಬಲವಾಗಿ ನಿಲ್ಲುವಂತೆ ಮಾಡುತ್ತೇನೆ.

## ಮಿಂದ್ರಸ್ಯ ಸದೋಽಸಿ ವಿಶ್ವಜನಸ್ಯ ಛಾಯಾ ಪರಿ ತ್ವಾ

---

ಇಂದ್ರಸ್ಯ । ಸದಃ । ಅಸಿ । ವಿಶ್ವಜನಸ್ಯೇತಿ ವಿಶ್ವ-ಜನಸ್ಯ । ಛಾಯಾ । ಪರೀತಿ । ತ್ವಾ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ ಸದೋಽಸಿ । | ಸದೋಮಂಡಪಕ್ಕಾಗಿ ಕಂಬಗಳನ್ನು ನೆಟ್ಟು, ಬಿದಿರುಗಳನ್ನು ಹಾಕಿ, ಮಧ್ಯಮಛದಿ (ಮುಚ್ಚುವ ವಸ್ತು)ಯನ್ನು ಹಾಕಲು |
| ವಿಶ್ವಜನಸ್ಯ ಛಾಯಾ । | ಉಳಿದ ಎರಡು ದಿಕ್ಕಿನ ಛದಿಗಳನ್ನು ಹಾಕಲು –ಬೌಧಾಯನ |
| | ಆಪಸ್ತಂಬ |
| ಐಂದ್ರಮಸಿ । * | ಮಧ್ಯದ ಮೂರು ಛದಿಗಳನ್ನು ಹಾಕಲು. |
| ವಿಶ್ವಜನಸ್ಯ ಛಾಯಾ । | ದಕ್ಷಿಣಭಾಗದ ಮೂರು ಛದಿಗಳನ್ನು ಹಾಕಲು |
| ಇಂದ್ರಸ್ಯ ಸದೋಽಸಿ । | ಉತ್ತರಭಾಗದ ಮೂರು ಛದಿಗಳನ್ನು ಹಾಕಲು |
| ಪರಿ ತ್ವಾ..... ಜುಷ್ಟಯಃ । | ಸದೋಮಂಡಪದ ಸುತ್ತಲೂ ತಡಿಕೆ ಮೊದಲಾದವನ್ನು ಕಟ್ಟಲು |

---

✣ [ಸದೋಮಂಡಪದ ಮಧ್ಯಛದಿಯೇ! ನೀನು] ಇಂದ್ರಸ್ಯ=ಇಂದ್ರನ; ಸದಃ=ಮನೆಯು; ಅಸಿ = ಆಗಿದ್ದೀಯೆ; ✣ [ಪಕ್ಕದ ಛದಿಗಳೇ! ನೀವು] ವಿಶ್ವಜನಸ್ಯ ಛಾಯಾ = ಸರ್ವ ಜನರಿಗೂ ಮನೆಯಾಗಿದ್ದೀರಿ;** ✣ [ಹೇ!] ಗಿರ್ವಣಃ = ಸ್ತುತಿಗಳಿಂದ ಸೇವಿಸಲ್ಪಡುವ

---

ಎಲೈ ಮೈತ್ರಾವರುಣದಂಡವೇ! ನೀನು ಮಣ್ಣನ್ನು ಕುಟ್ಟಿ ಔದುಂಬರಿಯನ್ನು ದೃಢಪಡಿಸಿ, ಬ್ರಾಹ್ಮಣ್ಯವನ್ನೂ, ಕ್ಷತ್ರಿಯತ್ವವನ್ನೂ, ಸಂತತಿಯನ್ನೂ ಮತ್ತು ಧನ

---

* ಇದು ಶಾಖಾಂತರದ ಮಂತ್ರ. 6ನೆಯ ಕಾಂಡದ ಸೌಮಿಕಬ್ರಾಹ್ಮಣದಲ್ಲಿ ಈ ಮಂತ್ರದ ವಿನಿಯೋಗವನ್ನು ಹೇಳಲಾಗಿದೆ. 6. 2. 10.

**ಆಪಸ್ತಂಬ ಮತದಂತೆ 'ಇಂದ್ರಸ್ಯ ಸದೋಽಸಿ' ಎಂಬುದು ಉತ್ತರದಿಕ್ಕಿನ ಛದಿಗೂ 'ವಿಶ್ವಜನಸ್ಯ ಛಾಯಾ' ಎಂಬುದು ದಕ್ಷಿಣ ದಿಕ್ಕಿನ ಛದಿಗೂ ಅನ್ವಯಿಸುವುದು.

ಗಿರ್ವಣೋ ಗಿರ ಇಮಾ ಭವಂತು ವಿಶ್ವತೋ ವೃದ್ಧಾಯುಮನು

ವೃದ್ಧಯೋ ಜುಷ್ಟಾ ಭವಂತು ಜುಷ್ಟಯ ಇಂದ್ರಸ್ಯ ಸ್ಯೂರ-

---

ಗಿರ್ವಣಃ। ಗಿರಃ । ಇಮಾಃ । ಭವಂತು । ವಿಶ್ವತಃ । ವೃದ್ಧಾಯುಮಿತಿ ವೃದ್ಧ-ಆಯುಮ್।

ಅನ್ವಿತಿ ವೃದ್ಧಯಃ । ಜುಷ್ಟಾಃ । ಭವಂತು । ಜುಷ್ಟಯಃ । ಇಂದ್ರಸ್ಯ । ಸ್ಯೂಃ । ಅಸಿ।

---

| ಮಂತ್ರ | ವಿನಿಯೋಗ |
| --- | --- |
| ಇಂದ್ರಸ್ಯ ಸ್ಯೂರಸಿ । | ಹಗ್ಗದಿಂದ ಕಟ್ಟಲು (ಹೊಲಿಯಲು) |

---

ಸದೋಭಿಮಾನಿದೇವತೆಯಾದ ಇಂದ್ರನೇ! ಇಮಾಃ ಗಿರಃ = ಈ [ಸ್ತೋತ್ರಶಸ್ತ್ರರೂಪವಾದ] ವಾಕ್ಕುಗಳು; ತ್ವಾ = ನಿನ್ನನ್ನು; ವಿಶ್ವತಃ = ಸುತ್ತಲೂ; ಪರಿಭವಂತು = [ತಡಿಕೆಯಂತೆ] ಸುತ್ತಿಕೊಳ್ಳಲಿ; ವೃದ್ಧಾಯುಮ್ = ದೀರ್ಘಾಯುಷ್ಯಂತನಾದ[ನಿನ್ನನ್ನು]; ಅನುವೃದ್ಧಯಃ = ಅನುಸರಿಸಿ ವೃದ್ಧಿಯುಳ್ಳವುಗಳಾಗಲಿ; ಜುಷ್ಟಯಃ = [ನಮ್ಮ] ಸೇವೆಗಳು; ಜುಷ್ಟಾಃ ಭವಂತು = [ನಿನಗೆ] ಪ್ರಿಯವಾಗಲಿ. ★ [ಎಲೈ ರಜ್ಜುವೇ! ನೀನು] ಇಂದ್ರಸ್ಯ ಸ್ಯೂರಸಿ = ಇಂದ್ರದೇವತಾಕವಾದ ಸದೋಮಂಡಪವನ್ನು ಕಟ್ಟುವ ಹಗ್ಗವಾಗಿರುವೆ;

---

ಸಮೃದ್ಧಿಯನ್ನೂ ಸ್ಥಿರವಾಗಿರುವಂತೆ ಮಾಡು. ★ ದ್ಯಾವಾಪೃಥಿವೀರೂಪವಾದ ಔದುಂಬರಿಯ ಅಗ್ರಮೂಲಭಾಗಗಳೇ! ನಾನು ಹಿರಣ್ಯವನ್ನಿಟ್ಟು ಔದುಂಬರಿಯ ಅಗ್ರದಲ್ಲಿ ಮಾಡುತ್ತಿರುವ ಆಜ್ಯಹೋಮದಿಂದ ಸಂಪೂರ್ಣವಾಗಿ ತೃಪ್ತರಾಗಿರಿ. ★ ಎಲೈ ಸದೋಮಂಡಪದ ಮಧ್ಯಛದಿಯೇ! ಅಥವಾ ಉತ್ತರದಿಕ್ಕಿನ ಛದಿಗಳೇ! ಅಥವಾ ಸದೋಮಂಡಪವೇ! ನೀನು ಇಂದ್ರನ ಮನೆಯಾಗಿರುವೆ. ★ ಎಲೈ ಪಕ್ಕದ ಛದಿಗಳೇ! ಅಥವಾ ದಕ್ಷಿಣದಿಕ್ಕಿನ ಛದಿಗಳೇ! ಅಥವಾ ಸದೋಮಂಡಪವೇ! ನೀನು(ನೀವು) ಸಮಸ್ತ ಜನರಿಗೂ ಗೃಹವಾಗಿರುವೆ.*

ಸದೋಮಂಡಪದ ಅಭಿಮಾನಿದೇವತೆಯಾದ ಇಂದ್ರನೇ! ನೀನು ಸ್ತುತಿಗಳಿಂದ

---

*ಛಾಯಾ ಎಂಬ ಶಬ್ದಕ್ಕೆ ನೆರಳು ಎಂಬ ಅರ್ಥವೂ ಇದೆ. ಸಮಸ್ತ ಜನರಿಗೂ ನೆರಳಾಗಿರುವೆ ಎಂಬ ಅರ್ಥವನ್ನೂ ಹೇಳಬಹುದು.

## ಸೀಂದ್ರಸ್ಯ ಧ್ರುವಮಸ್ಯೈಂದ್ರಮಸೀಂದ್ರಾಯ ತ್ವಾ ॥ ೧-2 ॥

[ದ್ವೇಷ ಇಮಾ ಅಷ್ಟಾದಶ ಚ ।]

---

ಇಂದ್ರಸ್ಯ । ಧ್ರುವಮ್ । ಅಸಿ । ಐಂದ್ರಮ್ । ಅಸಿ । ಇಂದ್ರಾಯ । ತ್ವಾ ॥ ೧ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ ಧ್ರುವಮಸಿ । | ಗಂಟುಹಾಕಲು |
| ಐಂದ್ರಮಸೀಂದ್ರಾಯ ತ್ವಾ । | ಸಿದ್ಧಪಡಿಸಿದ ಸದೋಮಂಡಪವನ್ನು ಸ್ಪರ್ಶಿಸಲು |

---

✣ [ಎಲೈ ಗ್ರಂಥಿಯೇ! ನೀನು] ಇಂದ್ರಸ್ಯ ಧ್ರುವಮ್ ಅಸಿ = [ಐಂದ್ರ ಸದೋಮಂಡಪವನ್ನು] ದೃಢಪಡಿಸುವ ಗ್ರಂಥಿಯಾಗಿರುವೆ. ✣ [ಎಲೈ ಸದೋಮಂಡಪವೇ! ನೀನು] ಐಂದ್ರಮಸಿ = ಇಂದ್ರದೇವತಾಕವಾಗಿರುವೆ; ಇಂದ್ರಾಯ = ಇಂದ್ರನಿಗೋಸ್ಕರ; ತ್ವಾ = ನಿನ್ನನ್ನು [ಅಭಿಮೃಶಾಮಿ = ಮುಟ್ಟುತ್ತೇನೆ.]

---

ಸೇವಿಸಲ್ಪಡತಕ್ಕವನು. ನಮ್ಮ ಸ್ತೋತ್ರ-ಶಸ್ತ್ರರೂಪವಾದ ವಾಕ್ಕುಗಳು ನಿನ್ನನ್ನು ಸುತ್ತುವರಿಯಲಿ. ದೀರ್ಘಾಯುಸ್ಸುಳ್ಳ ನಿನ್ನನ್ನು ಅನುಸರಿಸಿ ಅವೂ ವೃದ್ಧಿಹೊಂದಲಿ. ನಮ್ಮ ಸೇವೆಯು ನಿನಗೆ ಪ್ರಿಯವಾಗಲಿ.

ಎಲೈ ರಜ್ಜುವೇ! ನೀನು ಇಂದ್ರದೇವತಾಕವಾದ ಸದೋಮಂಡಪವನ್ನು ಕಟ್ಟುವ ಹಗ್ಗವಾಗಿರುವೆ.

ಎಲೈ ಗ್ರಂಥಿಯೇ! ನೀನು ಐಂದ್ರಸದೋಮಂಡಪವನ್ನು ದೃಢಪಡಿಸುವ ಗ್ರಂಥಿಯಾಗಿರುವೆ.

ಎಲೈ ಸದೋಮಂಡಪವೇ! ನೀನು ಇಂದ್ರದೇವತಾಕವಾಗಿರುವೆ. ಇಂದ್ರನಿಗೋಸ್ಕರವಾಗಿ ನಾನು ನಿನ್ನನ್ನು ಅಭಿಮರ್ಶಿಸುತ್ತೇನೆ.

## ವಿನಿಯೋಗ ಸಂಗ್ರಹ

ದೇವಸ್ಯೇ[1]ತ್ಯಭ್ರಿಮಾದತ್ತೇ ಹ್ಯಭ್ರಿರಿ[2]ತ್ಯಭಿಮಂತ್ರಣಮ್ ।
[3]ಪರೀತ್ಯವಟಮಾಲಿಖ್ಯ ದಿವೇs[4-6]ಗ್ರೇ ಮಧ್ಯಮೂಲಯೋಃ ॥
ಪ್ರೋಕ್ಷೇದೌದುಂಬರೀಂ ಶುಂಧ[7] ಶೇಷೋ ಗರ್ತೇsವನೀಯತೇ ।
ಯವೋ[8]ಯವಂ ಕ್ಷಿಪೇತ್ತತ್ರ ಪಿತೃ[9] ದರ್ಭೇಣ ಸಂಸ್ತೃತಿಃ ॥
ಉದ[10] ದುಂಬರ್ಯುಚ್ಛ್ರಯೋsಥ ದ್ಯುತಾ[11] ತಾಮವಟೇ ಕ್ಷಿಪೇತ್ ।
ಬ್ರಹ್ಮ[12] ಪಾಂಸುಂ ಕ್ಷಿಪೇದ್ಗರ್ತೇ ಬ್ರಹ್ಮ[13] ತತ್ರ ದೃಢೀಕೃತಿಃ ॥
[14]ಘೃತೇನೌದುಂಬರೀಹೋಮ ಇಂದ್ರ[15] ವಿಶ್ವ[16]ದ್ವಯಾದ್ವಿಶೋಃ ।
ಛದಿರ್ಂಷ್ಯಧ್ಯುಹ್ಯ ಕರ್ತವ್ಯಃ ಪರಿ ತ್ವೇತಿ[17] ಪರಿಶ್ರಯಃ ॥
ಇಂದ್ರ[18]ರಜ್ಜುಂ ಕ್ಷಿಪೇದಿಂದ್ರ[19] ಬದ್ಧ್ವೈಂದ್ರ[20]ಮಿತಿ ಮಂಡಪಮ್ ।
ಸ್ಪೃಶೇದ್ಧಸ್ತೇನ ಮಂತ್ರಾಸ್ತು ವಿಂಶತಿಃ ಸಮುದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 20



### ಅನುವಾಕದ ವಿಶೇಷ ವಿಷಯಗಳು

#### ಅ) ಭ. ಭಾ. ಭಾಷ್ಯ

ಮಂತ್ರಸಂಖ್ಯೆ

೨) ಅಭ್ರಿ....ರಸಿ । ಅಭ್ರಿಃ = ಕಠಿಣ (ಗಟ್ಟಿ)ವಾದ ಭೂಮಿಯನ್ನೂ ಭೇದಿಸಿ ಪ್ರವೇಶಿಸಲು ಶಕ್ತವಾದ; ನಾರಿಃ= ನರಸ್ಯ ಅಪತ್ಯಮ್ / ನರಃ = ನೇತಾ/ನಿಪುಣಃ ಕರ್ಮಕಾರಃ - ತೇನ ಉತ್ಪಾದಿತತ್ವಾತ್ ತಸ್ಯ ಅಪತ್ಯಮ್ = ನಿಪುಣನಾದ ಕೆಲಸಗಾರನಿಂದ ಮಾಡಲ್ಪಟ್ಟುದು.

ನಾರಿಃ = ನ ಅರಿಃ ನಾರಿಃ = ಶತ್ರುವಲ್ಲದವನು. ಈ ಎರಡನೆಯ ಅರ್ಥವೂ ಇದೆ.

೮) ಯವೋsಸಿ.....ಯವಯಾರಾತೀಃ । ಯವಃ = ಯಾವಯತಿ = ಅಪನಯತಿ ಕ್ಷುಧಮಿತಿ ಯವಃ = ಹಸಿವನ್ನು ಹೋಗಲಾಡಿಸುವುದು ಯವಧಾನ್ಯ; ಅರಾತೀಃ = ಶತ್ರುಗಳನ್ನು, ನಮಗೆ ಏನನ್ನೂ ಕೊಡದವರನ್ನು; ನ ರಾಂತಿ = ನ ಯಚ್ಛಂತಿ ಇತಿ ಅರಾತಯಃ ।

೧೦) ಉದ್ದಿವಗ್ಂ..... ದೃಗ್ಂಹ । ದಿವಮ್ = ದಿವಿಷ್ಠಾನ್ ಉತ್ತಭಾನ = ದ್ಯುಲೋಕದಲ್ಲಿರುವವರನ್ನು ಧಾರಣ ಮಾಡು; ಅಂತರಿಕ್ಷಂ ಪೃಣ = ಅಂತರಿಕ್ಷಸ್ಥಾನ್ ಪ್ರೀಣಯ = ಅಂತರಿಕ್ಷದಲ್ಲಿರುವವರನ್ನು ಸಂತೋಷಪಡಿಸು; ಪೃಥಿವೀಂ ದೃಗ್ಂಹ = ಪೃಥಿವಿಸ್ಥಾನ್ ವರ್ಧಯ = ಭೂಮಿಯಲ್ಲಿರುವವರನ್ನು ವೃದ್ಧಿಗೊಳಿಸು.

[ಸಾಯಣರು ದ್ಯುಲೋಕ, ಅಂತರಿಕ್ಷ ಮತ್ತು ಭೂಮಿ ಎಂದು ವಿವರಿಸಿರುತ್ತಾರೆ.]

೧೨) ಬ್ರಹ್ಮವನಿಂ...... ಪರ್ಯೂಹಾಮಿ । ಬ್ರಹ್ಮವನಿಮ್ = ಬ್ರಾಹ್ಮಣರನ್ನು ಆಶ್ರಯಿಸಿರುವ; ಕ್ಷತ್ರವನಿಮ್= ಕ್ಷತ್ರಿಯರನ್ನು ಆಶ್ರಯಿಸಿರುವ; ಸುಪ್ರಜಾವನಿಮ್ = ಒಳ್ಳೆಯ ಪ್ರಜೆಗಳನ್ನು ಆಶ್ರಯಿಸಿರುವ; ರಾಯಸ್ಪೋಷವನಿಮ್ = ಧನಸಮೃದ್ಧಿ ಯನ್ನು ಆಶ್ರಯಿಸಿರುವ.



೧೩) ಬ್ರಹ್ಮ..... ರಾಯಸ್ಪೋಷಂ ದೃಗ್ಂಹ । ಬ್ರಹ್ಮ, ಕ್ಷತ್ರಮ್, ಪ್ರಜಾಂ, ರಾಯಸ್ಪೋಷಮ್ = ಬ್ರಾಹ್ಮಣ, ಕ್ಷತ್ರಿಯ, ಸಂತತಿ, ಧನ - ಇವುಗಳನ್ನು; ದೃಗ್ಂಹ = ವೃದ್ಧಿಗೊಳಿಸು.

[ಸಾಯಣರು ದೃಗ್ಂಹ = ದೃಢಪಡಿಸು ಎಂದು ವಿವರಿಸುತ್ತಾರೆ.]

೧೪) ವಿಶ್ವ..... ಧಾಮ್ನಾ । ಧಾಯಾ = ಗೃಹಮ್ = ಮನೆ.

೨) ಪೂರ್ವಮೀಮಾಂಸಾ

೧) '...... ನೀಚೈಃ ಸದೋ ಮಿನುಯಾತ್' ಎಂಬುದು ಯಾರ ಕಾಮನೆ?

[ಜೈ.ಸೂ. 3.8]

ಜ್ಯೋತಿಷ್ಟೋಮಪ್ರಕರಣದಲ್ಲಿ 'ಯಃ ಕಾಮಯೇತ ವರ್ಷುಕಃ ಪರ್ಜನ್ಯಃ ಸ್ಯಾದಿತಿ ನೀಚೈಃ ಸದೋ ಮಿನುಯಾತ್' [ಮೈತ್ರಾಯಣೀ ಸಂಹಿತಾ 3.8.9]

ಎಂಬುದಾಗಿ ಆಮ್ನಾತವಾಗಿದೆ. 'ವೃಷ್ಟಿಕಾಮನು ಪ್ರಾಚೀನವಂಶಮಂಡಪ ಮತ್ತು ಹವಿರ್ಧಾನಮಂಡಪಗಳಿಗಿಂತಲೂ ಸದೋಮಂಡಪವನ್ನು ತಗ್ಗಾಗಿರುವಂತೆ ಮಾಡಬೇಕು' ಎಂದರ್ಥ. ಈ ವೃಷ್ಟಿಕಾಮನೆಯು ಅಧ್ವರ್ಯುವಿನದೇ ಅಥವಾ ಯಜಮಾನನದೇ? ಎಂಬುದು ಇಲ್ಲಿನ ಸಂಶಯ.

ಪೂರ್ವಪಕ್ಷ : 'ಯಃ ಕಾಮಯೇತ ಸ ಮಿನುಯಾತ್' ಎಂಬುದು ಶ್ರುತಿವಚನ.

ಯಾರು ಬಯಸುವವನೋ ಅವನು ನಿರ್ಮಿಸಬೇಕು ಎಂದು ಅದರ ಅರ್ಥ. ನಿರ್ಮಿಸುವವನು ಅಧ್ವರ್ಯುವೇ ಆದುದರಿಂದ ಕಾಮನೆಯೂ ಅವನದೇ ಎಂಬುದು ಯುಕ್ತ.

**ಸಿದ್ಧಾಂತ** : ಇಲ್ಲಿ **'ಮಿನುಯಾತ್'** ಎಂಬುದಾಗಿ ಪರಸ್ಮೈಪದಾಂತ ಪ್ರಯೋಗ ಇದೆ. ಕ್ರಿಯಾಫಲವು ಪರಗಾಮಿಯಾದರೆ ಧಾತುವಿಗೆ ಪರಸ್ಮೈಪದವು ಬರುತ್ತದೆ. ಆದುದರಿಂದ ಯಜಮಾನನಿಗೆ ವೃಷ್ಟಿಕಾಮನೆಯಿದ್ದರೆ ಅಧ್ವರ್ಯುವು ಸದೋಮಂಡಪವನ್ನು ತಗ್ಗಾಗಿರುವಂತೆ ನಿರ್ಮಿಸಬೇಕು. ಆದುದರಿಂದ ಕಾಮನೆಯು ಯಜಮಾನನದೇ. **'ಯಃ ಕಾಮಯೇತ....'** ಎಂಬ ಹಿಂದೆ ಉದಾಹರಿಸಿದ ಶ್ರುತಿವಾಕ್ಯಕ್ಕೆ 'ಯಜಮಾನನು ಬಯಸುವ ವೃಷ್ಟಿಯನ್ನು ಪರ್ಜನ್ಯನು ಉಂಟುಮಾಡಲಿ ಎಂದು ಬಯಸುವ ಅಧ್ವರ್ಯುವು ಸದೋಮಂಡಪವನ್ನು ತಗ್ಗಾಗಿ ನಿರ್ಮಿಸಬೇಕು' ಎಂದು ಅರ್ಥ.

**'ಏವಂವಿದುದ್ಗಾತಾ ಆತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ತಮಾಗಾಯತಿ'** (ಬೃ೧-೩-೨೮) ಎಂಬ ಸ್ಪಷ್ಟವಚನದಿಂದ ಋತ್ವಿಜರಿಗೂ ಆ ಶ್ರುತಿಯಲ್ಲಿ ಹೇಳುವ ಉದ್ಗೀಥೋಪಾಸನೆಯಲ್ಲಿ ಫಲವಾಗುವುದು. ಇಲ್ಲಿ ಹಾಗಿಲ್ಲ. ಆದುದರಿಂದ ಇಲ್ಲಿ ಯಜಮಾನನಿಗೆ ಮಾತ್ರ ಫಲಸಂಬಂಧವಿರುತ್ತದೆ.

### ೩) ಛಂದಸ್ಸು

೧. ಪರಿ ತ್ವಾ.... ಜುಷ್ಟಯಃ । ಅನುಷ್ಟುಪ್

೨. ದ್ಯುತಾನಸ್ತ್ವಾ.....ಧರ್ಮಣಾ । ದ್ವಿಪದಾ ವಿರಾಟ್/ದ್ವಿಪದಾ ಜಗತೀ[ಭ.ಭಾ.ಭಾ.]

---

## ॥ ದ್ವಿತೀಯೋಽನುವಾಕಃ ॥

**ರಕ್ಷೋಹಣೋ ವಲಗಹನೋ ವೈಷ್ಣವಾನ್ಖನಾಮೀ-**

---

**ರಕ್ಷೋಹಣ ಇತಿ ರಕ್ಷಃ - ಹನಃ । ವಲಗಹನ ಇತಿ ವಲಗ - ಹನಃ । ವೈಷ್ಣವಾನ್ । ಖನಾಮಿ ।**

---

ಮೊದಲನೆಯ ಅನುವಾಕದಲ್ಲಿ ಸದೋಮಂಡಪನಿರ್ಮಾಣವನ್ನು ಹೇಳಲಾಯಿತು. ಇಪ್ಪರಿಂದ ಮೂವತ್ತಾರು ಹೆಜ್ಜೆಗಳ ಪರಿಮಾಣವುಳ್ಳ ಮಹಾವೇದಿಯಲ್ಲಿ ನಿರ್ಮಿಸಬೇಕಾದ ಉತ್ತರವೇದಿ, ಹವಿರ್ಧಾನಮಂಡಪ ಮತ್ತು ಸದೋಮಂಡಪಗಳ ನಿರೂಪಣವು ಮುಗಿಯಿತು. ಮಹಾವೇದಿಯ ಉತ್ತರ ಭಾಗ-ದಕ್ಷಿಣಭಾಗಗಳಲ್ಲಿರುವ ಆಗ್ನೀಧ್ರೀಯ, ಮಾರ್ಜಾಲೀಯ ನಿರ್ಮಾಣದಲ್ಲಿ ಮಂತ್ರಗಳಿಲ್ಲ. ಆದುದರಿಂದ ನಿರ್ಮಿತವಾದ ಉತ್ತರವೇದ್ಯಾದಿಗಳಲ್ಲಿ ಯಾವುದರ ನಿರ್ಮಾಣವು ಸಮಂತ್ರಕವಾಗಿದೆಯೋ ಅದನ್ನು ಹೇಳಬೇಕಾಗಿದೆ. ಉತ್ತರವೇದಿಯಲ್ಲಿ ಎಲ್ಲವನ್ನೂ ಹೇಳಿಯಾಗಿದೆ. ಹವಿರ್ಧಾನಮಂಡಪದಲ್ಲಿ ಮಾಡಬೇಕಾದ ಉಪರವಗಳು ಈ ಎರಡನೆಯ ಅನುವಾಕದಲ್ಲಿ ಹೇಳಲ್ಪಟ್ಟಿವೆ.

| **ಮಂತ್ರ** | **ವಿನಿಯೋಗ** |
|---|---|
| **ರಕ್ಷೋಹಣೋ....ಖನಾಮಿ ।** | ದಕ್ಷಿಣಹವಿರ್ಧಾನದ ಕೆಳಗಡೆಯಲ್ಲಿ ಉಪರವಗಳ ಖನನ ಮಾಡಲು. |

---

**ರಕ್ಷೋಹಣಃ** = ರಾಕ್ಷಸರನ್ನು ನಾಶಪಡಿಸುವ; **ವಲಗಹನಃ** = [ಮಾಟ ಮಾಡುವುದಕ್ಕಾಗಿ ಉಪಯೋಗಿಸಿದ] ಆಭಿಚಾರಿಕಕೃತ್ಯಗಳನ್ನು ನಾಶಪಡಿಸುವ;

---

ಬಾಹುಮಾತ್ರಪ್ರಮಾಣವುಳ್ಳ ಉಪರವಗಳೆಂಬ ಕುಳಿ(ಹಳ್ಳ)ಗಳನ್ನು ತೋಡುತ್ತೇನೆ. ಇವು ರಾಕ್ಷಸರನ್ನು ನಾಶಪಡಿಸಬಲ್ಲವು.

ದಮಹಂ ತಂ ವಲಗಮುದ್ವಪಾಮಿ ಯಂ ನಸ್ಸಮಾನೋ

ಯಮಸಮಾನೋ ನಿಚಖಾನೇದಮೇನ-

---

ಇದಮ್ । ಅಹಮ್ । ತಮ್ । ವಲಗಮಿತಿ ವಲ-ಗಮ್ । ಉದಿತಿ । ವಪಾಮಿ ।

ಯಮ್ । ನಃ । ಸಮಾನಃ। ಯಮ್ । ಅಸಮಾನಃ । ನಿಚಖಾನೇತಿ ನಿ - ಚಖಾನ ।

ಇದಮ್ । ಏನಮ್ ।

---



ಮಂತ್ರ ವಿನಿಯೋಗ

ಇದಮ್.... ವಲಗಃ । ಹುಡಿಮಣ್ಣನ್ನು ಎತ್ತಿ ಹಾಕಲು—ಬೌಧಾಯನ

೧) ಇದಮ್.....ಅರಾತೀಯತಿ । ಮಣ್ಣನ್ನು ಎತ್ತಿ ಹಾಕಲು

---

ವೈಷ್ಣವಾನ್ = ವಿಷ್ಣುದೇವತಾಕವಾದ [ಉಪರವಗಳೆಂಬ ಹಳ್ಳಗಳನ್ನು]; ಖನಾಮಿ = ಅಗೆಯುತ್ತೇನೆ.[ಅಗೆದು ತೋಡುತ್ತೇನೆ]; ❖ ನಃ = ನಮ್ಮನ್ನು [ನಾಶಪಡಿಸುವುದಕ್ಕಾಗಿ]; ಸಮಾನಃ = [ವಿದ್ಯೆ, ಹಣ, ಸೌಭಾಗ್ಯಾದಿಗಳಿಂದ] ನಮಗೆ ಸಮಾನನಾಗಿರುವ [ಶತ್ರುವು]; ಯಮ್ = ಯಾವ ಆಭಿಚಾರಿಕಕೃತ್ಯೆಯನ್ನು; ನಿಚಖಾನ = ಹೂತಿದ್ದಾನೆಯೋ; ಅಸಮಾನಃ = ನಮ್ಮ ಸಮಾನನಲ್ಲದ ಶತ್ರುವು; ಯಮ್= ಯಾವ ಕೃತ್ಯೆಯನ್ನು; ನಿಚಖಾನ = [ಭೂಮಿಯಲ್ಲಿ] ಹೂತಿಟ್ಟಿದ್ದಾನೆಯೋ; ತಮ್ = ಆ; ವಲಗಮ್= ಕೃತ್ಯೆಯನ್ನು;

---

ಮಾಟ ಮಾಡುವುದಕ್ಕಾಗಿ ಸ್ಥಾಪಿಸಿದ, ಹಳೆಯ ಬಟ್ಟೆ ಮುಂತಾದವುಗಳಲ್ಲಿ ಕಟ್ಟಿರುವ ವಲಗ[ಆಭಿಚಾರಿಕಕೃತ್ಯೆ]ಗಳನ್ನು ನಾಶಪಡಿಸುತ್ತವೆ. ವಿಷ್ಣುದೇವತಾಕವಾದ ಇಂತಹ ಉಪರವಗಳನ್ನು ತೋಡುತ್ತೇನೆ.*

---

*ಉಪರವಗಳು ನಾಲ್ಕು.

-ಮಧರಂ ಕರೋಮಿ ಯೋ ನಃ ಸಮಾನೋ ಯೋಽಸಮಾ

ನೋಽರಾತೀಯತಿ ಗಾಯತ್ರೇಣ ಛಂದಸಾವಬಾಢೋ ವಲಗಃ

---

ಅಧರಮ್ । ಕರೋಮಿ । ಯಃ । ನಃ । ಸಮಾನಃ । ಯಃ । ಅಸಮಾನಃ । ಅರಾತೀಯತಿ

*ಗಾಯತ್ರೇಣ । ಛಂದಸಾ । ಅವಬಾಢ ಇತ್ಯವ - ಬಾಢಃ । ವಲಗ ಇತಿ ವಲ-ಗಃ ।*

---

| ಮಂತ್ರ | ವಿನಿಯೋಗ |
| --- | --- |
| ೨) ಗಾಯತ್ರೇಣ....ವಲಗಃ । | ವಲಗವನ್ನು ನಾಶಪಡಿಸಿದಂತೆ ಭಾವಿಸಲು —ಆಪಸ್ತಂಬ |

---

ಅಹಮ್=ನಾನು; ಇದಮ್ = ಈ ಮಣ್ಣನ್ನು [ಎತ್ತಿ ಹಾಕುವುದರಿಂದ], ಉತ್ ವಪಾಮಿ = ಮೇಲಕ್ಕೆ ಎತ್ತಿಹಾಕುತ್ತೇನೆ; ನಃ = ನಮ್ಮನ್ನು [ಕುರಿತು] ಸಮಾನಃ= ಸಮಾನನಾಗಿರುವ; ಯಃ = ಯಾವನು; ಅರಾತೀಯತಿ = ದ್ವೇಷಿಸುತ್ತಾನೆಯೋ; ಅಸಮಾನಃ = [ನಮಗೆ] ಸಮಾನನಲ್ಲದ; ಯಃ = ಯಾವನು; ಅರಾತೀಯತಿ = ದ್ವೇಷಿಸುತ್ತಾನೆಯೋ; ಏನಮ್ = ಇವನನ್ನು; ಇದಮ್ = ಈಗ [ಈ ಮಣ್ಣನ್ನು ಕೆಳಗೆ ಹಾಕುವ ರೀತಿಯಲ್ಲಿ] ಅಧರಮ್ = [ಯಜಮಾನನಿಗಿಂತಲೂ] ಹೀನನನ್ನಾಗುವಂತೆ; ಕರೋಮಿ = ಮಾಡುತ್ತೇನೆ; ಗಾಯತ್ರೇಣ ಛಂದಸಾ = ಗಾಯತ್ರಛಂದೋಭಿಮಾನಿದೇವನಿಂದ; ವಲಗಃ = ಅಭಿಚಾರಿಕಕೃತ್ಯೆಯು; ಅವಬಾಢಃ = ಹೋಗಲಾಡಿಸಲ್ಪಟ್ಟಿದೆ.

---

ನಮ್ಮನ್ನು ನಾಶಪಡಿಸುವ ಉದ್ದೇಶದಿಂದ ನಮಗೆ ವಿದ್ಯಾದಿಗಳಲ್ಲಿ ಸಮಾನನಾದವನು ಯಾವನಾದರೂ ಮಾಟ ಮಾಡಿಸಿದ್ದರೆ, ನಮಗೆ ಸಮಾನನಲ್ಲದ ಯಾವನಾದರೂ ಮಾಟ ಮಾಡಿಸಿದ್ದರೆ, ಆ ಅಭಿಚಾರಿಕಕೃತ್ಯೆಯನ್ನು ಈ ಮಣ್ಣನ್ನು ಎತ್ತಿ ಹಾಕುವುದರಿಂದ ಕಿತ್ತು ಮೇಲೆ ಹಾಕುತ್ತೇನೆ.

ನಮಗೆ ಸಮಾನನಾದ ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ, ನಮಗಿಂತ ಕೀಳಾದವನು ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ ಅವನನ್ನು ಈ ಮಣ್ಣನ್ನು ಕೆಳಕ್ಕೆ ಹಾಕುವುದರಿಂದ ನಮ್ಮ ಯಜಮಾನನಿಗಿಂತಲೂ ಕೆಳಗೆ ಇರುವವರನ್ನಾಗಿ ಮಾಡುತ್ತೇನೆ. ಗಾಯತ್ರಛಂದಸ್ಸಿನ ಅಭಿಮಾನಿದೇವತೆಯಿಂದ ಅಭಿಚಾರಿಕಕೃತ್ಯೆಯು

**ಕಿಮತ್ರ ಭದ್ರಂ ತನ್ನೌ ಸಹ ವಿರಾಡಸಿ ಸಪತ್ನಹಾ ಸಮ್ರಾಡಸಿ**

---

**ಕಿಮ್** । ಅತ್ರ । ಭದ್ರಮ್ । **ತತ್** । ನೌ । ಸಹ । ವಿರಾಡಿತಿ ವಿ-ರಾಟ್ । ಅಸಿ । ಸಪತ್ನಹೇತಿ ಸಪತ್ನ-ಹಾ । **ಸಮ್ರಾಡಿತಿ ಸಮ್-ರಾಟ್** । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಕಿಮತ್ರ? ಭದ್ರಮ್ । ತನ್ನೌ ಸಹ । | ಯಜಮಾನನು ಆಗ್ನೇಯದಲ್ಲಿರುವ ಉಪರವವನ್ನೂ, ಅಧ್ವರ್ಯುವು ವಾಯವ್ಯದಲ್ಲಿರುವ ಉಪರವವನ್ನೂ ಸ್ಪರ್ಶಿಸಿದ ನಂತರ ಅವರಿಬ್ಬರ ಪ್ರಶ್ನೋತ್ತರ. |
| ವಿರಾಡಸಿ ಸಪತ್ನಹಾ । | ಆಗ್ನೇಯದಲ್ಲಿರುವ ಉಪರವವನ್ನು ಮುಟ್ಟಲು |

---

✣ [ಅಧ್ವರ್ಯುವೇ!] **ಅತ್ರ** = ಈ ಉಪರವದಲ್ಲಿ; **ಕಿಮ್** = [ನಮಗೆ ಉಪಯುಕ್ತವಾದದು] ಏನು [ಅಸ್ತಿ = ಇದೆ?] ✣ **ಭದ್ರಮ್** =[ಎಲ್ಲೈ ಯಜಮಾನನೇ! ಇಲ್ಲಿ ಸೋಮಾಭಿಷವ ಮಾಡಿ ಅದರಿಂದ ಯಾಗ ಮಾಡುವುದರಿಂದ ಯಾಗದಿಂದ ಉಂಟಾಗುವ] ಮಂಗಲವೆಲ್ಲವೂ[ಇದೆ]; ✣[ಎಲ್ಲೈ ಅಧ್ವರ್ಯುವೇ] **ತತ್**=ಆ ಮಂಗಲವು; **ನೌ**= ನಮ್ಮಿಬ್ಬರಿಗೂ; **ಸಹ** = [ಭವತು] = ಒಟ್ಟಾಗಿಯೇ ಆಗಲಿ; [ಯಜಮಾನನ ಆಶಂಸನೆ.] ✣[ಎಲ್ಲೈ ಪ್ರಥಮೋಪರವವೇ! ನೀನು] **ವಿರಾಟ್** = ಬಗೆ ಬಗೆಯಾಗಿ ಪ್ರಕಾಶಿಸುವವನು; ಅಸಿ=ಆಗಿದ್ದೀಯೆ; [ಆದುದರಿಂದ] **ಸಪತ್ನಹಾ** [ಭವ] = [ನಮಗೆ ವಿರುದ್ಧವಾದ (ಹಾನಿಕರವಾದ) ಇಂದ್ರಿಯವೃತ್ತಿಗಳೆಂಬ] ಅಂತಃಶತ್ರುಗಳನ್ನು ನಾಶಪಡಿಸುವುದಾಗಿ [ಆಗು].

---

ನಾಶಪಡಿಸಲ್ಪಟ್ಟಿದೆ.

**ಯಜಮಾನ** :- ಅಧ್ವರ್ಯುವೇ! ಈ ಉಪರವದಲ್ಲಿ ನಮಗೆ ಉಪಯುಕ್ತವಾದುದು ಏನಿದೆ?

**ಅಧ್ವರ್ಯು** : ಯಜಮಾನನೇ! ಇಲ್ಲಿ ಸೋಮಾಭಿಷವವನ್ನು ಮಾಡಿ ಅದರಿಂದ ಯಾಗವನ್ನು ಮಾಡುವುದರಿಂದ ಯಾಗದಿಂದ ಉಂಟಾಗುವ ಮಂಗಲವೆಲ್ಲವೂ ಇದೆ.

ಭ್ರಾತೃವ್ಯಹಾ ಸ್ವರಾಡಸ್ಯಭಿಮಾತಿಹಾ ವಿಶ್ವಾರಾಡಸಿ ವಿಶ್ವಾಸಾಂ

ನಾಷ್ಟ್ರಾಣಾಗ್ಂ ಹಂತಾ [(೧) ರಕ್ಷೋಹಣೋ]

---

ಭ್ರಾತೃವ್ಯಹೇತಿ ಭ್ರಾತೃವ್ಯ-ಹಾ। ಸ್ವರಾಡಿತಿ ಸ್ವ-ರಾಟ್। ಅಸಿ। ಅಭಿಮಾತಿಹೇತ್ಯಭಿಮಾತಿ-ಹಾ। ವಿಶ್ವಾರಾಡಿತಿ ವಿಶ್ವ-ರಾಟ್। ಅಸಿ। ವಿಶ್ವಾಸಾಮ್। ನಾಷ್ಟ್ರಾಣಾಮ್। ಹಂತಾ। (೧)

---

| ಮಂತ್ರ | ವಿನಿಯೋಗ |
|---|---|
| ಸಮ್ರಾಡಸಿ ಭ್ರಾತೃವ್ಯಹಾ । | ನೈಋತ್ಯದಲ್ಲಿರುವ ಉಪರವವನ್ನು ಮುಟ್ಟಲು |
| ಸ್ವರಾಡಸ್ಯಭಿಮಾತಿಹಾ । | ವಾಯುವ್ಯದಲ್ಲಿರುವ ಉಪರವವನ್ನು ಮುಟ್ಟಲು |
| ವಿಶ್ವಾರಾಡಸಿ....ಹಂತಾ । | ಈಶಾನ್ಯದಲ್ಲಿರುವ ಉಪರವವನ್ನು ಮುಟ್ಟಲು |



---

✣ [ಎಲೈ! ದ್ವಿತೀಯೋಪರವವೇ! ನೀನು] ಸಮ್ರಾಟ್ ಅಸಿ = ಚೆನ್ನಾಗಿ ಪ್ರಕಾಶಿಸುವವನಾಗಿದ್ದೀಯೆ; [ಆದುದರಿಂದ] ಭ್ರಾತೃವ್ಯಹಾ [ಭವ] = ಹೊರಗಿನ ಶತ್ರುಗಳನ್ನು [ದ್ವೇಷಿಸುವ ಜ್ಞಾತಿಗಳನ್ನು] ನಾಶಪಡಿಸುವವನಾಗು; ✣ [ಎಲೈ! ತೃತೀಯೋಪರವವೇ! ನೀನು] ಸ್ವರಾಟ್ ಅಸಿ = ಸ್ವಯಂ [ ತಾನಾಗಿಯೇ] ಪ್ರಕಾಶಿಸುವವನಾಗಿದ್ದೀಯೆ; [ಆದುದರಿಂದ] ಅಭಿಮಾತಿಹಾ [ಭವ] = ಹಳ್ಳಿಗಳ ಗಡಿ ಮೊದಲಾದ ವಿಷಯಗಳಲ್ಲಿ ಶತ್ರುಗಳಾಗಿರುವವರನ್ನು ನಾಶಪಡಿಸುವವನಾಗು; ✣ [ಎಲೈ! ಚತುರ್ಥೋಪರವವೇ! ನೀನು] ವಿಶ್ವಾರಾಟ್ ಅಸಿ = ಎಲ್ಲೆಡೆಯಲ್ಲಿಯೂ ಪ್ರಕಾಶಿಸುವವನಾಗಿರುವೆ; [ಆದುದರಿಂದ] ವಿಶ್ವಾಸಾಮ್=ಎಲ್ಲಾ; ನಾಷ್ಟ್ರಾಣಾಮ್ = ಸರ್ವನಾಶಕಾರಣವಾದ [ಪರರಾಷ್ಟ್ರಸೇನಾದಿಗಳ]; ಹಂತಾ [ಭವ]= ನಾಶಕನಾಗು. ✣ ರಕ್ಷೋಹಣಃ = ರಾಕ್ಷಸರನ್ನು ನಾಶಪಡಿಸುವ;

---

ಯಜಮಾನ:- ಎಲೈ! ಅಧ್ವರ್ಯುವೇ! ಆ ಮಂಗಲವು ನಮ್ಮಿಬ್ಬರಿಗೂ ಒಟ್ಟಾಗಿಯೇ ಆಗಲಿ. ★ ಬಗೆಬಗೆಯಾಗಿ ಪ್ರಕಾಶಿಸುವ ಪ್ರಥಮೋಪರವವೇ! ನೀನು ನಮಗೆ ಹಾನಿಯನ್ನುಂಟುಮಾಡುವ ನಮ್ಮ ಇಂದ್ರಿಯವೃತ್ತಿಗಳೆಂಬ ಒಳಗಿನ ವೈರಿಗಳನ್ನು ನಾಶಪಡಿಸು.

ಚೆನ್ನಾಗಿ ಪ್ರಕಾಶಿಸುವ ದ್ವಿತೀಯೋಪರವವೇ! ನೀನು ಅಂತಃಶತ್ರುಗಳಿಗಿಂತಲೂ

## ರಕ್ಷೋಹಣೋ ವಲಗಹನಃ ಪ್ರೋಕ್ಷಾಮಿ ವೈಷ್ಣವಾನ್ರಕ್ಷೋ-ಹಣೋ ವಲಗಹನೋಽವನಯಾಮಿ ವೈಷ್ಣವಾನ್,

---

ರಕ್ಷೋಹಣ ಇತಿ ರಕ್ಷಃ-ಹನಃ । ವಲಗಹನ ಇತಿ ವಲಗ-ಹನಃ । ಪ್ರೇತಿ । ಉಕ್ಷಾಮಿ । ವೈಷ್ಣವಾನ್ । ರಕ್ಷೋಹಣ ಇತಿ ರಕ್ಷಃ-ಹನಃ । ವಲಗಹನ ಇತಿ ವಲಗ-ಹನಃ । ಅವೇತಿ। ನಯಾಮಿ । ವೈಷ್ಣವಾನ್ ।

---

| ಮಂತ್ರ | ವಿನಿಯೋಗ |
|---|---|
| ರಕ್ಷೋಹಣಃ....ಪ್ರೋಕ್ಷಾಮಿ ವೈಷ್ಣವಾನ್ । | ಉಪರವಗಳನ್ನು ಪ್ರೋಕ್ಷಿಸಲು |
| ರಕ್ಷೋಹಣಃ...ನಯಾಮಿ ವೈಷ್ಣವಾನ್ । | ಉಪರವಗಳಲ್ಲಿ ಜಲಾವನಯನ (ನೀರನ್ನು ಹಾಕಲು) ಮಾಡಲು |

---

ವಲಗಹನಃ = ಆಭಿಚಾರಿಕಕೃತ್ಯಗಳನ್ನು ನಾಶಪಡಿಸುವ; ವೈಷ್ಣವಾನ್ = ವಿಷ್ಣುವೇ ದೇವತೆಯಾಗಿರುವ; [ಉಪರವಾನ್=ಉಪರವಗಳನ್ನು] ಪ್ರೋಕ್ಷಾಮಿ = ಪ್ರೋಕ್ಷಿಸುತ್ತೇನೆ; ✣ ರಕ್ಷೋಹಣಃ = ರಾಕ್ಷಸರನ್ನು ನಾಶಪಡಿಸುವ; ವಲಗಹನಃ = ಆಭಿಚಾರಿಕಸ್ಥಾಪನೆಗಳನ್ನು ಪ್ರತಿಬಂಧಿಸುವ; ವೈಷ್ಣವಾನ್ = ವಿಷ್ಣುದೇವತೆಯಾಗಿರುವ [ಉಪರವಾನ್ = ಉಪರವಗಳನ್ನು] ಅವನಯಾಮಿ = [ಪ್ರೋಕ್ಷಣಶೇಷವಾಗಿರುವ] ನೀರಿನಿಂದ ತೋಯಿಸುತ್ತೇನೆ.

---

ಹೊರಗಿನವರಾದ ಜ್ಞಾತಿವರ್ಗದಲ್ಲಿನ ನಮ್ಮ ವಿರೋಧಿಗಳಾದ ಶತ್ರುಗಳನ್ನು ನಾಶಪಡಿಸು.

ತಾನಾಗಿಯೇ ಪ್ರಕಾಶಿಸುವ ತೃತೀಯೋಪರವವೇ! ನೀನು ಜ್ಞಾತಿಗಳಿಗಿಂತಲೂ ಹೊರಗಿನ ಶತ್ರುಗಳಾದ ಗ್ರಾಮದ ಎಲ್ಲೆ-ಕಟ್ಟು ಮುಂತಾದ ವಿಷಯದಲ್ಲಿ ಶತ್ರುಗಳಾಗಿರುವವರನ್ನು ನಾಶಪಡಿಸು.

ಎಲ್ಲೆಡೆಯೂ ಪ್ರಕಾಶಿಸುವ ಚತುರ್ಥೋಪರವವೇ! ನೀನು ಗ್ರಾಮದ ಎಲ್ಲೆ-ಕಟ್ಟು

**ಯವೋಽಸಿ ಯವಯಾಸ್ಮದ್ದ್ವೇಷೋ ಯವಯಾರಾತೀ ರಕ್ಷೋ**

**ಹಣೋ ವಲಗಹನೋಽವಸ್ತೃಣಾಮಿ ವೈಷ್ಣವಾನ್ರಕ್ಷೋಹಣೋ**

---

ಯವಃ । ಅಸಿ । ಯವಯ । ಅಸ್ಮತ್ । ದ್ವೇಷಃ । ಯವಯ । ಅರಾತೀಃ । ರಕ್ಷೋಹಣ
ಇತಿ ರಕ್ಷಃ-ಹನಃ । ವಲಗಹನ ಇತಿ ವಲಗ-ಹನಃ । ಅವೇತಿ । ಸ್ತೃಣಾಮಿ । ವೈಷ್ಣವಾನ್।
ರಕ್ಷೋಹಣ ಇತಿ ರಕ್ಷಃ-ಹನಃ ।

---

| ಮಂತ್ರ | ವಿನಿಯೋಗ |
|---|---|
| ಯವೋಽಸಿ.....ಅರಾತೀಃ । | ಉಪರವಗಳಲ್ಲಿ ಯವಧಾನ್ಯವನ್ನು ಹಾಕಲು. |
| ರಕ್ಷೋಹಣೋ..ವಸ್ತೃಣಾಮಿ ವೈಷ್ಣವಾನ್ । | ಉಪರವಗಳನ್ನು ದರ್ಭೆಯಿಂದ ಕೆಳಗೆ ಮುಚ್ಚಲು |

---

✣ ಯವಃ ಅಸಿ = [ಬೇರ್ಪಡಿಸುವ ಸಾಮರ್ಥ್ಯವುಳ್ಳ] ಯವಧಾನ್ಯವಾಗಿದ್ದೀಯೆ; ಅಸ್ಮತ್ = ನಮ್ಮ ದೆಸೆಯಿಂದ; ದ್ವೇಷಃ = ದ್ವೇಷಿಗಳಾದ ರಾಕ್ಷಸರನ್ನು; ಯವಯ = ದೂರ ಮಾಡು; ಅರಾತೀಃ=ಇತರ ಶತ್ರುಗಳನ್ನೂ; ಯವಯ=ದೂರಮಾಡು. ✣ ರಕ್ಷೋಹಣಃ = ರಾಕ್ಷಸನಾಶಕವಾದ; ವಲಗಹನಃ = ಆಭಿಚಾರಿಕಕ್ರಿಯಾನಾಶಕಗಳಾದ; ವೈಷ್ಣವಾನ್= ವಿಷ್ಣುದೇವತಾಕಗಳಾದ (ಉಪರವಗಳನ್ನು) ಅವಸ್ತೃಣಾಮಿ = ಬರ್ಹಿಸ್ಸಿನಿಂದ ಹರಡು ತ್ತೇನೆ. [ಕೆಳಭಾಗದಲ್ಲಿ ಮುಚ್ಚುತ್ತೇನೆ.] ✣ ರಕ್ಷೋಹಣಃ = ರಾಕ್ಷಸರನ್ನು ಕೊಲ್ಲುವ;

---

ಗಳಿಗೆ ಸಂಬಂಧಿಸಿದ ಶತ್ರುಗಳಿಗಿಂತಲೂ ಹೊರಗಿನವರಾದ ಸರ್ವನಾಶಕಾರಣರಾದ ಪರರಾಷ್ಟ್ರಸೇನೆ ಮುಂತಾದ ಶತ್ರುಗಳನ್ನು ನಾಶಪಡಿಸು.* ★ ರಾಕ್ಷಸರನ್ನೂ, ಆಭಿಚಾರಿಕ ಕೃತ್ಯಗಳನ್ನು ನಾಶಪಡಿಸುವ ವಿಷ್ಣುದೇವತಾಕವಾಗಿರುವ ಉಪರವಗಳನ್ನು ಪ್ರೋಕ್ಷಿಸು ತ್ತೇನೆ. ★ ರಾಕ್ಷಸರನ್ನೂ, ಆಭಿಚಾರಿಕಕೃತ್ಯಗಳನ್ನೂ ನಾಶಪಡಿಸುವ, ವಿಷ್ಣುದೇವತಾಕ ಗಳಾಗಿರುವ ಉಪರವಗಳನ್ನು ಪ್ರೋಕ್ಷಣಶೇಷವಾಗಿರುವ ನೀರಿನಿಂದ ತೋಯಿಸುತ್ತೇನೆ.

---

*ವಿವಿಧಂ ರಾಜತೇ ಇತಿ ವಿರಾಟ್, ಸಮ್ಯಗ್ರಾಜತೇ ಇತಿ ಸಮ್ರಾಟ್, ಸ್ವಯಂ ರಾಜತ ಇತಿ ಸ್ವರಾಟ್, ವಿಶ್ವೇಷು ರಾಜತೇ ಇತಿ ವಿಶ್ವಾರಾಟ್.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

**ವಲಗಹನೋಽಭಿಜುಹೋಮಿ ವೈಷ್ಣವಾನ್ರಕ್ಷೋಹಣೌ ವಲಗ ಹನಾವುಪದಧಾಮಿ ವೈಷ್ಣವೀ ರಕ್ಷೋಹಣೌ ವಲಗಹನೌ**

---

ವಲಗಹನ ಇತಿ ವಲಗ-ಹನಃ । ಅಭೀತಿ । ಜುಹೋಮಿ । ವೈಷ್ಣವಾನ್ । ರಕ್ಷೋಹಣಾವಿತಿ ರಕ್ಷಃ-ಹನೌ । ವಲಗಹನಾವಿತಿ ವಲಗ-ಹನೌ । ಉಪೇತಿ । ದಧಾಮಿ । ವೈಷ್ಣವೀ ಇತಿ। ರಕ್ಷೋಹಣಾವಿತಿ ರಕ್ಷಃ-ಹನೌ । ವಲಗಹನಾವಿತಿ ವಲಗ-ಹನೌ ।

---

| ಮಂತ್ರ | ವಿನಿಯೋಗ |
|---|---|
| ರಕ್ಷೋಹಣಃ....ಜುಹೋಮಿ ವೈಷ್ಣವಾನ್ । | ಉಪರವಗಳಲ್ಲಿ ಆಜ್ಯಹೋಮವನ್ನು ಮಾಡಲು |
| ರಕ್ಷೋಹಣೌ....ದಧಾಮಿ ವೈಷ್ಣವೀ । | ಅಧಿಷವಣಫಲಕ (ಹಲಗೆ)ಗಳ ಉಪಧಾನ ಮಾಡಲು |
| ರಕ್ಷೋಹಣೌ..ಪರ್ಯೂಹಾಮಿ ವೈಷ್ಣವೀ । | ಅಧಿಷವಣಫಲಕಗಳನ್ನು ಮಣ್ಣಿನಿಂದ ಭದ್ರಪಡಿಸಲು |

---

ವಲಗಹನಃ = ಮಾಟ ಮೊದಲಾದವನ್ನು ಪರಿಹರಿಸುವ; ವೈಷ್ಣವಾನ್ = ವಿಷ್ಣುಸ್ವತ್ವವಾದ; [ಉಪರವಗಳನ್ನು] ಅಭಿಜುಹೋಮಿ = [ಹಿರಣ್ಯವನ್ನಿಟ್ಟು] ಆಜ್ಯದಿಂದ ಹೋಮ ಮಾಡುತ್ತೇನೆ. ✣ ರಕ್ಷೋಹಣೌ = ರಾಕ್ಷಸನಾಶಕಗಳಾದ; ವಲಗಹನೌ = ಆಭಿಚಾರಿಕ

---

ಎಲೈ ಯವಧಾನ್ಯವೇ! ನೀನು ಬೇರ್ಪಡಿಸುವ ಶಕ್ತಿಯುಳ್ಳವನು. ನಮ್ಮಿಂದ ರಾಕ್ಷಸರನ್ನೂ, ಇತರ ಶತ್ರುಗಳನ್ನೂ ದೂರಮಾಡು. [ನಾಶಪಡಿಸು]. ★ ರಾಕ್ಷಸರ ನಾಶಕಗಳೂ, ಆಭಿಚಾರಿಕಕ್ರಿಯಾನಾಶಕಗಳೂ, ವಿಷ್ಣುದೇವತಾಕಗಳೂ ಆದ ಉಪರವಗಳನ್ನು ಕೆಳಭಾಗದಲ್ಲಿ ಮುಚ್ಚುತ್ತೇನೆ. [ಬರ್ಹಿಸ್ಸಿನಿಂದ ಹರಡುತ್ತೇನೆ.]

ರಾಕ್ಷಸರನ್ನು ಕೊಲ್ಲುವ, ಮಾಟ ಮೊದಲಾದವನ್ನು ಪರಿಹರಿಸುವ ವಿಷ್ಣುದೇವತಾಕವಾದ ಉಪರವಗಳಲ್ಲಿ ಹಿರಣ್ಯವನ್ನಿಟ್ಟು ಆಜ್ಯದಿಂದ ಹೋಮ ಮಾಡುತ್ತೇನೆ.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

# ಪರ್ಯೂರ್ಹಾಮಿ ವೈಷ್ಣವೀ ರಕ್ಷೋಹಣೌ ವಲಗಹನೌ ಪರಿಸ್ತೃಣಾಮಿ ವೈಷ್ಣವೀ

---

ಪರೀತಿ । ಊಹಾಮಿ । ವೈಷ್ಣವೀ ಇತಿ । ರಕ್ಷೋಹಣಾವಿತಿ ರಕ್ಷಃ-ಹನೌ । ವಲಗಹನಾವಿತಿ ವಲಗ-ಹನೌ । ಪರೀತಿ । ಸ್ತೃಣಾಮಿ । ವೈಷ್ಣವೀ ಇತಿ ।

---

| ಮಂತ್ರ | ವಿನಿಯೋಗ |
| --- | --- |
| ರಕ್ಷೋಹಣೌ.....ಪರಿಸ್ತೃಣಾಮಿ ವೈಷ್ಣವೀ । | ಅಧಿಷವಣಫಲಕಗಳನ್ನು ದರ್ಭೆಯಿಂದ ಆಚ್ಛಾದಿಸಲು |

---

ಕರ್ಮಧ್ವಂಸಕವಾದ; ವೈಷ್ಣವೀ = ವಿಷ್ಣುದೇವತಾಕಗಳಾದ [ಫಲಕೇ = ಹಲಗೆಗಳನ್ನು] ಉಪದಧಾಮಿ = ಉಪರವಗಳ ಮೇಲೆ ಇಡುತ್ತೇನೆ; ✣ ರಕ್ಷೋಹಣೌ = ರಾಕ್ಷಸ ನಾಶಕಗಳಾದ; ವಲಗಹನೌ = ಅಭಿಚಾರಿಕಕರ್ಮಧ್ವಂಸಕವಾದ; ವೈಷ್ಣವೀ = ವಿಷ್ಣು ದೇವತಾಕಗಳಾದ [ಫಲಕೇ = ಹಲಗೆಗಳನ್ನು] ಪರ್ಯೂರ್ಹಾಮಿ = [ಪ್ರದಕ್ಷಿಣಾಕಾರವಾಗಿ ಮಣ್ಣಿನಿಂದ] ಸುತ್ತಲೂ ಬಲಪಡಿಸುತ್ತೇನೆ. ✣ ರಕ್ಷೋಹಣೌ = ರಾಕ್ಷಸನಾಶಕಗಳಾದ; ವಲಗಹನೌ = ಅಭಿಚಾರಿಕಕರ್ಮಧ್ವಂಸಕಗಳಾದ; ವೈಷ್ಣವೀ = ವಿಷ್ಣುದೇವತಾಕಗಳಾದ; [ಫಲಕೇ = ಹಲಗೆಗಳನ್ನು] ಪರಿಸ್ತೃಣಾಮಿ = ಸುತ್ತಲೂ ದರ್ಭೆಗಳಿಂದ ಆಚ್ಛಾದಿಸುತ್ತೇನೆ.

---

ರಾಕ್ಷಸನಾಶಕಗಳೂ, ಮಾಟ ಮೊದಲಾದವನ್ನೂ ನಾಶಪಡಿಸುವ ವಿಷ್ಣುದೇವತಾಕ ಗಳಾದ ಹಲಗೆಗಳನ್ನು ಉಪರವಗಳ ಮೇಲೆ ಇಡುತ್ತೇನೆ.

ರಕ್ಷೋಬಾಧೆಯನ್ನು ದೂರಮಾಡುವ, ಅಭಿಚಾರಿಕಕರ್ಮಧ್ವಂಸಕಗಳಾದ ವಿಷ್ಣುದೈವತ್ಯವಾದ ಹಲಗೆಗಳನ್ನು ಮಣ್ಣಿನಿಂದ ಬಲಪಡಿಸುತ್ತೇನೆ.

ರಾಕ್ಷಸರನ್ನು ದೂರಮಾಡುವ, ಅಭಿಚಾರಕೃತ್ಯೆಗಳನ್ನು ನಾಶಪಡಿಸುವ ವಿಷ್ಣು ದೇವತಾಕಗಳಾದ ಅಧಿಷವಣಫಲಕಗಳನ್ನು ಸುತ್ತಲೂ ದರ್ಭೆಗಳಿಂದ ಆಚ್ಛಾದಿಸುತ್ತೇನೆ.

ರಾಕ್ಷಸರು ಮತ್ತು ಅಭಿಚಾರಿಕಕೃತ್ಯೆಗಳನ್ನು ನಾಶಪಡಿಸುವ ವಿಷ್ಣುದೇವತಾಕ ವಾಗಿರುವ ಈ ಅಧಿಷವಣಫಲಕಗಳನ್ನು ಉಪರವಗಳ ಮೇಲೆ ಇಟ್ಟು, ಮಣ್ಣಿನಿಂದ ಬಲಪಡಿಸಿ, ದರ್ಭೆಗಳಿಂದ ಆಚ್ಛಾದಿಸಿ ಮಂತ್ರಪೂರ್ವಕವಾಗಿ ಅಭಿಮರ್ಶಿಸುತ್ತೇನೆ.

ರಕ್ಷೋಹಣೌ ವಲಗಹನೌ ವೈಷ್ಣವೀ ಬೃಹನ್ನಸಿ ಬೃಹದ್ಗ್ರಾವಾ

ಬೃಹತೀಮಿಂದ್ರಾಯ ವಾಚಂ ವದ ॥ ೨ - 4 ॥

[ಹಂತೇಂದ್ರಾಯ ದ್ವೇ ಚ ।]

---

ರಕ್ಷೋಹಣಾವಿತಿ ರಕ್ಷಃ - ಹನೌ । ವಲಗಹನಾವಿತಿ ವಲಗ-ಹನೌ । ವೈಷ್ಣವೀ ಇತಿ । ಬೃಹನ್ । ಅಸಿ । ಬೃಹದ್ಗ್ರಾವೇತಿ ಬೃಹತ್-ಗ್ರಾವಾ । ಬೃಹತೀಮ್ । ಇಂದ್ರಾಯ। ವಾಚಮ್ । ವದ ॥ ೨ ॥

---

| ಮಂತ್ರ | ವಿನಿಯೋಗ |
|---|---|
| ರಕ್ಷೋಹಣೌ.....ವೈಷ್ಣವೀ । | ಅಧಿಷವಣಫಲಕಗಳನ್ನು ಅಭಿಮರ್ಶಿಸಲು |
| ಬೃಹನ್ನಸಿ.....ವದ । | ಅಧಿಷವಣಗ್ರಾವ(ಕಲ್ಲು)ದಿಂದ ಫಲಕಗಳನ್ನು ಕುಟ್ಟಿ ಶಬ್ದಮಾಡಲು. [ಇದಕ್ಕೆ ಮೊದಲು 'ಯಜ್ಞ ಪ್ರತಿತಿಷ್ಠ' ಎಂಬ ಮಂತ್ರದಿಂದಾಗಲೀ ಮಂತ್ರರಹಿತವಾಗಿಯಾಗಲೀ ಅಧಿಷವಣಫಲಕಗಳ ಮೇಲೆ ಚರ್ಮವನ್ನು ಹಾಕಿರಬೇಕು] |

---

❖ ರಕ್ಷೋಹಣೌ = ರಾಕ್ಷಸರನ್ನು ನಾಶಪಡಿಸುವ; ವಲಗಹನೌ = ಅಭಿಚಾರಿಕಕರ್ಮವನ್ನು ತೊಡೆದುಹಾಕುವ; ವೈಷ್ಣವೀ = ವಿಷ್ಣುದೇವತಾಕವಾದ; [ಫಲಕೇ = ಹಲಗೆಗಳನ್ನು] ಅಭಿಮೃಶಾಮಿ = ಮುಟ್ಟುತ್ತೇನೆ. ❖ [ಎಲೈ! ಗ್ರಾವವೇ! ನೀನು] ಬೃಹನ್ ಅಸಿ = ದೊಡ್ಡವನಾಗಿದ್ದೀಯೆ; ಬೃಹದ್ಗ್ರಾವಾ[ಅಸಿ] = ದೊಡ್ಡಕಲ್ಲುಗಳನ್ನು ಅವಯವವಾಗಿ ಹೊಂದಿದವನಾಗಿರುವೆ; ಇಂದ್ರಾಯ = ಇಂದ್ರನಿಗೋಸ್ಕರ; ಬೃಹತೀಮ್ = ದೊಡ್ಡ; ವಾಚಮ್ = ಧ್ವನಿಯನ್ನು [ಮಹಾಧ್ವನಿಯನ್ನು]; ವದ = ಹೇಳು [ಮಾಡು.]

---

ಎಲೈ ಗ್ರಾವವೇ! ನೀನು ಮಹಾಶಿಲೆಯಾಗಿರುತ್ತೀಯೆ. ನಿನ್ನ ಭಾಗಗಳೂ ಮಹಾಶಿಲೆಗಳಾಗಬಲ್ಲವು. ನೀನು ಯಾಗವು ನಡೆಯುತ್ತಿದೆಯೆಂದು ಇಂದ್ರನಿಗೆ ಕೇಳಿಸುವಂತೆ ಉಚ್ಚಶಬ್ದವನ್ನು ಮಾಡು. [ನೀನು ಮಾಡುವ ಗಟ್ಟಿಯಾದ ಶಬ್ದವು ಇಂದ್ರನಿಗೆ ಕೇಳಿಸಲಿ.]

## ವಿನಿಯೋಗ ಸಂಗ್ರಹ

ಖನೇದುಪರವಾನ್ ರಕ್ಷ[1] ಇದಂ[2] ತನ್ಮೃದಮುದ್ವಪೇತ್ ।
ಗಾಯ[3] ತತ್ರಾವಬಾಧೇತ ಕಿಂ[4] ಸ್ವಾಮೀ ಪೃಚ್ಛತೀತರಃ ॥
[5] ಭದ್ರಮಿತ್ಯಾಹ [6]ತನ್ನಾವಿತ್ಯಾಹ ಸ್ವಾಮೀತರಂ ಪ್ರತಿ ।
ವಿರಾಟ್[7-10] ಚತುರ್ಭಿಃ ಸಂಸ್ಪರ್ಶೋ ರಕ್ಷಃ[11-15] ಪಂಚ ಸ್ಫುಟಕ್ರಿಯಾ ॥
[16]ರಕ್ಷೋಽಧಿಷವಣಾಖ್ಯೇ ತು ಫಲಕೇ ಸ್ಥಾಪಯೇತ್ತಥಾ ।
ಪರ್ಯುಹ್ಯ[17] ಪರಿತಃ ಸ್ತೃತ್ವಾ[18] ಮಂತ್ರಯೇಚ್ಚ[19] ಬೃಹನ್ನಿತಿ[20] ॥
ಉಪಾಂಶು ಸವನಾಶ್ಮಾನಂ ಸಾದಯೇದ್ವಿಂಶತಿರ್ಮತಾ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ — ಆಪಸ್ತಂಬ - 20, ಬೌಧಾಯನ- 19



## ಅನುವಾಕದ ವಿಶೇಷ ವಿಷಯಗಳು

### ಅ) ಭಟ್ಟಭಾಸ್ಕರ ಭಾಷ್ಯ

**ಮಂತ್ರಸಂಖ್ಯೆ**

೧) ರಕ್ಷೋಹಣೋ....ಖನಾಮಿ । ವಲಗಹನಃ = ೧) ವಲೋ ನಾಮ ಅಸುರಮುಖ್ಯಃ ತಸ್ಯ ಭೃತ್ಯಾಃ = ವಲನೆಂಬ ರಾಕ್ಷಸಶ್ರೇಷ್ಠನ ಅನುಯಾಯಿಗಳು ೨) ವಲೋ ಮೇಘಃ ಸ ಇವ ಛಾದಯಂತೋ ಯೇ ಗಚ್ಛಂತಿ ತೇ ವಲಗಾಃ = ಅಸುರವಿಶೇಷಾಃ ತೇಷಾಂ ಹಂತಾರಃ = ಮೇಘದಂತೆ ಆಚ್ಛಾದಿಸುತ್ತಾ ಬರುವವರು ವಲಗರೆಂಬ ರಾಕ್ಷಸರು. ಅವರನ್ನು ಕೊಲ್ಲುವವರು ೩) ಸಾಯಣಭಾಷ್ಯದಂತೆಯೇ ಅರ್ಥವನ್ನು ತಿಳಿಸಿರುತ್ತಾರೆ.

೨) ಗಾಯತ್ರೇಣ......ವಲಗಃ । 'ಗಾಯತ್ರೇಣ ಛಂದಸಾ' ಎಂಬಂತೆಯೇ ಉಳಿದ ದಿಕ್ಕುಗಳಲ್ಲಿ 'ತ್ರೈಷ್ಟುಭೇನ', 'ಜಾಗತೇನ' 'ಆನುಷ್ಟುಭೇನ' ಎಂಬ ಶ್ರುತ್ಯಂತರದ ಮಂತ್ರಗಳಿಂದ ಉದ್ವಪಾಮಿ = ಹುಡಿಮಣ್ಣನ್ನು ಎತ್ತಿಹಾಕುತ್ತೇನೆ ಎಂದು ಅನ್ವಯ ಮಾಡಿರುತ್ತಾರೆ.

ಇಲ್ಲಿ 'ಅವಬಾಢೋ ವಲಗಃ' ಎಂಬ ಮಂತ್ರಕ್ಕೆ ಯಜಮಾನನ ಕೆಳಗೆ ಕಾಲಿನ ಧೂಳನ್ನು ಹಾಕಬೇಕೆಂಬ ಇನ್ನೊಂದು ವಿನಿಯೋಗವನ್ನು ಹೇಳಿರುತ್ತಾರೆ. 'ಯಜಮಾನನ ಕಾಲುಗಳ ಕೆಳಭಾಗದಲ್ಲಿ ವಲಗನು ಬದ್ಧನಾಗಲಿ' ಎಂದು ವಿವರಿಸಿರುತ್ತಾರೆ. [ಬಾಢಃ = ಬದ್ಧಃ]

೪) 'ಕಿಮತ್ರ?.....ಸಹ' । ಯಜಮಾನನು ಒಮ್ಮೆ ಪ್ರಶ್ನಿಸಿ ಅಧ್ವರ್ಯುವು ಉತ್ತರಿಸಿದ ನಂತರ ಎರಡನೆಯ ಪರ್ಯಾಯದಲ್ಲಿ ಅಧ್ವರ್ಯುವು 'ಕಿಮತ್ರ'? ಎಂದು ಪ್ರಶ್ನಿಸುತ್ತಾನೆ ಎಂದು ತಿಳಿಸಿ ಪ್ರಶ್ನೋತ್ತರಗಳ ಆವೃತ್ತಿಯನ್ನು ಹೇಳಿರುತ್ತಾರೆ.

೭) ವಿರಾಡಸಿ......ಭ್ರಾತೃವ್ಯಹಾ ।' ಸಪತ್ನಾಃ - ಭ್ರಾತೃವ್ಯಾಃ/ಬಾಹ್ಯಾಭ್ಯಂತರ ಭೇದೇನ, ನಿತ್ಯಾನಿತ್ಯಭೇದೇನ ವಾ ಶತ್ರೂಣಾಂ ಪೃಥಗಭಿಧಾನಮ್ - ತೇಷಾಂ ಹಂತಾ। ಹೊರಗಿನ ಮತ್ತು ಒಳಗಿನ ಶತ್ರುಗಳು ಎಂದಿಟ್ಟುಕೊಂಡು ಅಥವಾ ನಿತ್ಯಶತ್ರುಗಳು ಅನಿತ್ಯಶತ್ರುಗಳು ಎಂದಿಟ್ಟುಕೊಂಡು ಸಪತ್ನ-ಭ್ರಾತೃವ್ಯ ಎಂಬ ಶ್ರುತಿನಿರ್ದೇಶ. ಅವರನ್ನು ಕೊಲ್ಲುವವನು ಸಪತ್ನಹಾ - ಭ್ರಾತೃವ್ಯಹಾ.

೯) ಸ್ವರಾಡಸ್ಯಭಿಮಾತಿಹಾ । ಅಭಿಮಾತಿಹಾ = ಪಾಪಗಳನ್ನು ಹೋಗಲಾಡಿಸ ತಕ್ಕವನು.

'ಪಾಪ್ಮಾ ವಾ ಅಭಿಮಾತಿಃ' ।



೧೦) ವಿಶ್ವಾರಾಡಸಿ......ಹಂತಾ । ವಿಶ್ವಾಸಾಂ ನಾಷ್ಟ್ರಾಣಾಂ = ನಾಶಯಿತ್ರ್ಯಾಣಾಂ/ ದೈವಾದಿಪ್ರವೃತ್ತೀನಾಂ ಹಂತಾ = ದೈವಿಕವಾದ ನಾಶಹೇತುಗಳನ್ನೂ ಪರಿಹರಿಸತಕ್ಕವನು.

## ಆ) ಮೀಮಾಂಸಾ

೧) ಮಂಗಲವು ಯಜಮಾನ ಮತ್ತು ಅಧ್ವರ್ಯುಗಳಿಬ್ಬರಿಗೂ ಉಂಟೇ?

[ಜೈ.ಸೂ. 3.8.]

ಜ್ಯೋತಿಷ್ಟೋಮಪ್ರಕರಣದಲ್ಲಿ ಉಪರವಗಳ ಖನನವು ಹೇಳಲ್ಪಟ್ಟಿದೆ. ಆಗ್ನೇಯದಿಂದ ಆರಂಭಿಸಿ ನಾಲ್ಕು ಉಪರವಗಳನ್ನು ಅಗೆಯಬೇಕು. ಅವೆಲ್ಲವೂ ಕೆಳಗೆ ಕೂಡಿಕೊಂಡಿರಬೇಕು. ಮೇಲೆ ಬೇರೆ ಬೇರೆಯಾಗಿರಬೇಕು. ಅವುಗಳ ಅಂತರ ಒಂದೊಂದು ಚೋಟಿನಷ್ಟಿರಬೇಕು. ಒಂದು ಉಪರವದಲ್ಲಿ ಯಜಮಾನನು ಕೈಯನ್ನು ಹಾಕುತ್ತಾನೆ. ಅಧ್ವರ್ಯುವು ಮತ್ತೊಂದು ಉಪರವದಲ್ಲಿ ಕೈಯನ್ನು ಹಾಕಿ ಯಜಮಾನನ ಕೈಯನ್ನು ಹಿಡಿಯುತ್ತಾನೆ. ಆಗ ಯಜಮಾನನು 'ಕಿಮತ್ರ?' ಎಂದು ಪ್ರಶ್ನಿಸುತ್ತಾನೆ. ಅಧ್ವರ್ಯುವು 'ಭದ್ರಮ್' ಎನ್ನುತ್ತಾನೆ. ನಂತರ ಯಜಮಾನನು 'ತನ್ನೌ ಸಹ' ಎನ್ನುತ್ತಾನೆ. ಭದ್ರಮ್ ಎಂದರೆ ಮಂಗಲ ಎಂದರ್ಥ. ಈ ಮಂಗಲವು ಯಜಮಾನನಿಗೆ

ಮಾತ್ರವೇ ಅಥವಾ ಯಜಮಾನ ಮತ್ತು ಅಧ್ವರ್ಯು ಇಬ್ಬರಿಗೂ ಉಂಟೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿನ ಪೂರ್ವಪಕ್ಷವು ಹೀಗಿದೆ; ಯಜ್ಞಸಂಬಂಧಿಯಾದ ಫಲವೆಲ್ಲವೂ ಯಜಮಾನನಿಗೇ ಸಂಬಂಧಿಸಿದುದರಿಂದ ಇಲ್ಲಿ ಹೇಳುವ ಭದ್ರವೂ ಯಜಮಾನನಿಗೇ ಸಂಬಂಧಿಸುತ್ತದೆ.

ಈ ಮಂತ್ರದಲ್ಲಿ 'ನೌ' [ನಮ್ಮಿಬ್ಬರಿಗೂ] ಎಂದು ದ್ವಿವಚನವಿದೆ. ಅಲ್ಲದೆ 'ಸಹ' [ಜೊತೆಯಲ್ಲಿ] ಎಂಬ ಶಬ್ದವೂ ಇದೆ. ಆದುದರಿಂದ ಸಾಮಾನ್ಯನಿಯಮವು ಇಲ್ಲಿ ಅನ್ವಯಿಸುವುದಿಲ್ಲ. ಹೀಗಾಗಿ ಈ ಮಂತ್ರೋಚ್ಚಾರಣೆಯಿಂದ ಉಂಟಾಗುವ ಶುಭಫಲವು ಉಭಯಗಾಮಿ [ಇಬ್ಬರಿಗೂ ಸೇರುವುದು] ಯಾಗಿದೆಯೆಂಬುದು ಇಲ್ಲಿನ ಸಿದ್ಧಾಂತ.

**೨) ಅಧಿಷವಣಫಲಕಗಳ ಸಂತರ್ದನವು ವಿಕೃತಿಯಲ್ಲಿಯೂ ಇದೆಯೇ?**

**[ಜೈ.ಸೂ. 3.3.]**

ಜ್ಯೋತಿಷ್ಟೋಮಪ್ರಕರಣದಲ್ಲಿ

'ಅಥೋ ಖಲು ದೀರ್ಘಸೋಮೇ ಸಂತೃದ್ಯೇ ಧೃತ್ಯೈ' [ತೈ.ಸಂ. 6.2.11.]

ಎಂಬ ವಾಕ್ಯವಿದೆ.

ಅಧಿಷವಣಫಲಕಗಳನ್ನು ಚೆನ್ನಾಗಿ ಸೇರಿಸುವುದಕ್ಕೆ ಸಂತರ್ದನವೆನ್ನುತ್ತಾರೆ. ಜ್ಯೋತಿಷ್ಟೋಮಪ್ರಕರಣದಲ್ಲಿ ಈ ವಾಕ್ಯವು ಇರುವುದರಿಂದ ಪ್ರಕರಣಬಲದಿಂದ ಈ ಸಂತರ್ದನವು ಪ್ರಕೃತಿಯಾಗದಲ್ಲಿ ಮಾತ್ರ ಎಂದೆನ್ನಬೇಕು. ಆದರೆ ದೀರ್ಘಸೋಮ ಎಂದು ಹೇಳಿರುವುದರಿಂದ ಸೌಮಿಕವಿಕೃತಿಗಳಲ್ಲಿಯೂ ಸಂತರ್ದನವು ಉಂಟೇ? ಎಂದು ಸಂಶಯ.

ವಾಕ್ಯದಲ್ಲಿರುವ 'ದೀರ್ಘ' ಎಂಬುದನ್ನು ಯಜಮಾನನಿಗೆ ವಿಶೇಷಣವನ್ನಾಗಿ ಮಾಡಿ 'ದೀರ್ಘಸ್ಯ ಯಜಮಾನಸ್ಯ ಸೋಮಃ' ಎಂದು ಮಾಡಿದರೆ ಉದ್ದವಾಗಿರುವ ಯಜಮಾನನ ಸೋಮಯಾಗ ಎಂದು ಅರ್ಥವಾಗುತ್ತದೆ. ಇದರಿಂದ ಪ್ರಕೃತಿಯಾಗದಲ್ಲಿಯೇ ಸಂತರ್ದನವೆಂದು ತಿಳಿಯುತ್ತದೆ.

ಇಲ್ಲಿ ಮೇಲಿನ ಅರ್ಥವು ದೊರೆಯಲು 'ದೀರ್ಘಸ್ಯ ಸೋಮಃ' ಎಂದು ಷಷ್ಠೀ ತತ್ಪುರುಷಸಮಾಸವನ್ನು ಮಾಡಬೇಕು. ಆದರೆ 'ದೀರ್ಘಶ್ಚ ಅಸೌ ಸೋಮಶ್ಚ' ಎಂಬ ಕರ್ಮಧಾರಯಸಮಾಸವನ್ನು ಮಾಡಿದಾಗ ಪ್ರಕೃತಿಯಾಗ ಎಂಬ ಅರ್ಥವು ಹೇಗೆ ದೊರಕೀತು? ಎಂದು ಆಕ್ಷೇಪ.

ಕರ್ಮಧಾರಯಸಮಾಸವನ್ನು ಮಾಡಿದರೂ ಇಷ್ಟಿ, ಪಶುಯಾಗಗಳಿಗಿಂತಲೂ ಸೋಮಯಾಗವು ದೀರ್ಘವಾಗಿರುವುದರಿಂದ ಅಗ್ನಿಷ್ಟೋಮವೇ ದೀರ್ಘಸೋಮ ಯಾಗವಾಗುತ್ತದೆ. ಇದರಿಂದ ಪ್ರಕರಣವಿರೋಧವೂ ಇರುವುದಿಲ್ಲ. ಆದುದರಿಂದ ಅಧಿಷವಣಫಲಕಗಳ ಸಂತರ್ದನವು ಪ್ರಕೃತಿಯಾಗದಲ್ಲಿಯೇ ಎಂಬುದು ಇಲ್ಲಿನ ಪೂರ್ವಪಕ್ಷ.

ನಿಷಾದಸ್ಥಪತ್ಯಧಿಕರಣದಲ್ಲಿ ಷಷ್ಠೀತತ್ಪುರುಷಸಮಾಸಕ್ಕಿಂತಲೂ ಕರ್ಮಧಾರಯ ಸಮಾಸವು ಉಚಿತವೆಂಬುದು ಸಿದ್ಧವಾಗಿದೆ. ಆದುದರಿಂದ 'ದೀರ್ಘಸ್ಯ ಸೋಮೇ' ಎಂಬ ವಿಗ್ರಹವಾಕ್ಯವು ಸರಿಯಲ್ಲ. ಅಲ್ಲದೆ ಸೋಮಯಾಗವು ಇಷ್ಟಿ-ಪಶುಯಾಗಗಳಿಗಿಂತಲೂ ದೀರ್ಘವಾಗಿಯೇ ಇರುವುದರಿಂದ ಸೋಮಯಾಗವೆಂದರೇ ಸಾಕು. ದೀರ್ಘ ಎಂಬುದು ಬೇಕಿಲ್ಲ. ಇಷ್ಟ್ಯಾದಿಗಳಿಗಿಂತಲೂ ಹ್ರಸ್ವವಾದ ಸೋಮಯಾಗವಿದ್ದರೆ ಅಗ್ನಿಷ್ಟೋಮ ವನ್ನು ದೀರ್ಘಸೋಮವೆನ್ನಬಹುದಾಗಿತ್ತು. ಆದುದರಿಂದ ಸೌಮಿಕವಿಕೃತಿಯಾಗಗಳಾದ ಉಕ್ಥ್ಯ ಮುಂತಾದವುಗಳಲ್ಲಿ ಸೋಮಗ್ರಹಗಳು ಅಧಿಕವಾಗಿರುವುದರಿಂದ ಅವು ದೀರ್ಘಸೋಮಗಳು. ಹೀಗಾಗಿ ವಾಕ್ಯವು ಪ್ರಕರಣವನ್ನು ಬಾಧಿಸುವುದರಿಂದ ಈ ವಿಧಿವಾಕ್ಯವು ಅನೇಕದಿನಸಾಧ್ಯವಾದ ವಿಕೃತಿಯಾಗಗಳಾದ ಉಕ್ಥ್ಯಾದಿಗಳಲ್ಲಿ ಸಂತರ್ದನವನ್ನು ಹೇಳುತ್ತದೆ. ಅಲ್ಲದೆ

"ಅಸಂತೃಣ್ಣೇ ಹಿ ಹನೂ" [ತೈ.ಸಂ. 6.2.11]

ಎಂಬ ವಾಕ್ಯದಿಂದ ಪ್ರಕೃತಿಯಾಗದಲ್ಲಿ ಸಂತರ್ದನದ ನಿಷೇಧವೂ ಇದೆ. ಆದುದರಿಂದ ಅಧಿಷವಣಫಲಕಗಳ ಸಂತರ್ದನವು ವಿಕೃತಿಯಲ್ಲಿಯೇ. ಇದು ಇಲ್ಲಿನ ಸಿದ್ಧಾಂತ.

**೩) ಅಭಿಷವ-ಹೋಮಗಳೂ ಸೋಮಭಕ್ಷಣಕ್ಕೆ ನಿಮಿತ್ತಗಳೇ? [ಜೈ.ಸೂ. 3.5.]**

ಜ್ಯೋತಿಷ್ಟೋಮದಲ್ಲಿ 'ಪ್ರೈತು ಹೋತುಶ್ಚಮಸಃ' ಎಂಬುದಾಗಿ ಹೋತೃಚಮಸ ಸಮಾಖ್ಯೆ, ಹಾರಿಯೋಜನವಾಕ್ಯ, 'ವಷಟ್ಕರ್ತುಃ ಪ್ರಥಮಭಕ್ಷಃ' ಎಂಬುದಾಗಿ ಈ ಮೂರೂ ಸೋಮಭಕ್ಷಕ್ಕೆ ಹೇತುಗಳಾಗಿವೆ. ಇದರಂತೆಯೇ ಅಭಿಷವ, ಹೋಮಗಳೂ ಸೋಮಭಕ್ಷಕ್ಕೆ ನಿಮಿತ್ತವಾಗುತ್ತವೆಯೇ? ಇದು ಇಲ್ಲಿನ ಸಂಶಯ.

'ಪ್ರಥಮಭಕ್ಷಃ' ಎಂಬುದಾಗಿ ಪ್ರತ್ಯಕ್ಷವಾಗಿ ಹೇಳಿರುವುದರಿಂದ ಸಮಾಖ್ಯಾದಿ ಮೂರೇ ಸೋಮಭಕ್ಷಕ್ಕೆ ಹೇತುಗಳು. ಇದು ಇಲ್ಲಿನ ಪೂರ್ವಪಕ್ಷ.

ಸೂತ್ರವಚನವು ಹೀಗಿದೆ :

[illegible] ಪಭಿರಭಿಷುತ್ಯಾಹವನೀಯೇ ಹುತ್ವಾ ಪ್ರತ್ಯಂಚಃ

ಪರೇತ್ಯ ಸದಸಿ ಭಕ್ಷಯಂತಿ ।'

ಈ ವಚನವು ಸೋಮದ ಅಭಿಷವ ಮತ್ತು ಹೋಮಗಳನ್ನು ಬೇರೆ ಬೇರೆ ವಚನಗಳಿಂದ ವಿಧಿಸುತ್ತಿರುವುದರಿಂದ ಮತ್ತು ಅವುಗಳನ್ನು ನಿಮಿತ್ತವನ್ನಾಗಿಟ್ಟುಕೊಂಡು ಭಕ್ಷಣವನ್ನು ವಿಧಿಸುತ್ತಿರುವುದರಿಂದ ಅಭಿಷವ - ಹೋಮಗಳೂ ಭಕ್ಷಣಕ್ಕೆ ನಿಮಿತ್ತಗಳಾಗುತ್ತವೆ. ಇದು ಇಲ್ಲಿನ ಸಿದ್ಧಾಂತ.

**ಳ) ಅಭಿಷವ-ಹೋಮಗಳು ಪ್ರತ್ಯೇಕವಾಗಿ ಭಕ್ಷಹೇತುವೇ? ಅಥವಾ ಒಗ್ಗೂಡಿ ಭಕ್ಷಹೇತುವೇ?** **[ಜೈ.ಸೂ.6.4.]**

ಶ್ರುತಿವಚನದಲ್ಲಿರುವ ಅಭಿಷವ-ಹೋಮಗಳು ಒಂದೊಂದೂ ಭಕ್ಷಹೇತುವೇ? ಅಥವಾ ಸಮುದಿತವಾಗಿಯೇ? ಇದು ಇಲ್ಲಿನ ಸಂಶಯ.

ಇಲ್ಲಿನ ಪೂರ್ವಪಕ್ಷ ಹೀಗಿದೆ - ಶ್ರುತಿವಚನದಲ್ಲಿ 'ಗ್ರಾವಭಿರಭಿಷುತ್ಯ' 'ಆಹವನೀಯೇ ಹುತ್ವಾ' 'ಸದಸಿ ಭಕ್ಷಯಂತಿ' ಎಂದಿದೆ. 'ಸಹ' ಎಂಬ ಶಬ್ದವು ಇಲ್ಲದುದರಿಂದ ಅಭಿಷವ - ಹೋಮಕ್ಕೂ ಪ್ರತ್ಯೇಕವಾಗಿ ಭಕ್ಷಹೇತುತ್ವವಿರುವುದು ಉಚಿತ.

'ಅಭಿಷುತ್ಯ', 'ಹುತ್ವಾ' ಎಂಬಲ್ಲಿ ಲ್ಯಪ್ ಮತ್ತು ಕ್ತ್ವಾ ಪ್ರತ್ಯಯಗಳಿವೆ. 'ಕ್ತ್ವಾ' ಪ್ರತ್ಯಯವು 'ಸಮಾನಕರ್ತೃಕಯೋಃ ಪೂರ್ವಕಾಲೇ' ಎಂಬ ಸೂತ್ರದಿಂದ [ಪಾ.ಸೂ. 3.4.21.] ವಿಧಿಸಲ್ಪಟ್ಟಿದೆ. ಆ ಪ್ರತ್ಯಯಕ್ಕೆ ಲ್ಯಪ್ ಆದೇಶವು ಬರುತ್ತದೆ. ಇದರಿಂದ ಅಭಿಷವ ಹೋಮ ಮತ್ತು ಭಕ್ಷಣಗಳಿಗೆ ಕರ್ತೃಗಳು ಒಬ್ಬರೇ ಎಂದು ತಿಳಿಯುತ್ತದೆ. 'ಭಕ್ಷಯಂತಿ' ಎಂಬ ವಿಧಿವಾಕ್ಯದಲ್ಲಿ ಅಭಿಷವ ಹೋಮಕರ್ತೃವು ಭಕ್ಷದಲ್ಲಿಯೂ ಕರ್ತೃವೆಂದು ಅಂಗವಾಗಿ ಕರ್ತೃವಿಧಿಯಿದೆ. 'ಸಹ' ಎಂಬ ಶಬ್ದವನ್ನು ಹೇಳದೇ ಇರುವುದರಿಂದ ಶಾಬ್ದಿಕವಾದ ಸಾಹಿತ್ಯವು ಇಲ್ಲವಾದರೂ ಆರ್ಥಿಕವಾದ (ತೋರುವ) ಸಾಹಿತ್ಯವು ಇದೆ. ಇದರಿಂದ ವಾಕ್ಯಭೇದದೋಷವೂ ಇಲ್ಲ. ಆದುದರಿಂದ ಸಹಿತವಾದ ಅಭಿಷವ-ಹೋಮಗಳೇ ಭಕ್ಷಹೇತುಗಳಾಗಿವೆಯೆಂದು ಇಲ್ಲಿನ ಸಿದ್ಧಾಂತ.

## ಇ) ಛಂದಸ್ಸು

ಈ ಅನುವಾಕದಲ್ಲಿ ಎಲ್ಲವೂ ಯಜುಸ್ಸುಗಳೇ. ಆದುದರಿಂದ ಛಂದಸ್ಸಿಲ್ಲ.

---

## || ತೃತೀಯೋಽನುವಾಕಃ ||

### ವಿಭೂರಸಿ ಪ್ರವಾಹಣೋ*

ವಿಭೂರಿತಿ ವಿ-ಭೂಃ । ಅಸಿ । ಪ್ರವಾಹಣ ಇತಿ ಪ್ರ-ವಾಹನಃ ।

ಎರಡನೆಯ ಅನುವಾಕದಲ್ಲಿ ಹವಿರ್ಧಾನಮಂಡಪದಲ್ಲಿ ಮಾಡಬೇಕಾದ ಉಪರವ ನಿರ್ಮಾಣವು ಹೇಳಲ್ಪಟ್ಟಿತು. ಈ ಮೂರನೆಯ ಅನುವಾಕದಲ್ಲಿ ಆಗ್ನೀಧ್ರೀಯಸದಸ್ಸೇ ಮೊದಲಾದ ಸ್ಥಾನಗಳಲ್ಲಿ ಧಿಷ್ಣ್ಯಗಳು ಹೇಳಲ್ಪಡುತ್ತವೆ.

| ಮಂತ್ರ | ವಿನಿಯೋಗ |
|---|---|
| ವಿಭೂರಸಿ ಪ್ರವಾಹಣೋ *ರೌದ್ರೇಣಾನೀಕೇನ ಪಾಹಿ ಮಾಗ್ನೇ ॥ ಪಿಪೃಹಿ ಮಾ ಮಾ ಮಾ ಹಿಗ್ಂಸೀಃ । | ಆಗ್ನೀಧ್ರನು ಕುಳಿತುಕೊಳ್ಳುವ ಆಗ್ನೀಧ್ರೀಯ ಸ್ಥಾನದಲ್ಲಿ ಪರಿಮಂಡಲವನ್ನು ಮಾಡಲು [ಕೆತ್ತಿ, ಪ್ರೋಕ್ಷಿಸಿ, ಚಾತ್ವಾಲದ ಮಣ್ಣನ್ನು ತಂದು ಮಂಡಲರೂಪವಾಗಿ ಮಾಡಲು] |

ಸೋಮಯಾಗದಲ್ಲಿ 16 ಮಂದಿ ಋತ್ವಿಜರು. 1) ಬ್ರಹ್ಮಾ 2) ಉದ್ಗಾತಾ 3) ಹೋತಾ 4) ಅಧ್ವರ್ಯು 5) ಬ್ರಾಹ್ಮಣಾಚ್ಛಂಸೀ 6) ಪ್ರಸ್ತೋತಾ 7) ಮೈತ್ರಾವರುಣ 8) ಪ್ರತಿಪ್ರಸ್ಥಾತಾ 9) ಪೋತಾ 10) ಪ್ರತಿಹರ್ತಾ11) ಅಚ್ಛಾವಾಕ 12) ನೇಷ್ಟಾ 13) ಆಗ್ನೀಧ್ರ 14) ಸುಬ್ರಹ್ಮಣ್ಯ 15) ಗ್ರಾವಸ್ತುತ್ 16) ಉನ್ನೇತಾ

ಆಗ್ನೀಧ್ರನು ಕುಳಿತುಕೊಳ್ಳುವ ಸ್ಥಾನ ಆಗ್ನೀಧ್ರೀಯ. ಹೀಗೆಯೇ ಉಳಿದ ಸ್ಥಾನಗಳು. ರೌದ್ರೇಣ....... ಹಿಗ್ಂಸೀಃ । ಎಂಬ ಭಾಗವು ಈ ಅನುವಾಕದ ಎಲ್ಲ ಹದಿನಾರು ಮಂತ್ರಗಳಲ್ಲಿಯೂ ಅನುಷಂಗವಾಗಿ ಸೇರುತ್ತದೆ.

[ಎಲೈ ಆಗ್ನೀಧ್ರೀಯವೇ!] ನೀನು; ವಿಭೂಃ = [ಬೇರೆಯ ಕಡೆಗಳಿಗೂ ಅಗ್ನಿವಿಹರಣ ಮಾಡುವುದರಿಂದ] ವಿವಿಧ ರೂಪಗಳುಳ್ಳವನಾಗಿ; ಅಸಿ = ಇದ್ದೀಯೆ;

ಇಲ್ಲಿ ಅಗ್ನ್ಯಾಧಾರಸ್ಥಳವನ್ನು ಅಗ್ನಿಯೆಂದು ಭಾವಿಸಿ ಸ್ತುತಿಸಲಾಗಿದೆ.

# ವಹ್ನಿರಸಿ ಹವ್ಯವಾಹನಃ* ಶ್ವಾತ್ರೋऽಸಿ ಪ್ರಚೇತಾ*

ವಹ್ನಿಃ । ಅಸಿ । ಹವ್ಯವಾಹನ ಇತಿ ಹವ್ಯ - ವಾಹನಃ । ಶ್ವಾತ್ರಃ । ಅಸಿ । ಪ್ರಚೇತಾ ಇತಿ ಪ್ರ-ಚೇತಾಃ ।

| ಮಂತ್ರ | ವಿನಿಯೋಗ |
|---|---|
| ವಹ್ನಿರಸಿ..ರೌದ್ರೇಣ..ಹಿಗ್ಂಸೀಃ । | ಹೋತ್ರೀಯಸ್ಥಾನದಲ್ಲಿ ಪರಿಮಂಡಲವನ್ನು ಮಾಡಲು. |
| ಶ್ವಾತ್ರೋऽಸಿ...... ಹಿಗ್ಂಸೀಃ ॥ | ಮೈತ್ರಾವರುಣೀಯಸ್ಥಾನದಲ್ಲಿ ಪರಿಮಂಡಲಕ್ಕಾಗಿ |

ಪ್ರವಾಹಣಃ = ಹೆಚ್ಚಾಗಿ ಹವಿಸ್ಸನ್ನು ಒಯ್ಯುವುದರಿಂದ ಪ್ರವಾಹಣನಾಗಿಯೂ(ಇರುವ); ಅಗ್ನೇ = [ಆಗ್ನೀಧ್ರೀಯದಲ್ಲಿರುವ] ಅಗ್ನಿಯೇ ! [ನಿನ್ನ] ರೌದ್ರೇಣ ಅನೀಕೇನ = ಭಯಂಕರವಾದ ಸೈನ್ಯದಿಂದ; ಮಾ = ನನ್ನನ್ನು; ಪಾಹಿ = [ರಾಕ್ಷಸರ ದೆಸೆಯಿಂದ] ರಕ್ಷಿಸು; ಮಾ = ನನ್ನನ್ನು; ಪಿಪೃಹಿ =[ಕರ್ಮಫಲವನ್ನು ಕೊಡುವುದರಿಂದ] ಪೂರ್ಣವಾದ ಮನೋರಥವುಳ್ಳವನನ್ನಾಗಿ ಮಾಡು; ಮಾ = ನನ್ನನ್ನು; ಮಾ ಹಿಗ್ಂಸೀಃ = ಹಿಂಸಿಸಬೇಡ; ನಾಶಪಡಿಸಬೇಡ. ✣ [ಎಲೈ ಹೋತ್ರೀಯವೇ!] ನೀನು; ವಹ್ನಿಃ ಅಸಿ = ಅಗ್ನಿಯಾಗಿದ್ದೀಯೆ; ಹವ್ಯವಾಹನಃ = ದೇವತೆಗಳಿಗೆ ಹವ್ಯವನ್ನು ಒಯ್ಯುವವನಾಗಿದ್ದೀಯೆ'. [ರೌದ್ರೇಣ.... ಹಿಗ್ಂಸೀಃ = ಹಿಂದಿನಂತೆಯೇ]* ✣ [ಎಲೈ ಮೈತ್ರಾವರುಣೀಯ ಧಿಷ್ಣ್ಯವೇ! ನೀನು] ಶ್ವಾತ್ರಃ = ಮಿತ್ರನೂ; ಪ್ರಚೇತಾಃ ಅಸಿ = ವರುಣನೂ ಆಗಿದ್ದೀಯೆ.*

ಎಲೈ ಆಗ್ನೀಧ್ರೀಯವೇ! ನೀನು ವಿವಿಧರೂಪಗಳನ್ನು ಹೊಂದಿರುವವನೂ, ಹವಿಸ್ಸುಗಳನ್ನು ಒಯ್ಯುವವನೂ, ಬೇರೆಯವರಿಂದಲೂ ಹವಿಸ್ಸನ್ನು ದೇವತೆಗಳಿಗೆ ಒದಗಿಸಿಕೊಡುವವನೂ ಆಗಿದ್ದೀಯೆ. ನೀನು ನಿನ್ನ ಭಯಂಕರವಾದ ಸೈನ್ಯದಿಂದ ರಾಕ್ಷಸರನ್ನು ನಾಶಮಾಡಿ ನನ್ನನ್ನು ರಕ್ಷಿಸು. ನನಗೆ ಕರ್ಮಫಲಗಳನ್ನು ಕೊಟ್ಟು ನನ್ನನ್ನು

* ಮುಂದಿನ ಮಂತ್ರಗಳಲ್ಲಿಯೂ ರೌದ್ರೇಣ...... ಹಿಗ್ಂಸೀಃ ಎಂಬ ಅನುಷಂಗದ ಮಂತ್ರದ ಪದಶಃ ಅರ್ಥವನ್ನೂ ತಾತ್ಪರ್ಯವನ್ನೂ ಹೊಂದಿಸಿಕೊಳ್ಳಬೇಕು.

**ಸ್ತುಥೋಽಸಿ ವಿಶ್ವವೇದಾ*ಉಶಿಗಸಿ ಕವಿ*ರಂಘಾರಿರಸಿ ಬಂಭಾರಿ***

---

**ತುಥಃ । ಅಸಿ । ವಿಶ್ವವೇದಾ ಇತಿ ವಿಶ್ವ-ವೇದಾಃ । ಉಶಿಕ್ ಅಸಿ । ಕವಿಃ । ಅಂಘಾರಿಃ ಅಸಿ । ಬಂಭಾರಿಃ ।**

---

| ಮಂತ್ರ | ವಿನಿಯೋಗ |
| --- | --- |
| ತುಥೋಽಸಿ....ಹಿಗ್ಂಸೀಃ । | ಬ್ರಾಹ್ಮಣಾಚ್ಛಂಸಿಸ್ಥಾನದಲ್ಲಿ ಪರಿಮಂಡಲಕ್ಕಾಗಿ |
| ಉಶಿಗಸಿ.......ಹಿಗ್ಂಸೀಃ । | ಪೋತ್ರೀಯಸ್ಥಾನದಲ್ಲಿ ಪರಿಮಂಡಲಕ್ಕಾಗಿ |
| ಅಂಘಾರಿರಸಿ.....ಹಿಗ್ಂಸೀಃ । | ನೇಷ್ಟ್ರೀಯಸ್ಥಾನದಲ್ಲಿ ಪರಿಮಂಡಲಕ್ಕಾಗಿ |

---

❖ [ಎಲೈ ಬ್ರಾಹ್ಮಣಾಚ್ಛಂಸಿಧಿಷ್ಣ್ಯವೇ!] ನೀನು; **ವಿಶ್ವವೇದಾಃ** = ಎಲ್ಲವನ್ನೂ ತಿಳಿದಿರುವ; **ತುಥಃ** = ದೇವತೆಗಳ ದಕ್ಷಿಣೆಗಳನ್ನು ವಿಭಾಗ ಮಾಡುವ ತುಥದೇವನು; **ಅಸಿ** = ಆಗಿದ್ದೀಯೆ.* ❖ [ಎಲೈ ಪೋತ್ರೀಯಧಿಷ್ಣ್ಯವೇ! ನೀನು] **ಉಶಿಕ್** = ಕಾಂತಿಯುಕ್ತನಾದ [ಅಪೇಕ್ಷೆಪಡತಕ್ಕವನಾದ] **ಕವಿಃ ಅಸಿ** = ವಿದ್ವಾಂಸನಾಗಿದ್ದೀಯೆ;* ❖ [ಎಲೈ ನೇಷ್ಟ್ರೀಯವೇ! ನೀನು] **ಅಂಘಾರಿಃ ಬಂಭಾರಿಃ ಅಸಿ** = [ಸೋಮರಕ್ಷಕರಾದ] ಅಂಘಾರಿ, ಬಂಭಾರಿಸ್ವರೂಪನಾಗಿರುವೆ;*

---

ಪೂರ್ಣಕಾಮನನ್ನಾಗಿ ಮಾಡು. ನೀನು ನನ್ನನ್ನು ಹಿಂಸಿಸಬೇಡ; ನಾಶಪಡಿಸಬೇಡ.

ಎಲೈ ಹೋತ್ರೀಯವೇ! ನೀನು ದೇವತೆಗಳನ್ನು ಆಹ್ವಾನಿಸುವವನು. ದೇವತೆಗಳಿಗೆ ಹವ್ಯಗಳನ್ನು ಒಯ್ಯುವವನು.*

ಎಲೈ ಮೈತ್ರಾವರುಣೀಯ ಧಿಷ್ಣ್ಯವೇ! ನೀನು ಮಿತ್ರನೂ, ವರುಣನೂ ಆಗಿದ್ದೀಯೆ.* ★ ಎಲೈ ಬ್ರಾಹ್ಮಣಾಚ್ಛಂಸಿಧಿಷ್ಣ್ಯವೇ! ನೀನು ಎಲ್ಲವನ್ನೂ ತಿಳಿದವನೂ. ದೇವತೆಗಳ ದಕ್ಷಿಣೆಯನ್ನು ವಿಭಾಗ ಮಾಡುವವನೂ ಆದ ತುಥನಾಗಿರುವೆ.*

ಎಲೈ ಪೋತ್ರೀಯಧಿಷ್ಣ್ಯವೇ! ನೀನು ನೋಡಬೇಕಾದಂತಹ ಕಾಂತಿಯುಕ್ತನೂ, ವಿದ್ವಾಂಸನೂ ಆಗಿರುವೆ.*

**ರವಸ್ಯುರಸಿ ದುವಸ್ವಾ* ಞ್ಛುಂಧ್ಯೂರಸಿ ಮಾರ್ಜಾಲೀಯಃ***

**ಸಮ್ರಾಡಸಿ ಕೃಶಾನುಃ* ಪರಿಷದ್ಯೋಽಸಿ ಪವಮಾನಃ***

---

**ಅವಸ್ಯುಃ । ಅಸಿ । ದುವಸ್ವಾನ್ । ಶುಂಧ್ಯೂಃ । ಅಸಿ । ಮಾರ್ಜಾಲೀಯಃ ಸಮ್ರಾಡಿತಿ ಸಮ್-ರಾಟ್ । ಅಸಿ । ಕೃಶಾನುರಿತಿ ಕೃಶ-ಅನುಃ । ಪರಿಷದ್ಯ ಇತಿ ಪರಿ-ಸದ್ಯಃ । ಅಸಿ । ಪವಮಾನಃ ।**

---



| ಮಂತ್ರ | ವಿನಿಯೋಗ |
|---|---|
| ಅವಸ್ಯುರಸಿ....ಹಿಗ್ಂಸೀಃ । | ಅಚ್ಛಾವಾಕಸ್ಥಾನದಲ್ಲಿ ಪರಿಮಂಡಲಕ್ಕಾಗಿ |
| ಶುಂಧ್ಯೂರಸಿ...ಹಿಗ್ಂಸೀಃ । | ಮಾರ್ಜಾಲೀಯಧಿಷ್ಣ್ಯದಲ್ಲಿ ಪರಿಮಂಡಲಕ್ಕಾಗಿ |
| ಸಮ್ರಾಡಸಿ....ಹಿಗ್ಂಸೀಃ । | ಆಹವನೀಯದ ಉಪಸ್ಥಾನ ಮಾಡಲು |
| ಪರಿಷದ್ಯೋಽಸಿ...ಹಿಗ್ಂಸೀಃ । | ಆಸ್ತಾವದ ಉಪಸ್ಥಾನ ಮಾಡಲು |

---

❖ [ಎಲೈ ಅಚ್ಛಾವಾಕಧಿಷ್ಣ್ಯವೇ! ನೀನು] **ಅವಸ್ಯುಃ ದುವಸ್ವಾನ್ ಅಸಿ** = ಅವಸ್ಯುವೆಂದೂ ದುವಸ್ವಂತನೆಂದೂ ಪ್ರಸಿದ್ಧರಾಗಿರುವ ವಾತದ್ವಯಸ್ವರೂಪನಾಗಿದ್ದೀಯೆ.* ❖ [ಎಲೈ ಮಾರ್ಜಾಲೀಯಧಿಷ್ಣ್ಯವೇ! ನೀನು] **ಶುಂಧ್ಯೂಃ** = ಶೋಧಕನೂ; **ಮಾರ್ಜಾಲೀಯಃ** = [ನಿನ್ನಲ್ಲಿ ಪಾತ್ರೆಗಳನ್ನು ತೊಳೆಯುವುದರಿಂದ] ಲೇಪಗಳನ್ನು ತೆಗೆದುಹಾಕುವವನೂ; **ಅಸಿ**=ಆಗಿರುತ್ತೀಯೆ;* ❖ [ಎಲೈ ಆಹವನೀಯಾಗ್ನಿಯೇ! ನೀನು] **ಸಮ್ರಾಟ್** = ಚೆನ್ನಾಗಿ ಪ್ರಕಾಶಿಸುವವನೂ; **ಕೃಶಾನುಃ** = ಕೃಶನಾದರೂ ವೃದ್ಧಿಹೊಂದುವವನು; **ಅಸಿ** = ಆಗಿದ್ದೀಯೆ:* ❖ [ಎಲೈ ಆಸ್ತಾವವೇ! ಸ್ತೋತ್ರಸ್ಥಾನವೇ! ನೀನು] **ಪರಿಷದ್ಯಃ** = ಸುತ್ತಲೂ ಋತ್ವಿಜರು ಕುಳಿತುಕೊಳ್ಳಲು ತಕ್ಕವನೂ; **ಪವಮಾನಃ** = ಪವಿತ್ರಗೊಳಿಸುವವನೂ

---

[illegible] ಯಧಿಷ್ಣ್ಯವೇ! ನೀನು ಸೋಮರಕ್ಷಕನಾದ ಅಂಘಾರಿಯೂ, [illegible] ಆಗಿದ್ದೀಯೆ.

ಪ್ರತಕ್ವಾಸಿ ನಭಸ್ವಾನ*ಸಂಮೃಷ್ಟೋಽಸಿ ಹವ್ಯಸೂದ*

---

ಪ್ರತಕ್ವೇತಿ ಪ್ರ-ತಕ್ವಾ । ಅಸಿ । ನಭಸ್ವಾನ್ । ಅಸಂಮೃಷ್ಟ ಇತ್ಯಸಮ್-ಮೃಷ್ಟಃ । ಅಸಿ। ಹವ್ಯಸೂದ ಇತಿ ಹವ್ಯ-ಸೂದಃ ।

---

| ಮಂತ್ರ | ವಿನಿಯೋಗ |
|---|---|
| ಪ್ರತಕ್ವಾಸಿ.......ಹಿಗ್ಂಸೀಃ । | ಚಾತ್ವಾಲದ ಉಪಸ್ಥಾನ ಮಾಡಲು. |
| ಅಸಂಮೃಷ್ಟೋಽಸಿ.....ಹಿಗ್ಂಸೀಃ । | ಪಶುಶ್ರಪಣದೇಶದ ಉಪಸ್ಥಾನ ಮಾಡಲು. |

---

[ಪವಿತ್ರನೂ] ಅಸಿ = ಆಗಿರುವೆ.* ✣ [ಎಲೈ ಚಾತ್ವಾಲವೇ! ಹಳ್ಳವಾಗಿರುವ ಚಾತ್ವಾಲವೇ!] ನೀನು; ಪ್ರತಕ್ವಾ = [ಕೃಷ್ಣವಿಷಾಣೆಯನ್ನು ತ್ಯಾಗ ಮಾಡಲು] ಬರುವಿಕೆಗೆ ಗುರಿ (ವಿಷಯ) ಯಾಗಿರುವೆ; ನಭಸ್ವಾನ್ ಅಸಿ = ಒಳಗಡೆ ಅವಕಾಶವುಳ್ಳವನೂ ಆಗಿರುವೆ.* ✣ [ಎಲೈ ಪಶುಶ್ರಪಣಪ್ರದೇಶವೇ! ನೀನು] ಅಸಂಮೃಷ್ಟಃ = ರಾಕ್ಷಸರಿಂದ ನಾಶಪಡಿಸಲ್ಪಡದವನೂ; ಹವ್ಯಸೂದಃ = [ಪಶುಹೃದಯಾದಿ] ಹವ್ಯಗಳನ್ನು ಪಕ್ವಗೊಳಿಸುವವನೂ; ಅಸಿ = ಆಗಿರುವೆ.*

---

ಎಲೈ ಅಚ್ಛಾವಾಕಧಿಷ್ಣ್ಯವೇ! ನೀನು ಅವಸ್ಯು, ದುವಸ್ವಂತ ಎಂಬ ವಾತವಿಶೇಷದ್ವಯರೂಪನಾಗಿರುವೆ.*

ಎಲೈ! ಮಾರ್ಜಾಲೀಯಧಿಷ್ಣ್ಯವೇ! ನೀನು ಶುದ್ಧಿಗೊಳಿಸುವವನೂ, ನಿನ್ನಲ್ಲಿ ಪಾತ್ರಗಳನ್ನು ತೊಳೆಯುವುದರಿಂದ ಮಾರ್ಜಾಲೀಯನೂ ಆಗಿರುವೆ.*

ಎಲೈ! ಆಹವನೀಯವೇ! ನೀನು ಚೆನ್ನಾಗಿ ಪ್ರಕಾಶಿಸುವವನೂ ಕೃಶನಾಗಿದ್ದರೂ ವೃದ್ಧಿಹೊಂದುವವನೂ ಆಗಿದ್ದೀಯೆ.*

ಎಲೈ! ಬಹಿಷ್ಪವಮಾನಸ್ತೋತ್ರಸ್ಥಾನವೇ! ನೀನು ಎಲ್ಲರೂ ಕುಳಿತುಕೊಳ್ಳಲು ತಕ್ಕವನೂ, ಪವಮಾನಸ್ತೋತ್ರವುಳ್ಳವನಾಗಿ ಪವಮಾನನೂ ಆಗಿರುತ್ತೀಯೆ.*

# ಋತಧಾಮಾಸಿ ಸುವರ್ಜ್ಯೋತಿ*ರ್ಬ್ರಹ್ಮಜ್ಯೋತಿರಸಿ

---

ಋತಧಾಮೇತ್ಯೃತ-ಧಾಮಾ । ಅಸಿ । ಸುವರ್ಜ್ಯೋತಿರಿತಿ ಸುವಃ-ಜ್ಯೋತಿಃ । ಬ್ರಹ್ಮ ಜ್ಯೋತಿರಿತಿ ಬ್ರಹ್ಮ-ಜ್ಯೋತಿಃ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಋತಧಾಮಾಸಿ.......ಹಿಗ್ಂಸೀಃ । | ಔದುಂಬರಿಯ ಉಪಸ್ಥಾನ ಮಾಡಲು |
| ಬ್ರಹ್ಮಜ್ಯೋತಿರಸಿ.....ಹಿಗ್ಂಸೀಃ । | ಬ್ರಹ್ಮಸದನದ ಉಪಸ್ಥಾನ ಮಾಡಲು |

---

❖ [ಎಲೈ! ಔದುಂಬರಿಯೇ! ನೀನು] ಋತಧಾಮಾ = [ಸಾಮಗಾನ ಮಾಡುವವರಿಗೆ] ಅವಶ್ಯವಾಗಿ ಬೇಕಾಗಿರುವ ಕುಳಿತುಕೊಳ್ಳುವ ಸ್ಥಾನವುಳ್ಳವಳೂ; ಸುವರ್ಜ್ಯೋತಿರಸಿ = ಸ್ವರ್ಗವನ್ನು ಪ್ರಕಾಶಪಡಿಸುವವಳೂ ಆಗಿರುವೆ. ❖ [ಎಲೈ! ಬ್ರಹ್ಮಸದನವೇ! (ಬ್ರಹ್ಮನು ಕುಳಿತುಕೊಳ್ಳುವ ಸ್ಥಳ) ನೀನು] ಬ್ರಹ್ಮಜ್ಯೋತಿಃ = ಋತ್ವಿಜನಾದ ಬ್ರಹ್ಮನ ಅನುಜ್ಞಾರೂಪವಾದ ಜ್ಯೋತಿಯುಳ್ಳದ್ದೂ.

---

ಎಲೈ! ಚಾತ್ವಾಲವೇ! ಕೃಷ್ಣವಿಷಾಣೆಯನ್ನು ನಿನ್ನಲ್ಲಿ ಹಾಕಲು ಬರುವುದರಿಂದ ಪ್ರತಕ್ಷನೂ, ಅವಕಾಶವುಳ್ಳವನಾದುದರಿಂದ ನಭಸ್ವಂತನೂ ಆಗಿರುವೆ.*

ಎಲೈ! ಪಶುಶ್ರಪಣಧಿಷ್ಣ್ಯವೇ! ನೀನು ರಾಕ್ಷಸರಿಂದ ನಾಶಪಡಿಸಲ್ಪಡದವನೂ, ಪಶುಸಂಬಂಧಿ ಹವ್ಯಗಳನ್ನು ಪಕ್ವ ಮಾಡುವವನೂ ಆಗಿರುವೆ.*

ಎಲೈ ಔದುಂಬರಿಯೇ! ಸಾಮಗರು ಕುಳಿತುಕೊಳ್ಳುವ ಸ್ಥಾನವುಳ್ಳವಳೂ, ಎತ್ತರವಾಗಿರುವುದರಿಂದ ಸ್ವರ್ಗಪ್ರಕಾಶಕಳೂ ಆಗಿದ್ದೀಯೆ.*

ಎಲೈ! ಬ್ರಹ್ಮಸದನವೇ! ನಿನ್ನಲ್ಲಿ ಬ್ರಹ್ಮನ ಅನುಜ್ಞೆಯೆಂಬ ಜ್ಯೋತಿಯು ಇದೆ. ಸ್ವರ್ಗಸದೃಶವಾದ ಸ್ಥಾನವುಳ್ಳದ್ದೂ ಆಗಿರುವೆ.*

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

## ಸುವರ್ಧಾಮಾ*ಽಜೋಽಸ್ಯೇಕಪಾದ*ಹಿರಸಿ ಬುಧ್ನಿಯೋ

ಸುವರ್ಧಾಮೇತಿ ಸುವಃ-ಧಾಮಾ । ಅಜಃ । ಅಸಿ । ಏಕಪಾದಿತ್ಯೇಕ-ಪಾತ್ । ಅಹಿಃ । ಅಸಿ । ಬುಧ್ನಿಯಃ ।

| ಮಂತ್ರ | ವಿನಿಯೋಗ |
|---|---|
| ಅಜೋಽಸಿ....ಹಿಗ್ಂಸೀಃ । | ನೂತನಗಾರ್ಹಪತ್ಯದ ಉಪಸ್ಥಾನ ಮಾಡಲು |
| ಅಹಿರಸಿ........ಹಿಗ್ಂಸೀಃ । | ಪುರಾತನ ತ್ಯಾಜ್ಯಗಾರ್ಹಪತ್ಯೋಪಸ್ಥಾನಕ್ಕಾಗಿ |

ಸುವರ್ಧಾಮಾ ಅಸಿ = ಸ್ವರ್ಗಸದೃಶಸ್ಥಾನವೂ ಆಗಿರುವೆ.* ✣ [ಎಲೈ ನೂತನ ಗಾರ್ಹಪತ್ಯವೇ! ನೀನು] ಅಜಃ ಏಕಪಾತ್ ಅಸಿ = [ಪೂರ್ವಪ್ರೋಷ್ಠಪದನಕ್ಷತ್ರ ದೇವತೆಯಾಗಿರುವ ಏಕಪಾದಜರೂಪನಾಗಿರುವೆ]* ✣ [ಎಲೈ ಪುರಾತನ ತ್ಯಾಜ್ಯ ಗಾರ್ಹಪತ್ಯವೇ! ನೀನು] ಅಹಿಃ ಬುಧ್ನಿಯಃ ಅಸಿ = ಉತ್ತರಪ್ರೋಷ್ಠಪದನಕ್ಷತ್ರ ದೇವತೆಯಾಗಿರುವ ಅಹಿಬುಧ್ನಿಯರೂಪನಾಗಿರುವೆ, ಅಗ್ನೇ! = [ಹೀಗೆ ಹದಿನಾರು ಕಡೆಗಳಲ್ಲಿರುವ] ಅಗ್ನಿಯೇ! [ನಿನ್ನ],

ಎಲೈ ನೂತನ ಗಾರ್ಹಪತ್ಯವೇ! ಪೂರ್ವಪ್ರೋಷ್ಠಪದನಕ್ಷತ್ರದೇವನಾದ ಅಜೈಕ ಪಾದರೂಪನಾಗಿರುವೆ.

ಎಲೈ ಪ್ರಾಜಹಿತಗಾರ್ಹಪತ್ಯವೇ! ★ ಉತ್ತರಪ್ರೋಷ್ಠಪದನಕ್ಷತ್ರದೇವನಾದ ಅಹಿಬುಧ್ನಿಯನಾಗಿರುವೆ. ಪೂರ್ವೋಕ್ತವಾದ ಹದಿನಾರು ಸ್ಥಾನಗಳಲ್ಲಿರುವ ಅಗ್ನಿಯೇ! ನಿನ್ನ ಭಯಂಕರವಾದ ಸೈನ್ಯದಿಂದ ರಾಕ್ಷಸರನ್ನು ನಾಶಮಾಡಿ ನನ್ನನ್ನು ರಕ್ಷಿಸು. ನನಗೆ

*ಆಹವನೀಯದಿಂದ ಉತ್ತರವೇದಿಗೆ ಅಗ್ನಿಪ್ರಣಯನ ಮಾಡಿದ ಮೇಲೆ ಅದು ಆಹವನೀಯ. ಹಿಂದಿನ ಆಹವನೀಯವು ಗಾರ್ಹಪತ್ಯ. ಹಿಂದಿನ ಗಾರ್ಹಪತ್ಯವು ಪ್ರಾಜಹಿತವಾಗುತ್ತದೆ.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

ರೌದ್ರೇಣಾನೀಕೇನ ಪಾಹಿ ಮಾಗ್ನೇ ಪಿಪೃಹಿ ಮಾ ಮಾ ಮಾ

ಹಿಗ್ಂಸೀಃ ॥ ೩ - 5 ॥

[ಅನೀಕೇನಾಷ್ಟೌ ಚ ॥]

---

ರೌದ್ರೇಣ । ಅನೀಕೇನ । ಪಾಹಿ । ಮಾ । ಅಗ್ನೇ । ಪಿಪೃಹಿ । ಮಾ । ಮಾ। ಮಾ ।

ಹಿಗ್ಂಸೀಃ ॥ ೩ ॥

---

ರೌದ್ರೇಣ ಅನೀಕೇನ = ಭಯಂಕರವಾದ ಸೈನ್ಯದಿಂದ; ಮಾ = ನನ್ನನ್ನು; [ರಾಕ್ಷಸರ ದೆಸೆಯಿಂದ]; ಪಾಹಿ = ರಕ್ಷಿಸು; ಮಾ = ನನ್ನನ್ನು; ಪಿಪೃಹಿ = [ಕರ್ಮಫಲವನ್ನು ಕೊಡುವುದರಿಂದ] ಪೂರ್ಣವಾದ ಮನೋರಥವುಳ್ಳವನ್ನಾಗಿ ಮಾಡು; ಮಾ = ನನ್ನನ್ನು; ಮಾ ಹಿಗ್ಂಸೀಃ = ಹಿಂಸಿಸಬೇಡ/ನಾಶಪಡಿಸಬೇಡ.

---

ಕರ್ಮಫಲಗಳನ್ನು ಕೊಟ್ಟು ನನ್ನನ್ನು ಪೂರ್ಣಕಾಮನನ್ನಾಗಿ ಮಾಡು. ನೀನು ನನ್ನನ್ನು ಹಿಂಸಿಸಬೇಡ. ನಾಶಪಡಿಸಬೇಡ.*

## ವಿನಿಯೋಗ ಸಂಗ್ರಹ

ವಿಭೂ ಪದತ್ರಯಾತ್ಮಾನೋ ಮಂತ್ರಾಃ ಷೋಡಶ ನಿರ್ವಪೇತ್ ।
ಧಿಷ್ಣ್ಯಾನ್ ದಿಶೇಚ್ಚ ಸರ್ವೇಷು ರೌದ್ರೇಣೇತ್ಯನುದಿಶ್ಯತೇ ॥
ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 16

---

*ಇವಲ್ಲದೆ ಉತ್ತರ ಮೊದಲಾದ 4 ಧಿಷ್ಣ್ಯಗಳನ್ನು ಆಪಸ್ತಂಬರು ಹೇಳಿರುತ್ತಾರೆ.

## ಅನುವಾಕದ ವಿಶೇಷ ವಿಷಯಗಳು

### ಅ) ಭ. ಭಾ. ಭಾಷ್ಯ

**ಮಂತ್ರಸಂಖ್ಯೆ**

೨) ವಹ್ನಿರಸಿ........। ವಹ್ನಿಃ = ದೇವತೆಗಳನ್ನು ಆಹ್ವಾನಿಸುವವನು.

೩) ಶ್ವಾತ್ರೋऽಸಿ........। 1) ಶ್ವಾತ್ರಃ = ಬೇಗನೆ ರಕ್ಷಿಸುವವನು. 2) ಆಶು ಅತತಿ ಇತಿ ಶ್ವಾತ್ರಃ = ಸದಾ ಸಂಚರಿಸುವವನು (ಮಿತ್ರ). ಪ್ರಚೇತಾಃ = ಶ್ರೇಷ್ಠವಾದ ಮನಸ್ಸುಳ್ಳವನು. (ವರುಣ)

೫) ಉಶಿಗಸಿ......। ಪೋತಾರೌ ದೇವಕವೀ = ಪೋತೃಗಳಿಬ್ಬರು ದೇವಕವಿಗಳಾಗಿರುತ್ತಾರೆ.

೯) ಸಮ್ರಾಡಸಿ.....। ಕೃಶಾನುಃ = ಕೃಶವಾದ ಪ್ರಾಣಗಳುಳ್ಳವನು. ಜ್ವಲಿಸುತ್ತಿರುವ ಅಗ್ನಿಯ ಮುಂದೆ ಎಲ್ಲರೂ ಅಲ್ಪರಾಗುತ್ತಾರೆ.

೧೫) ಬ್ರಹ್ಮಜ್ಯೋತಿ......। ಬ್ರಹ್ಮ = ಬೃಹತ್ ಜ್ಯೋತಿಃ ಯಸ್ಯ ಸಃ = ಪ್ರಕಾಶಿಸುತ್ತಿರುವ ಬ್ರಹ್ಮನುಳ್ಳ ಸ್ಥಾನ.

೧೫) ಅಜೋऽಸ್ಯೇಕ......। ಅಜಃ ಏಕಪಾತ್ = ನ ಜಾಯತೇ ಇತ್ಯಜಃ = ನಿತ್ಯನೂ ಏಕಪಾದನಾದ ಗಾರ್ಹಪತ್ಯಾಗ್ನಿ. ಅಜಂತಿ ಆಹವನೀಯಾದಯಃ ಇತಃ ಇತ್ಯಜಃ = ಇಲ್ಲಿನ ಆಹವನೀಯಾಗ್ನಿ ಮೊದಲಾದವನ್ನು ಪ್ರಣಯನ ಮಾಡುವುದರಿಂದಲೂ ಅಜ.

೧೬) ಅಹಿರಸಿ ಬುಧ್ನಿಯಃ .......। ಅಹಿಃ = ಅಹಿಂಸಕಃ। ಬುಧ್ನಿಯಃ = ಬುಧ್ನೇ = ಬುದ್ಧೌ ವರ್ತತೇ ಇತಿ ಬುಧ್ನಿಯಃ = ಹಿಂಸೆ ಮಾಡದವನು ಮತ್ತು ಶ್ರದ್ಧಾವಂತರ ಹೃದಯಗಳಲ್ಲಿ ಇರುವವನು.

ಈ ಅನುವಾಕದಲ್ಲಿ ಮೀಮಾಂಸಾವಿಚಾರವೂ, ಛಂದಸ್ಸಿನ ವಿಚಾರವೂ ಇಲ್ಲ.

---

## ॥ ಚತುರ್ಥೋಽನುವಾಕಃ ॥

ತ್ವಗ್‍ಂ ಸೋಮ ತನೂಕೃದ್ಭ್ಯೋ ದ್ವೇಷೋಭ್ಯೋಽನ್ಯಕೃತೇಭ್ಯ

ಉರು ಯಂತಾಸಿ ವರೂಥಗ್‍ಂ ಸ್ವಾಹಾ

---

ತ್ವಮ್ । ಸೋಮ । ತನೂಕೃದ್ಭ್ಯ ಇತಿ ತನೂಕೃತ್-ಭ್ಯಃ । ದ್ವೇಷೋಭ್ಯ ಇತಿ ದ್ವೇಷಃ-ಭ್ಯಃ । ಅನ್ಯಕೃತೇಭ್ಯ ಇತ್ಯನ್ಯ-ಕೃತೇಭ್ಯಃ । ಉರು । ಯಂತಾ । ಅಸಿ । ವರೂಥಮ್ । ಸ್ವಾಹಾ ।

---

ಮೂರನೆಯ ಅನುವಾಕದಲ್ಲಿ ಧಿಷ್ಣ್ಯಗಳನ್ನು ಹೇಳಿಯಾಯಿತು. ಇದರಿಂದ ವೇದಿಗೆ ಸಂಬಂಧಿಸಿದ ಎಲ್ಲ ಅಂಶಗಳನ್ನೂ ಹೇಳಿದಂತಾಯಿತು. ವೇದಿಯಲ್ಲಿ ಅಗ್ನೀಷೋಮಪಶುಯಾಗವಾಗಬೇಕು. ಅದಕ್ಕೆ ಮೊದಲು ಅಗ್ನೀಷೋಮಪ್ರಣಯನವಾಗಬೇಕು. ಆ ಪ್ರಣಯನಕ್ಕಾಗಿ ವೈಸರ್ಜನಹೋಮವು ಈ ನಾಲ್ಕನೆಯ ಅನುವಾಕದಲ್ಲಿ ಹೇಳಲ್ಪಟ್ಟಿದೆ. ಈ ಹೋಮವಾದ ಮೇಲೆ ಅವಾಂತರದೀಕ್ಷೆಯ ವಿಸರ್ಜನವಾಗುತ್ತದೆ.

| ಮಂತ್ರ | ವಿನಿಯೋಗ |
|---|---|
| ತ್ವಗ್‍ಂ....ವರೂಥಗ್‍ಂ ಸ್ವಾಹಾ । | ಸ್ರುಕ್‌ನಲ್ಲಿ ಚತುರ್ಗೃಹೀತಗ್ರಹಣ ಮಾಡಿ ಶಾಲಾಮುಖೀಯದಲ್ಲಿ ವೈಸರ್ಜನಹೋಮವನ್ನು ಮಾಡಲು. |

---

ಸೋಮ = ಎಲೈ ಸೋಮನೇ! ತ್ವಮ್ = ನೀನು; ತನೂಕೃದ್ಭ್ಯಃ = ದೇಹಗಳನ್ನು ಕತ್ತರಿಸುವ[ರಾಕ್ಷಸರಿಂದಲೂ]; ದ್ವೇಷೋಭ್ಯಃ = ವೈರಿಗಳಿಂದಲೂ; ಅನ್ಯಕೃತೇಭ್ಯಃ = ಬೇರೆಯವರಿಂದ ಮಾಡಲ್ಪಟ್ಟ [ಆಭಿಚಾರಿಕಕೃತ್ಯೆಗಳಿಂದಲೂ] ಯಂತಾ = ಅವರ ಪೀಡೆಗಳನ್ನು ಪರಿಹರಿಸುವ ರಕ್ಷಕನು; ಅಸಿ=ಆಗಿದ್ದೀಯೆ; [ಆದುದರಿಂದ] ಉರು = ದೊಡ್ಡದಾದ; ವರೂಥಮ್ = ಬಲವೂ; ಅಸಿ = [ನೀನೇ] ಆಗಿದ್ದೀಯೆ. ಸ್ವಾಹಾ = [ಅಂತಹ

---

ಎಲೈ! ಸೋಮರಾಜನೇ! ನೀನು ದೇಹಗಳನ್ನು ಕತ್ತರಿಸಿ ಕೊಲ್ಲುವ ರಾಕ್ಷಸರನ್ನೂ,

**ಜುಷಾಣೋ ಅಪ್ತುರಾಜ್ಯಸ್ಯ ವೇತು ಸ್ವಾಹಾಽಯಂ ನೋ**

**ಅಗ್ನಿರ್ವರಿವಃ ಕೃಣೋತ್ವಯಂ ಮೃಧಃ ಪುರ ಏತು ಪ್ರಭಿಂದನ್ನ್।**

---

**ಜುಷಾಣಃ । ಅಪ್ತುಃ । ಆಜ್ಯಸ್ಯ । ವೇತು । ಸ್ವಾಹಾ । ಅಯಮ್। ನಃ । ಅಗ್ನಿಃ। ವರಿವಃ। ಕೃಣೋತು । ಅಯಮ್ । ಮೃಧಃ । ಪುರಃ । ಏತು । ಪ್ರಭಿಂದನ್ನಿತಿ ಪ್ರ-ಭಿಂದನ್ನ್ ॥**

---

**ಮಂತ್ರ** | **ವಿನಿಯೋಗ**



**ಜುಷಾಣಃ........ಸ್ವಾಹಾ ।** ಸ್ರುವದಿಂದ ಆಜ್ಯಬಿಂದುವನ್ನು ಬಿಡಲು

**ಅಯಂ ನೋ.....ವಾಜಸಾತೌ ॥** ಪೂರ್ವದ ಬಾಗಿಲಿನಿಂದ ಹೊರಗೆ ಹೊರಡಲು

---

ನಿನಗೆ]ಇದು ಹುತವಾಗಲಿ. ❖[ಸೋಮದೇವನೇ!] **ಜುಷಾಣಃ** = ನಮ್ಮಲ್ಲಿ ಪ್ರೀತಿಯುಳ್ಳವನಾದ ನೀನು; **ಅಪ್ತುಃ** = [ರಾಕ್ಷಸರಿಗೆ ಕಾಣದಂತಹ] ಅಲ್ಪದೇಹವುಳ್ಳವನಾಗಿ; **ಆಜ್ಯಸ್ಯ ವೇತು** = ಆಜ್ಯದ ಹನಿಯನ್ನು ಪಾನಮಾಡು; **ಸ್ವಾಹಾ** = [ನಿನಗೆ ಇದು] ಹುತವಾಗಲಿ. ❖ **ಅಯಮ್ ಅಗ್ನಿಃ** = [ಪೂರ್ವದ್ವಾರದಿಂದ ಹೊರಟವರಾಗಿ ಯಾವ ಅಗ್ನಿಯನ್ನು ಪ್ರಣಯನ ಮಾಡುತ್ತಾರೆಯೋ ಆ] ಈ ಅಗ್ನಿಯು; **ನಃ** = ನಮಗೆ; **ವರಿವಃ ಕೃಣೋತು** = ಶ್ರೇಯಸ್ಸನ್ನು ಉಂಟುಮಾಡಲಿ; **ಅಯಮ್** = ಈ [ಅಗ್ನಿಯು]; **ಮೃಧಃ** = ಶತ್ರುಗಳನ್ನು; **ಪ್ರಭಿಂದನ್** = ಸೀಳಿಹಾಕುತ್ತಾ; **ಪುರಃ ಏತು** = ಮುಂದೆ ಹೋಗಲಿ.

---

ಇತರ ವೈರಿಗಳನ್ನೂ, ಬೇರೆಯವರು ನಮಗೆ ಪೀಡೆಯುಂಟಾಗಲೆಂದು ಮಾಡಿದ ಆಭಿಚಾರಿಕಕೃತ್ಯೆಗಳನ್ನೂ ಪರಿಹರಿಸಿ, ನಾಶಪಡಿಸಿ ರಕ್ಷಿಸುವವನಾಗಿದ್ದೀಯೆ. ನೀನೇ ನಮಗೆ ದೊಡ್ಡ ಬಲವಾಗಿದ್ದೀಯೆ. ನಿನಗೆ ಈ ಆಜ್ಯದ್ರವ್ಯವು ಹುತವಾಗಲಿ.

ಸೋಮದೇವನೇ! ನೀನು ನಮ್ಮಲ್ಲಿ ಪ್ರೀತಿಯುಳ್ಳವನು. ರಾಕ್ಷಸರಿಗೆ ಕಾಣದಂತಿರುವ ಅಲ್ಪದೇಹವನ್ನು ಹೊಂದಿ ಈ ಆಜ್ಯಬಿಂದುವನ್ನು ಪಾನ ಮಾಡು. ಇದು ನಿನಗೆ ಹುತವಾಗಲಿ.

**ಅಯಗ್ಂ ಶತ್ರೂನ್ಜ್ಜಯತು ಜರ್ಹೃಷಾಣೋಽಯಂ ವಾಜಂ ಜಯತು ವಾಜಸಾತೌ ॥ ಉರು ವಿಷ್ಣೋ ವಿಕ್ರಮಸ್ವೋರು ಕ್ಷಯಾಯ ನಃ ಕೃಧಿ ।**

---

**ಅಯಮ್ । ಶತ್ರೂನ್ । ಜಯತು । ಜರ್ಹೃಷಾಣಃ । ಅಯಮ್ । ವಾಜಮ್ । ಜಯತು । ವಾಜಸಾತಾವಿತಿ ವಾಜ-ಸಾತೌ ॥ ಉರು । ವಿಷ್ಣೋ ಇತಿ । ವೀತಿ । ಕ್ರಮಸ್ವ । ಉರು । ಕ್ಷಯಾಯ । ನಃ । ಕೃಧಿ ॥**

---

| ಮಂತ್ರ | ವಿನಿಯೋಗ |
|---|---|
| ಉರು ವಿಷ್ಣೋ..... ತಿರ ॥ | ಸ್ರುವದಿಂದ ಆಹವನೀಯಾಗ್ನಿಯಲ್ಲಿ ಹೋಮ ಮಾಡಲು. |

---

**ಅಯಮ್** = ಈ [ಅಗ್ನಿಯು]; **ಜರ್ಹೃಷಾಣಃ** = ಸಂತುಷ್ಟವಾದ ಅಂತಃಕರಣವುಳ್ಳವನಾಗಿ; **ಶತ್ರೂನ್ ಜಯತು** = ವೈರಿಗಳನ್ನು ಗೆಲ್ಲಲಿ; **ಅಯಮ್** = ಈ [ಅಗ್ನಿಯು]; **ವಾಜಸಾತೌ** = ಅನ್ನಪ್ರಾಪ್ತಿಸಾಧನವಾದ ಯಜ್ಞದಲ್ಲಿ; **ವಾಜಮ್** = ಅನ್ನವನ್ನು; **ಜಯತು** = [ನಮಗಾಗಿ] ಜಯಿಸಲಿ/ವಶಪಡಿಸಿಕೊಳ್ಳಲಿ. ✣ **ವಿಷ್ಣೋ** = ಎಲೈ ವ್ಯಾಪಕವಾದ ಆಹವನೀಯಾಗ್ನಿಯೇ! [ನಮ್ಮನ್ನು ಅನುಗ್ರಹಿಸುವುದಕ್ಕಾಗಿ] **ಉರು ವಿಕ್ರಮಸ್ವ** = [ಶತ್ರುಗಳ ಮೇಲೆ] ಹೆಚ್ಚು ಪರಾಕ್ರಮವನ್ನು ತೋರಿಸು; **ನಃ** = ನಮ್ಮ; **ಕ್ಷಯಾಯ** = ವಾಸಕ್ಕಾಗಿ; **ಉರು ಕೃಧಿ** = [ಗೃಹಧನಾದಿಗಳನ್ನು] ಹೆಚ್ಚಾಗಿ ಒದಗಿಸಿಕೊಡು;

---

★ ಪೂರ್ವದ್ವಾರದಿಂದ ಹೊರಟ ಋತ್ವಿಜರು ಪ್ರಣಯನ ಮಾಡುವ ಅಗ್ನಿಯು ನಮಗೆ ಶ್ರೇಯಸ್ಸನ್ನುಂಟುಮಾಡಲಿ. ಈ ಅಗ್ನಿಯು ವೈರಿಗಳನ್ನು ನಾಶಮಾಡುತ್ತಾ ಮುಂದೆ ಹೋಗಲಿ. ಈ ಅಗ್ನಿಯು ಸಂತುಷ್ಟಾಂತಃಕರಣನಾಗಿ ಶತ್ರುಗಳನ್ನು ಗೆಲ್ಲಲಿ. ಈ ಅಗ್ನಿಯು ಅನ್ನಲಾಭವನ್ನುಂಟುಮಾಡುವ ಯುದ್ಧದಲ್ಲಿ ನಮಗಾಗಿ ಅನ್ನವನ್ನು ವಶಪಡಿಸಿಕೊಳ್ಳಲಿ. ಅನ್ನಲಾಭವನ್ನು ಉಂಟುಮಾಡಲಿ. ★ ಎಲೈ! ವ್ಯಾಪಕನಾಗಿ ವಿಷ್ಣುರೂಪನಾಗಿರುವ

ಘೃತಂ ಘೃತಯೋನೇ ಪಿಬ ಪ್ರಪ್ರ ಯಜ್ಞಪತಿಂ ತಿರ ॥

ಸೋಮೋ ಜಿಗಾತಿ ಗಾತುವಿ[ಗಾತುವಿತ್ (೧) ದೇವಾ....]

ದ್ದೇವಾನಾಮೇತಿ ನಿಷ್ಕೃತಮೃತಸ್ಯ ಯೋನಿಮಾಸದ

---

ಘೃತಮ್। ಘೃತಯೋನ ಇತಿ ಘೃತ-ಯೋನೇ। ಪಿಬ। ಪ್ರಪ್ರೇತಿ ಪ್ರ-ಪ್ರ। ಯಜ್ಞಪತಿಮಿತಿ ಯಜ್ಞ-ಪತಿಮ್। ತಿರ॥ ಸೋಮಃ ಜಿಗಾತಿ। ಗಾತುವಿದಿತಿ ಗಾತು-ವಿತ್(೧)। ದೇವಾನಾಮ್। ಏತಿ। ನಿಷ್ಕೃತಮಿತಿ ನಿಃ-ಕೃತಮ್। ಋತಸ್ಯ। ಯೋನಿಮ್। ಆಸದಮಿತ್ಯಾ-ಸದಮ್।

---

| ಮಂತ್ರ | ವಿನಿಯೋಗ |
|---|---|
| ಸೋಮೋ ಜಿಗಾತಿ.....ಸದಮ್। | ಅಧ್ವರ್ಯುವು ಬ್ರಹ್ಮನಿಂದ ಸೋಮನನ್ನು ತೆಗೆದುಕೊಂಡು ಹವಿರ್ಧಾನಮಂಡಪಕ್ಕೆ ತರಲು. |

---

ಘೃತಯೋನೇ! = ತುಪ್ಪವೇ ಉತ್ಪತ್ತಿಸ್ಥಾನವಾಗಿರುವ ಅಗ್ನಿಯೇ! ಘೃತಮ್ = [ನಾವು ಆಹುತಿಯಾಗಿ ಅರ್ಪಿಸುತ್ತಿರುವ] ಈ ತುಪ್ಪವನ್ನು; ಪಿಬ = ಕುಡಿ (ಸ್ವೀಕರಿಸು); ಯಜ್ಞಪತಿಮ್ = ಯಜಮಾನನನ್ನು; ಪ್ರಪ್ರ ತಿರ = ಅತಿಶಯವಾಗಿ ವೃದ್ಧಿ ಹೊಂದುವಂತೆ ಮಾಡು; ❖ ಗಾತುವಿತ್ = ಮಾರ್ಗಗಳನ್ನು ತಿಳಿದಿರುವ; ಸೋಮಃ = ಸೋಮರಾಜನು; ಜಿಗಾತಿ = ಹೋಗುತ್ತಾನೆ; ನಿಷ್ಕೃತಮ್ = ಅಲಂಕರಿಸಲ್ಪಟ್ಟಿರುವ; ಋತಸ್ಯ ಯೋನಿಮ್ =[ಗ್ರಹ-ಚಮಸಾದಿಸ್ಥಾನವಾಗಿರುವುದರಿಂದ] ಯಜ್ಞಕ್ಕೆ ಕಾರಣವಾಗಿರುವ; ದೇವಾನಾಮ್ ಆಸದಮ್ = ದೇವತೆಗಳಿರುವ ಸ್ಥಾನವಾದ ಹವಿರ್ಧಾನಮಂಡಪವನ್ನು ಕುರಿತು; ಏತಿ = ಹೋಗುತ್ತಾನೆ.

---

ಆಹವನೀಯಾಗ್ನಿಯೇ! ನಮಗಾಗಿ ಶತ್ರುಗಳ ಮೇಲೆ ಪರಾಕ್ರಮವನ್ನು ತೋರಿಸು. ನಾವು ಸುಖವಾಗಿ ವಾಸಮಾಡುವಂತೆ ಗೃಹಧನಾದಿಗಳನ್ನು ಅಧಿಕವಾಗಿ ಕೊಡು. ಘೃತದಿಂದ ಜ್ವಲಿಸುವ ಅಗ್ನಿಯೇ! ನಾವು ಆಹುತಿಯಾಗಿ ಕೊಡುತ್ತಿರುವ ಈ ತುಪ್ಪವನ್ನು ಸ್ವೀಕರಿಸು. ಯಜಮಾನನು ಅತ್ಯಂತ ವೃದ್ಧಿ ಹೊಂದುವಂತೆ ಮಾಡು.

# ಮದಿತ್ಯಾಃ ಸದೋಽಸ್ಯದಿತ್ಯಾಃ ಸದ ಆ ಸೀದ್ಯೈಷ ವೋ ದೇವ ಸವಿತಃ ಸೋಮಸ್ತಗ್‌ಂ ರಕ್ಷಧ್ವಂ ಮಾ

---

ಅದಿತ್ಯಾಃ । ಸದಃ । ಅಸಿ । ಅದಿತ್ಯಾಃ । ಸದಃ । ಏತಿ । ಸೀದ । ಏಷಃ । ವಃ । ದೇವ । ಸವಿತಃ । ಸೋಮಃ । ತಮ್ । ರಕ್ಷಧ್ವಮ್ । ಮಾ ।

---

| ಮಂತ್ರ | ವಿನಿಯೋಗ |
|---|---|
| ಅದಿತ್ಯಾಃ ಸದೋಽಸಿ । | ದಕ್ಷಿಣಹವಿರ್ಧಾನಶಕಟದ ನೀಡದಲ್ಲಿ ಕೃಷ್ಣಾಜಿನವನ್ನು ಹಾಸಲು. |
| ಅದಿತ್ಯಾಃ.....ಸೀದ । | ಕೃಷ್ಣಾಜಿನದಲ್ಲಿ ಸೋಮಲತೆಯನ್ನು ಹಾಕಲು. |
| ಏಷ.......ದಭತ್ । | ಸೋಮನನ್ನು ರಕ್ಷಣಾರ್ಥವಾಗಿ ದೇವತೆಗಳಿಗೆ ಕೊಡಲು. |



---

❖ [ಎಲೈ ಕೃಷ್ಣಾಜಿನವೇ! ನೀನು] ಅದಿತ್ಯಾಃ = ಭೂಮಿಗೆ; ಸದಃ ಅಸಿ = ಸ್ಥಾನವಾಗಿರುವೆ; ❖ [ಎಲೈ! ಸೋಮರಾಜನೇ! ನೀನು] ಅದಿತ್ಯಾಃ ಸದಃ = ಭೂಮಿಯ ಸ್ಥಾನವಾದ [ಕೃಷ್ಣಾಜಿನವನ್ನು] ಆ ಸೀದ = ಹೊಂದು. ❖ ದೇವ ಸವಿತಃ* = ಎಲೈ ಸರ್ವಪ್ರೇರಕನಾದ ಸವಿತೃದೇವನೇ! ಏಷಃ ವಃ ಸೋಮಃ = ಈ ಸೋಮನು ನಿಮ್ಮ ಸೋಮನಾಗಿದ್ದಾನೆ; ತಮ್ = ಆ ಸೋಮರಾಜನನ್ನು; ರಕ್ಷಧ್ವಮ್ = ರಕ್ಷಿಸಿರಿ; ವಃ = [ಹಾಗೆ ಸೋಮನನ್ನು ರಕ್ಷಿಸುವ] ನಿಮ್ಮನ್ನು; ಮಾ ದಭತ್ = ಯಾರೂ ಹಿಂಸಿಸದಿರಲಿ.

---

ಸೋಮರಾಜನು ಎಲ್ಲ ಮಾರ್ಗಗಳನ್ನೂ ತಿಳಿದವನು. ಆತನು ದೇವತೆಗಳಿರುವ ಸ್ಥಾನವಾದ ಹವಿರ್ಧಾನಮಂಡಪಕ್ಕೆ ಹೋಗುತ್ತಾನೆ. ಆ ಮಂಡಪವು ಅಲಂಕರಿಸಲ್ಪಟ್ಟಿದೆ. ಗ್ರಹ-ಚಮಸಾದಿಸ್ಥಾನವಾಗಿ ಯಜ್ಞಕ್ಕೆ ಕಾರಣವೂ ಆಗಿದೆ. ಅಲ್ಲಿಗೆ ಸೋಮರಾಜನು ಹೋಗುತ್ತಾನೆ. ★ ಎಲೈ! ಕೃಷ್ಣಾಜಿನವೇ! ನೀನು ಭೂಮಿಗೆ ಸ್ಥಾನವಾಗಿರುವೆ.

ಎಲೈ ಸೋಮರಾಜನೇ! ಭೂಮಿಯ ಸ್ಥಾನವಾದ ಈ ಕೃಷ್ಣಾಜಿನವನ್ನು ಹೊಂದು.

---

*ಇಲ್ಲಿಯ ಸವಿತೃಪದಕ್ಕೆ ಇಂದ್ರಾದಿ ಸರ್ವದೇವತೆಗಳೆಂದೂ ಅರ್ಥ. ಅಂತೆಯೇ 'ರಕ್ಷಧ್ವಂ' ಎಂಬ ಬಹುವಚನವೂ ಇದಕ್ಕೆ ಅನುಗುಣವಾಗಿದೆ.

ವೋ ದಭದೇತತ್ತ್ವಗ್ಂ ಸೋಮ ದೇವೋ ದೇವಾನುಪಾಗಾ

ಇದಮಹಂ ಮನುಷ್ಯೋ ಮನುಷ್ಯಾನ್ತ್ಸಹ ಪ್ರಜಯಾ ಸಹ

ವಃ । ದಭತ್। ಏತತ್। ತ್ವಮ್। ಸೋಮ । ದೇವಃ । ದೇವಾನ್ । ಉಪೇತಿ । ಅಗಾಃ।

*ಇದಮ್। ಅಹಮ್। ಮನುಷ್ಯಃ। ಮನುಷ್ಯಾನ್। ಸಹ। ಪ್ರಜಯೇತಿ ಪ್ರ-ಜಯಾ। ಸಹ।

| ಮಂತ್ರ | ವಿನಿಯೋಗ |
|---|---|
| ಏತತ್ತ್ವಂ.....ರಾಯಸ್ಪೋಷೇಣ। | ಸೋಮೋಪಸ್ಥಾನ ಮಾಡಲು –ಬೌಧಾಯನ. |
| ೧) ಏತತ್ತ್ವಂ....ಉಪಾಗಾಃ। | ಸೋಮೋಪಸ್ಥಾನ ಮಾಡಲು |
| ೨) ಇದಮಹಂ..ರಾಯಸ್ಪೋಷೇಣ। | ಸೋಮನನ್ನು ಪ್ರದಕ್ಷಿಣೆ ಮಾಡಲು–ಆಪ. |

✣ ಸೋಮ = ಎಲೈ ಸೋಮರಾಜನೇ! ತ್ವಮ್ = ನೀನು; ದೇವಃ ಸನ್ = ದೇವನಾಗಿ; *ಏತತ್* = ಈಗ; ದೇವಾನ್ = ಸವಿತ್ರಾದಿದೇವತೆಗಳನ್ನು; ಉಪಾಗಾಃ = ಹೊಂದಿದ್ದೀಯೆ; ಅಹಮ್ = ನಾನೂ (ಕೂಡ); ಮನುಷ್ಯಃ ಸನ್ = ಮನುಷ್ಯನಾಗಿ; ಪ್ರಜಯಾ ಸಹ = ಪುತ್ರಾದಿಪ್ರಜೆಯೊಡನೆ; ರಾಯಃ ಪೋಷೇಣ ಸಹ= ಪಶ್ವಾದಿ ಧನಸಮೃದ್ಧಿಯೊಡನೆಯೂ; *ಇದಮ್* = ಈಗ; ಮನುಷ್ಯಾನ್ = [ನಮ್ಮವರಾದ] ಮನುಷ್ಯರನ್ನು; ಉಪಾಗಾಮ್ = ಹೊಂದಿದೆನು;

ಸವಿತೃಪ್ರಮುಖರಾದ ಸರ್ವದೇವತೆಗಳೇ! ಈ ಸೋಮನು ನಿಮ್ಮವನು. ಇದುವರೆಗೂ ಯಜಮಾನನು ರಕ್ಷಿಸಿದ ಸೋಮನನ್ನು ಇನ್ನು ಮುಂದೆ ನೀವು ರಕ್ಷಿಸಿರಿ. ಹಾಗೆ ಸೋಮನನ್ನು ರಕ್ಷಿಸುತ್ತಿರುವ ನಿಮ್ಮನ್ನು ಯಾರೂ ಹಿಂಸಿಸದಿರಲಿ.

ಎಲೈ ಸೋಮನೇ! ದೇವತೆಗಳಿಗೆ ರಕ್ಷಣಾರ್ಥವಾಗಿ ನಿನ್ನನ್ನು ಒಪ್ಪಿಸಿದುದರಿಂದ ದೇವನಾದ ನೀನು ದೇವತೆಗಳನ್ನು ಈಗ ಸೇರಿಕೊಂಡಂತಾಯಿತು. ನಾನೂ ಈಗ ಪುತ್ರಾದಿ

**ಏತತ್ ಮತ್ತು ಇದಮ್ ಇವುಗಳು ಸಪ್ತಮೀವಿಭಕ್ತಿಯನ್ನು ಹೊಂದಿರುವಾಗ ಕೊಡುವ ಅರ್ಥವನ್ನು ಕೊಡುತ್ತವೆ. ಸಪ್ತಮಿಯು ಲುಪ್ತ. ಪ್ರಥಮಾವಿಭಕ್ತಿಯು ಇದೆ.

ರಾಯಸ್ಪೋಷೇಣ ನಮೋ ದೇವೇಭ್ಯಃ ಸ್ವಧಾ ಪಿತೃಭ್ಯ ಇದಮಹಂ ನಿರ್ವರುಣಸ್ಯ ಪಾಶಾತ್ಸುವರಭಿ (೨)ವಿ ಖ್ಯೇಷಂ

---

ರಾಯಃ । ಪೋಷೇಣ*। ನಮಃ । ದೇವೇಭ್ಯಃ । ಸ್ವಧೇತಿ ಸ್ವ-ಧಾ । ಪಿತೃಭ್ಯ ಇತಿ ಪಿತೃ-ಭ್ಯಃ । ಇದಮ್ । ಅಹಮ್ । ನಿರಿತಿ । ವರುಣಸ್ಯ । ಪಾಶಾತ್ । ಸುವಃ । ಅಭಿ । (೨) ವೀತಿ । ಖ್ಯೇಷಮ್ ।

---



| ಮಂತ್ರ | ವಿನಿಯೋಗ |
|---|---|
| ನಮೋ ದೇವೇಭ್ಯಃ । | ಪೂರ್ವದಿಕ್ಕಿಗೆ ತಿರುಗಿ ದೇವತೆಗಳಿಗಾಗಿ ಕೈ ಜೋಡಿಸಲು |
| ಸ್ವಧಾ ಪಿತೃಭ್ಯಃ । | ನೈರ್ಋತ್ಯ ಅಥವಾ ದಕ್ಷಿಣದಿಕ್ಕಿಗೆ ತಿರುಗಿ ಪಿತೃಗಳಿಗೆ ಕೈ ಜೋಡಿಸಲು. |
| ಇದಮಹಂ...ಪಾಶಾತ್ । | ಆ ಪ್ರದೇಶದಿಂದ ಅಧ್ವರ್ಯುವು ಹೊರಡುವಾಗ ಹೇಳಲು. |

---

✣ ದೇವೇಭ್ಯಃ ನಮಃ ಅಸ್ತು = ದೇವತೆಗಳಿಗೆ ನಮಸ್ಕಾರವು ಆಗಲಿ. ✣ ಪಿತೃಭ್ಯಃ ಸ್ವಧಾ ಅಸ್ತು = ಪಿತೃಗಳಿಗೆ ಸ್ವಧೆಯಾಗಲಿ; ✣ ಅಹಮ್ = ನಾನು; ವರುಣಸ್ಯ ಪಾಶಾತ್ = ವರುಣನ ಪಾಶದ ದೆಸೆಯಿಂದ [ಬಂಧನದಿಂದ] ಇದಮ್ = ಇದೋ! [ಈಗ] ನಿರ್ ಮುಂಚಾಮಿ = [ನಿರ್ಗಚ್ಛಾಮಿ] =ಮುಕ್ತನಾಗುತ್ತೇನೆ. ಹೊರಹೋಗುತ್ತೇನೆ.

---

ಪ್ರಜೆಗಳೊಡನೆಯೂ, ಪಶ್ವಾದಿಧನಸಂಪತ್ತಿನೊಡನೆಯೂ, ನಿನ್ನ ಅನುಗ್ರಹದಿಂದ ನಮ್ಮವರಾದ ಮನುಷ್ಯರನ್ನು ಸೇರಿಕೊಂಡೆನು. ★ ಇದೋ! ದೇವತೆಗಳಿಗೆ ನಮಸ್ಕಾರ. ★ ಪಿತೃಗಳಿಗೆ ಸ್ವಧೆಯಾಗಲಿ.* ★ ನಾನು [ಅಧ್ವರ್ಯುವು] ಇದೋ! ಯಾಗಶಾಲೆಯಿಂದ ಹೊರಹೋಗುತ್ತಾ ವರುಣಪಾಶದಿಂದ ಮುಕ್ತನಾಗುತ್ತೇನೆ.

---

*ಪಿತೃಗಳಿಗೆ ಕೊಡುವುದನ್ನು ಸ್ವಧಾಕಾರದಿಂದ ಕೊಡಬೇಕು. 'ಸ್ವಧಾಕಾರೋ ಹಿ ಪಿತೄಣಾಮ್' ।

ವೈಶ್ವಾನರಂ ಜ್ಯೋತಿರಗ್ನೇ ವ್ರತಪತೇ ತ್ವಂ ವ್ರತಾನಾಂ ವ್ರತ

ಪತಿರಸಿ ಯಾ ಮಮ ತನೂಸ್ತ್ವಯ್ಯಭೂದಿಯಗ್ಂ ಸಾಮಯಿ

---

*ವೈಶ್ವಾನರಮ್ । ಜ್ಯೋತಿಃ *। ಅಗ್ನೇ । ವ್ರತಪತ ಇತಿ ವ್ರತ - ಪತೇ । ತ್ವಮ್ ।

ವ್ರತಾನಾಮ್ । ವ್ರತಪತಿರಿತಿ ವ್ರತ-ಪತಿಃ । ಅಸಿ । ಯಾ । ಮಮ । ತನೂಃ । ತ್ವಯಿ।

ಅಭೂತ್ । ಇಯಮ್ । ಸಾ । ಮಯಿ ।

---

| ಮಂತ್ರ | ವಿನಿಯೋಗ |
| --- | --- |
| ಸುವರಭಿ......ಜ್ಯೋತಿಃ । | ಆಹವನೀಯದ ಉಪಸ್ಥಾನ ಮಾಡಲು –ಬೌಧಾಯನ |
| ೧) ಸುವರಭಿ ವಿಖ್ಯೇಷಮ್ । | ಯಾಗಶಾಲೆಯನ್ನು ವೀಕ್ಷಿಸಲು |
| ೨) ವೈಶ್ವಾನರಂ ಜ್ಯೋತಿಃ । | ಆಹವನೀಯವನ್ನು ಅನುವೀಕ್ಷಿಸಲು –ಆಪಸ್ತಂಬ |
| ಅಗ್ನೇ.....ವ್ರತಾನಿ । | ಅವಾಂತರದೀಕ್ಷೆಯ ವಿಸರ್ಜನೆಗಾಗಿ. |

---

❖ ಸುವಃ = ಸ್ವರ್ಗಸಾಧನನಾದ; ಜ್ಯೋತಿಃ = ಜ್ಯೋತೀರೂಪನಾದ; ವೈಶ್ವಾನರಮ್ = ವೈಶ್ವಾನರನನ್ನು [ಆಹವನೀಯವನ್ನು] ಅಭಿ ವಿಖ್ಯೇಷಮ್ = ಎದುರಿನಲ್ಲಿ ನೋಡುತ್ತೇನೆ; ಸುವಃ = [ಸ್ವರ್ಗಸಾಧನವಾದುದರಿಂದ ಸ್ವರ್ಗಸದೃಶವಾದ] ಸರ್ವ ಯಾಗಪ್ರದೇಶವನ್ನೂ; ಅಭಿ ವಿಖ್ಯೇಷಮ್ = ಸುತ್ತಲೂ ವಿಶೇಷವಾಗಿ ನೋಡುತ್ತೇನೆ; ವೈಶ್ವಾನರಂ ಜ್ಯೋತಿಃ = ಸ್ವರ್ಗಪ್ರಕಾಶಕಜ್ಯೋತಿಸ್ಸ್ವರೂಪನಾದ ಆಹವನೀಯಾಗ್ನಿಯನ್ನು; ಅಭಿ ವಿಖ್ಯೇಷಮ್ = ಎದುರಿನಲ್ಲಿ ವಿಶೇಷವಾಗಿ ನೋಡುತ್ತೇನೆ. ❖ ಅಗ್ನೇ ವ್ರತಪತೇ=ವ್ರತರಕ್ಷಕನಾದ ಅಗ್ನಿದೇವನೇ! ತ್ವಮ್ = ನೀನು; ವ್ರತಾನಾಮ್ = ಎಲ್ಲ

---

ಸ್ವರ್ಗಸಾಧನನಾದ ಜ್ಯೋತೀರೂಪನಾದ ಆಹವನೀಯನನ್ನು ಎದುರಿನಲ್ಲಿ ನೋಡುತ್ತೇನೆ.

## ಯಾ ತವ ತನೂರ್ಮಯ್ಯಭೂದೇಷಾ ಸಾ ತ್ವಯಿ ಯಥಾ

## ಯಥಂ ನೌ ವ್ರತಪತೇ ವ್ರತಿನೋರ್ವ್ರತಾನಿ ॥ ೪ - 8 ॥

[ಗಾತುವಿದಭ್ಯೇಕತ್ರಿಗ್ಂಶಚ್ಚ ॥]

---

ಯಾ । ತವ । ತನೂಃ । ಮಯಿ । ಅಭೂತ್ । ಏಷಾ । ಸಾ । ತ್ವಯಿ । ಯಥಾಯಥಮಿತಿ ಯಥಾ-ಯಥಮ್ । ನೌ । ವ್ರತಪತ ಇತಿ ವ್ರತ-ಪತೇ । ವ್ರತಿನೋಃ । ವ್ರತಾನಿ ॥೪॥

---

ವ್ರತಗಳಿಗೂ; ವ್ರತಪತಿಃ ಅಸಿ = ವ್ರತಪತಿಯಾಗಿರುತ್ತೀಯೆ; ಯಾ ಮಮ ತನೂಃ = ಯಾವ ನನ್ನ ಶರೀರವು; ತ್ವಯಿ ಅಭೂತ್ = [ವ್ರತದ ಆರಂಭದಲ್ಲಿ] ನಿನ್ನಲ್ಲಿ ಇಡಲ್ಪಟ್ಟಿತೋ; ಸಾ ಇಯಂ ಮಯಿ = ಆ ಈ [ ಶರೀರವು] [ಮತ್ತೆ] ನನ್ನಲ್ಲಿ [ಇಡಲ್ಪಡಲಿ]. ಯಾ ತವ ತನೂಃ = ಯಾವ ನಿನ್ನ ಶರೀರವು ಮಯಿ ಅಭೂತ್ = ನನ್ನಲ್ಲಿ ಮೊದಲು ಇಡಲ್ಪಟ್ಟಿತೋ; ಸಾ ಏಷಾ ತ್ವಯಿ = ಆ ಈ [ದೇಹವು] ನಿನ್ನಲ್ಲಿ [ಇಡಲ್ಪಡಲಿ.] ವ್ರತಪತೇ = ವ್ರತಸ್ವಾಮಿಯಾದ [ಅಗ್ನಿದೇವನೇ!] ವ್ರತಿನೋಃ ನೌ = ವ್ರತವನ್ನು ಕೈಗೊಂಡಿದ್ದ ನಮ್ಮಿಬ್ಬರ; ವ್ರತಾನಿ = ವ್ರತಗಳು; ಯಥಾಯಥಮ್ [ಭವಂತು] = [ವ್ರತಗ್ರಹಕ್ಕೆ] ಮೊದಲಿನಂತೆಯೇ ಇರಲಿ.

---

ಸ್ವರ್ಗಸಾಧನವಾಗಿ ಸ್ವರ್ಗಸದೃಶವಾದ ಯಾಗಪ್ರದೇಶವನ್ನೂ, ಸ್ವರ್ಗಪ್ರಕಾಶಕ ಜ್ಯೋತಿಃಸ್ವರೂಪನಾದ ಆಹವನೀಯಾಗ್ನಿಯನ್ನು ಎದುರಿನಲ್ಲಿ ನೋಡುತ್ತೇನೆ.

ಅವಾಂತರದೀಕ್ಷಾಗ್ರಹಣಸಮಯದಲ್ಲಿ ಯಜಮಾನನು ತನ್ನ ಶರೀರವನ್ನು ಅಗ್ನಿಯಲ್ಲಿಯೂ, ಅಗ್ನಿಯ ಶರೀರವನ್ನು ತನ್ನಲ್ಲಿಯೂ ಇರುವಂತೆ ಪ್ರಾರ್ಥಿಸಿ ಕೊಂಡಿದ್ದನು. ಈಗ ಮೊದಲಿನಂತೆ ಇರಬೇಕೆಂದು ಪ್ರಾರ್ಥಿಸುತ್ತಾನೆ ;

ಎಲೈ ವ್ರತಪತಿಯಾದ ಅಗ್ನಿದೇವನೇ! ನೀನು ಎಲ್ಲಾ ವ್ರತಗಳಿಗೂ ವ್ರತಪತಿಯಾಗಿರುವೆ. ವ್ರತಗ್ರಹಣಕಾಲದಲ್ಲಿ ನಿನ್ನಲ್ಲಿಟ್ಟಿದ್ದ ನನ್ನ ತನುವು ಈಗ ನನ್ನಲ್ಲಿಯೇ ಇರಲಿ. ಮೊದಲು ನನ್ನಲ್ಲಿದ್ದ ನಿನ್ನ ದೇಹವು ಈಗ ಮತ್ತೆ ನಿನ್ನಲ್ಲಿಯೇ ಇರಲಿ. ವ್ರತಗಳನ್ನು ಕೈಗೊಂಡಿದ್ದ ನಮ್ಮಿಬ್ಬರ ವ್ರತಗಳು ಮೊದಲಿನಂತೆಯೇ ಇರಲಿ.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

## ವಿನಿಯೋಗ ಸಂಗ್ರಹ

ತ್ವಂ[1] ಜುಷಾ[2] ಪಶ್ಚಿಮೇ ವಹ್ನೌ ವೈಸರ್ಜನಹುತಿಸ್ತ್ವಯಮ್[3]
ಶಾಲಾಮುಖೀಯತೋ ವಹ್ನಿಂ ಧೃತ್ವಾ ಪ್ರಾಂಚೋऽಭಿಯಾಂತಿ ಹಿ ॥
ಉರು[4] ಹುತ್ವಾ ಪೂರ್ವವಹ್ನೌ ಸೋಮೋ[5] ರಾಜಾನಮಗ್ರತಃ ।
ಹವಿರ್ಧಾನಂ ನಯತ್ಯತ್ರ ಚರ್ಮ ಸಂಸ್ತೀರ್ಯ ಸಾದಯೇತ್ ॥
ಅದಿದ್ವಯಾ[6-7]ದೇಷ[8] ಸೋಮಂ ನಿರ್ದಿಶ್ಯೈತ[9]ನ್ನಿಮಂತ್ರಯೇತ್ ।
ಇದಂ[10] ದಕ್ಷಿಣಮಾವೃತ್ಯ ನಮಃ[11] ಪ್ರಾಗಂಜಲಿಃ ಸ್ವಧಾ[12] ॥
ದಕ್ಷಿಣಾಂಜಲಿರೇತಸ್ಮಾತ್ ನಿರ್ಗಚ್ಛೇನ್ಮಂಡಪಾದಿದಮ್[13] ।
ಸುವ[14]ರ್ವಿಹಾರಮೀಕ್ಷಿತ್ವಾ ವೈಶ್ವಾ[15] ಪೂರ್ವಾಗ್ನಿಮೀಕ್ಷತೇ ॥
ಅಗ್ನೇ[16] ವಹ್ನೇರುಪಸ್ಥಾನಂ ಮಂತ್ರಾಃ ಷೋಡಶ ಕೀರ್ತಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ - 14

ಆಪಸ್ತಂಬ - 16



### ಅನುವಾಕಧ ವಿಶೇಷ ವಿಷಯಗಳು

ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

**೧) ತ್ವಗ್ಂ ಸೋಮ......।** ತನೂಕೃತ್ = ಶರೀರಸ್ಯ ಉತ್ಪಾದಯಿತಾ/ತನೂಕೃತಃ ಅನುಪ್ರವಿಶ್ಯ ಸ್ಥಿತೋऽಸಿ = ಶರೀರವನ್ನು ಉಂಟುಮಾಡುವವನು. ಶರೀರಕೃತ್‌ಗಳಲ್ಲಿ ಅಗ್ನಿಯೂ ಒಬ್ಬನು.

ವರೂಥಮ್ = ಗೃಹಮ್/ಧನಮ್ ವಾ = ಮನೆ ಅಥವಾ ಹಣ (ಹಣವನ್ನು ಕೊಡತಕ್ಕ ಅಗ್ನಿ)

**೨) ಜುಷಾಣಃ.... ।** ೧) ಅಪ್ತುಃ - ಅಪ್ತುಮ್ = ಆಜ್ಯಬಿಂದುವನ್ನು; ವೇತು = ಕುಡಿಯಲಿ.

೨) ಅಪ್ತುಃ = ಆಪ್ತವ್ಯಃ ಸೋಮಃ ಆಜ್ಯಸ್ಯ ವೇತು = ಹೊಂದಬೇಕಾದ ಸೋಮನು ಆಜ್ಯವನ್ನು ಕುಡಿಯಲಿ.

**೩) ಅಯಂ ನೋ......।** ವರಿವಃ ಕೃಣೋತು = ಅಭೀಷ್ಟಾನಿ ಧನಾನಿ ದದಾತು

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

= ಇಷ್ಟವಾದ ಪಶ್ವಾದಿಧನಗಳನ್ನು ಕೊಡಲಿ; ಮೃಧಃ = ಸಂಗ್ರಾಮಾನ್ = ಯುದ್ಧಗಳನ್ನು;

೧೩) ಇದಮಹಂ......... ॥ ವರುಣಸ್ಯ ಪಾಶಾತ್ ನಿಃ ಗಚ್ಛಾಮಿ = ವರುಣ ಪಾಶದ ದೆಸೆಯಿಂದ ಹೊರಕ್ಕೆ ಹೋಗುತ್ತೇನೆ.

॥

೧೬) ಅಗ್ನೇ.......। ಸರ್ವತ್ರ ಪ್ರಾಯೇಣ ಅಸ್ಮದ್ವಿಷಯಃ ಇದಂಶಬ್ದಃ । ಯುಷ್ಮದ್ವಿಷಯಃ ಏತಚ್ಛಬ್ದಃ । ಯಥಾ ಇಯಂ ಸಾ ಮಯಿ । ಏಷಾ ಸಾ ತ್ವಯಿ। = ಇದಂ ಶಬ್ದವು ಸಾಮಾನ್ಯವಾಗಿ ನನ್ನದು ಎಂಬ ವಸ್ತುವನ್ನು ತಿಳಿಸುತ್ತದೆ. 'ಇದಮ್' ಮತ್ತು 'ಏತತ್' ಈ ಎರಡು ಪ್ರಾತಿಪದಿಕಗಳಿಗೂ 'ಇದು' ಎಂಬ ಅರ್ಥವೇ ಆದರೂ 'ಇದಂ' ಎಂಬುದನ್ನು 'ಅಸ್ಮತ್' ಎಂಬ ಪ್ರಾತಿಪದಿಕದೊಡನೆಯೂ 'ಏತತ್' ಎಂಬುದನ್ನು 'ಯುಷ್ಮತ್' ಎಂಬ ಪ್ರಾತಿಪದಿಕದೊಡನೆಯೂ ಬಳಸಲಾಗುತ್ತದೆ. 'ಇಯಂ ಸಾ ಮಯಿ' 'ಏಷಾ ಸಾ ತ್ವಯಿ' ಎಂದು ಶ್ರುತಿಯಿದೆ.

॥

೧೬) ಅಗ್ನೇ............. ॥ ಯಥಾಯಥಂ ವ್ರತಾನಿ = ಮದೀಯಾನಿ ಮಮೈವ ಸಂತು; ತ್ವದೀಯಾನಿ ತವೈವ ಸಂತು = ನನ್ನ ವ್ರತಗಳು ನನಗೇ ಇರಲಿ; ನಿನ್ನ ವ್ರತಗಳು ನಿನಗೇ ಆಗಲಿ.



## ಆ) ಮೀಮಾಂಸಾ

**ವೈಸರ್ಜನಸ್ಮೃತಿಗೆ ಪ್ರಾಮಾಣ್ಯವಿದೆಯೇ? [ಜೈ.ಸೂ. 1-3]**

ಸ್ಮೃತಿಯಲ್ಲಿ 'ವೈಸರ್ಜನಹೋಮವಾಸೋಽಧ್ವರ್ಯುರ್ಗೃಹ್ಣಾತಿ' [ವೈಸರ್ಜನ ಹೋಮದ ಬಟ್ಟೆಯನ್ನು ಅಧ್ವರ್ಯುವು ತೆಗೆದುಕೊಳ್ಳುತ್ತಾನೆ] ಎಂದಿದೆ. ಸ್ಮೃತಿಗಳಿಗೆ ಮೂಲಭೂತವಾದ ಶ್ರುತಿಗಳನ್ನು ಕಲ್ಪನೆ ಮಾಡಿ ಆ ಶ್ರುತಿಗಳ ಮೂಲಕವಾಗಿ ಪ್ರಾಮಾಣ್ಯವು ಹೇಳಲ್ಪಟ್ಟಿದೆ. ಹೀಗಿರುವಾಗ ಈ ವೈಸರ್ಜನಸ್ಮೃತಿಗೆ ಪ್ರಾಮಾಣ್ಯ ವಿದೆಯೇ? ಎಂಬುದು ಇಲ್ಲಿನ ಸಂಶಯ.

ಸ್ಮೃತಿಯು ಅಪ್ರಮಾಣವಾಗಬೇಕಾದರೆ ಪ್ರತ್ಯಕ್ಷಶ್ರುತಿವಿರೋಧವಿರಬೇಕು. ಈ ವೈಸರ್ಜನಸ್ಮೃತಿಗೆ ವಿರುದ್ಧವಾದ ಶ್ರುತಿಯು ಇಲ್ಲದಿರುವುದರಿಂದ ಮೂಲಭೂತವಾದ ಶ್ರುತಿಕಲ್ಪನೆ ಮಾಡಿ, ಅದರ ಮೂಲಕ ಇದು ಪ್ರಮಾಣವಾಗುತ್ತದೆಯೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ— ಈ ಸ್ಮೃತಿಗೆ ಮೂಲವು ಯಾವುದೆಂದು ವಿಚಾರಿಸುವಾಗ ಅಧ್ವರ್ಯುವಿನ ವಸ್ತ್ರಲೋಭವೂ ಈ ಸ್ಮೃತಿವಾಕ್ಯಕ್ಕೆ ಕಾರಣವಾಗಿರಬಹುದು. ಹಾಗೆ ಪ್ರತ್ಯಕ್ಷವಾದ ಲೋಭವೇ ಮೂಲವಾಗಿರುವಾಗ ಅದೃಷ್ಟವಾದ ಶ್ರುತಿಯನ್ನು ಕಲ್ಪಿಸಬೇಕಾಗಿಲ್ಲ. ಆದುದರಿಂದ ಈ ಸ್ಮೃತಿಯು ಪ್ರಮಾಣವಾಗಲಾರದು. ಇದಕ್ಕೆ ಉಪೋದ್ಬಲಕವಾದ ಶ್ರುತಿವಾಕ್ಯವಿದ್ದರೆ ಪ್ರಮಾಣವಾಗಬಹುದು.

### ಇ) ಛಂದಸ್ಸು

೧. ತ್ವಗ್ಂ ಸೋಮ.......... ಸ್ವಾಹಾ । ಗಾಯತ್ರೀ<br>ಯಜುರಂತಾ ತ್ರಿಪದಾ ಗಾಯತ್ರೀ<br>(ಭ.ಭಾ.ಭಾ.)



೨. ಅಯಂ ನೋ.........ವಾಜಸಾತೌ । ಚತುಷ್ಪದಾ ತ್ರಿಷ್ಟುಪ್

೩. ಜುಷಾಣೋ.........ಸ್ವಾಹಾ । ಯಜುರಂತಾ ಏಕಪದಾ ವಿರಾಟ್(ಭ.ಭಾ.)

೪. ಉರು ವಿಷ್ಣೋ.......ಕರ । ಅನುಷ್ಟುಪ್

೫. ಸೋಮೋ ಜಿಗಾತಿ......ಸದನಮ್ ।। ಗಾಯತ್ರೀ

## ॥ ಪಂಚಮೋಽನುವಾಕಃ ॥

**ಅತ್ಯನ್ಯಾನಗಾಂ ನಾನ್ಯಾನುಪಾಗಾಮರ್ವಾಕ್ತ್ವಾ ಪರ್ಯೈರವಿದಂ**

---

**ಅತೀತಿ । ಅನ್ಯಾನ್ । ಅಗಾಮ್ । ನ । ಅನ್ಯಾನ್ । ಉಪೇತಿ । ಅಗಾಮ್ । ಅರ್ವಾಕ್ । ತ್ವಾ । ಪರ್ಯೈಃ । ಅವಿದಮ್ ।**

---

ನಾಲ್ಕನೆಯ ಅನುವಾಕದಲ್ಲಿ ವ್ರಸರ್ಜನಹೋಮ, ಅವಾಂತರದೀಕ್ಷಾವಿಸರ್ಜನ, ಅಗ್ನೀಷೋಮಪ್ರಣಯನಗಳು ಹೇಳಲ್ಪಟ್ಟವು. ಈ ಅನುವಾಕದಿಂದ ಆರಂಭಿಸಿ ಏಳು ಅನುವಾಕಗಳಲ್ಲಿ ಅಗ್ನೀಷೋಮಪಶುವು ಹೇಳಲ್ಪಟ್ಟಿದೆ. ಈ ಐದನೆಯ ಅನುವಾಕದಲ್ಲಿ ಪಶ್ವಂಗವಾದ ಯೂಪದ ಛೇದನವು ಹೇಳಲ್ಪಟ್ಟಿದೆ.



| ಮಂತ್ರ | ವಿನಿಯೋಗ |
|---|---|
| **ಅತ್ಯನ್ಯಾನಗಾಂ....ದೇವಯಜ್ಯಾಯೈ ॥** | ಛೇದನ ಮಾಡುವ ವೃಕ್ಷದ ಉಪಸ್ಥಾನ ಮಾಡಲು-ಬೌಧಾಯನ. |
| **೧) ಅತ್ಯನ್ಯಾನಗಾಂ....ಪರೋಽವರ್ಯೈಃ ।** | ಛೇದನ ಮಾಡುವ ವೃಕ್ಷದ ಅಭಿಮಂತ್ರಣ ಮಾಡಲು. |

---

ಎಲೈ ವೃಕ್ಷವೇ! **ಅನ್ಯಾನ್** = ಬೇರೆ ಕೆಲವು ಯೂಪ್ಯವಾದರೂ (ಯೂಪಾರ್ಹವಾದರೂ) ಲಕ್ಷಣರಹಿತವಾದ ವೃಕ್ಷಗಳನ್ನು; **ಅತಿ ಅಗಾಮ್** = ಅತಿಕ್ರಮಿಸಿ ಬಂದೆನು; **ಅನ್ಯಾನ್** = ಬೇರೆ ಕೆಲವು ಯೂಪಕ್ಕೆ ತಕ್ಕದಲ್ಲದ ವೃಕ್ಷಗಳನ್ನು; **ನ ಉಪಾಗಾಮ್** = ಸಮೀಪಿಸಿ ಹೋಗಲೇ ಇಲ್ಲ, **ಪರ್ಯೈಃ ಅರ್ವಾಕ್** = ಉತ್ಕೃಷ್ಟಲಕ್ಷಣಗಳಿಂದ ಯುಕ್ತ-

---

ಪಲಾಶಖದಿರಾದಿಗಳು ಯೂಪವಾಗಲು ತಕ್ಕ ಮರಗಳು. ಬೇವು, ನಿಂಬೆ ಮೊದಲಾದ ಮರಗಳು ಯೂಪಕ್ಕೆ ತಕ್ಕ ಮರಗಳಲ್ಲ. ಎಲೈ! ವೃಕ್ಷವೇ! ನಾನು ಯೂಪಯೋಗ್ಯವಾದರೂ ಲಕ್ಷಣಗಳಿಲ್ಲದ ಕೆಲವು ವೃಕ್ಷಗಳನ್ನು ಅತಿಕ್ರಮಿಸಿ ಬಂದಿದ್ದೇನೆ.

**ಪರೋಽವರ್ಯೈಸ್ತಂ ತ್ವಾ ಜುಷೇ ವೈಷ್ಣವಂ ದೇವಯಜ್ಯಾಯೈ**

**ದೇವಸ್ತ್ವಾ ಸವಿತಾ ಮಧ್ವಾನಕ್ತ್ವೋಷಧೇ ತ್ರಾಯಸ್ವೈನಗ್ಂ**

---

ಪರಃ । ಅವರ್ಯೈಃ।* ತಮ್। ತ್ವಾ। ಜುಷೇ। ವೈಷ್ಣವಮ್। ದೇವಯಜ್ಯಾಯಾ ಇತಿ ದೇವ-ಯಜ್ಯಾಯೈ*। ದೇವಃ। ತ್ವಾ। ಸವಿತಾ। ಮಧ್ವಾ। ಅನಕ್ತು । ಓಷಧೇ । ತ್ರಾಯಸ್ವ। ಏನಮ್।

---

| ಮಂತ್ರ | ವಿನಿಯೋಗ |
|---|---|
| ೧) ತಂ ತ್ವಾ....ಯಜ್ಯಾಯೈ । | ವೃಕ್ಷವನ್ನು ಸ್ಪರ್ಶಿಸಲು –ಆಪಸ್ತಂಬ. |
| ದೇವಃ..............ಅನಕ್ತು । | ಯೂಪವೃಕ್ಷಕ್ಕೆ ಬುಡದ ಸುತ್ತಲೂ ಸ್ರುವದಿಂದ ಆಜ್ಯವನ್ನು ಸುರಿಸಲು. |
| ಓಷಧೇ......ಏನಮ್ । | ಊರ್ಧ್ವಾಗ್ರವಾದ ಎರಡು ದರ್ಭೆಗಳನ್ನು ಕಡಿಯುವ ಸ್ಥಳದಲ್ಲಿ ಇಡಲು. |

---

ವಾಗಿರುವ; **ಅವರ್ಯೈಃ ಪರಃ** = ಹೀನಲಕ್ಷಣಗಳಿಂದ ದೂರನಾಗಿರುವ; **ತ್ವಾ** = ನಿನ್ನನ್ನು; **ಅವಿದಮ್** = ಹೊಂದಿದೆನು; **ತಮ್** = ಅಂತಹ ಲಕ್ಷಣಸಂಪನ್ನನಾದ; **ವೈಷ್ಣವಮ್** = ವಿಷ್ಣುದೇವತಾಕನಾದ; **ತ್ವಾ** = ನಿನ್ನನ್ನು; **ದೇವಯಜ್ಯಾಯೈ** = ದೇವತೆಗಳ ಯಾಗಕ್ಕೋಸ್ಕರ; **ಜುಷೇ** = ಸೇವಿಸುತ್ತೇನೆ (ತೆಗೆದುಕೊಳ್ಳುತ್ತೇನೆ.); ✣ [ಎಲೈ ವೃಕ್ಷವೇ] **ತ್ವಾ** = ನಿನ್ನನ್ನು; **ದೇವಃ ಸವಿತಾ** = ಸರ್ವಪ್ರೇರಕನಾದ ಸವಿತೃದೇವನು; **ಮಧ್ವಾ** = ಮಧುರವಾದ ಆಜ್ಯದಿಂದ; **ಅನಕ್ತು** = ಲೇಪಿಸಲಿ (ಬಳಿಯಲಿ) ✣ **ಓಷಧೇ** = ಎಲೈ! ಓಷಧಿರೂಪವಾದ[ದರ್ಭದ್ವಯವೇ!] **ಏನಮ್** = ಈ [ವೃಕ್ಷವನ್ನು]; **ತ್ರಾಯಸ್ವ** = ರಕ್ಷಿಸು; [ಯಾಗಸಾಧನವಾಗುವುದರಿಂದ ಉತ್ತಮವಾದ ಗತಿಯನ್ನು ಹೊಂದಿಸು]

---

ಯೂಪಾರ್ಹವಲ್ಲದ ವೃಕ್ಷಗಳ ಬಳಿಗೆ ಹೋಗಲೇ ಇಲ್ಲ. ಈಗ ಶ್ರೇಷ್ಠಲಕ್ಷಣಗಳಿಂದ ತುಂಬಿರುವ, ಅವಲಕ್ಷಣಗಳಿಲ್ಲದ ನಿನ್ನನ್ನು ಹೊಂದಿದ್ದೇನೆ. ಹೀಗೆ ಲಕ್ಷಣಸಂಪನ್ನನಾದ,

**ಸ್ವಧಿತೇ ಮೈನಗ್ಂ ಹಿಗ್ಂಸೀರ್ದಿವಮಗ್ರೇಣ ಮಾ ಲೇಖೀರಂತರಿಕ್ಷಂ ಮಧ್ಯೇನ ಮಾ ಹಿಗ್ಂಸೀಃ ಪೃಥಿವ್ಯಾ ಸಂಭವ**

---

ಸ್ವಧಿತ ಇತಿ ಸ್ವ-ಧಿತೇ । ಮಾ । ಏನಮ್ । ಹಿಗ್ಂಸೀಃ । ದಿವಮ್। ಅಗ್ರೇಣ । ಮಾ। ಲೇಖೀಃ । ಅಂತರಿಕ್ಷಮ್। ಮಧ್ಯೇನ। ಮಾ । ಹಿಗ್ಂಸೀಃ । ಪೃಥಿವ್ಯಾ । ಸಮಿತಿ ಭವ।

---

| ಮಂತ್ರ | ವಿನಿಯೋಗ |
|---|---|
| ಸ್ವಧಿತೇ.......ಹಿಗ್ಂಸೀಃ । | ಸ್ವಧಿತಿ(ಆಯುಧ)ಯಿಂದ ಅಡ್ಡಲಾಗಿ ಹೊಡೆಯಲು |
| ದಿವಮ್ .......ಸಂಭವ । | ಬೀಳುತ್ತಿರುವ ಮರವನ್ನು ಅಭಿಮಂತ್ರಿಸಲು |

---

❖ ಸ್ವಧಿತೇ = [ಎಲೈ! ಛೇದನಸಾಧನವಾದ] ಸ್ವಧಿತಿಯೇ! ಏನಮ್ = ಈ ವೃಕ್ಷವನ್ನು; ಮಾ ಹಿಗ್ಂಸೀಃ= ಹಿಂಸಿಸಬೇಡ; [ಇದಕ್ಕೆ ಉತ್ತಮವಾದ ಗತಿಯನ್ನು ಹೊಂದಿಸು] ❖[ಎಲೈ! ಬೀಳುತ್ತಿರುವ ವೃಕ್ಷವೇ! ನೀನು] ಅಗ್ರೇಣ = ತುದಿಯ ಭಾಗದಿಂದ; ದಿವಮ್ = ದ್ಯುಲೋಕವನ್ನು; ಮಾ ಲೇಖೀಃ = ಸೀಳಬೇಡ, ಮಧ್ಯೇನ = ಮಧ್ಯಭಾಗದಿಂದ; ಅಂತರಿಕ್ಷಮ್ = ಆಕಾಶವನ್ನು; ಮಾ ಹಿಗ್ಂಸೀಃ = ಹಿಂಸಿಸಬೇಡ; ಪೃಥಿವ್ಯಾ = [ಸಹ] = ಭೂಮಿಯೊಡನೆ; ಸಂಭವ = ಸೇರಿ, ಇರು.

---

*ವಿಷ್ಣುದೇವತಾಕನಾದ ನಿನ್ನನ್ನು ದೇವತೆಗಳ ಯಾಗಕ್ಕೋಸ್ಕರ ತೆಗೆದುಕೊಳ್ಳುತ್ತೇನೆ.

ಎಲೈ ವೃಕ್ಷವೇ! ಸರ್ವಪ್ರೇರಕನಾದ ಸವಿತೃದೇವನು ನಿನ್ನನ್ನು ಮಧುರವಾದ ಆಜ್ಯದಿಂದ ಲೇಪಿಸಲಿ. ★ ಎಲೈ! ಓಷಧಿರೂಪವಾದ ದರ್ಭದ್ವಯವೇ! ಈ ವೃಕ್ಷವನ್ನು ರಕ್ಷಿಸು. ಉತ್ತಮವಾದ ಗತಿಯನ್ನು ಹೊಂದಿಸು.

ಎಲೈ ಕತ್ತರಿಸುವ ಸಾಧನವಾದ ಸ್ವಧಿತಿಯೇ! ಈ ವೃಕ್ಷವನ್ನು ಹಿಂಸಿಸಬೇಡ. ಉತ್ತಮವಾದ ಗತಿಯನ್ನು ದೊರಕಿಸು. ★ ಕತ್ತರಿಸಲ್ಪಟ್ಟು ಬೀಳುತ್ತಿರುವ ಎಲೈ! ಯೂಪ ವೃಕ್ಷವೇ! ನೀನು ಅಗ್ರಭಾಗದಿಂದ ದ್ಯುಲೋಕವನ್ನು ಸೀಳಬೇಡ. ಮಧ್ಯಭಾಗದಿಂದ

---

*ಯೂಪವು ವಿಷ್ಣುದೇವತಾಕವಾದದು. 'ವೈಷ್ಣವೋ ವೈ ದೇವತಯಾ ಯೂಪಃ' ।

## ವನಸ್ಪತೇ ಶತವಲ್ಶೋ ವಿರೋಹ ಸಹಸ್ರವಲ್ಶಾ ವಿ ವಯಗ್ಂ ರುಹೇಮ

ವನಸ್ಪತೇ । ಶತವಲ್ಶ ಇತಿ ಶತ-ವಲ್ ಶಃ । ವೀತಿ । ರೋಹ । ಸಹಸ್ರವಲ್ಶಾ ಇತಿ ಸಹಸ್ರ-ವಲ್ಶಾಃ । ವೀತಿ । ವಯಮ್ । ರುಹೇಮ ।

| ಮಂತ್ರ | ವಿನಿಯೋಗ |
|---|---|
| ವನಸ್ಪತೇ.......ವಿರೋಹ । | ಮರವನ್ನು ಕತ್ತರಿಸಿರುವ ಸ್ಥಳದಲ್ಲಿ ಹಿರಣ್ಯವನ್ನಿಟ್ಟು ಹೋಮ ಮಾಡಲು. |
| ಸಹಸ್ರ........ರುಹೇಮ । | ಆತ್ಮಾಭಿಮರ್ಶನ (ತನ್ನನ್ನು ಮುಟ್ಟಿಕೊಳ್ಳುವುದು) ಮಾಡಲು. |

❖ ವನಸ್ಪತೇ = ವನಸ್ಪತಿಯೇ! ಶತವಲ್ಶಃ = ನೂರಾರು ಶಾಖೆಗಳುಳ್ಳವನಾಗಿ; ವಿರೋಹ = ಕವಲೊಡೆದು ಬೆಳೆಯುವವನಾಗು; [ಸ್ವಾಹಾ = ಇದು ನಿನಗೆ ಹುತವಾಗಲಿ.] ❖ ವಯಮ್ = ನಾವು; ಸಹಸ್ರವಲ್ಶಾಃ = ಸಾವಿರಾರು ಕವಲುಳ್ಳವರಾಗಿ (ಎಲ್ಲಾ ಕ್ಷೇತ್ರ ಗಳಲ್ಲಿಯೂ ಬಹುಮುಖವಾದ ವೃದ್ಧಿಯನ್ನು ಹೊಂದಿದವರಾಗಿ) ವಿ ರುಹೇಮ = ಬೆಳೆಯೋಣ (ಬೆಳೆಯುವಂತಾಗಲಿ).

ಅಂತರಿಕ್ಷವನ್ನು ಹಿಂಸಿಸಬೇಡ. (ಆಕಾಶದಲ್ಲಿರುವ ಪಕ್ಷಿ ಮುಂತಾದವುಗಳನ್ನು ಹಿಂಸಿಸಬೇಡ). ಕೆಳಗೆ ಬಿದ್ದು ಭೂಮಿಯೊಡನೆ ಸೇರಿ ಇರು.

ಕತ್ತರಿಸಿ ಉಳಿದಿರುವ ವೃಕ್ಷದ ಮೂಲಭಾಗವೇ! ನಿನ್ನಲ್ಲಿ ನೂರಾರು ಕವಲುಗಳೊಡೆದು ಬೆಳೆಯಲಿ. ನೀನು ನೂರಾರು ಶಾಖೆಗಳುಳ್ಳವನಾಗು. ವೃಕ್ಷಾಭಿಮಾನಿದೇವನಾದ ನಿನಗೆ ಈ ಆಜ್ಯವು ಹುತವಾಗಲಿ. ★ ನಾವು ಸಾವಿರಾರು ಕವಲುಗಳುಳ್ಳವರಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಬಹುಮುಖವಾದ ವೃದ್ಧಿಯನ್ನು ಹೊಂದೋಣ.

ಎಲೈ! ಯೂಪಕ್ಕಾಗಿ ಕತ್ತರಿಸಲ್ಪಟ್ಟಿರುವ ವೃಕ್ಷವೇ! ಹರಿತವಾದ ಈ ಸ್ವಧಿತಿಯು ನೀನು ಯೂಪವಾಗಿ ಪ್ರಕಾಶಿಸುವಂತೆ ಮಾಡಲು ಚಿಕ್ಕ ಚಿಕ್ಕ ರೆಂಬೆಗಳನ್ನು ಕತ್ತರಿಸಿ,

**ಯಂ ತ್ವಾಽಯಗ್ಂ ಸ್ವಧಿತಿಸ್ತೇತಿಜಾನಃ ಪ್ರಣಿನಾಯ ಮಹತೇ ಸೌಭಗಾಯಾಚ್ಛಿನ್ನೋ ರಾಯಃ ಸುವೀರಃ ॥ ೫ - 9 ॥**

**[ಯಂ ದಶ ಚ ॥ ]**

---

ಯಮ್ । ತ್ವಾ। ಅಯಮ್। ಸ್ವಧಿತಿರಿತಿ ಸ್ವ-ಧಿತಿಃ। ತೇತಿಜಾನಃ। ಪ್ರಣಿನಾಯೇತಿ ಪ್ರ-ನಿನಾಯ । ಮಹತೇ । ಸೌಭಗಾಯ । ಅಚ್ಛಿನ್ನಃ । ರಾಯಃ । ಸುವೀರ ಇತಿ ಸು-ವೀರಃ॥೫॥

---

| ಮಂತ್ರ | ವಿನಿಯೋಗ |
|---|---|
| ಯಂ.........ಸೌಭಗಾಯ । | ಬುಡದಿಂದ ಆರಂಭಿಸಿ ಚಿಕ್ಕ ಚಿಕ್ಕ ಕೊಂಬೆಗಳನ್ನು ಕತ್ತರಿಸಲು |
| ಅಚ್ಛಿನ್ನೋ.......ಸುವೀರಃ । | ಅಗ್ರಭಾಗವನ್ನು ಕತ್ತರಿಸಲು. |

---

✣ [ಎಲೈ ಛಿನ್ನವೃಕ್ಷವೇ!] ತೇತಿಜಾನಃ = ತೀಕ್ಷ್ಣವಾದ; ಅಯಮ್ = ಈ; ಸ್ವಧಿತಿಃ = ಕೊಡಲಿಯು(ಛೇದನಸಾಧನವು) ಯಮ್ ತ್ವಾ = ಯಾವ ನಿನ್ನನ್ನು; ಮಹತೇ ಸೌಭಗಾಯ = ಚೆನ್ನಾಗಿ ಕಾಣುವುದಕ್ಕಾಗಿ; ಪ್ರಣಿನಾಯ = [ಚಿಕ್ಕ ಚಿಕ್ಕ ರೆಂಬೆಗಳನ್ನು ಕಡಿದು ಶ್ರೇಷ್ಠವಾದ ಯೂಪತ್ವವನ್ನು] ಹೊಂದಿಸಿತೋ; [ಅಂತಹ ನೀನು ಹೆದರಬೇಡ. ನಮ್ಮ ಯಜ್ಞವನ್ನು ಸಾಧಿಸಿಕೊಡು] ✣ [ಎಲೈ ಯೂಪವೇ!] ಅಚ್ಛಿನ್ನಃ ಭವ = ನೀನು ಅಚ್ಛಿನ್ನ [ಕತ್ತರಿಸಲ್ಪಡದವನಾಗು]ನಾಗು. [ಛೇದನದ ವ್ಯಥೆಯು ನಿನಗೆ ಆಗದಿರಲಿ.] ಸುವೀರಃ = [ಯಜಮಾನನಿಗೆ ಯಾರ ಅನುಗ್ರಹದಿಂದ ಒಳ್ಳೆಯ ಪುತ್ರ-ಪೌತ್ರಾದಿಗಳು ಸಂಭವಿಸುತ್ತಾರೆಯೋ] ಅಂತಹ ಸುವೀರನಾದ ನೀನು; ರಾಯಃ = ಧನಗಳನ್ನು; [ಯಜಮಾನಾಯ ದೇಹಿ = ಯಜಮಾನನಿಗೆ ಕೊಡು.]

---

ಶ್ರೇಷ್ಠವಾದ ಯೂಪದ ರೂಪವನ್ನು ಹೊಂದುವಂತೆ ಮಾಡಿದೆ. ಆದಕ್ಕಾಗಿ ಭಯಪಡಬೇಡ. ನಮ್ಮ ಯಾಗವನ್ನು ಸಾಧಿಸಿಕೊಡು. ★ ಎಲೈ ಯೂಪವೇ! ಛೇದನವ್ಯಥೆಯು ನಿನಗೆ ಆಗದಿರಲಿ. ನೀನು ಅಚ್ಛಿನ್ನನಾಗು. ನೀನು ಯಜಮಾನನಿಗೆ ಪುತ್ರ-ಪೌತ್ರಾದಿಗಳನ್ನು ನೀಡುವ ಸುವೀರನಾಗಿದ್ದೀಯೆ. ನಿನ್ನ ಅನುಗ್ರಹದಿಂದ ಯಜಮಾನನಿಗೆ ಪುತ್ರಪೌತ್ರಾದಿಗಳು ಲಭಿಸಲಿ. ಯಜಮಾನನಿಗೆ ಧನಗಳನ್ನು ಅವಿಚ್ಛಿನ್ನವಾಗಿ ಕೊಡು.

## ವಿನಿಯೋಗ ಸಂಗ್ರಹ

ಅತಿ[1] ವೃಕ್ಷಂ ಮಂತ್ರಯಿತ್ವಾ ತಂ ತ್ವಾ[2]ಯೂಪತರುಂ ಸ್ಪೃಶೇತ್ ।
ದೇವ[3]ಸ್ತನ್ಮೂಲಮಭ್ಯಜ್ಯ ಹ್ಯೋಷ[4]ದರ್ಭಾಂತರಾಯತಃ ॥
ಸ್ವಧಿ[5]ಚ್ಛಿಂದ್ಯಾದ್ದಿವಂ[6]ಪ್ರಾಚ್ಯಾಂ ಪಾತಯೇದ್ವನ[7] ಶೇಷಿತೇ ।
ಮೂಲೇ ಹುತ್ವಾ ಸಹೇ[8]ತ್ಯಾತ್ಮಸ್ಪರ್ಶೋ[9]ಯಂತ್ವಾಂಗಕಾನಿ ಚ ।
[10]ಅಚ್ಛೀತ್ಯಗ್ರಂ ಚ ಸಂಛಿಂದ್ಯಾದ್ದಶ ಮಂತ್ರಾ ಉದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ - 9

ಆಪಸ್ತಂಬ - 10



### ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರ ಸಂಖ್ಯೆ**

೧) ಅತ್ಯನ್ಯಾನಗಾಂ...ನ್ತಿ । ಅರ್ವಾಕ್ = ಅವಿದೂರೇ ವರ್ತಮಾನಮ್ । ಸರ್ವಲಕ್ಷಣಯುಕ್ತಮಿತಿ ಭಾವಃ । = ಶ್ರೇಷ್ಠವಾದ ಗುಣಗಳಿಗೆ ಸಮೀಪದಲ್ಲಿರುವವನು.

ಪರಃ = ಪರತಃ/ಪರಸ್ತಾತ್ = ದೂರೇ ವರ್ತಮಾನಮ್ = ಅವಲಕ್ಷಣಗಳಿಂದ ದೂರದಲ್ಲಿರುವವನು.

೬) ದಿವಮ್......... । ಎಲೈ ವೃಕ್ಷವೇ ! ನೀನು ನಿನ್ನ ಅಗ್ರ-ಮಧ್ಯ-ಮೂಲಗಳಿಂದ ಮೂರು ಲೋಕಗಳಿಗೂ ತೊಂದರೆಯಾಗದಂತೆ ಬೀಳು.

೯) ಯಂ ತ್ವಾ....... । ತೇತಿಜಾನಃ = ತೀಕ್ಷ್ಣವಾದ/ಹರಿತವಾದ । ತಿಜ ನಿಶಾತನೇ (ಧಾತು)

।

೧೦) ಅಚ್ಛಿನ್ನೋ...... । ಅಚ್ಛಿನ್ನೋ ಧನಸ್ಯ, ಸುವೀರಶ್ಚ ಭವ = ಅಚ್ಛಿನ್ನನಾಗಿ (ಪೂರ್ಣನಾಗಿ) ಧನವನ್ನು ಕೊಡು. ಒಳ್ಳೆಯ ಪುತ್ರಾದಿಗಳನ್ನೂ ಯಜಮಾನನಿಗೆ ಕೊಡು.

## ಆ) ಮೀಮಾಂಸಾ

**೧. ಅಪಕರ್ಷವು ಯೂಪಚ್ಛೇದಕ್ಕೆ ಮಾತ್ರವೇ? [ಜೈ.ಸೂ. 5.1.]**

ಜ್ಯೋತಿಷ್ಟೋಮಯಾಗದಲ್ಲಿ ವೈಸರ್ಜನಹೋಮಕಾಲದಲ್ಲಿ ಪ್ರಾಚೀನವಂಶದಲ್ಲಿರುವ ಅಗ್ನಿಯನ್ನು ಆಗ್ನೀಧ್ರೀಯದಲ್ಲಿ ಪ್ರಣಯನ ಮಾಡಬೇಕು. ಪ್ರಾಚೀನವಂಶದಲ್ಲಿ ಸ್ಥಾಪಿಸಿರುವ ಸೋಮನನ್ನು ಹವಿರ್ಧಾನಮಂಡಪದಲ್ಲಿ ಪ್ರಣಯನ ಮಾಡಬೇಕು. ಪ್ರಣಯನದ ಅನಂತರದಲ್ಲಿ ಯೂಪಚ್ಛೇದವು ಹೇಳಲ್ಪಟ್ಟಿದೆ. ಇದೆಲ್ಲವೂ ಸೋಮಯಾಗದ ನಾಲ್ಕನೆಯ ದಿನ ಅಂದರೆ ಸುತ್ಯಾಹದ ಹಿಂದಿನ ದಿನವಾದ ಔಪವಸಥ್ಯದಿನದಂದು ಪ್ರಾಪ್ತವಾಗಿದೆ. ಆದರೆ 'ದೀಕ್ಷಾಸು ಯೂಪಂ ಛಿನತ್ತಿ' ಎಂಬ ವಚನದಂತೆ [ಆಪ.ಶ್ರೌ. 10-4-46] ಯೂಪಚ್ಛೇದವು ದೀಕ್ಷಾಕಾಲಕ್ಕೆ ಅಪಕೃಷ್ಟವಾಗಿದೆ. ಹೀಗಿರುವಾಗ ಯೂಪಚ್ಛೇದಕ್ಕೆ ಮಾತ್ರ ಅಪಕರ್ಷವೇ? ಅಥವಾ ಪ್ರಣಯನಾದಿ ಸಹಿತವಾದ ಯೂಪಚ್ಛೇದಕ್ಕೆ ಅಪಕರ್ಷವೇ? ಎಂಬುದು ಇಲ್ಲಿನ ಸಂಶಯ.

'ತದಾದ್ಯುತ್ಕರ್ಷಃ, ತದಂತಾಪಕರ್ಷಃ' ಎಂಬುದು ಸಾಮಾನ್ಯನ್ಯಾಯ. ಆದುದರಿಂದ ಪ್ರಯಾಜನ್ಯಾಯವನ್ನನುಸರಿಸಿ, ತದಂತವಾದ ಅಂಗಸಮೂಹಕ್ಕೆ ಅಪಕರ್ಷವು ಯುಕ್ತ. ಆದುದರಿಂದ ಪ್ರಣಯನಾದಿಗಳ ಸಹಿತವಾದ ಯೂಪಚ್ಛೇದಕ್ಕೆ ಅಪಕರ್ಷವು ಯುಕ್ತ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ. ಪ್ರಯಾಜನ್ಯಾಯದಲ್ಲಿ ಪ್ರಯಾಜ, ಆಘಾರ ಮೊದಲಾದವುಗಳು ಒಂದೇ ದರ್ಶಪೂರ್ಣಮಾಸೇಷ್ಟಿಯ ಅಂಗಗಳು. ಅವುಗಳ ಕ್ರಮವೂ ಕ್ಲೃಪ್ತವಾಗಿದೆ. ಆದುದರಿಂದ ಪ್ರಯಾಜಕ್ಕೆ ಅಪಕರ್ಷವನ್ನು ಹೇಳಿದರೆ ಪ್ರಯಾಜಾಂತವಾದ ಕರ್ಮಗಳಿಗೆ ಅಪಕರ್ಷವು ಯುಕ್ತ. ಇಲ್ಲಿಯಾದರೋ ಪ್ರಣಯನವು ಸೋಮಯಾಗಕ್ಕೆ ಅಂಗವಾಗಿದೆ. ಯೂಪಚ್ಛೇದವು ಅಗ್ನೀಷೋಮೀಯಪಶುಯಾಗಕ್ಕೆ ಅಂಗವಾಗಿದೆ. ಇವುಗಳ ಕ್ರಮವು ಆರ್ಥಿಕವೇ. ಆದುದರಿಂದ ದೀಕ್ಷಾಕಾಲದಲ್ಲಿ ಯೂಪಚ್ಛೇದಕ್ಕೆ ಮಾತ್ರವೇ ಅಪಕರ್ಷವಿರುತ್ತದೆ.

**೨. ಜ್ಯೋತಿಷ್ಟೋಮದಲ್ಲಿ ಅನೇಕ ಯೂಪಗಳೇ? [ಜೈ.ಸೂ. 11.3.]**

ಜ್ಯೋತಿಷ್ಟೋಮದಲ್ಲಿ ಅಗ್ನೀಷೋಮೀಯ, ಸವನೀಯ ಮತ್ತು ಅನೂಬಂಧ್ಯಗಳೆಂಬ ಮೂರು ಪಶುಯಾಗಗಳಿವೆ. ಇವುಗಳಿಗೆ ಅನೇಕ ಯೂಪಗಳೇ? ಒಂದೇ ಯೂಪವೇ? ಇದು ಸಂಶಯ.

ಅಗ್ನೀಷೋಮೀಯದಲ್ಲಿ ಉಪದೇಶದಿಂದ ಯೂಪಪ್ರಾಪ್ತಿ. ಸವನೀಯ - ಅನೂಬಂಧ್ಯಗಳಲ್ಲಿ ಅತಿದೇಶದಿಂದ ಯೂಪಪ್ರಾಪ್ತಿ. ಹೀಗಿರುವುದರಿಂದ

ಯೂಪಭೇದವು ಯುಕ್ತ. ಇದು ಇಲ್ಲಿನ **ಪೂರ್ವಪಕ್ಷ.**

ಯೂಪೋತ್ಪತ್ತಿಯು ಅಗ್ನೀಷೋಮೀಯಪಶುಯಾಗದ ಸಮಯದಲ್ಲಿ ಅಲ್ಲ. ಅದು ದೀಕ್ಷಾಕಾಲದಲ್ಲಿ ಹೇಳಲ್ಪಟ್ಟಿದೆ. '**ದೀಕ್ಷಾಸು ಯೂಪಂ ಛಿನತ್ತಿ**' ಎಂಬ ವಚನವೇ ಇದಕ್ಕೆ ಆಧಾರ. ತನ್ನ ಕಾಲದಲ್ಲಿ ವಿಹಿತವಾದ ಆಧಾನವು ಹೇಗೆ ಸರ್ವಾರ್ಥವಾಗುತ್ತದೆಯೋ, ಹಾಗೆಯೇ ಸ್ವಕಾಲದಲ್ಲಿ ಉತ್ಪನ್ನವಾದ ಯೂಪವು ಉಪದೇಶ-ಅತಿದೇಶಗಳಿಂದ ಆಯಾ ಕ್ರತುಗಳಿಗೆ ಸಂಬಂಧಿಸಿದಂತೆ ವಿನಿಯುಕ್ತವಾಗುತ್ತದೆ. ಆದುದರಿಂದ ಯೂಪವು **ತಂತ್ರ**ವಾಗುತ್ತದೆ. '**ಅನೇಕೋದ್ದೇಶೇನ ಸಕೃದನುಷ್ಠಾನಂ ತಂತ್ರಮ್**'. ಹಲವು ಕಾರ್ಯಗಳನ್ನುದ್ದೇಶಿಸಿ ಒಮ್ಮೆ ಅನುಷ್ಠಿಸುವುದು ತಂತ್ರವೆನಿಸುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೩. ಯೂಪೈಕಾದಶಿನಿಯಲ್ಲಿ ಯೂಪಾಹುತಿಯು ಹೇಗೆ? [ಜೈ.ಸೂ. 11.2.]**

'**ಯೂಪಸ್ಯಾಂತೇಽಗ್ನಿಂ ಮಥಿತ್ವಾ ಯೂಪಾಹುತಿಂ ಜುಹೋತಿ**' ಎಂಬ ವಚನದಂತೆ ಯೂಪೈಕಾದಶಿನಿಯಲ್ಲಿ ಅನೇಕ ಯೂಪಗಳು ಇರುವುದರಿಂದ ಯೂಪಸಮೀಪಗಳು ಪ್ರತ್ಯೇಕವಾಗುವುದರಿಂದ ಯೂಪಾಹುತಿಗಳೂ ಪ್ರತ್ಯೇಕವಾಗಿಯೇ ಇರಬೇಕೆಂಬುದು **ಪೂರ್ವಪಕ್ಷ.**

ಸಮೀಪವೆಂದರೇನು? ಯೂಪಕ್ಕೆ ಅತ್ಯಂತ ಸಮೀಪದಲ್ಲಿ ಅಗ್ನಿಯನ್ನು ಮಥಿಸಿ ಹೋಮವನ್ನು ಮಾಡಿದರೆ ಯೂಪವು ಸುಟ್ಟುಹೋಗಬಹುದು. ಆದುದರಿಂದ ಯೂಪವು ಕಾಣುವಂತಿರುವ ಪ್ರದೇಶವೇ ಸಮೀಪವಾಗುತ್ತದೆ. ಆದುದರಿಂದ ಎಲ್ಲ ಯೂಪಗಳೂ ಕಾಣುವಂತಿರುವ ಪ್ರದೇಶದಲ್ಲಿ ತಂತ್ರದಿಂದ ಮಾಡುವ ಯೂಪಾಹುತಿಯು ಸರ್ವಾರ್ಥವಾಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೪. ಸಂಸ್ಕೃತಪ್ರತಿನಿಧಿ ಮತ್ತು ವಿಹಿತಗಳಲ್ಲಿ ಯಾವುದು ಶ್ರೇಷ್ಠ? [ಜೈ.ಸೂ. 6.3.]**

'**ಖಾದಿರೋ ಯೂಪೋ ಭವತಿ**' ಎಂಬುದಾಗಿ ಖಾದಿರವು ಯೂಪಕ್ಕೆ ಮುಖ್ಯವಾದ ವೃಕ್ಷವಾಗಿ ಹೇಳಲ್ಪಟ್ಟಿದೆ. ಅದು ಮೊದಲು ಸಿಕ್ಕದೆ ಅದರ ಪ್ರತಿನಿಧಿಯಾಗಿ ಕದರವನ್ನು ತಂದು ಅದಕ್ಕೆ ತಕ್ಷಣಾದಿಸಂಸ್ಕಾರಗಳನ್ನು ಮಾಡಿದ ಮೇಲೆ ಪಶುನಿಯೋಜನಕ್ಕೆ ಮೊದಲು ಖಾದಿರವು ದೊರೆತರೆ ಅದನ್ನೇ ಸಂಸ್ಕಾರ ಮಾಡಿ ಇಟ್ಟುಕೊಳ್ಳಬೇಕೆ? ಅಥವಾ ಸಂಸ್ಕರಿಸಲ್ಪಟ್ಟ ಅದರ ಪ್ರತಿನಿಧಿಯಾದ ಕದರವನ್ನು ಇಟ್ಟುಕೊಳ್ಳಬೇಕೆ? ಎಂಬುದು **ಸಂಶಯ.**

ಅಸಂಸ್ಕೃತವಾದ ಖಾದಿರಕ್ಕಿಂತಲೂ ಸಂಸ್ಕೃತವಾದ ಕದರವು ಪ್ರಶಸ್ತವಾದುದರಿಂದ ಅದನ್ನೇ ಇಟ್ಟುಕೊಳ್ಳಬೇಕೆಂದು **ಪೂರ್ವಪಕ್ಷ.**

ಮುಖ್ಯವಾದ ಖಾದಿರವು ದೊರೆತರೆ ಅದನ್ನೇ ಸಂಸ್ಕಾರ ಮಾಡಿ ಇಟ್ಟುಕೊಳ್ಳಬೇಕು. ಸಂಸ್ಕಾರಗಳು ಖದಿರಕ್ಕಿಂತಲೂ ಅಮುಖ್ಯ. ಪ್ರತಿನಿಧಿಗಿಂತಲೂ ಮುಖ್ಯವಾಗಿ ವಿಹಿತವಾಗಿರುವ ಖದಿರವು ಶ್ರೇಷ್ಠ. ಅದನ್ನು ಪರಿಗ್ರಹಿಸಬೇಕು. ಇದು ಇಲ್ಲಿನ ಸಿದ್ಧಾಂತ.

**೫. ಸಂಸ್ಕೃತವಾದ ಕದರದಲ್ಲಿ ಪಶುನಿಯೋಜನದ ನಂತರ ದೊರೆತರೆ?**

**[ಜೈ.ಸೂ. 6.3.]**

ಸಂಸ್ಕೃತವಾದ ಕದರದಲ್ಲಿ ಪಶುನಿಯೋಜನದ ನಂತರ ಖಾದಿರವು ದೊರೆತರೆ ಹೇಗೆಂಬುದು ಸಂಶಯ.

ಹಿಂದೆ ಹೇಳಿದ ನ್ಯಾಯದಂತೆ ಪಶುನಿಯೋಜನವಾದ ಮೇಲೆ ಖದಿರವು ಸಿಕ್ಕಿದರೂ ಅದಕ್ಕೆ ಸಂಸ್ಕಾರವನ್ನು ಮಾಡಿ ಅದರಲ್ಲಿ ಪುನಃ ಪಶುನಿಯೋಜನವನ್ನು ಮಾಡಬೇಕು ಎಂಬುದು ಇಲ್ಲಿನ ಪೂರ್ವಪಕ್ಷ.

ಪಶುನಿಯೋಜನವು ಪ್ರಧಾನ. ಯೂಪವು ಅಂಗ. ಗುಣಕ್ಕೆ ಅನುಸಾರವಾಗಿ (ಅಂಗಕ್ಕೆ ಅನುಗುಣವಾಗಿ) ಪ್ರಧಾನಕ್ಕೆ ಆವೃತ್ತಿಯು ಯುಕ್ತವಲ್ಲ. ಆದುದರಿಂದ ಮತ್ತೆ ಪಶುನಿಯೋಜನವಿಲ್ಲ. ಇದು ಸಿದ್ಧಾಂತ.

**೬. ಸ್ಥೂಲಕದರ ಕೃಶಖದಿರಗಳಲ್ಲಿ ಯಾವುದು ಗ್ರಾಹ್ಯ?** **[ಜೈ.ಸೂ. 6.3.]**

ಅಮುಖ್ಯವಾದ ಕದರವು ದಪ್ಪವಾಗಿದ್ದು ತಕ್ಷಣಾದಿ (ಕೆತ್ತುವುದು) ಸಂಸ್ಕಾರಗಳಿಗೆ ಯೋಗ್ಯವಾಗಿದ್ದು, ಮುಖ್ಯವಾದ ಖದಿರವು ಕೃಶವಾಗಿದ್ದು ತಕ್ಷಣಾದಿಗಳಿಗೆ ಯೋಗ್ಯವಿಲ್ಲದ್ದಾದಾಗ ಯಾವುದರ ಗ್ರಹಣ? ಎಂಬುದು ಸಂಶಯ.

ಮುಖ್ಯವನ್ನು ತೆಗೆದುಕೊಂಡರೆ ಸಂಸ್ಕಾರಲೋಪವಾಗುವುದರಿಂದ ಪ್ರತಿನಿಧಿಯನ್ನೇ ಗ್ರಹಿಸಬೇಕೆಂಬುದು ಪೂರ್ವಪಕ್ಷ.

ಅಂಗವಾದ ಸಂಸ್ಕಾರಕ್ಕೆ ಲೋಪವಾದರೂ ಮುಖ್ಯವಾದುದಕ್ಕೆ ಲೋಪ ಬರಬಾರದು. ಆದುದರಿಂದ ಕೃಶವಾದರೂ ಮುಖ್ಯವಾದ ಖದಿರವೇ ಗ್ರಾಹ್ಯವೆಂಬುದು ಇಲ್ಲಿನ ಸಿದ್ಧಾಂತ.

**೭. ಖದಿರವು ಅತಿಕೃಶವಾಗಿದ್ದಾಗ?**

ಮುಖ್ಯವಾದ ಖದಿರವು ಪಶುನಿಯೋಜನಕ್ಕೂ ಅಸಮರ್ಥವಾದಷ್ಟು ಕೃಶವಾಗಿದ್ದಾಗ ಹೇಗೆ? ಎಂಬುದು ಸಂಶಯ.

ಪಶುನಿಯೋಜನಕ್ಕೆ ಅಸಮರ್ಥವಾಗಿದ್ದರೂ ವಿಹಿತವಾದುದರಿಂದ ಮುಖ್ಯವಾದ

ಖದಿರವನ್ನೇ ತೆಗೆದುಕೊಳ್ಳಬೇಕೆಂಬುದು ಇಲ್ಲಿನ ಪೂರ್ವಪಕ್ಷ.

ಪಶುನಿಯೋಜನಕ್ಕಾಗಿಯೇ ಯೂಪವು ಬೇಕಾದುದು. ಆ ಕಾರ್ಯಕ್ಕೇ ಮುಖ್ಯವಾದರೂ ಅಸಮರ್ಥವಾಗಿರುವುದರಿಂದ. ಪ್ರತಿನಿಧಿಯಾದ ಕದರವನ್ನೇ ತೆಗೆದುಕೊಳ್ಳಬೇಕೆಂಬುದು ಇಲ್ಲಿನ ಸಿದ್ಧಾಂತ.

### ೩) ಛಂದಸ್ಸು

೧. ಅತ್ಯನ್ಯಾನ್....ದೇವಯಜ್ಯಾಯೈ । — ದ್ವಾದಶಾಕ್ಷರಾ ತ್ರಿಪದೀ ಮಹಾಬೃಹತೀ
ಸತೋ ಬೃಹತೀ (ತಾಂಡಿಮತ)
ಊರ್ಧ್ವಾಬೃಹತೀ (ಬಹ್ವೃಚರು)

೨. ವನಸ್ಪತೇ......ವಿರೋಹ । — ಏಕಪದಾ ತ್ರಿಷ್ಟುಪ್

೩. ಸಹಸ್ರವಲ್ಶಾ.....ರುಹೇಮ । — ಏಕಪದಾ ತ್ರಿಷ್ಟುಪ್

೪. ಯಂ ತ್ವಾ..... ಸೌಭಗಾಯ । — ದ್ವಿಪದಾ ತ್ರಿಷ್ಟುಪ್

ಈ ಛಂದಸ್ಸಿನ ಹೆಸರುಗಳು ಭಟ್ಟಭಾಸ್ಕರಭಾಷ್ಯದಂತೆ. ಸಾಯಣರ ಮತದಲ್ಲಿ ಇವೆಲ್ಲವೂ ಯಜುಸ್ಸುಗಳು.



## ॥ ಷಷ್ಠೋಽನುವಾಕಃ ॥

**ಪೃಥಿವ್ಯೈ ತ್ವಾಂತರಿಕ್ಷಾಯ ತ್ವಾ ದಿವೇ ತ್ವಾ ಶುಂಧತಾಂ ಲೋಕಃ ಪಿತೃಷದನೋ**

---

ಪೃಥಿವ್ಯೈ । ತ್ವಾ । ಅಂತರಿಕ್ಷಾಯ । ತ್ವಾ । ದಿವೇ । ತ್ವಾ । ಶುಂಧತಾಮ್ । ಲೋಕಃ।

ಪಿತೃಷದನ ಇತಿ ಪಿತೃ-ಸದನಃ ।

---



ಐದನೆಯ ಅನುವಾಕದಲ್ಲಿ ಯೂಪಚ್ಛೇದವು ಹೇಳಲ್ಪಟ್ಟಿತು. ಈ ಆರನೆಯ ಅನುವಾಕದಲ್ಲಿ ಯೂಪಸ್ಥಾಪನವು ಹೇಳಲ್ಪಡುತ್ತದೆ.

| ಮಂತ್ರ | ವಿನಿಯೋಗ |
| --- | --- |
| ಪೃಥಿವ್ಯೈ.... ದಿವೇ ತ್ವಾ । | ಚೆನ್ನಾಗಿ ತೊಳೆದಿರುವ ಯೂಪವನ್ನು ಪ್ರೋಕ್ಷಿಸಲು. |
| ಶುಂಧತಾಂ.....ಪಿತೃಷದನಃ । | ಯೂಪಕ್ಕಾಗಿ ತೋಡಿರುವ ಹಳ್ಳದಲ್ಲಿ ನೀರನ್ನು ಹಾಕಲು. |

---

ಎಲೈ ಯೂಪವೇ! ಪೃಥಿವ್ಯೈ = ಭೂಮಿಗೋಸ್ಕರ; ತ್ವಾ = ನಿನ್ನನ್ನು; ಪ್ರೋಕ್ಷಾಮಿ = ಪ್ರೋಕ್ಷಿಸುತ್ತೇನೆ; ಅಂತರಿಕ್ಷಾಯ = ಆಕಾಶಕ್ಕೋಸ್ಕರ; ತ್ವಾ = ನಿನ್ನನ್ನು [ಪ್ರೋಕ್ಷಿಸುತ್ತೇನೆ]; ದಿವೇ = ದ್ಯುಲೋಕಕ್ಕಾಗಿ; ತ್ವಾ = ನಿನ್ನನ್ನು [ಪ್ರೋಕ್ಷಿಸುತ್ತೇನೆ] ❖ ಪಿತೃಷದನಃ = ಪಿತೃಗಳಿರುವ; ಲೋಕಃ = ಪ್ರದೇಶವಾದ ಈ ಹಳ್ಳವು; ಶುಂಧತಾಮ್ = ಶುದ್ಧವಾಗಲಿ;

---

ಎಲೈ ಯೂಪವೇ! ಭೂಮಿ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಲೋಕತ್ರಯಾಭಿಮಾನಿದೇವತಾಪ್ರೀತ್ಯರ್ಥವಾಗಿ ನಿನ್ನನ್ನು ಪ್ರೋಕ್ಷಿಸುತ್ತೇನೆ.

ಯವೋಽಸಿ ಯವಯಾಸ್ಮದ್ದ್ವೇಷೋ ಯವಯಾರಾತೀಃ

ಪಿತೃಣಾಗ್ಂ ಸದನಮಸಿ ಸ್ವಾವೇಶೋಽಸ್ಯಗ್ರೇಗಾ ನೇತೃಣಾಂ

---

ಯವಃ । ಅಸಿ । ಯವಯ । ಅಸ್ಮತ್ । ದ್ವೇಷಃ । ಯವಯ । ಅರಾತೀಃ । ಪಿತೃಣಾಮ್।
ಸದನಮ್ । ಅಸಿ । ಸ್ವಾವೇಶ ಇತಿ ಸು-ಆವೇಶಃ । ಅಸಿ । ಅಗ್ರೇಗಾ ಇತ್ಯಗ್ರೇ-ಗಾಃ।
ನೇತೃಣಾಮ್ ।

---

| ಮಂತ್ರ | ವಿನಿಯೋಗ |
| --- | --- |
| ಯವೋಽಸಿ...ಯವಯಾರಾತೀಃ । | ಹಳ್ಳದಲ್ಲಿ ಯವಧಾನ್ಯವನ್ನು ಹಾಕಲು. |
| ಪಿತೃಣಾಗ್ಂ ಸದನಮಸಿ । | ಹಳ್ಳದಲ್ಲಿ ಬರ್ಹಿಸ್ಸನ್ನು (ದರ್ಭೆ) ಪೂರ್ವಾಗ್ರವಾಗಿಯೂ ಉತ್ತರಾಗ್ರವಾಗಿಯೂ ಹಾಕಲು. |
| ಸ್ವಾವೇಶೋ.....ವಿತ್ರಾನ್ । | ಯೂಪಶಕಲವನ್ನು ಅವಟದಲ್ಲಿ ಹಾಕಲು. |

---

✣ [ಎಲೈ ಯವಧಾನ್ಯವೇ! ನೀನು] ಯವಃ = ಬೇರ್ಪಡಿಸುವ ಶಕ್ತಿಯುಳ್ಳವನು; ಅಸಿ = ಆಗಿದ್ದೀಯೆ; ಅಸ್ಮತ್ = ನಮ್ಮದೆಸೆಯಿಂದ [ನಮ್ಮಿಂದ]; ದ್ವೇಷಃ = ದ್ವೇಷಿಸುವ ರಾಕ್ಷಸರನ್ನು; ಯವಯ=ದೂರಮಾಡು; ಅರಾತೀಃ = ಶತ್ರುಗಳನ್ನೂ; ಯವಯ = ದೂರಮಾಡು; ✣ [ಎಲೈ ದರ್ಭವೇ! ನೀನು] ಪಿತೃಣಾಮ್ = ಪಿತೃದೇವತೆಗಳ; ಸದನಮ್ ಅಸಿ = ಸ್ಥಾನವಾಗಿರುವೆ. ✣ [ಎಲೈ ಯೂಪಶಕಲವೇ! ನೀನು] ಸ್ವಾವೇಶಃ ಅಸಿ = [ಯೂಪವು] ಸರಿಯಾಗಿ ಕುಳಿತುಕೊಳ್ಳಲು ತಕ್ಕವನಾಗಿರುವೆ; ನೇತೃಣಾಮ್ = ಯಜ್ಞವನ್ನು ಮುಂದಕ್ಕೆ ಒಯ್ಯುವ ಮೂವರಲ್ಲಿ [ಶಕಲ, ಸ್ವರು ಮತ್ತು ಚಷಾಲ ಇವುಗಳಲ್ಲಿ]

---

ಎಲೈ ಯವಧಾನ್ಯವೇ! ನೀನು ಬೇರ್ಪಡಿಸುವ ಶಕ್ತಿ ಹೊಂದಿದವನು. ನೀನು ರಾಕ್ಷಸರನ್ನೂ, ಶತ್ರುಗಳನ್ನೂ ದೂರಮಾಡು.

**ವನಸ್ಪತಿರಧಿ ತ್ವಾ ಸ್ಥಾಸ್ಯತಿ ತಸ್ಯ ವಿತ್ತಾದ್ದೇವಸ್ತ್ವಾ ಸವಿತಾ**

**ಮಧ್ವಾನಕ್ತು ಸುಪಿಪ್ಪಲಾಭ್ಯಸ್ತ್ವೌಷಧೀಭ್ಯ**

---

ವನಸ್ಪತಿಃ । ಅಧೀತಿ। ತ್ವಾ । ಸ್ಥಾಸ್ಯತಿ । ತಸ್ಯ । ವಿತ್ತಾತ್ । ದೇವಃ । ತ್ವಾ । ಸವಿತಾ। ಮಧ್ವಾ । ಅನಕ್ತು । ಸುಪಿಪ್ಪಲಾಭ್ಯ ಇತಿ ಸು - ಪಿಪ್ಪಲಾಭ್ಯಃ । ತ್ವಾ । ಓಷಧೀಭ್ಯ ಇತ್ಯೋಷಧಿ - ಭ್ಯಃ ।

---

| ಮಂತ್ರ | ವಿನಿಯೋಗ |
|---|---|
| ದೇವಸ್ತ್ವಾ......ಮಧ್ವಾನಕ್ತು । | ಯೂಪಾಗ್ರವನ್ನು ತುಪ್ಪದಿಂದ ಲೇಪಿಸಲು |
| ಸುಪಿಪ್ಪಲಾಭ್ಯಸ್ತ್ವೌಷಧೀಭ್ಯಃ । | ಒಳಗೂ ಹೊರಗೂ ಘೃತಾಕ್ತವಾದ ಚಷಾಲವನ್ನು ಯೂಪಾಗ್ರದಲ್ಲಿ ಹಾಕಲು. |

---

**ಅಗ್ರೇಣಾಃ** = ಮೊದಲು ಯಜ್ಞದ ಸಾಧನವಾಗುವವನಾಗಿರುವೆ; **ವನಸ್ಪತಿಃ** = ವನಸ್ಪತಿ ರೂಪವಾದ ಯೂಪವು; **ತ್ವಾ** = ನಿನ್ನನ್ನು [ನಿನ್ನ] **ಅಧಿ ಸ್ಥಾಸ್ಯತಿ** = ಮೇಲೆ ನಿಲ್ಲುತ್ತದೆ; **ತಸ್ಯ ವಿತ್ತಾತ್** = ಅದಕ್ಕೆ ಅನುಮತಿಯನ್ನು ಕೊಡು. ✣ ಎಲೈ ಯೂಪವೇ! **ದೇವಃ ಸವಿತಾ** = ಸರ್ವಪ್ರೇರಕನಾದ ಸವಿತೃದೇವನು; **ತ್ವಾ** = ನಿನ್ನನ್ನು; **ಮಧ್ವಾ ಅನಕ್ತು** = ಮಧುರವಾದ ಘೃತದಿಂದ ಬಳಿಯಲಿ. ✣ ಎಲೈ ಚಷಾಲವೇ! **ತ್ವಾ** = ನಿನ್ನನ್ನು; **ಸುಪಿಪ್ಪಲಾಭ್ಯಃ** = ಒಳ್ಳೆಯ ಫಲವುಳ್ಳ; **ಓಷಧೀಭ್ಯಃ** = ಓಷಧಿಗಳಿಗಾಗಿ; [ಯೂಪಾಗ್ರೇ ಪ್ರತಿಮುಂಚಾಮಿ = ಯೂಪದ ಅಗ್ರಭಾಗದಲ್ಲಿ ಹಾಕುತ್ತೇನೆ.]

---

ಎಲೈ ದರ್ಭವೇ! ನೀನು ಪಿತೃದೇವತೆಗಳ ಸ್ಥಾನವಾಗಿರುವೆ.

ಯಾಗನೇತೃಗಳಲ್ಲಿ ಮೊದಲು ಯಾಗಸಾಧನವಾಗುವ ಯೂಪಶಕಲವೇ! ನೀನು ಯೂಪವು ಕುಳಿತುಕೊಳ್ಳಲು ಯೋಗ್ಯವಾದ ಸ್ಥಾನವಾಗಿರುವೆ. ವನಸ್ಪತಿವಿಕಾರವಾದ ಯೂಪವು ನಿನ್ನ ಮೇಲೆ ನಿಲ್ಲುತ್ತದೆ. ಅದಕ್ಕೆ ನೀನು ಅನುಮತಿಯನ್ನು ಕೊಡು.

ಎಲೈ ಯೂಪವೇ! ಸರ್ವಪ್ರೇರಕನಾದ ಸವಿತೃದೇವನು ನಿನ್ನನ್ನು ಮಧುರವಾದ ಘೃತದಿಂದ ಬಳಿಯಲಿ.

**ಉದ್ದಿವಗ್ಂ ಸ್ತಭಾನಾಂತರಿಕ್ಷಂ ಪೃಣ ಪೃಥಿವೀಮುಪರೇಣ**

**ದೃಗ್ಂಹ ತೇ ತೇ ಧಾಮಾನ್ಯುಶ್ಮಸೀ [ಶ್ಮಸಿ (೧)] ಗಮಧ್ಯೈ**

---

**ಉದಿತಿ । ದಿವಮ್ । ಸ್ತಭಾನ । ಏತಿ । ಅಂತರಿಕ್ಷಮ್ । ಪೃಣ । ಪೃಥಿವೀಮ್ । ಉಪರೇಣ । ದೃಗ್ಂಹ । ತೇ । ತೇ । ಧಾಮಾನಿ । ಉಶ್ಮಸಿ [೧] । ಗಮಧ್ಯೈ ।**

---

| ಮಂತ್ರ | ವಿನಿಯೋಗ |
| --- | --- |
| ಉದ್ದಿವಗ್ಂ ಸ್ತಭಾನ....ದೃಗ್ಂಹ। | ಯೂಪವನ್ನು ಮೇಲೆತ್ತಲು. |
| ತೇ.......ಭೂರೇಃ ॥ | ಯೂಪವನ್ನು ಹಳ್ಳದಲ್ಲಿ ನೆಡಲು–ಬೌಧಾಯನ |

---

✣ ಎಲೈ ಯೂಪವೇ! ನೀನು ದಿವಮ್ = ದ್ಯುಲೋಕವನ್ನು; ಉತ್ ಸ್ತಭಾನ = ಮೇಲೆ ಬೀಳದಂತೆ ನಿಲ್ಲಿಸು; ಅಂತರಿಕ್ಷಮ್ ಆ ಪೃಣ = ಅಂತರಿಕ್ಷಲೋಕವನ್ನು ಸುತ್ತಲೂ ವ್ಯಾಪಿಸು. ಪೃಥಿವೀಮ್ = ಭೂಮಿಯನ್ನು; ಉಪರೇಣ ದೃಗ್ಂಹ = [ಯೂಪದ ಬುಡದಲ್ಲಿರುವ] ಕೆತ್ತದ ಭಾಗದಿಂದ ದೃಢಪಡಿಸು. ✣ ಎಲೈ ಯೂಪಾಭಿಮಾನಿಯಾದ ವಿಷ್ಣುದೇವನೇ! ಯತ್ರ = ಯಾವ ಸ್ಥಾನಗಳಲ್ಲಿ; ಗಾವಃ = ಹೋಗುವವರು; ಭೂರಿ ಶೃಂಗಾಃ = ಬಹುಪ್ರಕಾಶವುಳ್ಳವರೂ; ಅಯಾಸಃ = ಅಪಾಯರಹಿತರೂ[ಆಗುತ್ತಾರೆಯೋ] ತೇ = ನಿನ್ನ; ತೇ ಧಾಮಾನಿ = ಆ ಸ್ಥಾನಗಳನ್ನು; ಗಮಧ್ಯೈ = ಹೊಂದುವುದಕ್ಕೆ;

---

ಎಲೈ ಯೂಪವೇ! ನೀನು ದ್ಯುಲೋಕವನ್ನು ಕೆಳಗೆ ಬೀಳದಂತೆ ಮೇಲೆ ತಡೆದು ನಿಲ್ಲಿಸು. ಅಂತರಿಕ್ಷವನ್ನು ಸುತ್ತಲೂ ವ್ಯಾಪಿಸು. ಕೆತ್ತದಿರುವ ನಿನ್ನ ಮೂಲಭಾಗದಿಂದ ಭೂಮಿಯನ್ನು ಬಲಪಡಿಸು.

ಎಲೈ ಚಷಾಲವೇ! ನಿನ್ನನ್ನು ಒಳ್ಳೆಯ ಫಲವುಳ್ಳ ಓಷಧಿಗಳಿಗಾಗಿ ಯೂಪದ ಅಗ್ರಭಾಗದಲ್ಲಿ ಹಾಕುತ್ತೇನೆ.

---

ಯೂಪವೃಕ್ಷವನ್ನು ಕತ್ತರಿಸುವಾಗ ಮೊದಲು ಬೀಳುವ ಚಕ್ಕೆಯು ಯೂಪಶಕಲ. ಎರಡನೆಯದು ಸ್ವರು. ಯೂಪದ ಅಗ್ರಭಾಗವನ್ನು ಕತ್ತರಿಸಿ ಆದರಿಂದ ನಿರ್ಮಿತವಾದ ನಾಲ್ಕು ಅಂಗುಲ ಪ್ರಮಾಣದ, ಮಧ್ಯದಲ್ಲಿ ರಂಧ್ರವಿರುವ ಮರದ ತುಂಡಿಗೆ ಚಷಾಲವೆಂದು ಹೆಸರು.

ಗಾವೋ ಯತ್ರ ಭೂರಿಶೃಂಗಾ ಅಯಾಸಃ । ಅತ್ರಾ ಹ ತದುರು ಗಾಯಸ್ಯ ವಿಷ್ಣೋಃ ಪರಮಂ ಪದಮವಭಾತಿ ಭೂರೇಃ ॥

---

ಗಾವಃ । ಯತ್ರ । ಭೂರಿಶೃಂಗಾ ಇತಿ ಭೂರಿ-ಶೃಂಗಾಃ । ಅಯಾಸಃ ॥ ಅತ್ರ । ಅಹ। ತತ್ । ಉರುಗಾಯಸ್ಯೇತ್ಯುರು - ಗಾಯಸ್ಯ । ವಿಷ್ಣೋಃ । ಪರಮಮ್ । ಪದಮ್ । ಅವೇತಿ । ಭಾತಿ । ಭೂರೇಃ ॥

---



ಮಂತ್ರ ವಿನಿಯೋಗ

[ಹಿಂದಿನ ಮಂತ್ರದೊಡನೆ ಮುಂದಿನ ಅವಟದಲ್ಲಿ ಯೂಪವನ್ನು ಇಡಲು. ಮಂತ್ರವೂ ಸೇರಿ, ಬೌಧಾಯನ ಆಪ. ಮತದಂತೆ ವಿನಿಯೋಗ]

---

ಉಶ್ಮಸಿ = ಇಚ್ಛಿಸುತ್ತೇವೆ; ಅತ್ರ ಅಹ = ಈ ಸ್ಥಾನಗಳಲ್ಲಿಯೇ; ಉರುಗಾಯಸ್ಯ = ಮಹಾತ್ಮರಿಂದ ಸ್ತುತಿಸಲ್ಪಡುವ; ಭೂರೇಃ = ಮಹಾಪುರುಷನಾದ; ವಿಷ್ಣೋಃ = ಸರ್ವವ್ಯಾಪಕನಾದ ಮಹಾವಿಷ್ಣುವಿನ; ತತ್ = ಆ; ಪರಮಮ್ ಪದಮ್ : ಶ್ರೇಷ್ಠಸ್ಥಾನವು; ಅವಭಾತಿ = ಪ್ರಕಾಶಿಸುತ್ತದೆ.[ಈ ಸ್ಥಾನವನ್ನು ಹೊಂದಲು ಸಾಧನವಾದ ಯಜ್ಞಕರ್ಮಕ್ಕಾಗಿ ಯೂಪವು ಹಳ್ಳದಲ್ಲಿ ಸ್ಥಿತವಾಗಲಿ.]

---

ಎಲೈ ಯೂಪವೇ! ನೀನು ದ್ಯುಲೋಕವನ್ನು ಕೆಳಗೆ ಬೀಳದಂತೆ ಮೇಲೆ ತಡೆದು ನಿಲ್ಲಿಸು. ಅಂತರಿಕ್ಷವನ್ನು ಸುತ್ತಲೂ ವ್ಯಾಪಿಸು. ಕೆತ್ತದಿರುವ ನಿನ್ನ ಮೂಲಭಾಗದಿಂದ ಭೂಮಿಯನ್ನು ಬಲಪಡಿಸು.

ಎಲೈ! ಯೂಪಾಭಿಮಾನಿಯಾದ ವಿಷ್ಣುದೇವನೇ! ಯಾವ ಸ್ಥಾನಕ್ಕೆ ಹೋಗುವವರು ಪ್ರಕಾಶಮಾನರಾಗುತ್ತಾರೆಯೋ, ಅಪಾಯರಹಿತರಾಗುತ್ತಾರೆಯೋ, ಅಂತಹ ನಿನ್ನ ಸ್ಥಾನವನ್ನು ಹೊಂದಲು ಅಪೇಕ್ಷಿಸುತ್ತೇನೆ. ಇಲ್ಲಿಯೇ ಮಹಾತ್ಮರಿಂದ ಹಾಡಿಹೊಗಳಲ್ಪಡುವ,

**ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ।**

**ಇಂದ್ರಸ್ಯ ಯುಜ್ಯಃ ಸಖಾ ॥ ತದ್ವಿಷ್ಣೋಃ ಪರಮಂ ಪದಗ್ಂ**

---

**ವಿಷ್ಣೋಃ । ಕರ್ಮಾಣಿ । ಪಶ್ಯತ । ಯತಃ । ವ್ರತಾನಿ । ಪಸ್ಪಶೇ ॥ ಇಂದ್ರಸ್ಯ । ಯುಜ್ಯಃ । ಸಖಾ ॥ ತತ್ । ವಿಷ್ಣೋಃ । ಪರಮಮ್ । ಪದಮ್ ।**

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ......ಸಖಾ ॥ | ಯೂಪವನ್ನು ಹಳ್ಳದಲ್ಲಿ ನೆಡಲು–ಬೌಧಾಯನ. |
| [ಇದರೊಡನೆ ಮುಂದಿನ ಮಂತ್ರವನ್ನು ಸೇರಿಸಿ ಆಪಸ್ತಂಬ ಮತದಂತೆ ವಿನಿಯೋಗ.] | ಅಗ್ನಿಷ್ಠೆಯೆಂಬ ಅಶ್ರಿ(ಏಣು)ಯನ್ನು ಆಹವನೀಯಕ್ಕೆ ಹೊಂದಿಸಲು. |

---

✣ [ಎಲೈ ಜನರೇ! ನೀವು] **ಯತಃ** = ಯಾವ ಕರ್ಮಗಳಿಂದ; **ವ್ರತಾನಿ** = ನಿಮ್ಮ ವೈದಿಕ-ಲೌಕಿಕ ಕರ್ಮಗಳನ್ನು; **ಪಸ್ಪಶೇ** = ಸೃಷ್ಟಿಸಿದನೋ- **ವಿಷ್ಣೋಃ** = ವಿಷ್ಣುವಿನ; **ಕರ್ಮಾಣಿ** =[ಆ ಸೃಷ್ಟಿ-ಸ್ಥಿತಿ-ಸಂಹಾರರೂಪವಾದ] ಕರ್ಮಗಳನ್ನು; **ಪಶ್ಯತ** = ನೋಡಿರಿ. [ಆ ವಿಷ್ಣುವು] **ಇಂದ್ರಸ್ಯ** = ಇಂದ್ರನಿಗೆ; **ಯುಜ್ಯಃ** = ಹೊಂದಿಕೆಯಾಗುವ [ಯೋಗ್ಯನಾದ]; **ಸಖಾ** = ಮಿತ್ರನಾಗಿದ್ದಾನೆ. ✣ **ಸೂರಯಃ** = ವೇದಾಂತಪಾರಂಗತರಾದ ವಿದ್ವಾಂಸರು; **ದಿವಿ** = [ನಿರಾವರಣವಾದ] ಆಕಾಶದಲ್ಲಿ[ಪ್ರಸರಿಸಿರುವ], **ಚಕ್ಷುಃ ಇವ ಆತತಮ್** = ಕಣ್ಣಿನಂತೆ ವ್ಯಾಪ್ತವಾದ; **ವಿಷ್ಣೋಃ** = ವಿಷ್ಣುವಿನ; **ತತ್ ಪರಮಮ್ ಪದಮ್** = ಆ ಪರಮಶ್ರೇಷ್ಠಸ್ಥಾನವನ್ನು; **ಸದಾ** = ಯಾವಾಗಲೂ; **ಪಶ್ಯಂತಿ** = ನೋಡುತ್ತಾರೆ;

---

ಸರ್ವವ್ಯಾಪಕನಾದ, ಮಹಾಪುರುಷನಾದ ಮಹಾವಿಷ್ಣುವಿನ ಆ ಶ್ರೇಷ್ಠಸ್ಥಾನವು ಪ್ರಕಾಶಿಸುತ್ತದೆ. ಆ ಸ್ಥಾನವನ್ನು ಪಡೆಯಲು ಮಾಡಬೇಕಾದ ಯಾಗಕ್ಕಾಗಿ ಈ ಯೂಪವು ಈ ಹಳ್ಳದಲ್ಲಿ ನಿಲ್ಲಲಿ.

ಜನರೇ! ನೀವು ವ್ಯಾಪಕನಾದ ಮಹಾವಿಷ್ಣುವಿನ ಸೃಷ್ಟಿ-ಸ್ಥಿತಿ-ಸಂಹಾರರೂಪವಾದ

**ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಮ್ ॥**

**ಬ್ರಹ್ಮವನಿಂ ತ್ವಾ ಕ್ಷತ್ರವನಿಗ್ಂ ಸುಪ್ರಜಾವನಿಗ್ಂ**

---

**ಸದಾ । ಪಶ್ಯಂತಿ । ಸೂರಯಃ ॥ ದಿವಿ। ಇವ । ಚಕ್ಷುಃ। ಆತತಮಿತ್ಯಾ-ತತಮ್॥ ಬ್ರಹ್ಮ ವನಿಮಿತಿ ಬ್ರಹ್ಮ-ವನಿಮ್ । ತ್ವಾ । ಕ್ಷತ್ರವನಿಮಿತಿ ಕ್ಷತ್ರ-ವನಿಮ್ । ಸುಪ್ರಜಾವನಿಮಿತಿ ಸುಪ್ರಜಾ-ವನಿಮ್।**

---



| ಮಂತ್ರ | ವಿನಿಯೋಗ |
|---|---|
| ತದ್ವಿಷ್ಣೋಃ......ತತಮ್ ॥ | ಅಗ್ನಿಷ್ಠೆಯೆಂಬ ಅಶ್ರಿ (ಏಣು) ಆಹವನೀಯಕ್ಕೆ ಸಮಾನವಾಗುವಂತೆ ಮಾಡಲು ಮತ್ತು ಚಷಾಲವನ್ನು ಪ್ರೋಕ್ಷಿಸಲು –ಬೌಧಾಯನ<br>ಅಗ್ನಿಷ್ಠಾಶ್ರಿಯನ್ನು ಆಹವನೀಯಕ್ಕೆ ಹೊಂದಿಸಲು – ಆಪಸ್ತಂಬ. |
| ಬ್ರಹ್ಮವನಿಂ......ಪರ್ಯೂಹಾಮಿ । | ಯೂಪದ ಸುತ್ತಲೂ ಮಣ್ಣನ್ನು ತುಂಬಲು. |

---

[ಆ ವಿಷ್ಣುವಿನ ಅನುಗ್ರಹದಿಂದ ಈ ಕರ್ಮವನ್ನು ಮಾಡುತ್ತೇನೆ]. ✣ [ಎಲೈ ಯೂಪವೇ!] ಬ್ರಹ್ಮವನಿಮ್ = ಒಳ್ಳೆಯ ಬ್ರಾಹ್ಮಣ್ಯವನ್ನು ಕೊಡುವ; ಕ್ಷತ್ರವನಿಮ್ = ಒಳ್ಳೆಯ ಕ್ಷತ್ರಿಯತ್ವವನ್ನೂ ಕೊಡುವ; ಸುಪ್ರಜಾವನಿಮ್ = ಒಳ್ಳೆಯ ಮಕ್ಕಳನ್ನೂ ಕೊಡುವ;

---

ಕಾರ್ಯಗಳನ್ನು ನೋಡಿರಿ. ಇಂದ್ರನಿಗೆ ತಕ್ಕ ಮಿತ್ರನಾಗಿರುವ ವಿಷ್ಣುವು ತನ್ನ ಈ ಕಾರ್ಯಗಳಿಂದಲೇ ಲೌಕಿಕ-ವೈದಿಕಕರ್ಮಗಳನ್ನೂ ಸೃಷ್ಟಿಸಿರುತ್ತಾನೆ.

ಆ ಮಹಾವಿಷ್ಣುವಿನ ಪರಮಶ್ರೇಷ್ಠಸ್ಥಾನವು ನಿರಾವರಣವಾದ ಅಂತರಿಕ್ಷದಲ್ಲಿ ಪ್ರಸರಿಸಿರುವ ಕಣ್ಣಿನಂತೆ ಎಲ್ಲೆಡೆಯಲ್ಲಿಯೂ ವ್ಯಾಪ್ತವಾಗಿದೆ. ವೇದಾಂತಪಾರಂಗತರಾದ ವಿದ್ವಾಂಸರು ಆ ಸ್ಥಾನವನ್ನು ಯಾವಾಗಲೂ ನೋಡುತ್ತಾರೆ. ಅಂತಹ ವಿಷ್ಣುವಿನ ಅನುಗ್ರಹದಿಂದ ಅಗ್ನಿಷ್ಠಾಶ್ರಿಯನ್ನು ಆಹವನೀಯಕ್ಕೆ ಸಮಾನವಾಗುವಂತೆ ಸ್ಥಾಪಿಸುತ್ತೇನೆ.

**ರಾಯಸ್ಪೋಷವನಿಂ ಪರ್ಯೂಹಾಮಿ ಬ್ರಹ್ಮ ದೃಗ್ಂಹ ಕ್ಷತ್ರಂ ದೃಗ್ಂಹ ಪ್ರಜಾಂ ದೃಗ್ಂಹ ರಾಯಸ್ಪೋಷಂ ದೃಗ್ಂಹ**

---

ರಾಯಸ್ಪೋಷವನಿಮಿತಿ ರಾಯಸ್ಪೋಷ-ವನಿಮ್ । ಪರೀತಿ । ಊಹಾಮಿ । ಬ್ರಹ್ಮ । ದೃಗ್ಂಹ । ಕ್ಷತ್ರಮ್ । ದೃಗ್ಂಹ । ಪ್ರಜಾಮಿತಿ ಪ್ರ-ಜಾಮ್ । ದೃಗ್ಂಹ । ರಾಯಃ । ಪೋಷಮ್ । ದೃಗ್ಂಹ ।

---

| ಮಂತ್ರ | ವಿನಿಯೋಗ |
|---|---|
| ಬ್ರಹ್ಮ......ರಾಯಸ್ಪೋಷಂ ದೃಗ್ಂಹ । | ಮೈತ್ರಾವರುಣದಂಡದಿಂದ ಮಣ್ಣನ್ನು ಕುಟ್ಟಿ ದೃಢಪಡಿಸಲು. |

---

ರಾಯಸ್ಪೋಷವನಿಮ್ = ಧನಸಮೃದ್ಧಿಯನ್ನೂ ಕೊಡುವ; ತ್ವಾ = ನಿನ್ನನ್ನು; ಪರ್ಯೂಹಾಮಿ = ಸುತ್ತಲೂ ಮಣ್ಣನ್ನು ಹಾಕಿ ದೃಢಪಡಿಸುತ್ತೇನೆ; ✣ [ಎಲೈ ಮೈತ್ರಾವರುಣದಂಡವೇ!] ಬ್ರಹ್ಮ = ಬ್ರಾಹ್ಮಣ್ಯವನ್ನು; ದೃಗ್ಂಹ = ಬಲಪಡಿಸು; ಕ್ಷತ್ರಮ್ = ಕ್ಷಾತ್ರವನ್ನು; ದೃಗ್ಂಹ = ದೃಢಪಡಿಸು; ಪ್ರಜಾಮ್ = ಮಕ್ಕಳೇ ಮೊದಲಾದವರನ್ನೂ; ದೃಗ್ಂಹ = ವೃದ್ಧಿಪಡಿಸು; ರಾಯಃ ಪೋಷಮ್ = ಧನ ಸಮೃದ್ಧಿಯನ್ನೂ; ದೃಗ್ಂಹ = ವೃದ್ಧಿಪಡಿಸು; ✣ [ಎಲೈ ಯೂಪವೇ! ನೀನು]

---

ಎಲೈ ಯೂಪವೇ! ಒಳ್ಳೆಯ ಬ್ರಾಹ್ಮಣ್ಯವನ್ನೂ, ಕ್ಷತ್ರಿಯತ್ವವನ್ನೂ, ಒಳ್ಳೆಯ ಮಕ್ಕಳನ್ನೂ ಮತ್ತು ಧನಸಮೃದ್ಧಿಯನ್ನೂ ನೀಡುವ ನಿನ್ನನ್ನು ಸುತ್ತಲೂ ಮಣ್ಣು ಹಾಕಿ ದೃಢಪಡಿಸುತ್ತೇನೆ. ★ ಎಲೈ ಮೈತ್ರಾವರುಣದಂಡವೇ! ನೀನು ಬ್ರಾಹ್ಮಣ್ಯವನ್ನು ಬಲಪಡಿಸು. ಕ್ಷಾತ್ರವನ್ನು ದೃಢಪಡಿಸು. ಮಕ್ಕಳೇ ಮೊದಲಾದವರನ್ನು ವೃದ್ಧಿಪಡಿಸು. ಧನಸಮೃದ್ಧಿಯನ್ನೂ ಹೆಚ್ಚಾಗುವಂತೆ ಮಾಡು.

ಎಲೈ ಯೂಪವೇ! ನೀನು ಹಗ್ಗದಿಂದ ಸುತ್ತುವರಿಯಲ್ಪಟ್ಟಿರುವೆ. ಹಾಗೆಯೇ ಮರುದ್ಗಣಾದಿ ದೇವತೆಗಳೂ ನಿನ್ನನ್ನು ಸುತ್ತುವರಿಯಲಿ. ಈ ಯಜಮಾನನೂ ಧನಸಮೃದ್ಧಿಯಿಂದಲೂ, ಪುತ್ರ-ಭೃತ್ಯಾದಿಗಳಿಂದಲೂ ಯಾವಾಗಲೂ ಸುತ್ತುವರಿಯಲ್ಪಟ್ಟಿರಲಿ. ಸಂಪತ್ತಿನ ಸಮೃದ್ಧಿಯುಳ್ಳವನಾಗಲಿ. ಮಕ್ಕಳೂ ಸೇವಕರೂ ಇವನನ್ನು ಸೇವಿಸುತ್ತಿರಲಿ.

ಪರಿವೀರಸಿ ಪರಿ ತ್ವಾ ದೈವೀರ್ವಿಶೋ ವ್ಯಯಂತಾಂ

ಪರೀಮಗ್ಂ ರಾಯಸ್ಪೋಷೋ ಯಜಮಾನಂ ಮನುಷ್ಯಾ

ಅಂತರಿಕ್ಷಸ್ಯ ತ್ವಾ ಸಾನಾವವಗೂಹಾಮಿ ॥ ೬ - 11 ॥

[ಉಶ್ಮಸೀ ಪೋಷಮೇಕಾನ್ನವಿಗ್ಂಶತಿಶ್ಚ ॥]

---

ಪರಿವೀರಿತಿ ಪರಿ-ವೀಃ । ಅಸಿ । ಪರೀತಿ । ತ್ವಾ । ದೈವೀಃ । ವಿಶಃ । ವ್ಯಯಂತಾಮ್ । ಪರೀತಿ । ಇಮಮ್ । ರಾಯಃ । ಪೋಷಃ । ಯಜಮಾನಮ್ । ಮನುಷ್ಯಾಃ । ಅಂತರಿಕ್ಷಸ್ಯ । ತ್ವಾ । ಸಾನೌ । ಅವೇತಿ । ಗೂಹಾಮಿ ॥ ೬ ॥

---

| ಮಂತ್ರ | ವಿನಿಯೋಗ |
|---|---|
| ಪರಿವೀರಸಿ.....ಮನುಷ್ಯಾಃ । | ಯೂಪವನ್ನು ರಜ್ಜುವಿನಿಂದ ಪ್ರದಕ್ಷಿಣವಾಗಿ [illegible] ಸುತ್ತು [illegible]ಲು. |
| ಅಂತರಿಕ್ಷಸ್ಯ.....ಗೂಹಾಮಿ । | ಸ್ವರು [ಮರದ ಚಕ್ಕೆ] ವನ್ನು ಯೂಪವನ್ನು ಸುತ್ತಿರುವ ಮಧ್ಯದ ಹಗ್ಗದಲ್ಲಿ ಒಳಗೆ ಸೇರಿಸಲು. |

---

ಪರಿವೀಃ ಅಸಿ = ಹಗ್ಗದಿಂದ ಸುತ್ತುವರಿಯಲ್ಪಟ್ಟಿದ್ದೀಯೆ; ದೈವೀಃ ವಿಶಃ= ದೇವಸಂಬಂಧಿಯಾದ ಮರುದ್ಗಣಾದಿ ಪ್ರಜೆಗಳು; ತ್ವಾ = ನಿನ್ನನ್ನು; ಪರಿವ್ಯಯಂತಾಮ್ = ಸುತ್ತುವರಿಯಲಿ; ಇಮಮ್ ಯಜಮಾನಮ್ = ಈ ಯಜಮಾನನನ್ನು; ರಾಯಃ ಪೋಷಃ = ಧನಸಂಪತ್ತಿಯೂ; ಮನುಷ್ಯಾಃ = ಪುತ್ರ-ಭೃತ್ಯಾದಿ ಮನುಷ್ಯರೂ; ಪರಿವ್ಯಯಂತಾಮ್ = ಸುತ್ತುವರೆದಿರಲಿ. ❖[ಎಲೈ ಸ್ವರುವೇ!] ತ್ವಾ = ನಿನ್ನನ್ನು; ಅಂತರಿಕ್ಷಸ್ಯ = ಅಂತರಿಕ್ಷದ ಮಧ್ಯದಲ್ಲಿರುವ ಹಗ್ಗದ; ಸಾನೌ= ಪಕ್ಕದಲ್ಲಿ; ಅವಗೂಹಾಮಿ = ಮುಚ್ಚಿಡುತ್ತೇನೆ.

---

ಎಲೈ ಸ್ವರುವೇ! ಯೂಪಕ್ಕೆ ಸುತ್ತಿರುವ, ಅಂತರಿಕ್ಷಸ್ಥಾನೀಯವಾದ ಮಧ್ಯಭಾಗದಲ್ಲಿರುವ ಹಗ್ಗದಲ್ಲಿ ನಿನ್ನನ್ನು ಮುಚ್ಚಿಡುತ್ತೇನೆ.

## ವಿನಿಯೋಗ ಸಂಗ್ರಹ

ಪೃಥಿ[1-6]ಷಟ್ಕಂ ಪುರೇವಾತ್ರ ಸ್ರಾವೇ[7]ಪ್ರಥಮಪಾತಿತಮ್ ।
ಶಕಲಂ ಚಾವಟೇ ಕ್ಷಿಪ್ತ್ವಾ ದೇವ್ಯೋ[8]ಽಗ್ನಿಷ್ವಾಶ್ರಿಕಾಂಜನಮ್ ॥
[9]ಸುಪ್ಯಾರೋಪಶ್ಚಷಾಲಾಗ್ರೇ ಹ್ಯದ್ಧಿ[10]ಯೂಪಂ ಸಮುಚ್ಛ್ರಯೇತ್ ।
ತೇ ತೇ[11]ಽವಟೇ ಕ್ಷಿಪೇದ್ವಿಷ್ಣೋ[12-13]ರ್ದ್ವಾಭ್ಯಾಂ ಯೂಪಸ್ಯ ಕಲ್ಪನಮ್ ॥
ಬ್ರಹ್ಮದ್ವಯಂ[14-15]ಗತೋ ಯೂಪೋ ರಜ್ವಾ ಸಂವೇಷ್ಟನಂ ಪರಿ[16] ।
ಅಂತ[17]ಸ್ಸರುಂ ತತ್ರ ಗೂಹೇದಿತಿ ಸಪ್ತದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ - 17

ಆಪಸ್ತಂಬ - 17

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

।

**೭) ಸ್ರಾವೇಶೋ.....ವಿಶ್ವಾತ್ ।** ಅಗ್ರೇಗಾಃ = ಅಗ್ರೇ ಯೂಪಾದ್ಗಚ್ಛತಿ/ಪರಾಪತತಿ ಇತಿ = ಯೂಪಕ್ಕಿಂತಲೂ ಮೊದಲೇ ಯೂಪವೃಕ್ಷವನ್ನು ಕಡಿಯುವಾಗ ಬೀಳುವುದು (ಯೂಪಶಕಲ). ಯೂಪಕ್ಕಿಂತಲೂ ಮೊದಲೇ ಅವಟದಲ್ಲಿ ಶಕಲವನ್ನು ಹಾಕುವುದರಿಂದ ಯೂಪಕ್ಕಿಂತಲೂ ಮೊದಲು ಯಜ್ಞಸಾಧನವಾಗುವಂತಹುದು.

॥

**೧೧) ತೇ ತೇ.....ಭೂರೇಃ ।** ಯತ್ರ ಭೂರಿಶೃಂಗಾ ಅಯಾಸಃ ಗಾವಃ । ಯತ್ರ = ಎಲ್ಲಿ; ಗಾವಃ = ರಶ್ಮಯಃ = ರಶ್ಮಿಗಳು; ಭೂರಿಶೃಂಗಾಃ = ಬಹ್ವಗ್ರಾಃ = ಹಲವು ಮುಖಗಳುಳ್ಳವುಗಳಾಗಿ; ಅಯಾಸಃ = ಹರಡಿಕೊಂಡಿರುತ್ತವೆಯೋ;

ಅತ್ರ ಅಹ = ಅತ್ರೈವ ['ಅಹ' ಎಂಬುದು ನಿಶ್ಚಯಾರ್ಥಕವಾಗಿದೆ] ತತ್ = ವಿಶ್ವವನ್ನು ಅಳೆದ ಆ; ಪರಮಂ ಪದಮ್ = ಉತ್ತಮವಾದ ತ್ರಿವಿಕ್ರಮಸ್ವರೂಪವೂ; ಅವಭಾತಿ = [ಆ ಸ್ಥಾನಗಳಲ್ಲಿಯೇ] ಪ್ರಕಾಶಮಾನವಾಗಿದೆ.

॥

**೧೨) ವಿಷ್ಣೋಃ......ಸಖಾ ।** ಯುಜ್ಯಃ = ಯೋಗಿಗಳಲ್ಲಿರುವ.

॥

**೧೩) ತದ್ವಿಷ್ಣೋಃ......ತತಮ್ ।** ಸರ್ವೇಷಾಂ ಚಕ್ಷುಃಸ್ಥಾನೀಯಂ ಸೂರ್ಯ

ಮಂಡಲಮಿಹ ಚಕ್ಷುರುಚ್ಯತೇ । ಸೂರ್ಯಮಂಡಲಮಿವ ಯತ್ ಆತ್ಮಪ್ರಕಾಶ ಸ್ವರೂಪಂ ತತ್ ಸೂರಯಃ ಸದಾ ಹೃದಿ ಪಶ್ಯಂತಿ = ಆತ್ಮಜ್ಞಾನಿಗಳಾದ ವೇದಾಂತ ವಿದ್ವಾಂಸರು ಸೂರ್ಯಮಂಡಲದಂತಿರುವ ಆತ್ಮಪ್ರಕಾಶಸ್ವರೂಪವನ್ನು ತಮ್ಮ ಹೃದಯದಲ್ಲಿ ಯಾವಾಗಲೂ ನೋಡುತ್ತಾರೆ.

### ಆ) ಮೀಮಾಂಸಾ

೧. ಯೂಪಸ್ಥಾಪನೆಯ ಪ್ರದೇಶವು ಯಾವುದು? [ಜೈ.ಸೂ. 3.7.]

ಅಗ್ನೀಷೋಮೀಯಪಶುಯಾಗದಲ್ಲಿ 'ಅರ್ಧಮಂತರ್ವೇದಿ ಮಿನೋತಿ; ಅರ್ಧಂ ಬಹಿರ್ವೇದಿ' ಎಂಬ ವಾಕ್ಯವು ಯೂಪಸ್ಥಾಪನೆ ಮಾಡುವ ಪ್ರದೇಶವನ್ನು ತಿಳಿಸುತ್ತದೆ. ಇಲ್ಲಿ ಅಂತರ್ವೇದಿಯ ಅರ್ಧಭಾಗವು ಯೂಪಾಂಗವೇ? ಅಥವಾ ಲಾಕ್ಷಣಿಕವಾದ ಲೌಕಿಕಪ್ರದೇಶವೇ? ಎಂಬುದು ಸಂಶಯ.

'ಅಂತರ್ವೇದಿ' ಎಂಬ ಶಬ್ದಕ್ಕೆ ಲಕ್ಷಣಾವೃತ್ತಿಯಿಂದ ಲೌಕಿಕಪ್ರದೇಶ ಎಂಬ ಅರ್ಥವನ್ನು ಹೇಳಬೇಕಾಗುವುದರಿಂದ, ಲಕ್ಷಣೆಯು ಯುಕ್ತವಲ್ಲದುದರಿಂದ 'ಅಂತರ್ವೇದಿ'ಯ ಭಾಗವೂ ಯೂಪಾಂಗವೇ ಆಗುತ್ತದೆ ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; 'ಅಂತರ್ವೇದಿ' ಎಂಬಲ್ಲಿ ಲಕ್ಷಣೆಯನ್ನು ಮಾಡದೆ ಸಂಸ್ಕರಿಸಲ್ಪಟ್ಟ ವೇದಿಯ ಒಳಭಾಗವು ಯೂಪಾಂಗವಾಗುವುದಾದರೆ 'ಅರ್ಧಂ ಬಹಿರ್ವೇದಿ' ಎಂಬ ವಾಕ್ಯದಿಂದ ಸಂಸ್ಕರಿಸಲ್ಪಡದ ವೇದಿಯ ಹೊರಭಾಗವೂ ಯೂಪಾಂಗವಾಗಿ ವಿಹಿತವಾಗಬೇಕಾಗುತ್ತದೆ. ಹೀಗೆ ಮಾಡಿದರೆ ವಾಕ್ಯಭೇದವು ಉಂಟಾಗುವುದು. ಆದುದರಿಂದ ಲಾಕ್ಷಣಿಕವಾಗಿ ಯೂಪಸ್ಥಾಪನೋಚಿತವಾದ ಲೌಕಿಕ ದೇಶವು ಯೂಪಾಂಗವಾಗಿ ವಿಹಿತವಾಗುತ್ತದೆ.

### ಇ) ಛಂದಸ್ಸು

| | |
|---|---|
| ೧) ತೇ ತೇ ಧಾಮಾನಿ.......ಭೂರೇಃ । | ತ್ರಿಷ್ಟುಪ್ |
| ೨) ವಿಷ್ಣೋಃ.......ಸಖಾ । | ಗಾಯತ್ರೀ |
| ೩) ತದ್ವಿಷ್ಣೋಃ......ಚಕ್ಷುರಾತತಮ್ । | ಗಾಯತ್ರೀ |

## ॥ ಸಪ್ತಮೋಽನುವಾಕಃ ॥

**ಇಷೇ ತ್ವೋಪವೀರಸ್ಯುಪೋ ದೇವಾನ್ದೈವೀರ್ವಿಶಃ ಪ್ರಾಗು**

---

ಇಷೇ । ತ್ವಾ । ಉಪವೀರಿತ್ಯುಪ-ವೀಃ । ಅಸಿ ।* ಉಪೋ ಇತಿ । ದೇವಾನ್ । ದೈವೀಃ। ವಿಶಃ । ಪ್ರ । ಅಗುಃ ।

---

ಆರನೆಯ ಅನುವಾಕದಲ್ಲಿ ಯೂಪಸ್ಥಾಪನವನ್ನು ಹೇಳಿಯಾಯಿತು. ಈ ಏಳನೆಯ ಅನುವಾಕದಲ್ಲಿ ಪಶುವನ್ನು ಯೂಪದಲ್ಲಿ ಕಟ್ಟುವುದಕ್ಕಾಗಿ ಪಶೂಪಾಕರಣವು ಹೇಳಲ್ಪಡುತ್ತದೆ.

| ಮಂತ್ರ | ವಿನಿಯೋಗ |
|---|---|
| ಇಷೇ ತ್ವಾ । | ಎರಡು ದರ್ಭೆಗಳನ್ನು ತೆಗೆದುಕೊಳ್ಳಲು |
| ಉಪವೀರಸಿ......ರಮಧ್ವಮ್ । | ಪಶೂಪಾಕರಣವನ್ನು ಮಾಡಲು -ಬೌಧಾಯನ |
| ೧) ಉಪವೀರಸಿ । | ಪ್ಲಕ್ಷಮರದ ಕೊಂಬೆಯನ್ನು ತೆಗೆದುಕೊಳ್ಳಲು. |
| ೨) ಉಪೋ......ರಮಧ್ವಮ್ । | ಪಶೂಪಾಕರಣವನ್ನು ಮಾಡಲು —ಆಪಸ್ತಂಬ |

---

[ಎಲೈ ಬರ್ಹಿಸ್ಸೇ!] ಇಷೇ = ದೇವಾನ್ನರೂಪವಾದ/ದೇವತೆಗಳಿಂದ ಅಪೇಕ್ಷಿಸಲ್ಪಡುವ [ಪಶುವಿನ ಉಪಾಕರಣಕ್ಕಾಗಿ*] ತ್ವಾ = ನಿನ್ನನ್ನು; ಆದದೇ = ತೆಗೆದುಕೊಳ್ಳುತ್ತೇನೆ. ❖ ಎಲೈ ಪ್ಲಕ್ಷಶಾಖೆಯೇ! ನೀನು; ಉಪವೀಃ=ಉಪಾಕರಣ ಮಾಡಲು ಹೋಗತಕ್ಕದ್ದಾಗಿ; ಅಸಿ=ಇರುವೆ; [ಎಲೈ ಪಶುವೇ! ನೀನು; ಉಪವೀಃ ಅಸಿ=ದೇವತೆಗಳಿಗಾಗಿ ಸಂಕಲ್ಪಿಸಲ್ಪಟ್ಟದ್ದಾಗಿರುವೆ]. [ಉಪಾಕರಣ ಮಾಡಲ್ಪಟ್ಟ ಪಶುವಿನ ಹೃದಯವೇ ಮೊದಲಾದ ಅವಯವಗಳು] ದೇವಾನ್=[ಅಗ್ನೀಷೋಮಾದಿ]ದೇವತೆಗಳನ್ನು; ಉಪೋ=ಸಮೀಪದಲ್ಲಿ; ಪ್ರಾಗುಃ

---

ಎಲೈ ದರ್ಭೆಯೇ! ದೇವತೆಗಳಿಗೆ ಅನ್ನರೂಪವಾದದ್ದೂ, ದೇವತೆಗಳಿಂದ ಬಯಸ

---

*ಉಪಾಕರಣ = ದೇವತೆಗಳಿಗೆಂದು ಸಂಕಲ್ಪಿಸುವುದು.

ವಹ್ನೀರುಶಿಜೋ ಬೃಹಸ್ಪತೇ ಧಾರಯಾ ವಸೂನಿ ಹವ್ಯಾ ತೇ ಸ್ವದಂತಾಂ ದೇವತ್ವಷ್ಟರ್ವಸು ರಣ್ವ ರೇವತೀ ರಮಧ್ವಮಗ್ನೇ-

ವಹ್ನೀಃ। ಉಶಿಜಃ। ಬೃಹಸ್ಪತೇ । ಧಾರಯ । ವಸೂನಿ। ಹವ್ಯಾ । ತೇ। ಸ್ವದಂತಾಮ್ । ದೇವ । ತ್ವಷ್ಟಃ । ವಸು । ರಣ್ವ । ರೇವತೀಃ । ರಮಧ್ವಮ್* । ಅಗ್ನೇಃ ।

| ಮಂತ್ರ | ವಿನಿಯೋಗ |
| --- | --- |
| ಅಗ್ನೇಃ.........ಅಸಿ । | ಅಗ್ನಿಮಥನದಂಡವನ್ನು ಇಡಲು |

=ಹೊಂದಿದವು; ದೈವೀಃವಿಶಃ= ದೇವಸಂಬಂಧಿ ಪ್ರಜೆಗಳನ್ನೂ; ಪ್ರಾಗುಃ = ಹೊಂದಿದವು; ವಹ್ನೀಃ = ಯಾಗನಿರ್ವಾಹಕರಾದ; ಉಶಿಜಃ = ಹುತಶೇಷಭಕ್ಷಣ ಮಾಡುವ ಕಾಮನೆ ಯುಳ್ಳ ಋತ್ವಿಜರನ್ನೂ; ಪ್ರಾಗುಃ=ಹೊಂದಿದವು; ಬೃಹಸ್ಪತೇ = ಬೃಹಸ್ಪತಿಯೇ! ವಸೂನಿ = [ಹೃದಯಾದಿ] ದ್ರವ್ಯಗಳನ್ನು; ಧಾರಯ=ಪೋಷಿಸು; [ಎಲೈ ಪಶುವೇ!] ತೇ = ನಿನ್ನ; ಹವ್ಯಾ=ಹೃದಯಾದಿ ಹವ್ಯಗಳು; ಸ್ವದಂತಾಮ್= ರುಚಿಕರವಾಗಲಿ. ದೇವ ತ್ವಷ್ಟಃ = ತ್ವಷ್ಟೃದೇವನೇ! ವಸು= ಪಶುದ್ರವ್ಯಗಳನ್ನು; ರಣ್ವ = ಮನೋಹರವಾಗುವಂತೆ ಮಾಡು; ರೇವತೀಃ=ಕ್ಷೀರಾದಿಧನಸಮೃದ್ಧಿಯುಳ್ಳ ಪಶುಗಳೇ! ರಮಧ್ವಮ್= [ಯಜಮಾನನ ಮನೆ ಯಲ್ಲಿ] ಸಂತೋಷವಾಗಿರಿ; ⁘ ಎಲೈ ಅಗ್ನಿಮಂಥನಶಕಲವೇ! ನೀನು; ಅಗ್ನೇಃ=ಅಗ್ನಿಯ;

---

ತಕ್ಕದ್ದೂ ಆಗಿರುವ ಈ ಪಶುವಿನ ಉಪಾಕರಣಕ್ಕಾಗಿ ನಿನ್ನನ್ನು ತೆಗೆದುಕೊಳ್ಳುತ್ತೇನೆ.

ಎಲೈ! ಪ್ಲಕ್ಷಶಾಖೆಯೇ! ನೀನು ಪಶೂಪಾಕರಣ ಮಾಡಲು ಹೋಗಲಿರುವೆ. [ಎಲೈ ಪಶುವೇ! ನೀನು ದೇವತೆಗಳಿಗಾಗಿ ಸಂಕಲ್ಪಿಸಲ್ಪಟ್ಟದ್ದಾಗಿರುವೆ.]

ಈ ಪಶುವು ದೇವತೆಗಳಿಗಾಗಿ ಉಪಾಕರಣ ಮಾಡಲ್ಪಡುತ್ತಿದೆ. ಆದುದರಿಂದ ಈ ಪಶುವಿನ ಹೃದಯಾದ್ಯವಯವಗಳು ಅಗ್ನೀಷೋಮಾದಿ ದೇವತೆಗಳನ್ನು ಸಮೀಪ ದಲ್ಲಿಯೇ ಹೊಂದಿವೆ. ದೇವಪ್ರಜೆಗಳಾದ ಮರುದಾದಿಗಳನ್ನೂ ಹೊಂದಿವೆ. ಹವ್ಯಶೇಷ ವನ್ನು ಭಕ್ಷಿಸಲು ಇಚ್ಛೆಯುಳ್ಳ ಯಜ್ಞದ ನಿರ್ವಾಹಕರಾದ ಋತ್ವಿಜರನ್ನೂ ಸಮೀಪ ದಲ್ಲಿಯೇ ಹೊಂದಿವೆ. ಬೃಹಸ್ಪತಿದೇವನೇ! ಈ ಪಶುವಿನ ಹೃದಯಾದಿ ಹವ್ಯಗಳೆಂಬ ಧನಗಳನ್ನು ಪೋಷಿಸು. ಎಲೈ! ಪಶುವೇ! ನಿನ್ನ ಹವ್ಯಗಳು ರುಚಿಕರವಾಗಿರಲಿ. ಎಲೈ!

**ಜನಿತ್ರಮಸಿ ವೃಷಣೌ ಸ್ಥ ಉರ್ವಶ್ಯಸ್ಯಾಯುರಸಿ ಪುರೂರವಾ**

---

ಜನಿತ್ರಮ್। ಅಸಿ । ವೃಷಣೌ । ಸ್ಥಃ । ಉರ್ವಶೀ। ಅಸಿ । ಆಯುಃ । ಅಸಿ । ಪುರೂರವಾಃ।

---

| ಮಂತ್ರ | ವಿನಿಯೋಗ |
|---|---|
| ವೃಷಣೌ ಸ್ಥಃ । | ಪ್ರಾಗಗ್ರವಾಗಿ ಎರಡು ದರ್ಭೆಗಳನ್ನಿಡಲು. |
| ಉರ್ವಶ್ಯಸಿ । | ಅಧರಾರಣಿಯನ್ನು ತೆಗೆದುಕೊಳ್ಳಲು |
| ಆಯುರಸಿ ಪುರೂರವಾಃ । | ಉತ್ತರಾರಣಿಯನ್ನು ತೆಗೆದುಕೊಳ್ಳಲು –ಬೌಧಾಯನ |
| ೧) ಪುರೂರವಾಃ । | ಉತ್ತರಾರಣಿಯನ್ನು ತೆಗೆದುಕೊಳ್ಳಲು –ಆಪಸ್ತಂಬ |



---

ಜನಿತ್ರಮ್ ಅಸಿ = ಉತ್ಪಾದಕನಾಗಿದ್ದೀಯೆ. + ಎಲೈ ದರ್ಭೆಗಳೇ! ನೀವಿಬ್ಬರು; ವೃಷಣೌ ಸ್ಥಃ = ವೀರ್ಯಸೇಚಕರಾಗಿದ್ದೀರಿ. + [ಎಲೈ ಅಧರಾರಣಿಯೇ! ನೀನು] ಉರ್ವಶೀ ಅಸಿ = ಉರ್ವಶೀಸದೃಶಳಾಗಿದ್ದೀಯೆ. + [ಎಲೈ ಉತ್ತರಾರಣಿಯೇ! ನೀನು] ಪುರೂರವಾಃ ಅಸಿ = ಪುರೂರವಸ್ಸದೃಶನಾಗಿದ್ದೀಯೆ. [ಆಯುರಸಿ ಪುರೂರವಾಃ = ಪುತ್ರನಂತಿರುವ ಅಗ್ನಿಯನ್ನು ಉತ್ಪತ್ತಿ ಮಾಡಿ ಪುರೂರವಸ್ಸದೃಶನಾಗಿರುವೆ]

---

ತ್ವಷ್ಟೃದೇವನೇ! ಪಶುದ್ರವ್ಯವನ್ನು ಮನಸ್ಸಿಗೆ ಆಕರ್ಷಕವಾಗುವಂತೆ ಮಾಡು. ಕ್ಷೀರಾದಿ ಧನಸಮೃದ್ಧಿಯುಳ್ಳ ಪಶುಗಳು ಯಜಮಾನನ ಮನೆಯಲ್ಲಿ ಸಂತೋಷವಾಗಿರಲಿ.

ಎಲೈ! ಅಗ್ನಿಮಂಥನಶಕಲವೇ! ನೀನು ಅಗ್ನಿಯ ಉತ್ಪಾದಕನಾಗಿರುವೆ.

ಎಲೈ! ದರ್ಭೆಗಳೇ! ನೀವು ಇಬ್ಬರು ವೀರ್ಯಸೇಚಕರಾಗಿದ್ದೀರಿ.

ಎಲೈ! ಅಧರಾರಣಿಯೇ! ನೀನು ಉರ್ವಶಿಯಂತಿರುವೆ.

ಎಲೈ! ಉತ್ತರಾರಣಿಯೇ! ನೀನು ಪುರೂರವನಿಗೆ ಸದೃಶನಾಗಿರುವೆ.

ಎಲೈ! ಎರಡು ಅರಣಿಗಳೇ! ನೀವು ತುಪ್ಪದಿಂದ ಲೇಪಿಸಲ್ಪಟ್ಟವರಾಗಿ ತೇಜಃ

## ಘೃತೇನಾಕ್ತೇ ವೃಷಣಂ ದಧಾಥಾಂ ಗಾಯತ್ರಂ ಛಂದೋಽನು

ಘೃತೇನ । ಅಕ್ತೇ ಇತಿ। ವೃಷಣಮ್ । ದಧಾಥಾಮ್। ಗಾಯತ್ರಮ್। ಛಂದಃ । ಅನು।

---

| ಮಂತ್ರ | ವಿನಿಯೋಗ |
|---|---|
| ಘೃತೇನಾಕ್ತೇ.....ದಧಾಥಾಮ್ । | ಆಜ್ಯಸ್ಥಾಲಿಯನ್ನು ಅರಣಿಗಳನ್ನು ಅದ್ದಲು-ಬೌ. ಅರಣಿಗಳನ್ನು ಅಭಿಮಂತ್ರಿಸಲು –ಆಪಸ್ತಂಬ |
| ೨) ಆಯುರಸಿ । | ಎರಡೂ ಅರಣಿಗಳನ್ನು ಜೋಡಿಸಲು– ಆಪ. |
| ಗಾಯತ್ರಂ........ಪ್ರಜಾಯಸ್ವ । | [ಪ್ರಜಾತಿ] ಎಂಬ ಸಂಜ್ಞೆಯುಳ್ಳ ಈ ಮಂತ್ರಗಳು [ಗಾಯತ್ರಂ... ತ್ರೈಷ್ಟುಭಂ... ಜಾಗತಮ್] |
| ತ್ರೈಷ್ಟುಭಂ........ಪ್ರಜಾಯಸ್ವ | ಯಜಮಾನನು ವಾಚನ ಮಾಡಲು– ಬೌ. |

---



✢ [ಎಲೈ ಅರಣಿದ್ವಯವೇ! (ನೀವಿಬ್ಬರೂ)] ಘೃತೇನ ಅಕ್ತೇ = ತುಪ್ಪದಿಂದ ತೋಯಿಸಲ್ಪಟ್ಟವರಾಗಿ; ವೃಷಣಮ್ =ವೀರ್ಯಸೇಚನವನ್ನು; ದಧಾಥಾಮ್=ಪೋಷಿಸಿರಿ; ✢ [ಎಲೈ! ಅರಣಿದ್ವಯವೇ! ನೀವಿಬ್ಬರೂ ಮಾತಾಪಿತೃಸ್ಥಾನೀಯರಾಗಿದ್ದು] ಆಯುಃ ಅಸಿ =[ಪುತ್ರಸ್ಥಾನೀಯನಾದ ಅಗ್ನಿಯನ್ನು ಉತ್ಪತ್ತಿ ಮಾಡಿ ಯಾಗನಿರ್ವಾಹಕಗಳಾದುದರಿಂದ ಯಜ್ಞದ] ಆಯುಃಸ್ವರೂಪರಾಗಿದ್ದೀರಿ; [illegible] [ಎಲೈ ಅಗ್ನಿಯೇ!] ಗಾಯತ್ರಮ್ ಛಂದಃ = [ಹೋತೃವು ಹೇಳುವ] ಗಾಯತ್ರೀಛಂದಸ್ಸಿನ ಮಂತ್ರವನ್ನು; ಅನು = ಗಮನಿಸಿ;

---

ಸೇಚನವನ್ನು ಸಮರ್ಥಿಸಿರಿ. ನೀವು ಮಾತಾಪಿತೃಸ್ಥಾನೀಯರು.*

ಎಲೈ! ಅರಣಿದ್ವಯವೇ! ಆಯುಃಸದೃಶನಾದ ಅಗ್ನಿಯನ್ನು ಉತ್ಪಾದಿಸಿ ಯಜ್ಞಸಾಧಕರಾಗಿ ಯಜ್ಞದ ಆಯುಃಸಾಧಕರೂ ಆಗಿರಿ.

---

*ಈ ಅಗ್ನಿಮಥನಪ್ರಕರಣವು ಶ್ರುತಿಯಲ್ಲಿ ಮಾನವಸಹಜವಾದ ಉತ್ಪಾದಕಕ್ರಿಯೆಯಂತೆ ಹೇಳಲ್ಪಟ್ಟಿದೆ. ಅಧರಾರಣಿಯು ಮಾತೃಸ್ಥಾನೀಯ; ಉತ್ತರಾರಣಿಯು ಪಿತೃಸ್ಥಾನೀಯ; ಉತ್ಪನ್ನವಾಗುವ ಅಗ್ನಿಯು ಪುತ್ರನಂತೆ. ಹಾಗೆಯೇ ಮಂಥನದಂಡವು ಜನನೇಂದ್ರಿಯ. ದರ್ಭದ್ವಯಗಳು ವೃಷಣಗಳೆಂದೂ ಉಕ್ತವಾಗಿದೆ.
ಪುರೂರವನು ಮೇಘರಾಜನೆಂದೂ, ಉರ್ವಶಿಯು ಅಂತರಿಕ್ಷದೇವತೆಯೆಂದೂ, ವರ್ಷ(ಮಳೆ)ವು ಪುತ್ರಸ್ವರೂಪನೆಂದೂ ಮಳೆಯಿಂದ ಸಸ್ಯವೃದ್ಧಿಯಾಗುವಂತೆ ಉರ್ವಶಿಯು ಲೋಕದ ಆಯುರ್ವೃದ್ಧಿಯನ್ನು ಮಾಡುತ್ತಾಳೆಂದು ನಿರುಕ್ತಕಾರರ ಮತ. ವೇದದಲ್ಲಿ ಬರುವ ಉರ್ವಶೀ-ಪುರೂರವರ ಕಥೆಯು ಪುರಾಣಗಳಲ್ಲಿಯೂ ಇದೆ. ಇದನ್ನೇ ಆಧಾರವಾಗಿಟ್ಟು ಕಾಳಿದಾಸನು 'ವಿಕ್ರಮೋರ್ವಶೀಯ' ನಾಟಕವನ್ನು ಬರೆದಿದ್ದಾನೆ,

ಪ್ರಜಾಯಸ್ವ ತ್ರೈಷ್ಟುಭಂ* ಜಾಗತಂ ಛಂದೋಽನು

ಪ್ರಜಾಯಸ್ವ ಭವತಂ [೧] ನಃ ಸಮನಸೌ

---

ಪ್ರೇತಿ । ಜಾಯಸ್ವ । ತ್ರೈಷ್ಟುಭಮ್ । ಜಾಗತಮ್ । ಛಂದಃ । ಅನು । ಪ್ರೇತಿ ।

ಜಾಯಸ್ವ । ಭವತಮ್ (೧) ನಃ । ಸಮನಸಾವಿತಿ ಸ-ಮನಸೌ ।

---

| ಮಂತ್ರ | ವಿನಿಯೋಗ |
|---|---|
| ಜಾಗತಂ.....ಪ್ರಜಾಯಸ್ವ । | ಮೊದಲನೆಯ ಬಾರಿ, ಎರಡನೆಯ ಬಾರಿ ಮತ್ತು ಮೂರನೆಯ ಬಾರಿ ಅಗ್ನಿಮಂಥನವನ್ನು ಮಾಡಲು–ಆಪಸ್ತಂಬ. |

---

**ಪ್ರಜಾಯಸ್ವ** = ಉತ್ಪನ್ನನಾಗು; ✣ [ಹಾಗೆಯೇ] **ತ್ರೈಷ್ಟುಭಂ ಛಂದಃ** = ತ್ರಿಷ್ಟುಪ್ ಛಂದಸ್ಸಿನ ಮಂತ್ರವನ್ನು; **ಅನುಪ್ರಜಾಯಸ್ವ** = ಅನುಸರಿಸಿ ಹುಟ್ಟು; [ಹಾಗೆಯೇ] ✣ **ಜಾಗತಂ ಛಂದಃ** = ಜಾಗತೀಛಂದಸ್ಸಿನ ಮಂತ್ರವನ್ನು; **ಅನು ಪ್ರಜಾಯಸ್ವ** = ಅನುಸರಿಸಿ ಚೆನ್ನಾಗಿ ಹುಟ್ಟು. ✣ **ಜಾತವೇದಸೌ** = [ಎಲೈ ಜ್ಞಾನಸಂಪನ್ನರಾದ ಅಥವಾ ಧನಸಂಪನ್ನ ರಾದ] ಮೊದಲು ಇರುವ ಆಹವನೀಯಾಗ್ನಿ ಮತ್ತು ಮಥನದಿಂದ ಉತ್ಪನ್ನವಾಗಿ ಆಹವನೀಯಾಗ್ನಿಯಲ್ಲಿ ಪ್ರಹೃತವಾಗಿರುವ ಅಗ್ನಿಗಳೇ! [ನೀವು] **ನಃ** = ನಮ್ಮ ವಿಷಯದಲ್ಲಿ; **ಸಮನಸೌ** = ಸಮಾನವಾದ ಮನಸ್ಸುಳ್ಳವರಾಗಿಯೂ;

---

ಎಲೈ ಅಗ್ನಿಯೇ! ಹೋತೃವು ಹೇಳುವ ಗಾಯತ್ರಮಂತ್ರವನ್ನು ಅನುಸರಿಸಿ ಮಂಥನದಿಂದ ಹುಟ್ಟು. ತ್ರೈಷ್ಟುಭಮಂತ್ರವನ್ನು ಅನುಸರಿಸಿ ಜನಿಸು; ಜಗತೀ ಛಂದಸ್ಸಿನ ಮಂತ್ರವನ್ನು ಅನುಸರಿಸಿ ಉತ್ಪನ್ನನಾಗು.

ಮೊದಲು ಇರುವ ಆಹವನೀಯಾಗ್ನಿಯೇ! ಮತ್ತು ಈಗ ಮಥನದಿಂದ ಉತ್ಪನ್ನ ನಾಗಿ ಆಹವನೀಯದಲ್ಲಿ ಹಾಕಲ್ಪಟ್ಟಿರುವ ಅಗ್ನಿಯೇ! ನೀವಿಬ್ಬರೂ ನಮ್ಮ ವಿಷಯದಲ್ಲಿ

**ಸಮೋಕಸಾವರೇಪಸೌ । ಮಾ ಯಜ್ಞಗ್ಂ ಹಿಗ್ಂಸಿಷ್ಟಂ ಮಾ ಯಜ್ಞಪತಿಂ ಜಾತವೇದಸೌ ಶಿವೌ ಭವತಮದ್ಯ ನಃ ॥**

---

ಸಮೋಕಸಾವಿತಿ ಸಮ್-ಓಕಸೌ । ಅರೇಪಸೌ ॥ ಮಾ । ಯಜ್ಞಮ್ । ಹಿಗ್ಂಸಿಷ್ಟಮ್। ಮಾ । ಯಜ್ಞಪತಿಮಿತಿ ಯಜ್ಞ-ಪತಿಮ್ । ಜಾತವೇದಸಾವಿತಿ ಜಾತ-ವೇದಸೌ । ಶಿವೌ। ಭವತಮ್ । ಅದ್ಯ । ನಃ ॥

---



| ಮಂತ್ರ | ವಿನಿಯೋಗ |
|---|---|
| ಭವತಂ.......ಭವತಮದ್ಯ ನಃ। | ಮಥನದಿಂದ ಉತ್ಪನ್ನವಾಗುವ ಅಗ್ನಿಯನ್ನು ಆಹವನೀಯದಲ್ಲಿ ಹಾಕಲು –ಬೌಧಾಯನ ಪರಿಧಿಯನ್ನು ಆಹವನೀಯದಲ್ಲಿ ಪ್ರಹರಣ ಮಾಡಲು –ಆಪಸ್ತಂಬ. |

---

**ಸಮೋಕಸೌ** = ಸಮಾನವಾದ ವಾಸಸ್ಥಾನವುಳ್ಳವರಾಗಿಯೂ; **ಅರೇಪಸೌ** = ಪಾಪ ಚಿಂತನೆಯಿಲ್ಲದ ಮನಸ್ಸುಳ್ಳವರಾಗಿಯೂ; **ಭವತಮ್** = ಆಗಿರಿ. **ಯಜ್ಞಮ್** = ಯಜ್ಞವನ್ನು; **ಮಾ ಹಿಗ್ಂಸಿಷ್ಟಮ್** = ಹಿಂಸಿಸಬೇಡಿರಿ; [ತೊಂದರೆಯಾಗುವಂತೆ ಮಾಡಬೇಡಿರಿ.] **ಯಜ್ಞಪತಿಮ್** = ಯಜಮಾನನನ್ನೂ; **ಮಾ ಹಿಗ್ಂಸಿಷ್ಟಮ್** = ತೊಂದರೆಪಡಿಸಬೇಡಿರಿ. **ಜಾತವೇದಸೌ** = ಎಲೈ ಅಗ್ನಿಗಳೇ! **ಅದ್ಯ** = ಈ ಕರ್ಮಾನುಷ್ಠಾನದಲ್ಲಿ; **ನಃ** = ನಮ್ಮ ವಿಷಯದಲ್ಲಿ; **ಶಿವೌ ಭವತಮ್** = ಶಾಂತರಾಗಿರಿ;

---

ಸಮಾನವಾದ ಒಳ್ಳೆಯ ಮನಸ್ಸುಳ್ಳವರಾಗಿರಿ. ಸಮಾನವಾದ ವಾಸಸ್ಥಾನವುಳ್ಳವರೂ ಆಗಿರಿ. ಪಾಪರಹಿತವಾದ ಮನಸ್ಸುಳ್ಳವರಾಗಿರಿ. [ಕೇಡನ್ನು ಹಾರೈಸದಿರಿ.] ಯಜ್ಞಕ್ಕೂ ಯಜಮಾನನಿಗೂ ತೊಂದರೆಯನ್ನು ಉಂಟುಮಾಡದಿರಿ. ಎಲೈ ಜಾತವೇದಸರೇ! ನಮ್ಮ ವಿಷಯದಲ್ಲಿ ನೀವು ಶಾಂತರಾಗಿರಿ.

**ಅಗ್ನಾವಗ್ನಿಶ್ಚರತಿ ಪ್ರವಿಷ್ಟ ಋಷೀಣಾಂ ಪುತ್ರೋ ಅಧಿರಾಜ**

**ಏಷಃ । ಸ್ವಾಹಾಕೃತ್ಯ ಬ್ರಹ್ಮಣಾ ತೇ ಜುಹೋಮಿ**

---

ಅಗ್ನೌ । ಅಗ್ನಿಃ । ಚರತಿ । ಪ್ರವಿಷ್ಟ ಇತಿ ಪ್ರ - ವಿಷ್ಟಃ । ಋಷೀಣಾಮ್ । ಪುತ್ರಃ ।

ಅಧಿರಾಜ ಇತ್ಯಧಿ-ರಾಜಃ। ಏಷಃ ॥ ಸ್ವಾಹಾಕೃತ್ಯೇತಿ ಸ್ವಾಹಾ-ಕೃತ್ಯ । ಬ್ರಹ್ಮಣಾ । ತೇ।

ಜುಹೋಮಿ।

---

**ಮಂತ್ರ** — **ವಿನಿಯೋಗ**

ಅಗ್ನಾವಗ್ನಿಃ........ಭಾಗಧೇಯಮ್ । — ಪರಿಧಿಪ್ರಹರಣವಾದ ಮೇಲೆ ಸ್ರುವ ದಿಂದ ಆಜ್ಯಹೋಮವನ್ನು ಮಾಡಲು

---

✣ **ಅಗ್ನೌ** = ಆಹವನೀಯಾಗ್ನಿಯಲ್ಲಿ; **ಪ್ರವಿಷ್ಟಃ** = ಪ್ರವೇಶ ಹೊಂದಿರುವ; **ಋಷೀಣಾಮ್ ಪುತ್ರಃ** = ಋತ್ವಿಜರ ಅಥವಾ ಮಂತ್ರಗಳ ಪುತ್ರನಾಗಿರುವ [ಅವರಿಂದ ಉತ್ಪನ್ನನಾಗ್ಗಿರುವ]; **ಅಧಿರಾಜಃ** = ಅಧಿಕವಾಗಿ ಪ್ರಕಾಶಿಸುತ್ತಿರುವ; **ಏಷಃ ಅಗ್ನಿಃ** = ಈ ಮಥಿತಾಗ್ನಿಯು; **ಚರತಿ** = [ಆಜ್ಯವನ್ನು] ಸ್ವೀಕರಿಸುತ್ತಾನೆ. [ಸ್ವೀಕರಿಸಲಿ]; [ಎಲೈ ಅಗ್ನಿಯೇ!] **ತೇ** = ನಿನಗೆ; **ಸ್ವಾಹಾಕೃತ್ಯ** = ಸ್ವಾಹಾಕಾರವನ್ನುಚ್ಚರಿಸಿ; **ಬ್ರಹ್ಮಣಾ** = ಮಂತ್ರದಿಂದ; **ಜುಹೋಮಿ** = ಆಹುತಿಯನ್ನು ಸಮರ್ಪಿಸುತ್ತೇನೆ;

---

ಋತ್ವಿಜರಿಂದ ಮಂತ್ರಪುರಃಸರವಾಗಿ ಉತ್ಪನ್ನನಾಗಿರುವ, ಅಧಿಕವಾಗಿ ಪ್ರಕಾಶಿಸುತ್ತಿರುವ, ಈ ಮಥಿತಾಗ್ನಿಯು ಆಹವನೀಯಾಗ್ನಿಯಲ್ಲಿ ನಿಕ್ಷಿಪ್ತನಾಗಿ ಹವ್ಯ ಭಾಗವನ್ನು ಸ್ವೀಕರಿಸುತ್ತಾನೆ. ಎಲೈ ಮಥಿತಾಗ್ನಿಯೇ! ನಿನಗೆ ಸ್ವಾಹಾಕಾರಪೂರ್ವಕವಾಗಿ

ಮಾ ದೇವಾನಾಂ ಮಿಥುಯಾ ಕರ್ಭಾಗಧೇಯಮ್ ॥ ೭-13॥

[ಭವತಮೇಕತ್ರಿಗ್ಂಶಚ್ಚ।]

---

ಮಾ। ದೇವಾನಾಮ್। ಮಿಥುಯಾ। ಕಃ। ಭಾಗಧೇಯಮಿತಿ ಭಾಗ-ಧೇಯಮ್ ॥ ೭ ॥

---

**ದೇವಾನಾಮ್** = ದೇವತೆಗಳ; **ಭಾಗಧೇಯಮ್** = ಭಾಗವನ್ನು; **ಮಾ ಮಿಥುಯಾ ಕಃ**= ಸುಳ್ಳನ್ನಾಗಿ ಮಾಡಬೇಡ. [ಅವರವರ ಭಾಗಗಳನ್ನು ಅವರವರಿಗೇ ಒಯ್ದು ಕೊಡು.]

---

ಮಂತ್ರದಿಂದ ಈ ಆಜ್ಯಾಹುತಿಯನ್ನು ಕೊಡುತ್ತೇನೆ. ದೇವತೆಗಳ ಭಾಗಗಳನ್ನು ತಪ್ಪಿಸದೇ ಅವರವರಿಗೇ ಸಿಕ್ಕುವಂತೆ ಒಪ್ಪಿಸು.



## ವಿನಿಯೋಗ ಸಂಗ್ರಹ

ಇಷೇ[1] ಬರ್ಹಿಃ ಸಮಾದತ್ತ ಉಪೇತಿ[2] ಪ್ಲಕ್ಷಶಾಖಿಕಾಮ್ ।
ಉಪ್ರೋ[3] ಪಶುಮುಪಾಕೃತ್ಯ ಹ್ಯಗ್ನೇಃ[4] ಶಕಲಸಂಸ್ಥಿತಿಃ ॥
[5]ವೃಷಾತ್ರ ದರ್ಭೌ ಸಂಸ್ಥಾಪ್ಯ ಹ್ಯುರ್ವಾ[6]ರಣಿಮಧಃ ಕ್ಷಿಪೇತ್ ।
[7]ಪುರೂತ್ತರಾಂ ಸಮಾದತ್ತ [18]ಆಯುರಿತ್ಯುಪರಿ ಕ್ಷಿಪೇತ್ ॥
ಘೃತೇ[9] ಸಂಮಂತ್ರ್ಯ ಗಾಯೇತಿ[10-12] ತ್ರಿಭಿರ್ಮಥ್ನಾತಿ ನಿಕ್ಷಿಪೇತ್ ।
ಭವ[13] ಪೂರ್ವಾನಲೇಽಥಾಗ್ನೌ[14] ಹೋಮೋ ಮಂತ್ರಾಶ್ಚತುರ್ದಶ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ 12
ಆಪಸ್ತಂಬ 14

## ಅನುವಾಕದ ವಿಶೇಷ ವಿಷಯಗಳು

### ಅ) ಭಟ್ಟ ಭಾಸ್ಕರ ಭಾಷ್ಯ

**ಮಂತ್ರಸಂಖ್ಯೆ**

2) ಉಪವೀರಸಿ = ಎಲೈ! ಪಶುವೇ! ನೀನು ದೇವತೆಗಳಿಗಾಗಿ ಉಪಾಕೃತನಾಗಿದ್ದೀಯೆ.

3) ಉಪೋ..........ರಮಧ್ವಮ್ । ಬೃಹಸ್ಪತೇ = ಹೇ ಬ್ರಹ್ಮನ್/ಬ್ರಹ್ಮಾಹಿ ಕರ್ಮಣಾಮಧ್ಯಕ್ಷಃ = ಬ್ರಹ್ಮನು ಕರ್ಮಗಳಿಗೆ ಅಧ್ಯಕ್ಷ. ವಸೂನಿ ಧಾರಯ = ಹವ್ಯಗಳನ್ನು ನಿಶ್ಚಯಿಸು. ವಸು ರಣ್ವ = ಯಜಮಾನನಲ್ಲಿ ಪಶುರೂಪವಾದ ಧನವು ಸ್ಥಿರವಾಗಿರುವಂತೆ ಮಾಡು.

6) ಉರ್ವಶ್ಯಸಿ । ಉರು = ಮಹಾಂತಮ್, ಅಶ್ನುತೇ = ಆಧಾರತ್ವೇನ ವ್ಯಾಪ್ನೋತಿ ಇತಿ ಉರ್ವಶೀ= ಆಧಾರವಾಗಿರುವುದರಿಂದ ಮಹತ್ತಾದ ಅಗ್ನಿಯನ್ನು ವ್ಯಾಪಿಸಿರುವುದರಿಂದ ಅಧರಾರಣಿಯೇ 'ಊರ್ವಶೀ'.

8) ಆಯುರಸಿ । ಆಯುಃ = ಅಗ್ನಿಃ, ಏತಿ ವಿಶ್ವಮಿತಿ ಆಯುಃ । ತನ್ನ ಕಾರ್ಯದಿಂದ ವಿಶ್ವವನ್ನು ಹೊಂದುವವನು.

7) ಪುರೂರವಾಃ । ಪುರು ರೌತಿ ಇತಿ ಪುರೂರವಾಃ = ಮಥನಕಾಲದಲ್ಲಿ ಹೆಚ್ಚು ಶಬ್ದಮಾಡುವ ಉತ್ತರಾರಣಿಯೇ 'ಪುರೂರವಸ್ಸು'. 'ಆಯುಃ' ಎಂಬುದಕ್ಕೆ ಅಗ್ನಿಯೆಂಬ ಅರ್ಥವನ್ನು ವಿವರಿಸಿ ಮಿಶ್ರರು ಅಗ್ನಿಯನ್ನು ಉತ್ಪಾದಿಸುವ ಉತ್ತರಾರಣಿಯನ್ನು 'ಆಯುಃ' ಎಂದು ವಿವರಿಸಿದ್ದಾರೆ. ಅಲ್ಲದೆ

'ಆತ್ಮಾ ವೈ ಪುತ್ರನಾಮಾಸಿ'

ಎಂಬ ಶ್ರುತಿಯಂತೆ ಪಿತಾಪುತ್ರರಿಗೆ ಅಭೇದವನ್ನು ಹೇಳಿ, 'ಆಯುಃ' ಎಂಬುದು ಪುರೂರವನಿಗೂ ಅವನ ಪುತ್ರನಿಗೂ ಹೆಸರಾಗುವುದೆಂದು ಹೇಳಿರುತ್ತಾರೆ. ಆಗ 'ಆಯುರಸಿ ಪುರೂರವಾಃ' ಎಂಬ ನಿರ್ದೇಶವು ಸಂಗತವಾಗುತ್ತದೆಯೆಂದು ವಿವರಿಸಿದ್ದಾರೆ.

9) ಘೃತೇನಾಕ್ತೇ............ದಧಾಥಾಮ್ । ವೃಷಣಂ ದಧಾಥಾಮ್ = ಕಾಮಗಳನ್ನು ಅಥವಾ ಮಳೆಯನ್ನು ವರ್ಷಿಸುವ ಅಗ್ನಿಯನ್ನು ಧರಿಸಿರಿ.

13) ಭವತಂ...........ನಃ । ಜಾತವೇದಸೌ = ಜಾತಂ/ವಿಶ್ವಮ್ - ವಿತ್ತಃ / ವಿಂದತಃ ಇತಿ ವಾ ಜಾತವೇದಸೌ= ಹುಟ್ಟಿದ ಸಮಸ್ತವನ್ನೂ ಹೊಂದುವ ಅಥವಾ ತಿಳಿಯುವ.

## ಆ) ಛಂದಸ್ಸು

೧) ಬೃಹಸ್ಪತೇ ಧಾರಯಾ ವಸೂನಿ । ವಿರಾಟ್ ಏಕಪದಾ (ಭ.ಭಾ.ಭಾ.)

೨) ಘೃತೇನಾಕ್ತೇ ವೃಷಣಂ ದಧಾಥಾಮ್ । ಏಕಪದಾ ತ್ರಿಷ್ಟುಪ್ (ಭ.ಭಾ.ಭಾ.)

೩) ಭವತಂ.............ನಃ । ಪಂಚಪದಾ ಪಂಕ್ತಿ

೪) ಅಗ್ನಾವಗ್ನಿ........ಭಾಗಧೇಯಮ್ । ಚತುಷ್ಪದಾ ತ್ರಿಷ್ಟುಪ್.



॥ ಅಷ್ಟಮೋಽನುವಾಕಃ ॥

ಆ ದದ ಋತಸ್ಯ ತ್ವಾ ದೇವಹವಿಃ ಪಾಶೇನಾರಭೇ

---

ಏತಿ । ದದೇ । ಋತಸ್ಯ । ತ್ವಾ । ದೇವಹವಿರಿತಿ ದೇವ-ಹವಿಃ। ಪಾಶೇನ। ಏತಿ। ರಭೇ।

---

ಏಳನೆಯ ಅನುವಾಕದಲ್ಲಿ ಮುಖ್ಯವಾಗಿ ಪಶೂಪಾಕರಣವು ಹೇಳಲ್ಪಟ್ಟಿತು. ಈ ಎಂಟನೆಯ ಅನುವಾಕದಲ್ಲಿ ಪಶುವಿಶಸನವು ಹೇಳಲ್ಪಡುತ್ತದೆ.

| ಮಂತ್ರ | ವಿನಿಯೋಗ |
| --- | --- |
| ಆ ದದೇ । [ದೇವಸ್ಯ ತ್ವಾ....ಹಸ್ತಾಭ್ಯಾಮ್] ಎಂಬ ಅನುಷಂಗದಿಂದ ಕೂಡಿದ ಮಂತ್ರ. | ರಶನಾದಾನವನ್ನು ಮಾಡಲು [ಹಗ್ಗವನ್ನು ತೆಗೆದುಕೊಳ್ಳಲು] |
| ಋತಸ್ಯ........ಪಾಶೇನಾರಭೇ । | ಪಶುಬಂಧನವನ್ನು ಮಾಡಲು |

---

ಎಲೈ ರಶನೆಯೇ! [ಹಗ್ಗವೇ!] ದೇವಸ್ಯ.......ಹಸ್ತಾಭ್ಯಾಮ್ = ಸರ್ವಪ್ರೇರಕನಾದ ಸವಿತೃದೇವನ ಅನುಮತಿಯಿಂದ ನಿನ್ನನ್ನು ಅಶ್ವಿನೀದೇವತೆಗಳ ಬಾಹುಗಳಿಂದಲೂ, ಪೂಷದೇವನ ಕೈಗಳಿಂದಲೂ; ಆ ದದೇ = ತೆಗೆದುಕೊಳ್ಳುತ್ತೇನೆ. ✣ ದೇವಹವಿಃ = ದೇವತೆಗಳಿಗೆ ಹವಿಸ್ಸಾಗಿರುವ ಎಲೈ ಪಶುವೇ! ತ್ವಾ = ನಿನ್ನನ್ನು; ಋತಸ್ಯ = ಯಜ್ಞದ ಸಿದ್ಧಿಗಾಗಿ; ಪಾಶೇನ = ಹಗ್ಗದಿಂದ; ಆರಭೇ = ಕಟ್ಟುತ್ತೇನೆ.

---

ಎಲೈ ಹಗ್ಗವೇ! ಸರ್ವಪ್ರೇರಕನಾದ ಸವಿತೃದೇವನ ಅನುಮತಿಯನ್ನು ಪಡೆದು, ಅಶ್ವಿನೀದೇವತೆಗಳ ಬಾಹುಗಳಿಂದ, ಪೂಷದೇವನ ಹಸ್ತಗಳಿಂದ ನಿನ್ನನ್ನು ತೆಗೆದುಕೊಳ್ಳುತ್ತೇನೆ.

ಧರ್ಷಾ ಮಾನುಷಾನದ್ಭ್ಯಸ್ತ್ವೌಷಧೀಭ್ಯಃ ಪ್ರೋಕ್ಷಾಮ್ಯಪಾಂ ಪೇರುರಸಿ

---

ಧರ್ಷ । ಮಾನುಷಾನ್ । ಅದ್ಭ್ಯ ಇತ್ಯತ್-ಭ್ಯಃ । ತ್ವಾ । ಓಷಧೀಭ್ಯ ಇತ್ಯೋಷಧಿ-ಭ್ಯಃ । ಪ್ರೇತಿ । ಉಕ್ಷಾಮಿ । ಅಪಾಮ್ । ಪೇರುಃ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಧರ್ಷಾ ಮಾನುಷಾನ್ । | ಯೂಪಸ್ತಂಭದಲ್ಲಿ ಪಶುವನ್ನು ಕಟ್ಟಲು |
| ಅದ್ಭ್ಯಸ್ತ್ವೌಷಧೀಭ್ಯಃ ಪ್ರೋಕ್ಷಾಮಿ । | ಪಶುವನ್ನು ಪ್ರೋಕ್ಷಿಸಲು |
| ಅಪಾಂ ಪೇರುರಸಿ । | ಪಶುವಿಗೆ ನೀರನ್ನು ಕುಡಿಸಲು |



---

❖[ಎಲೈ ಪಶುವೇ!] ಮಾನುಷಾನ್ = ಮನುಷ್ಯರಿಂದ ಉಂಟಾಗುವ ಬಂಧನ ತಾಡನಾದಿ ಉಪದ್ರವಗಳನ್ನು; ಧರ್ಷ = [ನಿನಗೆ ದೇವತ್ವವು ಪ್ರಾಪ್ತವಾಗಲಿರುವುದರಿಂದ] ಸಹಿಸಿಕೋ. ❖[ಎಲೈ! ಪಶುವೇ!] ತ್ವಾ = ನಿನ್ನನ್ನು; ಅದ್ಭ್ಯಃ = ನೀರುಗಳಿಂದಲೂ; ಓಷಧೀಭ್ಯಃ=[ದರ್ಭರೂಪವಾದ] ಓಷಧಿಗಳಿಂದಲೂ; ಪ್ರೋಕ್ಷಾಮಿ = ಪ್ರೋಕ್ಷಿಸುತ್ತೇನೆ; ❖ [ಎಲೈ ಯಾಗಪಶುವೇ!] ನೀನು; ಅಪಾಂ ಪೇರುಃ ಅಸಿ = ನೀರನ್ನು ಕುಡಿಯುವವನಾಗಿರುವೆ. [ಈಗ ನೀರನ್ನು ಕುಡಿ.]

---

ಎಲೈ ಪಶುವೇ! ನೀನು ದೇವತೆಗಳಿಗೆ ಹವಿಸ್ಸಾಗಿರುವೆ. ಯಜ್ಞಸಿದ್ಧಿಗಾಗಿ ನಿನ್ನನ್ನು ಹಗ್ಗದಿಂದ ಬಂಧಿಸುತ್ತೇನೆ.

ಎಲೈ ಪಶುವೇ! ನೀನು ದೇವತೆಗಳಿಗಾಗಿ ಹವ್ಯವಾಗಿ ದೇವತ್ವವನ್ನು ಪಡೆಯಲಿರುವೆ. ಆದುದರಿಂದ ನಿನಗೆ ಈಗ ಮನುಷ್ಯರಿಂದ ಒದಗುವ ಬಂಧನಾದಿಕ್ಲೇಶವನ್ನು ಸಹಿಸು. ಮಹತ್ತಾದ ಫಲಕ್ಕಾಗಿ ಅಲ್ಪಕ್ಲೇಶವು ಸಹ್ಯವಷ್ಟೆ.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

## ಸ್ವಾತ್ತ್ರಂ ಚಿತ್ಸದೇವಗ್ಂ ಹವ್ಯಮಾಪೋ ದೇವೀಃ ಸ್ವದತೈನಗ್ಂ

ಸ್ವಾತ್ತ್ರಮ್ । ಚಿತ್ । ಸದೇವಮಿತಿ ಸ-ದೇವಮ್ । ಹವ್ಯಮ್ । ಆಪಃ । ದೇವೀಃ ।

ಸ್ವದತ । ಏನಮ್ ।

| ಮಂತ್ರ | ವಿನಿಯೋಗ |
| --- | --- |
| ಸ್ವಾತ್ತ್ರಂ........ಸ್ವದತೈನಮ್ । | ಮೇಲೆ, ಕೆಳಗೆ ಮತ್ತು ಎಲ್ಲೆಡೆಯಲ್ಲಿಯೂ ಪಶುವನ್ನು ಪ್ರೋಕ್ಷಿಸಲು |

❖ ಹೇ ಆಪಃ ದೇವೀಃ = ಎಲೈ! ಜಲದೇವತೆಗಳೇ! ಸ್ವಾತ್ತ್ರಂ ಚಿತ್ = ಸ್ವಾಭಾವಿಕವಾಗಿಯೇ ಸವಿಯಾಗಿದ್ದರೂ; ಸದೇವಮ್ = ದೇವತೆಗಳಿಗೆ ಸಂಬಂಧಿಸಿದ; ಹವ್ಯಮ್ = ಹೋಮಮಾಡಲು ಯೋಗ್ಯವಾದ; ಏನಮ್ = ಈ [ಯಜ್ಞಪಶುವನ್ನು] ಸ್ವದತ = ಅತಿ ಸ್ವಾದುವಾಗುವಂತೆ ಮಾಡಿರಿ.

ಎಲೈ! ಯಜ್ಞಪಶುವೇ! ನೀನು ನೀರಿನಿಂದಲೂ, ಓಷಧಿಗಳಿಂದಲೂ ಉತ್ಪನ್ನನಾಗಿರುವೆ. ಆ ನಿನ್ನನ್ನು ನೀರುಗಳಿಂದಲೂ, ದರ್ಭಗಳಿಂದಲೂ ಪ್ರೋಕ್ಷಿಸುತ್ತೇನೆ. ಇದರಿಂದ ಲೋಕದಲ್ಲಿ ತೃಣ-ಜಲ ಸಮೃದ್ಧಿಯಾಗಲಿ.

ಎಲೈ! ಯಜ್ಞಪಶುವೇ! ನೀನು ನೀರನ್ನು ಕುಡಿಯತಕ್ಕವನು. ಈಗ ಈ ನೀರನ್ನು ಕುಡಿ.*

ಎಲೈ! ಜಲದೇವತೆಯರೇ! ಈ ಯಾಗಪಶುವು ಸ್ವತಃ ರುಚಿಕರವಾಗಿದೆ. ದೇವತೆಗಳಿಗೆ ಹೋಮಮಾಡಲು ಯೋಗ್ಯವಾದ ಈ ಪಶುವನ್ನು ನೀವು ಮತ್ತಷ್ಟು ರುಚಿಕರವನ್ನಾಗಿ ಮಾಡಿರಿ.

*ಈ ಪ್ರೋಕ್ಷಣ-ಜಲಪಾನದಿಂದ ಯಾಗಪಶುವು - ಮೇಲೆ, ಕೆಳಗೆ, ಒಳಗೆ-ಹೊರಗೆ ಎಲ್ಲೆಡೆಯಲ್ಲಿಯೂ ಪವಿತ್ರವಾಗುತ್ತದೆ.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

# ಸಂ ತೇ ಪ್ರಾಣೋ ವಾಯುನಾ ಗಚ್ಛತಾಗ್ಂ ಸಂಯಜತ್ರೈ ರಂಗಾನಿ ಸಂ ಯಜ್ಞಪತಿರಾಶಿಷಾ ಘೃತೇನಾಕ್ತೌ ಪಶುಂ

---

ಸಮಿತಿ । ತೇ । ಪ್ರಾಣ ಇತಿ ಪ್ರ-ಅನಃ । ವಾಯುನಾ। ಗಚ್ಛತಾಮ್। ಸಮಿತಿ। ಯಜತ್ರೈಃ। ಅಂಗಾನಿ । ಸಮಿತಿ । ಯಜ್ಞಪತಿರಿತಿ ಯಜ್ಞ - ಪತಿಃ । ಆಶಿಷೇತ್ಯಾ-ಶಿಷಾ । ಘೃತೇನ । ಆಕ್ತೌ । ಪಶುಮ್ ।

---

| ಮಂತ್ರ | ವಿನಿಯೋಗ |
|---|---|
| ಸಂ ತೇ.......ಗಚ್ಛತಾಮ್ । | ಜುಹೂವಿನಿಂದ ಪಶುವಿನ ಶಿರಸ್ಸನ್ನು ಆಜ್ಯದಿಂದ ಲೇಪಿಸಲು. |
| ಸಂ..............ಅಂಗಾನಿ । | ಹಿಂದಿನಂತೆಯೇ ಹಣೆಯನ್ನು [ಮುಂಗಾಲುಗಳ ಮೇಲ್ಭಾಗ] ಲೇಪಿಸಲು |
| ಸಂ................ಆಶಿಷಾ । | ಹಿಂಭಾಗವನ್ನು ಲೇಪಿಸಲು |
| ಘೃತೇನ......ತ್ರಾಯೇಥಾಮ್ । | ಜುಹೂವಿನ ಘೃತದಿಂದ ಲಿಪ್ತವಾದ ಸ್ವರು-ಸ್ವಧಿತಿಗಳಿಂದ ಪಶುವಿನ ಶಿರಸ್ಸನ್ನು ಲೇಪಿಸಲು. |

---

✣ [ಎಲೈ ಪಶುವೇ!] ತೇ = ನಿನ್ನ; ಪ್ರಾಣಃ = ಪ್ರಾಣವಾಯುವು; ವಾಯುನಾ = ವಾಯುವಿನೊಡನೆ; ಸಮ್ ಗಚ್ಛತಾಮ್ = ಸೇರಿಹೋಗಲಿ; ✣ [ಎಲೈ ಪಶುವೇ!] ನಿನ್ನ; ಅಂಗಾನಿ = ಹೃದಯಾದ್ಯವಯವಗಳು; ಯಜತ್ರೈಃ = ಯಾಗವಿಶೇಷಗಳೊಡನೆ; ಸಮ್ ಯುಜ್ಯಂತಾಮ್ = ಸೇರಿಕೊಳ್ಳಲಿ; ✣ ಯಜ್ಞಪತಿಃ = ಯಜಮಾನನು; ಆಶಿಷಾ = ಶುಭಾಶಂಸನೆಯಿಂದ; ಸಮ್ ಗಚ್ಛತಾಮ್ = ಕೂಡಿದವನಾಗಲಿ. ✣[ಎಲೈ ಸ್ವರು-ಸ್ವಧಿತಿಗಳೇ!] ಘೃತೇನ ಆಕ್ತೌ = ತುಪ್ಪದಿಂದ ಲಿಪ್ತರಾದ [ನೀವು]; ಪಶುಮ್ = ಈ ಯಜ್ಞ

---

ಎಲೈ! ಯಜ್ಞಪಶುವೇ! ನಿನ್ನ ಪ್ರಾಣವಾಯುವು ವಾಯುದೇವನಲ್ಲಿ ಸೇರಲಿ. ನಿನ್ನ ಅವಯವಗಳು ಯಾಗವಿಶೇಷಗಳೊಡನೆ ಸೇರಲಿ.

**ತ್ರಾಯೇಥಾಗ್ಂ ರೇವತೀರ್ಯಜ್ಞಪತಿಂ ಪ್ರಿಯಧಾऽऽವಿಶ ತೋರೋ ಅಂತರಿಕ್ಷ ಸಜೂರ್ದೇವೇನ [ದೇವೇನ (೧)]**

---

ತ್ರಾಯೇಥಾಮ್ । ರೇವತೀಃ । ಯಜ್ಞಪತಿಮಿತಿ ಯಜ್ಞ-ಪತಿಮ್ । ಪ್ರಿಯಧೇತಿ ಪ್ರಿಯ-ಧಾ । ಏತಿ । ವಿಶತ।* ಉರೋ ಇತಿ ಅಂತರಿಕ್ಷ । ಸಜೂರಿತಿ ಸ-ಜೂಃ । ದೇವೇನ(೧)

---

| ಮಂತ್ರ | ವಿನಿಯೋಗ |
| --- | --- |
| ರೇವತೀಃ.....ಧಾಃ । | ಉತ್ತರಕ್ಕೆ ಒಯ್ಯುತ್ತಿರುವ ಪಶುವನ್ನು ಅನುಮಂತ್ರಿಸಲು —ಬೌಧಾಯನ. |
| ೧) ರೇವತೀಃ........ವಿಶತ । | ವಪಾಶ್ರಪಣಿಗಳಿಂದ ಅಧ್ವರ್ಯು ಮತ್ತು ಯಜಮಾನರು ಪಶುವನ್ನು ಸ್ಪರ್ಶಿಸಿಕೊಂಡಿರಲು —ಆಪಸ್ತಂಬ |

---

ಪಶುವನ್ನು; ತ್ರಾಯೇಥಾಮ್ = [ಆಜ್ಯಲೇಪದಿಂದ] ರಕ್ಷಿಸಿರಿ. ✣ ಹೇ ರೇವತೀಃ = ಧನಯುಕ್ತವಾದ ಪಶ್ವವಯವಗಳೇ! [ನೀವು] ಯಜ್ಞಪತಿಮ್ [ಪ್ರತಿ] = ಯಜಮಾನನನ್ನು ಕುರಿತು; ಪ್ರಿಯಧಾ [ಭವತ] =ಪ್ರಿಯವನ್ನು ಧರಿಸಿದವರಾಗಿರಿ. [ಕೇಡನ್ನು ಹಾರೈಸದಿರಿ] ಆ ವಿಶತ = [ಹವಿಸ್ಸುಗಳಿಗಾಗಿ ಯಜ್ಞವನ್ನು] ಹೊಂದಿರಿ.

---

ಯಜಮಾನನು ಶುಭಾಶಂಸನೆಯಿಂದ ಯುಕ್ತನಾಗಲಿ.

ಎಲೈ! ಸ್ವರು-ಸ್ವಧಿತಿಗಳೇ! ನೀವು ಘೃತಾಕ್ತರಾಗಿ ಘೃತಾಂಜನದಿಂದ ಪಶುವನ್ನು ರಕ್ಷಿಸಿರಿ.

ಕ್ಷೀರಾದಿಧನಯುಕ್ತವಾದ ಪಶುಗಳೇ! [ಹವಿಸ್ಸೆಂಬ ಧನವುಳ್ಳ ಪಶುವಿನ ಅವಯವಗಳೇ!] ನೀವು ಯಜಮಾನನ ವಿಷಯದಲ್ಲಿ ಪ್ರೀತಿಯುಳ್ಳವರಾಗಿ ಹವಿಸ್ಸಿನ ರೂಪದಲ್ಲಿ ಯಜ್ಞದಲ್ಲಿ ದೇವತೆಗಳಿಗೆ ಕೊಡಲ್ಪಟ್ಟು ಸಾರ್ಥಕ್ಯವನ್ನು ಹೊಂದಿರಿ.

ವಾತೇನಾಸ್ಯ ಹವಿಷಸ್ತ್ಮನಾ ಯಜ ಸಮಸ್ಯ ತನುವಾ ಭವ

ವರ್‌ಷೀಯೋ ವರ್‌ಷೀಯಸಿ ಯಜ್ಞೇ ಯಜ್ಞಪತಿಂ ಧಾಃ

---

ವಾತೇನ । ಅಸ್ಯ । ಹವಿಷಃ । ತ್ಮನಾ । ಯಜ । ಸಮಿತಿ। ಅಸ್ಯ । ತನುವಾ । ಭವ ।

ವರ್‌ಷೀಯಃ । ವರ್‌ಷೀಯಸಿ । ಯಜ್ಞೇ । ಯಜ್ಞಪತಿಮಿತಿ ಯಜ್ಞ-ಪತಿಮ್ । ಧಾಃ।*

---

| ಮಂತ್ರ | ವಿನಿಯೋಗ |
| --- | --- |
| ೨) ಉರೋ..............ಧಾಃ । | ಪಶುವನ್ನು ಚಾತ್ವಾಲ-ಉತ್ಕರಗಳ ಮಧ್ಯದಲ್ಲಿ ಉತ್ತರದ ಕಡೆಗೆ ಒಯ್ಯಲು –ಆಪಸ್ತಂಬ. |

---

✣ ಉರೋ ಅಂತರಿಕ್ಷ = ಎಲೈ! ಮಹತ್ತಾದ ಶ್ರೋತ್ರಾಕಾಶಾದಿಪಶ್ವಂಗಸಮೂಹವೇ! ಅಸ್ಯ ದೇವೇನ ವಾತೇನ = ಈ ಪಶುವಿನ ಅಭಿಮಾನಿದೇವನಾದ ಪ್ರಾಣ ವಾಯುವಿನಿಂದಲೂ; ತ್ಮನಾ = ಜೀವಾತ್ಮನಿಂದಲೂ; ಸಜೂಃ = ಜೊತೆಗೂಡಿದವ ನಾಗಿ; ಹವಿಷಃ ಯಜ = ಹವಿಸ್ಸನ್ನು ಕೊಡು; [ಮತ್ತು] ಅಸ್ಯ ತನುವಾ = ಇದರ [ಈ ಪಶುವಿಗೆ ಮುಂದೆ ಉಂಟಾಗುವ] ದೇವಶರೀರದೊಡನೆ; ಸಮ್ ಭವ = ಸೇರಿಕೋ; ಹೇ ವರ್ಷೀಯಃ = ಅತಿ ವಿಸ್ತೀರ್ಣವಾದ [ಪಶುವಿನ ಇಂದ್ರಿಯಸಮೂಹವೇ!]; ವರ್ಷೀಯಸಿ ಯಜ್ಞೇ = ಬಹುವಿಸ್ತೀರ್ಣವಾದ ಯಜ್ಞದಲ್ಲಿ; ಯಜ್ಞಪತಿಮ್ = ಯಜಮಾನನನ್ನು; ಧಾಃ = ಸ್ಥಾಪಿಸು; [ಯಜ್ಞದ ಫಲವನ್ನು ಪಡೆಯುವಂತೆ ಮಾಡು.]

---

ಎಲೈ ಮಹತ್ತಾದ ಪಶ್ವವಯವಗಳೇ! ನೀವು ಪಶ್ವಭಿಮಾನಿದೇವನಾದ ವಾಯುವಿನಿಂದಲೂ, ಜೀವಾತ್ಮನಿಂದಲೂ ಕೂಡಿಕೊಂಡು ಯಜ್ಞದ ಹವಿಸ್ಸುಗಳಾಗಿ ದೇವತೆಗಳಿಗೆ ಸಮರ್ಪಿಸಲ್ಪಟ್ಟು, ಯಜಮಾನನು ಈ ಮಹಾಯಜ್ಞದ ಫಲವನ್ನು ಪಡೆಯುವಂತೆ ಮಾಡಿರಿ.

ಎಲೈ ಬರ್ಹಿಸ್ಸೇ! ನೀನು ಈ ಪಶುವಿಗೆ ಪೃಥಿವೀಸಂಪರ್ಕವುಂಟಾಗದಂತೆ ರಕ್ಷಿಸು.

**ಪೃಥಿವ್ಯಾಃ ಸಂಪೃಚಃ ಪಾಹಿ ನಮಸ್ತ ಆತಾನಾನರ್ವಾ ಪ್ರೇಹಿ ಘೃತಸ್ಯ ಕುಲ್ಯಾಮನು ಸಹ ಪ್ರಜಯಾ ಸಹ ರಾಯ-**

---

ಪೃಥಿವ್ಯಾಃ । ಸಂಪೃಚ ಇತಿ ಸಮ್-ಪೃಚಃ । ಪಾಹಿ । ನಮಃ । ತೇ । ಆತಾನೇತ್ಯಾ-ತಾನ ಅನರ್ವಾ । ಪ್ರೇತಿ । ಇಹಿ । ಘೃತಸ್ಯ । ಕುಲ್ಯಾಮ್ । ಅನ್ವಿತಿ । ಸಹ । ಪ್ರಜಯೇತಿ ಪ್ರ-ಜಯಾ । ಸಹ । ರಾಯಃ ।

---



| ಮಂತ್ರ | ವಿನಿಯೋಗ |
| --- | --- |
| ಪೃಥಿವ್ಯಾಃ.........ಪಾಹಿ । | ಉಪಾಕರಣದರ್ಭೆಗಳಲ್ಲಿ ಒಂದನ್ನು ಪಶುವಿನ ಕೆಳಗೆ ಹಾಕಲು. |
| ನಮಸ್ತ ಆತಾನ । | ಅಧ್ವರ್ಯುವು ಪಶುವಿನ ಸಮೀಪದಿಂದ ಹಿಂದಿರುಗಿದ ಮೇಲೆ ಪ್ರತಿಪ್ರಸ್ಥಾತನು ಪತ್ನಿಯನ್ನು ಪೂರ್ವಕ್ಕೆ ಕರೆತಂದಾಗ ಪತ್ನಿಯು ಮಾಡುವ ಸೂರ್ಯೋಪಸ್ಥಾನದಲ್ಲಿ. |
| ಅನರ್ವಾ ಪ್ರೇಹಿ....ಪೋಷೇಣ । | ಪ್ರತಿಪ್ರಸ್ಥಾತನು ಪತ್ನಿಯನ್ನು ಪೂರ್ವಕ್ಕೆ ಕರೆತರುವಾಗ- ಅವಳಿಂದ ಹೇಳಿಸಲು-ಬೌಧಾಯನ |

---

✣ [ಎಲೈ ದರ್ಭವೇ! ನೀನು ಈ ಪಶುವನ್ನು] ಪೃಥಿವ್ಯಾಃ=ಭೂಮಿಯ; ಸಂಪೃಚಃ = ಸಂಪರ್ಕದ ದೆಸೆಯಿಂದ; ಪಾಹಿ=ರಕ್ಷಿಸು; ✣ ಹೇ ಆತಾನ=ಎಲ್ಲೆಡೆಯಲ್ಲಿಯೂ ಪ್ರಸರಿಸುವ ಶಕ್ತಿಯುಳ್ಳ ಸೂರ್ಯರಶ್ಮಿಸಮೂಹವೇ! [ಅಂತಹ ಕಿರಣಗಳುಳ್ಳ ಸೂರ್ಯನೇ!] ತೇ ನಮಃ = ನಿನಗೆ ನಮಸ್ಕಾರವು. ✣ [ಎಲೈ ಯಜಮಾನ ಪತ್ನಿಯೇ! ನೀನು] ಅನರ್ವಾ = ಶತ್ರುರಹಿತಳಾಗಿ [ಪಾಪರಹಿತಳಾಗಿ] ಘೃತಸ್ಯ ಕುಲ್ಯಾಮ್ ಅನು = ತುಪ್ಪದ ಕಾಲುವೆಯು ಹರಿಯುವಂತಿರುವ [ಸುಖ ಸಮೃದ್ಧಿಯಿಂದ ತುಂಬಿದ(ಸ್ವರ್ಗರೂಪವಾದ) ಪ್ರದೇಶವನ್ನು] ಕುರಿತು; ಪ್ರೇಹಿ=ಮುಂದೆ ಹೋಗು; ಪ್ರಜಯಾ ಸಹ = ಮಕ್ಕಳಿಂದಲೂ; ರಾಯಸ್ಪೋಷೇಣ ಸಹ=ಧನಸಮೃದ್ಧಿಯಿಂದಲೂ [ಕೂಡಿದವಳಾಗಿ] ಪ್ರೇಹಿ = [ಉತ್ಕೃಷ್ಟ

---

[ನೆಲದ ಮೇಲೆ ಹವಿಸ್ಸು ಬಿದ್ದರೆ ಸಂಭವಿಸಬಹುದಾದ ದೋಷದಿಂದ ರಕ್ಷಿಸು. ಬೇರೆಯ ಪಶುಗಳು ಭೂಮಿಯ ಮೇಲೆ ಬೀಳದೆ ಸುಖವಾಗಿರುವಂತೆ ಮಾಡು.]

ಸ್ಪೋಷೇಣಾಪೋ ದೇವೀಃ ಶುದ್ಧಾಯುವಃ ಶುದ್ಧಾ ಯೂಯಂ ॥

ದೇವಾಗ್ಂ ಊಢ್ವಗ್ಂ ಶುದ್ಧಾ ವಯಂ

---

ಪೋಷೇಣ । ಆಪಃ । ದೇವೀಃ । ಶುದ್ಧಾಯುವ ಇತಿ ಶುದ್ಧ - ಯುವಃ । ಶುದ್ಧಾಃ ।

ಯೂಯಮ್ । ದೇವಾನ್ । ಊಢ್ವಮ್ । ಶುದ್ಧಾಃ । ವಯಮ್ ।

---



| ಮಂತ್ರ | ವಿನಿಯೋಗ |
| --- | --- |
| [ಹಿಂದಿನದೇ] | ಪ್ರತಿಪ್ರಸ್ಥಾತನು ಪತ್ನಿಯನ್ನು ಪೂರ್ವಕ್ಕೆ ಕರೆತರುವಾಗ ಹೇಳಲು ಅಥವಾ ಅನುಮಂತ್ರಿಸಲು—ಆಪ. |
| ಆಪೋ ದೇವೀಃ.....ಭೂಯಾಸ್ಮ । | ಪತ್ನಿಯು ಬಂದ ನಂತರ ಅಧ್ವರ್ಯುವು ನೀರನ್ನು ಮುಟ್ಟುವಾಗ ಹೇಳಲು —ಬೌಧಾಯನ |

---

ಸ್ಥಾನವನ್ನು] ಪಡೆ. ಹೇ ಆಪಃ ದೇವೀಃ = ಪ್ರಕಾಶಮಾನರಾದ ಜಲದೇವತೆಯರೇ! ಶುದ್ಧಾಯುವಃ = ಬೇರೆಯವರಿಗೂ ಶುದ್ಧಿಯನ್ನು ಇಚ್ಛಿಸುವವರೇ! ಶುದ್ಧಾಃ = ಪರಿಶುದ್ಧರಾದ; ಯೂಯಮ್ = ನೀವು; ದೇವಾನ್ ಊಢ್ವಮ್ = ದೇವತೆಗಳನ್ನು ಯಾಗಶಾಲೆಗೆ ಬರುವಂತೆ ಮಾಡಿರಿ. [ಈ ಪಶುವನ್ನು ದೇವತೆಗಳು ಸ್ವೀಕರಿಸುವಂತೆ ಮಾಡಿರಿ] ವಯಮ್ = ನಾವು;

---

ಉದಯಿಸಿದೊಡನೆಯೇ ಎಲ್ಲೆಲ್ಲಿಯೂ ವ್ಯಾಪಿಸುವ ಕಿರಣಗಳುಳ್ಳ ಸೂರ್ಯನೇ! ನಿನಗೆ ನಮಸ್ಕರಿಸುತ್ತೇನೆ.

ಎಲ್ಲೆ! ಯಜಮಾನಪತ್ನಿಯೇ! ಶತ್ರುರಹಿತಳಾಗಿ ಪತಿವ್ರತೆಯಾಗಿರುವ ನೀನು ತುಪ್ಪದ ಕಾಲುವೆಯು ಹರಿಯುತ್ತಿರುವಂತೆ ಸರ್ವಸುಖಪೂರ್ಣವಾಗಿರುವ ಸ್ವರ್ಗವನ್ನು ಕುರಿತು ಮುಂದೆ ಬಾ. ಒಳ್ಳೆಯ ಮಕ್ಕಳಿಂದ ಕೂಡಿದವಳಾಗಿ, ಧನಸಂಪತ್ತನ್ನು ಪಡೆದವಳಾಗಿ ಉತ್ಕೃಷ್ಟಸ್ಥಾನಕ್ಕೆ ಮುಂದೆ ಬಾ.

ಓ! ಜಲದೇವಿಯರೇ! ನೀವು ಶುದ್ಧರು. ಇತರರನ್ನೂ ಶುದ್ಧಿಪಡಿಸುವ ಇಚ್ಛೆ

## ಪರಿವಿಷ್ಟಾಃ ಪರಿವೇಷ್ಟಾರೋ ವೋ ಭೂಯಾಸ್ಮ ॥ ೮-15॥

[ದೇವೇನ ಚತುಶ್ಚತ್ವಾರಿಗ್ಂಶಚ್ಚ ।]

---

ಪರಿವಿಷ್ಟಾ ಇತಿ ಪರಿ - ವಿಷ್ಟಾಃ । ಪರಿವೇಷ್ಟಾರ ಇತಿ ಪರಿ - ವೇಷ್ಟಾರಃ । ವಃ ।

ಭೂಯಾಸ್ಮ ॥ ೮ ॥

---



| ಮಂತ್ರ | ವಿನಿಯೋಗ |
|---|---|
| [ಹಿಂದಿನದೇ] | ಚಾತ್ವಾಲದಲ್ಲಿ ಪತ್ನಿಯು ಜಲಸ್ಪರ್ಶನವನ್ನು ಮಾಡುವಾಗ ಹೇಳಲು —ಆಪಸ್ತಂಬ. |

---

ಪರಿವಿಷ್ಟಾಃ = [ನಿಮ್ಮಿಂದ] ತೋಯಿಸಲ್ಪಟ್ಟವರಾಗಿ; ಶುದ್ಧಾಃ = ಪರಿಶುದ್ಧರಾದವರಾಗಿ; ವಃ = ನಿಮ್ಮನ್ನು; ಪರಿವೇಷ್ಟಾರಃ = ಸುತ್ತುವರಿದವರಾಗಿ; [ಸೇವಿಸುವವರಾಗಿ] ಭೂಯಾಸ್ಮ = ಆಗುತ್ತೇವೆ.[ಆಗುವಂತೆ ಆಗಲಿ].

---

ಯುಳ್ಳವರು. ಪರಿಶುದ್ಧರಾದ ನೀವು ಯಾಗಶಾಲೆಗೆ ದೇವತೆಗಳು ಬಂದು ಹವಿಸ್ಸನ್ನು ಸ್ವೀಕರಿಸುವಂತೆ ಮಾಡಿರಿ. [ಪಶುವಿನ ಇಂದ್ರಿಯಗಳನ್ನು ಮೂಲಭೂತಗಳೊಡನೆ ಸೇರುವಂತೆ ಮಾಡಿರಿ.] ನಿಮ್ಮ ಸ್ಪರ್ಶದಿಂದ ನಾವೂ ಪವಿತ್ರರಾಗುತ್ತೇವೆ. 'ನಿಮ್ಮನ್ನು ಯಾವಾಗಲೂ ಸುತ್ತುವರಿದೇ ಇರುತ್ತೇವೆ. ನಿಮ್ಮನ್ನು ಸೇವಿಸುತ್ತಲೇ ಇರುವಂತೆ ಆಗಲಿ' ಎಂದು ಆಶಿಸುತ್ತೇವೆ.

## ವಿನಿಯೋಗ ಸಂಗ್ರಹ

ಆ ದದೇ[1] ರಜ್ಜುಮಾದಾಯ ಋತ[2] ಬಧ್ನಾತಿ ತಂ ಪಶುಮ್ ।
ಧರ್ಷ[3] ಯೂಪೇ ನಿಯುಂಕ್ತೇಽದ್ಭ್ಯಃ[4] ಪ್ರೋಕ್ಷ್ಯಾಪಾಂ[5] ಪಾಯಯೇದಪಃ ।
ಸ್ವಾತ್ತಂ[6] ಸರ್ವತ್ರ ಸಂಪ್ರೋಕ್ಷ್ಯ ಸಂತೇ[7] ಮೂರ್ಧ್ನಿ ಸಮಂಜನಮ್ ।
ಸಂ ಯಾಂ[8] ಸಯೋಃ ಸಂಯ[9] ಪಶ್ಚಾದ್ಘೃತೇ[10] ಸಸ್ವರುಶಸ್ತ್ರಕೇ ।
ರೇವ[11] ಶ್ರಪಣ್ಯುಪಸ್ಪರ್ಶ ಉರೋ[12] ಉತ್ತರತೋ ನಯೇತ್ ।
ಪೃಥಿ[13] ಬರ್ಹಿರವಸ್ಥಾಪ್ಯ ನಮಃ[14] ಪತ್ನೀ ರವಿಂ ಭಜೇತ್ ।
ಅನ[15] ಪತ್ನೀಂ ನಯೇದಾಪಃ[16] ಸ್ಪೃಶೇತ್ ಮಂತ್ರಾಸ್ತು ಷೋಡಶ ॥

| | | |
|---|---|---|
| ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ | ಬೌಧಾಯನ | 15 |
| | ಆಪಸ್ತಂಬ | 16 |

### ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

೧) 'ಸಂ ಯಜ್ಞಪತಿಃ...............' ಎಂಬಲ್ಲಿ ಅನುಷಂಗವಿದೆಯೇ? [ಜೈ:ಸೂ. 2-1]

ಅಗ್ನೀಷೋಮೀಯಪಶುಪ್ರಕರಣದಲ್ಲಿ

'ಸಂ ತೇ ಪ್ರಾಣೋ ವಾಯುನಾ ಗಚ್ಛತಾಗ್ಂ ಸಂ ಯಜತ್ರೈರಂಗಾನಿ ಸಂ
ಯಜ್ಞಪತಿರಾಶಿಷಾ'

ಎಂಬ ಮಂತ್ರವಿದೆ: 'ತೇ ಪ್ರಾಣೋ ವಾಯುನಾ ಸಂಗಚ್ಛತಾಮ್' ಎಂದು ಮೊದಲ ಮಂತ್ರದಲ್ಲಿ ಸಮ್ ಮತ್ತು ಗಚ್ಛತಾಮ್ ಎಂಬುವುಗಳು ಅನ್ವಿತವಾಗುತ್ತವೆ. ಹಾಗೆಯೇ ಮೂರನೆಯ ಮಂತ್ರವಾದ 'ಸಂ ಯಜ್ಞಪತಿರಾಶಿಷಾ' ಎಂಬಲ್ಲಿಯೂ'ಗಚ್ಛತಾಮ್' ಎಂಬುದನ್ನು ಅನುಷಂಗ ಮಾಡುವುದು ಯುಕ್ತ ಎಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಮಧ್ಯದ ಮಂತ್ರವಾದ 'ಸಂ ಯಜತ್ರೈರಂಗಾನಿ' ಎಂಬಲ್ಲಿ 'ಅಂಗಾನಿ' ಎಂಬ ಬಹುವಚನವು ಅನುಷಂಗವಾಗಬಹುದಾದ 'ಗಚ್ಛತಾಮ್' ಎಂಬ ಏಕವಚನದೊಡನೆ ಅನ್ವಯಿಸುವುದಿಲ್ಲ. ಅಂತ್ಯದಲ್ಲಿ ಮತ್ತೊಮ್ಮೆ

ಎಂದು ಹೇಳಿಯೂ ಇಲ್ಲ. ಆದುದರಿಂದ ಅನ್ವಯದ ಯುಕ್ತತೆಯನ್ನು ಸಮರ್ಥಿಸುವ ಆಕಾಂಕ್ಷೆ, ಯೋಗ್ಯತೆ ಮತ್ತು ಸನ್ನಿಧಿಗಳಲ್ಲಿ ಸನ್ನಿಧಿ [ಸಮೀಪಸ್ಥಿತಿ] ಇಲ್ಲದಿರುವುದರಿಂದ ಅನುಷಂಗವಿಲ್ಲ. ಆದುದರಿಂದ 'ಇಷೇ ತ್ವಾ' ಮೊದಲಾದ ಕಡೆಗಳಲ್ಲಿ 'ಛಿನದ್ಮಿ' ಎಂಬ ಅಧ್ಯಾಹಾರದಿಂದ ವಾಕ್ಯವನ್ನು ಪೂರ್ಣಗೊಳಿಸುವಂತೆ ಇಲ್ಲಿಯೂ ಅಧ್ಯಾಹಾರದಿಂದ ವಾಕ್ಯವನ್ನು ಪೂರ್ಣಗೊಳಿಸಿಕೊಳ್ಳಬೇಕು. ಅನುಷಂಗವಿಲ್ಲವೆಂಬುದು ಇಲ್ಲಿನ ಸಿದ್ಧಾಂತ*

೨) ಪಶುಯಾಗದಲ್ಲಿ ಐಷ್ಟಿಕಪ್ರಕ್ರಿಯೆಯು ಇದೆಯೇ? [ಜೈ.ಸೂ. 8.1.]

ಪಶುಯಾಗದಲ್ಲಿ ಪುರೋಡಾಶಶ್ರಪಣಕ್ಕೆ ಬೇಕಾದ ಕಪಾಲವೇ ಮೊದಲಾದ ಸಾಧನಗಳಿಲ್ಲದಿರುವುದರಿಂದ ಐಷ್ಟಿಕಪ್ರಕ್ರಿಯೆಯು ಪಶುಯಾಗದಲ್ಲಿ ಇಲ್ಲವೆಂಬುದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಸಾದೃಶ್ಯವಿರುವುದರಿಂದ ಪಶುವಿನಲ್ಲಿಯೂ ಇಷ್ಟಿ ಧರ್ಮಗಳುಂಟು. ಇಷ್ಟಿಯ ವಿಷಯದಲ್ಲಿ ದ್ರವ್ಯ-ದೇವತೆಯನ್ನು ತಿಳಿಸುವ 'ಆಗ್ನೇಯೋಽಷ್ಟಾಕಪಾಲಃ' ಎಂಬ ವಾಕ್ಯವಿರುವಂತೆ ಪಶುಯಾಗದಲ್ಲಿಯೂ 'ಅಗ್ನೀಷೋಮೀಯಂ ಪಶುಮ್' ಎಂಬ ವಾಕ್ಯವಿದೆ. ಇಷ್ಟಿಯಂತೆ ಪ್ರಯಾಜವಿದ್ದು 'ಏಕಾದಶ ಪ್ರಯಾಜಾನ್ ಯಜತಿ' ಎಂದು ಪ್ರಯಾಜದಲ್ಲಿ ವಿಶೇಷವನ್ನು ಹೇಳಿರುತ್ತಾರೆ. 'ಸ್ರುಚ್ಯಮಾಘಾರ್ಯ ಜುಹ್ವಾ ಪಶುಮನಕ್ತಿ' ಎಂದು ಆಘಾರವನ್ನೂ ಹೇಳಿರುತ್ತಾರೆ. ಹವಿರಂಜನವನ್ನೂ ಹೇಳಿರುತ್ತಾರೆ. ಪಶ್ವಾಲಂಭನವನ್ನೂ ಹೇಳಿರುತ್ತಾರೆ. ಹೀಗೆ ಸಾದೃಶ್ಯವಿರುವುದರಿಂದ ಪಶುವಿನಲ್ಲಿಯೂ ಇಷ್ಟಿಪ್ರಕ್ರಿಯೆಯು ಇದೆ.

೩) ಪ್ರಯಾಜ-ಅನೂಯಾಜಗಳ ಅಪಕರ್ಷ-ಉತ್ಕರ್ಷಗಳು ಹೇಗೆ? [ಜೈ.ಸೂ. 5.1.]

ಅಗ್ನೀಷೋಮೀಯ ಪಶುಪ್ರಕರಣದಲ್ಲಿ 'ತಿಷ್ಠಂತಂ ಪಶುಂ ಪ್ರಯಜಂತಿ' ಎಂಬ ವಚನವಿದೆ. ಪಶುವು ಬದುಕಿರುವಾಗಲೇ ಪ್ರಯಾಜಗಳನ್ನು ಮಾಡಬೇಕು ಎಂದು ಅದರ ಅರ್ಥ. ಹವಿರಾಸಾದನವಾದ ಮೇಲೆ ಪ್ರಯಾಜವನ್ನು ಪ್ರಕೃತಿಯಾಗದಲ್ಲಿ ಮಾಡುವುದರಿಂದ ಪಶುಯಾಗದಲ್ಲಿ ಪಶುವಿನ ಸಂಜ್ಞಪನವಾದ ಮೇಲೆ ಪ್ರಯಾಜವನ್ನು ಮಾಡಬೇಕೆಂದು ಪ್ರಾಪ್ತವಾದಾಗ 'ತಿಷ್ಠಂತಂ' ಎಂಬ ವಚನವು ಬಂದಿದೆ. ಇದರಂತೆ ಪ್ರಯಾಜವಿಧಿಯನ್ನು ಅಪಕರ್ಷ ಮಾಡಿದಂತಾಯಿತು.

ಹೀಗೆಯೇ 'ಅಗ್ನಿಮಾರುತಾದೂರ್ಧ್ವಮನೂಯಾಜೈಶ್ಚರಂತಿ' ಎಂಬ ವಚನದಿಂದ ಅನೂಯಾಜಗಳಿಗೆ ಉತ್ಕರ್ಷವನ್ನು ಹೇಳಿದೆ. ಇಲ್ಲಿ ಪ್ರಯಾಜಕ್ಕೆ ಮಾತ್ರ ಅಪಕರ್ಷ ಮತ್ತು ಅನೂಯಾಜಕ್ಕೆ ಮಾತ್ರ ಉತ್ಕರ್ಷವೇ? ಅಥವಾ ಪ್ರಯಾಜದವರೆಗಿನ ಹಿಂದಿನ

---

*ಅನುಷಂಗವು ಮಂತ್ರಭಾಗವೇ ಆಗುತ್ತದೆ. ಅಧ್ಯಾಹಾರವು ಮಂತ್ರಭಾಗವಾಗುವುದಿಲ್ಲ.

ಎಲ್ಲ ವಿಧಿಗಳಿಗೂ ಮತ್ತು ಅನೂಯಾಜದ ನಂತರದ ವಿಧಿಗಳಿಗೂ ಕ್ರಮವಾಗಿ ಅಪಕರ್ಷ-ಉತ್ಕರ್ಷಗಳೇ? ಅಂದರೆ ತದಂತಾಪಕರ್ಷ-ತದಾದ್ಯುತ್ಕರ್ಷವೇ? ಎಂಬ **ಸಂಶಯ.**

ಇಲ್ಲಿನ **ಪೂರ್ವಪಕ್ಷವು** ಹೀಗಿದೆ; 'ತಿಷ್ಠಂತಂ ಪಶುಂ ಪ್ರಯಜಂತಿ' ಎಂಬ ವಚನದಿಂದ ಪ್ರಯಾಜಗಳನ್ನು ಮಾತ್ರ ಮೊದಲು ಮಾಡಬೇಕೆಂದು ಹೇಳಿರುತ್ತಾರೆ. ಹಾಗೆಯೇ 'ಅನೂಯಾಜೈಶ್ಚರಂತಿ' ಎಂಬುದಾಗಿ ಅನೂಯಾಜಗಳನ್ನು ಮಾತ್ರ ಕೊನೆಗೆ ಮಾಡಬೇಕೆಂದು ಹೇಳಿರುತ್ತಾರೆ. ಆದುದರಿಂದ ಪ್ರಯಾಜ-ಅನೂಯಾಜಗಳಿಗೆ ಮಾತ್ರವೇ ಅಪಕರ್ಷ-ಉತ್ಕರ್ಷಗಳು ಯುಕ್ತ. ಅಲ್ಲದೆ ಇವೆರಡಕ್ಕೆ ಮಾತ್ರ ಅಪಕರ್ಷ-ಉತ್ಕರ್ಷಗಳನ್ನು ಮಾಡುವುದರಿಂದ ಪ್ರಯಾಜಕ್ಕಿಂತ ಮೊದಲಿನ ವಿಧಿಗಳಾದ ಆಘಾರ-ಸಾಮಿಧೇನಿ ಮೊದಲಾದವುಗಳಿಗೆ ಪ್ರಧಾನಯಾಗದ ಸಾಮೀಪ್ಯವು ಉಳಿಯುತ್ತದೆ. ಹಾಗೆಯೇ ಅನೂಯಾಜದ ನಂತರದ ವಿಧಿಗಳಾದ ಸೂಕ್ತವಾಕ-ಶಂಯುವಾಕಾದಿಗಳಿಗೆ ಪ್ರಧಾನಯಾಗದ ಸನ್ನಿಧಿಯು ಇರುತ್ತದೆಯಾದುದರಿಂದ ಪ್ರಯಾಜ-ಅನೂಯಾಜಗಳಿಗೆ ಮಾತ್ರ ಅಪಕರ್ಷ-ಉತ್ಕರ್ಷಗಳನ್ನು ಹೇಳುವುದು ಯುಕ್ತ.

ಇಲ್ಲಿಯ ಸಿದ್ಧಾಂತವು ಹೀಗಿದೆ; 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬುದು ಪ್ರಕೃತಿಯಾಗದಂತೆಯೇ ವಿಕೃತಿಯಾಗದ ಅನುಷ್ಠಾನವನ್ನು ತಿಳಿಸುತ್ತದೆ. ಈ ಅತಿದೇಶವಚನದಿಂದ ಪ್ರಕೃತಿಯಾಗದಲ್ಲಿ ಅನುಷ್ಠಾನಕ್ರಮವು ನಿಶ್ಚಿತವಾಗಿರುವುದರಿಂದ ಆ ಕ್ರಮದಂತೆಯೇ ಅನುಷ್ಠಾನಾಂಗಗಳು ಬರುತ್ತವೆ. ಅನುಷ್ಠಿಸಬೇಕಾದ ಅಂಗಗಳಲ್ಲಿ ಒಂದನ್ನು ಮಾತ್ರ ವಿಶೇಷವಚನದಿಂದ ಬದಲಾದ ಸ್ಥಾನದಲ್ಲಿ ಅನುಷ್ಠಿಸಿದರೆ ಅವ್ಯವಸ್ಥೆಯುಂಟಾಗಿ ಪ್ರಯೋಗಲೋಪವೇ ಸಂಭವಿಸಬಹುದು. ಆದುದರಿಂದ ಪ್ರಯಾಜಗಳಿಗೆ ಅಪಕರ್ಷವನ್ನು ಹೇಳಿದಾಗ ಅದರ ಪೂರ್ವದಲ್ಲಿರುವ ಅಂಗಗಳಿಗೂ ಅಪಕರ್ಷವಾಗುತ್ತದೆ. ಹಾಗೆಯೇ ಅನೂಯಾಜಗಳಿಗೆ ಉತ್ಕರ್ಷವನ್ನು ಹೇಳಿದಾಗ ಅನೂಯಾಜದ ನಂತರದ ಕರ್ಮಸಮೂಹಕ್ಕೂ ಉತ್ಕರ್ಷವಾಗುತ್ತದೆ.

**೪) ಪಶುಯಾಗದಲ್ಲಿ ಪ್ರಯಾಜಗಳ ಸಂಖ್ಯೆ ಹೇಗೆ? [ಜೈ.ಸೂ. 5.3]**

ಅಗ್ನೀಷೋಮೀಯಪಶುಪ್ರಕರಣದಲ್ಲಿ 'ಏಕಾದಶ ಪ್ರಯಾಜಾನ್ ಯಜತಿ' ಎಂಬ ವಾಕ್ಯವಿದೆ. ಪ್ರಕೃತಿಯಾಗದಲ್ಲಿ 'ಪಂಚ ಪ್ರಯಾಜಾ ಇಜ್ಯಂತೇ' ಎಂದು ಐದು ಪ್ರಯಾಜಗಳನ್ನು ಹೇಳಿರುತ್ತಾರೆ. ಇಲ್ಲಿ ಪ್ರಕೃತಿಯಿಂದ ಬಂದ ಒಂದೊಂದು ಪ್ರಯಾಜವನ್ನೂ ಹನ್ನೊಂದು ಬಾರಿ ಮಾಡಬೇಕೆ? ಅಥವಾ ಐದು ಪ್ರಯಾಜಗಳನ್ನು ಎರಡು ಬಾರಿ ಮಾಡಿ ಕೊನೆಯದನ್ನು ಮತ್ತೊಂದು ಬಾರಿ ಮಾಡಿ ಹನ್ನೊಂದು ಸಂಖ್ಯೆಯನ್ನು ಪೂರ್ಣಗೊಳಿಸಬೇಕೆ? ಎಂದು ಸಂಶಯ.

ಮುಖ್ಯವಾದ ಪ್ರಯಾಜಗಳನ್ನು ಅನುಸರಿಸಿ ಅಮುಖ್ಯವಾದ ಸಂಖ್ಯೆಯನ್ನು ಆವೃತ್ತಿ ಮಾಡುವುದು ಯುಕ್ತ. 'ಪ್ರತಿಪ್ರಧಾನಂ ಗುಣಾವೃತ್ತಿಃ' ಎಂಬ ನ್ಯಾಯವಿದೆ. ಆದುದರಿಂದ ಪ್ರತಿಯೊಂದು ಪ್ರಯಾಜವನ್ನೂ ಹನ್ನೊಂದು ಬಾರಿ ಅನುಷ್ಠಿಸಬೇಕು ಎಂಬುದು ಇಲ್ಲಿನ ಪೂರ್ವಪಕ್ಷ.

ಪ್ರಕೃತಿಯಲ್ಲಿ 'ಪಂಚ ಪ್ರಯಾಜಾಃ' ಎಂದು ಪ್ರಯಾಜಸಮೂಹದಲ್ಲಿ ಐದು ಸಂಖ್ಯೆ ಇದೆಯೇ ಹೊರತು ಪ್ರತ್ಯೇಕವಾಗಿಲ್ಲ. ಐದನ್ನು ಹನ್ನೊಂದು ಮಾಡುವುದು ಹೇಗೆ? ಆವೃತ್ತಿಯಿಂದಲೇ ಮಾಡಬೇಕು. ಆದುಗರಿಂದ 5 ಪ್ರಯಾಜಗಳನ್ನು 2 ಬಾರಿ ಮಾಡಿ ಕೊನೆಯ ಪ್ರಯಾಜವನ್ನು 'ಅಂತಾಲ್ಲೋಪೋ ವಿಪ್ರದ್ಧಿರ್ವಾ' ಎಂಬ ನ್ಯಾಯ ದಂತೆ ಮತ್ತೊಂದು ಬಾರಿ ಮಾಡಿದರೆ 11 ಪ್ರಯಾಜಗಳಾಗುತ್ತವೆ. ಇದು ಇಲ್ಲಿನ ಸಿದ್ಧಾಂತ.

### ಆ) ಛಂದಸ್ಸು

೧) ಉರೋ.......ಧಾಃ । ತ್ರಿಷ್ಟುಪ್

೨) ಆಪೋ ದೇವೀಃ.......ಭೂಯಾಸ್ಮ । ಅನುಷ್ಟುಪ್

ಸಾಯಣಮತ

[ಭ.ಭಾ.ಭಾ]

೩) ಸ್ವಾತ್ತಂ.......ಸ್ವದತ್ಯೆನಮ್ । ದ್ವಿಪದಾ ಗಾಯತ್ರೀ

೪) ಸಂತೇ ಪ್ರಾಣೋ.....ಆಶಿಷಾ । ಪುರ ಉಷ್ಣಿಕ್

[ತ್ರಿಪದಾ, ದ್ವಾದಶ-ವಸ್ವಷ್ಟಾಕ್ಷರಯುಕ್ತಾ]

[12-8-8]

೫) ರೇವತೀಃ........ಧಾಃ । ಯಜುರಾದಿಕಾ ಪಂಚಪದಾ ಪಂಕ್ತಿಃ

[ರುದ್ರೇಶವಸುಮುನಿಸ್ವರಾಕ್ಷರಯುಕ್ತಾ]

[11-11-8-7-7]

೬) ಆಪೋ ದೇವೀಃ..ಭೂಯಾಸ್ಮ। ಚತುಷ್ಪದಾ ಅನುಷ್ಟುಪ್/ವಿದ್ಯುನ್ಮಾಲಾ

---

## ॥ ನವಮೋಽನುವಾಕಃ ॥

**ವಾಕ್ತ ಆಪ್ಯಾಯತಾಂ ಪ್ರಾಣಸ್ತ ಆಪ್ಯಾಯತಾಂ ಚಕ್ಷುಸ್ತ**

**ಆಪ್ಯಾಯತಾಗ್ಂ ಶ್ರೋತ್ರಂ ತ ಆಪ್ಯಾಯತಾಂ**

---

**ವಾಕ್ । ತೇ। ಏತಿ । ಪ್ಯಾಯತಾಮ್ । ಪ್ರಾಣ ಇತಿ ಪ್ರ-ಅನಃ ತೇ। ಏತಿ । ಪ್ಯಾಯತಾಮ್।**

**ಚಕ್ಷುಃ । ತೇ । ಏತಿ । ಪ್ಯಾಯತಾಮ್ । ಶ್ರೋತ್ರಮ್ । ತೇ । ಏತಿ । ಪ್ಯಾಯತಾಮ್।**

---

ಎಂಟನೆಯ ಅನುವಾಕದಲ್ಲಿ ಸಂಜ್ಞಪನವು ಹೇಳಲ್ಪಟ್ಟಿತು. ಈ ಒಂಬತ್ತನೆಯ ಅನುವಾಕದಲ್ಲಿ ವಪೆಯ ಉತ್ಖೇದವು ಹೇಳಲ್ಪಟ್ಟಿದೆ.

| ಮಂತ್ರ | ವಿನಿಯೋಗ |
|---|---|
| ವಾಕ್ತ ಆಪ್ಯಾಯತಾಮ್ । ಪ್ರಾಣಸ್ತ..... ॥ | |
| ಚಕ್ಷುಸ್ತ...... ॥ | ಪತ್ನಿಯು ಪಶುವಿಗೆ ಮಾಡುವ |
| ಶ್ರೋತ್ರಂ ತ......... ॥ | ಜಲಸೇಚನಕ್ಕಾಗಿ —ಬೌಧಾಯನ/ಆಪ. |

---

[ಎಲೈ ಪಶುವೇ!] **ತೇ** = ನಿನ್ನ; **ವಾಕ್** = ವಾಗಿಂದ್ರಿಯವು; **ಆಪ್ಯಾಯತಾಮ್** = [ನೀನು ಮುಂದೆ ಹೊಂದಲಿರುವ ದೇವತಾದೇಹದಲ್ಲಿ] ಶುದ್ಧವಾಗಿ ವೃದ್ಧಿಯನ್ನು ಹೊಂದಲಿ; ✣ **ತೇ** = ನಿನ್ನ; **ಪ್ರಾಣಃ** = ಪ್ರಾಣವೂ; **ಆ ಪ್ಯಾಯತಾಮ್** = ವೃದ್ಧಿಹೊಂದಲಿ. ✣ **ತೇ** = ನಿನ್ನ; **ಚಕ್ಷುಃ** = ನೇತ್ರೇಂದ್ರಿಯವೂ; **ಆ ಪ್ಯಾಯತಾಮ್** = ವೃದ್ಧಿಹೊಂದಲಿ; ✣ **ತೇ** = ನಿನ್ನ; **ಶ್ರೋತ್ರಮ್** = ಕರ್ಣೇಂದ್ರಿಯವೂ; **ಆ ಪ್ಯಾಯತಾಮ್** = ವೃದ್ಧಿಹೊಂದಲಿ;

---

ಎಲೈ! ಪಶುವೇ! ಈ ಜಲಾಪ್ಯಾಯನದಿಂದ ನಿನ್ನ ವಾಗಿಂದ್ರಿಯವೂ, ಪ್ರಾಣ

ಯಾ ತೇ ಪ್ರಾಣಾಞ್ಛುಗ್ಜಗಾಮ ಯಾ ಚಕ್ಷುರ್ಯಾ ಶ್ರೋತ್ರಂ

ಯತ್ತೇಕ್ರೂರಂ ಯದಾಸ್ಥಿತಂ ತತ್ತ ಆಪ್ಯಾಯತಾಂ ತತ್ತ ಏತೇನ

---

ಯಾ । ತೇ । ಪ್ರಾಣಾನಿತಿ ಪ್ರ-ಅನಾನ್ । ಶುಕ್। ಜಗಾಮ । ಯಾ । ಚಕ್ಷುಃ । ಯಾ। ಶ್ರೋತ್ರಮ್ । ಯತ್ । ತೇ । ಕ್ರೂರಮ್ । ಯತ್ । ಆಸ್ಥಿತಮಿತ್ಯಾ -ಸ್ಥಿತಮ್ । ತತ್ । ತೇ । ಏತಿ । ಪ್ಯಾಯತಾಮ್ । ತತ್। ತೇ । ಏತೇನ ।

---

| ಮಂತ್ರ | ವಿನಿಯೋಗ |
|---|---|
| ಯಾ ತೇ....... ಶುಂಧತಾಮ್ । | ಹಿಂದಿನ ಅವಯವಗಳನ್ನು ಸ್ಪರ್ಶಿಸಲು–ಬೌಧಾ. |
| ಯಾ ತೇ........ಶುಂಧತಾಮ್ । | ಹೃದಯದೇಶದ ಆಪ್ಯಾಯನಕ್ಕಾಗಿ –ಆಪಸ್ತಂಬ |

---

✣ **ಯಾ ಶುಕ್** = ಯಾವ ದುಃಖವು (ನೋವು); **ತೇ** = ನಿನ್ನ; **ಪ್ರಾಣಾನ್ ಜಗಾಮ** = [ಮರಣಕಾಲದಲ್ಲಿ] ಪ್ರಾಣಗಳನ್ನು ಹೊಂದಿತೋ; **ಯಾ** = ಯಾವ (ಶೋಕವು) **ಚಕ್ಷುಃ** = ಕಣ್ಣನ್ನೂ; **ಯಾ** = ಯಾವ(ದುಃಖವು); **ಶ್ರೋತ್ರಮ್** = ಕಿವಿಯನ್ನು; ಜಗಾಮ = ಹೊಂದಿತೋ; **ಯತ್ ಕ್ರೂರಮ್** = ಯಾವ(ಸಂಜ್ಞಪನರೂಪವಾದ) ಕ್ರೂರಕಾರ್ಯವು; **ತೇ** = ನಿನ್ನ [ವಿಷಯದಲ್ಲಿ ಮಾಡಲ್ಪಟ್ಟಿತೋ] **ಯತ್** = ಯಾವ [ವಪೋತ್ಖೇದಾದಿಕ್ರೂರಕಾರ್ಯವು] **ಆಸ್ಥಿತಮ್** = ಮಾಡಲ್ಪಡುತ್ತದೆಯೋ; **ತೇ** = ನಿನ್ನ; **ತತ್** = ಅದೆಲ್ಲವೂ; **ಆ ಪ್ಯಾಯತಾಮ್** = ಶಾಂತವಾಗಲಿ; **ತೇ** = ನಿನ್ನ; **ತತ್** = ಆ ಪ್ರಾಣಾದಿಗಳೆಲ್ಲವೂ; **ಏತೇನ** = ಈ ನೀರಿನಿಂದ; **ಶುಂಧತಾಮ್** = [ಮುಂದಿನ ದೇಹದಲ್ಲಿ ಪ್ರವೇಶಿಸುವುದಕ್ಕಾಗಿ] ಶುದ್ಧವಾಗಲಿ.

---

ವಾಯುವೂ, ಕಣ್ಣೂ, ಕಿವಿಯೂ ನೀನು ಮುಂದೆ ಹೊಂದಲಿರುವ ದೇವತಾರೂಪದಲ್ಲಿ ಸುಖದಿಂದ ವೃದ್ಧಿ ಹೊಂದಲಿ. ಪ್ರಾಣೋತ್ಕ್ರಮಣಕಾಲದಲ್ಲಿ ಪ್ರಾಣಾದಿವಾಯುಗಳನ್ನೂ, ಕಣ್ಣುಗಳನ್ನೂ ಯಾವ ದುಃಖವು(ನೋವು) ವ್ಯಾಪಿಸಿತೋ, ಸಂಜ್ಞಪನಕಾಲದಲ್ಲಿ ಬಂಧನಾದಿಗಳಿಂದ ಯಾವ ಹಿಂಸೆಯು ನಿನಗೆ ಒದಗಿತೋ, ಮುಂದೆ ವಪೋದ್ಧರಣಾದಿ

ಶುಂಧತಾಂ ನಾಭಿಸ್ತ ಆಪ್ಯಾಯತಾಂ ಪಾಯುಸ್ತ ಆಪ್ಯಾಯ ತಾಗ್ಂ ಶುದ್ಧಾಶ್ಚರಿತ್ರಾಃ ಶಮದ್ಭ್ಯಃ (೧) ಶಮೋಷಧೀಭ್ಯಃ

ಶುಂಧತಾಮ್ । ನಾಭಿಃ । ತೇ । ಏತಿ । ಪ್ಯಾಯತಾಮ್ । ಪಾಯುಃ । ತೇ । ಏತಿ । ಪ್ಯಾಯತಾಮ್ । ಶುದ್ಧಾಃ । ಚರಿತ್ರಾಃ । *ಶಮ್ । ಅದ್ಭ್ಯ ಇತ್ಯತ್ - ಭ್ಯಃ *। (೧) ಶಮ್ । ಓಷಧೀಭ್ಯ ಇತ್ಯೋಷಧಿ-ಭ್ಯಃ ।

| ಮಂತ್ರ | ವಿನಿಯೋಗ |
|---|---|
| ನಾಭಿಸ್ತ ಆಪ್ಯಾಯತಾಮ್ । | ಪತ್ನಿಯು ಮಾಡುವ ನಾಭಿಯ ಆಪ್ಯಾಯನಕ್ಕಾಗಿ —ಬೌಧಾಯನ/ಆಪ. |
| ಪಾಯುಸ್ತ ಆಪ್ಯಾಯತಾಮ್ । | ಪಾಯುವಿನ ಆಪ್ಯಾಯನ. ಬೌಧಾಯನ/ಆಪ. |
| ಶುದ್ಧಾಃ........ ಪೃಥಿವ್ಯೈ । | ಪದಪ್ರಕ್ಷಾಲನೆಗಾಗಿ —ಬೌಧಾಯನ |
| ಶುದ್ಧಾಶ್ಚರಿತ್ರಾಃ । | ಪಾದಾಪ್ಯಾಯನದಲ್ಲಿ |
| ಶಮದ್ಭ್ಯಃ । | ಪ್ರತಿಯೊಂದು ಆಪ್ಯಾಯನದಲ್ಲಿಯೂ ಆಪ್ಯಾಯನದ ಅನಂತರ ಜಪಿಸಲು |

✣ ತೇ = ನಿನ್ನ; ನಾಭಿಃ = ಹೊಕ್ಕಳು; ಆ ಪ್ಯಾಯತಾಮ್ = ಶುದ್ಧವಾಗಲಿ; ✣ ತೇ ಪಾಯುಃ = ನಿನ್ನ ಅಪಾನವು; ಆಪ್ಯಾಯತಾಮ್ = ಶುದ್ಧವಾಗಲಿ. ✣ ಚರಿತ್ರಾಃ = [ನಿನ್ನ] ಕಾಲುಗಳೂ; ಶುದ್ಧಾಃ = ಪರಿಶುದ್ಧವಾಗಲಿ. ✣ ಅದ್ಭ್ಯಃ = ಪ್ರೋಕ್ಷಿಸುವ ನೀರುಗಳಿಗೆ; ಶಮ್ = ಶಾಂತಿಯು (ಸುಖವು) ಉಂಟಾಗಲಿ. ✣ ಓಷಧೀಭ್ಯಃ =[ಪಶುವಿನ ಕೆಳಗೆ ಹಾಕಿರುವ ಬರ್ಹೀರೂಪವಾದ] ಓಷಧಿಗಳಿಗೂ; ಶಮ್= ಸುಖಶಾಂತಿಗಳುಂಟಾಗಲಿ; ಪೃಥಿವ್ಯೈ = [ಪಶುವಿಗೆ ಆಶ್ರಯವಾಗಿರುವ] ಭೂಮಿಗೂ;

ಯಾವ ಕಾರ್ಯಗಳು ಮಾಡಲ್ಪಡುತ್ತವೆಯೋ, ಅವೆಲ್ಲವೂ ಶಾಂತವಾಗಲಿ. ನಿನ್ನ ಪ್ರಾಣಾದಿಗಳೆಲ್ಲವೂ ಈ ನೀರಿನಿಂದ ಶುದ್ಧವಾಗಲಿ. ನಿನ್ನ ಹೊಕ್ಕಳೂ, ಅಪಾನವೂ ಶುದ್ಧವಾಗಲಿ. ಕಾಲುಗಳೂ ಶುದ್ಧವಾಗಲಿ. ಪ್ರೋಕ್ಷಿಸುವ ಜಲಗಳಿಗೂ, ಪಶುವಿನ ಕೆಳಗಿರುವ ದರ್ಭ

ಶಂ ಪೃಥಿವ್ಯೈ ಶಮಹೋಭ್ಯಾಮೋಷಧೇ ತ್ರಾಯಸ್ವೈನಗ್ಂ

ಸ್ವಧಿತೇ ಮೈನಗ್ಂ ಹಿಗ್ಂಸೀಃ

---

ಶಮ್ । ಪೃಥಿವ್ಯೈ । ಶಮ್ । ಅಹೋಭ್ಯಾಮಿತ್ಯಹಃ-ಭ್ಯಾಮ್ । ಓಷಧೇ । ತ್ರಾಯಸ್ವ । ಏನಮ್ । ಸ್ವಧಿತ ಇತಿ ಸ್ವ-ಧಿತೇ । ಮಾ । ಏನಮ್ । ಹಿಗ್ಂಸೀಃ ।

---

| ಮಂತ್ರ | ವಿನಿಯೋಗ |
|---|---|
| ಶಮೋಷಧೀಭ್ಯಃ....ಪೃಥಿವ್ಯೈ । | ಆಪ್ಯಾಯನದ ನಂತರ ಉಳಿದ ನೀರನ್ನು ಭೂಮಿಯಲ್ಲಿ ಚೆಲ್ಲಲು —ಆಪಸ್ತಂಬ |
| ಶಮಹೋಭ್ಯಾಮ್ । | ಉಳಿದ ನೀರನ್ನು ಬೆನ್ನಿನ ಭಾಗದಲ್ಲಿ ಮೇಲಿನಿಂದ ಕೆಳಕ್ಕೆ ಚೆಲ್ಲಲು. |
| ಓಷಧೇ ತ್ರಾಯಸ್ವೈನಮ್ । | ಉಪಾಕರಣದರ್ಭೆಗಳಲ್ಲಿ ಉಳಿದಿರುವ ದರ್ಭೆಯನ್ನು ನಾಭಿಯ ದಕ್ಷಿಣದಲ್ಲಿ ಇಡಲು. |
| ಸ್ವಧಿತೇ......ಹಿಗ್ಂಸೀಃ । | ಛೇದಿಸುವ ಸ್ವಧಿತಿಯನ್ನು ಇಡಲು. [ಅನಂತರ ನಾಭಿಯ ಪಾರ್ಶ್ವದಲ್ಲಿ ಅಡ್ಡಲಾಗಿ ಛೇದಿಸಬೇಕು.] |

---

ಶಮ್ = ಸುಖಶಾಂತಿಗಳುಂಟಾಗಲಿ; [ಜಲಾದ್ಯಭಿಮಾನಿದೇವತೆಗಳಿಗೆ ಶಾಂತಿ ಸುಖಗಳುಂಟಾಗಲಿ] ✣ ಅಹೋಭ್ಯಾಮ್ =[ಮಾರಣಕಾಲದಲ್ಲಿರುವ] ಅಹೋರಾತ್ರಾಭಿಮಾನಿದೇವತೆಗಳಿಗೂ; ಶಮ್=ಶಾಂತಿಯು ಉಂಟಾಗಲಿ; ✣ ಓಷಧೇ=ಎಲೈ ದರ್ಭರೂಪವಾದ ಓಷಧಿಯೇ! ಏನಮ್ = ಈ ಪಶುವನ್ನು; ತ್ರಾಯಸ್ವ = ರಕ್ಷಿಸು; ✣ ಸ್ವಧಿತೇ = ಎಲೈ ಸ್ವಧಿತಿಯೇ! ಏನಮ್ = ಈ ಪಶುವನ್ನು; ಮಾ ಹಿಗ್ಂಸೀಃ = ಹಿಂಸಿಸಬೇಡ;

---

ರೂಪವಾದ ಓಷಧಿಗಳಿಗೂ, ಪಶುವಿಗೆ ಆಧಾರವಾಗಿರುವ ಭೂಮಿಗೂ ಶಾಂತಿಯೂ, ಸುಖವೂ ಉಂಟಾಗಲಿ. ಆಯಾ ಅಭಿಮಾನಿದೇವತೆಗಳಿಗೆ ಶಾಂತಿಯುಂಟಾಗಲಿ.

★ ಅಹೋರಾತ್ರದೇವತೆಗಳಿಂದ ಪೃಥಿವಿಗೂ ಶಾಂತಿಯುಂಟಾಗಲಿ. ಪಶುವಿನ ದುಃಖವೂ ನೋವೂ ಭೂಮಿಯ ಅಭಿಮಾನಿಯಾದ ದೇವತೆಯನ್ನು ಪ್ರವೇಶಿಸುತ್ತದೆ. ಈ ಜಲನಿನಯನದಿಂದ ಭೂಮಿಗೆ ಶಾಂತಿಯುಂಟಾಗುತ್ತದೆ.

ರಕ್ಷಸಾಂ ಭಾಗೋಽಸೀದಮಹಗ್ಂ ರಕ್ಷೋಽಧಮಂ ತಮೋ ನಯಾಮಿ ಯೋಽಸ್ಮಾನ್ದ್ವೇಷ್ಟಿಯಂ ಚ ವಯಂ ದ್ವಿಷ್ಮ ಇದ

ರಕ್ಷಸಾಮ್। ಭಾಗಃ । ಅಸಿ । *ಇದಮ್ । ಅಹಮ್ । ರಕ್ಷಃ । ಅಧಮಮ್ । ತಮಃ। ನಯಾಮಿ। ಯಃ । ಅಸ್ಮಾನ್। ದ್ವೇಷ್ಟಿ । ಯಮ್। ಚ । ವಯಮ್। ದ್ವಿಷ್ಮಃ। ಇದಮ್।

| ಮಂತ್ರ | ವಿನಿಯೋಗ |
|---|---|
| ರಕ್ಷಸಾಮ್.....ಏನಮಧಮಂ ತಮೋ ನಯಾಮಿ । | ಉಪಾಕರಣದರ್ಭದ ಮೂಲದಿಂದ ರಕ್ತವನ್ನು ಸೋಕಿಸಿ, ವಾಯವ್ಯಕ್ಕೆ ಆ ದರ್ಭವನ್ನು ಹಾಕಲು — ಬೌಧಾಯನ. |
| ೧) ರಕ್ಷಸಾಂ ಭಾಗೋಽಸಿ । | ಉಪಾಕರಣದ ದರ್ಭವನ್ನು ರಕ್ತದಿಂದ ಸೋಕಿಸಿ, ವಾಯವ್ಯಕ್ಕೆ ದರ್ಭೆಯನ್ನು ಹಾಕಲು. |
| ೨) ಇದಮಹಂ....ಏನಮಧಮಂ ತಮೋ ನಯಾಮಿ. | ಎಡಗಾಲಿನಿಂದ ಆ ದರ್ಭೆಯನ್ನು ಮೆಟ್ಟಲು —ಆಪಸ್ತಂಬ. |



❖ ಎಲೈ ರಕ್ತವೇ! ನೀನು ರಕ್ಷಸಾಮ್ = ರಾಕ್ಷಸರ; ಭಾಗಃ ಅಸಿ = ಪಾಲು ಆಗಿದ್ದೀಯೆ. ❖ ಇದಮ್ ರಕ್ಷಃ= [ತನ್ನ ಭಾಗವಾದ ರಕ್ತದಿಂದ ತೃಪ್ತವಾಗದೆ ಉಳಿದ ರಕ್ತವನ್ನೂ ಕುಡಿಯಲು ಬರುವ] ರಕ್ಷಸ್ಸನ್ನು; ಅಹಮ್=ನಾನು [ಅಧ್ವರ್ಯುವು] ಅಧಮಮ್ ತಮಃ= ಹೀನವಾದ [ನರಕರೂಪವಾದ] ತಮಸ್ಸನ್ನು/ಮಹಾದುಃಖರೂಪವಾದ ತಮಸ್ಸನ್ನು; ನಯಾಮಿ=ಹೊಂದಿಸುತ್ತೇನೆ. ಯಃ=ಯಾವನು; ಅಸ್ಮಾನ್ = ನಮ್ಮನ್ನು; ದ್ವೇಷ್ಟಿ = ದ್ವೇಷಿಸುತ್ತಾನೆಯೋ; ಚ = ಮತ್ತು; ಯಮ್ = ಯಾವನನ್ನು; ವಯಮ್ = ನಾವು; ದ್ವಿಷ್ಮಃ = ದ್ವೇಷಿಸುತ್ತೇವೆಯೋ; ಇದಮ್ ಏನಮ್ = ಈ ಇಬ್ಬರು ಪುರುಷರನ್ನೂ;

ಎಲೈ ದರ್ಭರೂಪವಾದ ಓಷಧಿಯೇ! ಈ ಪಶುವನ್ನು ರಕ್ಷಿಸು. ★ ಎಲೈ ಸ್ವಧಿತಿಯೇ! ಈ ಪಶುವನ್ನು ಹಿಂಸಿಸಬೇಡ. ★ ಎಲೈ ರಕ್ತವೇ! ನೀನು ರಾಕ್ಷಸರ ಭಾಗವಾಗಿರುವೆ. ಬರ್ಹಿಸ್ಸಿನ ಮೂಲದಲ್ಲಿರುವ ನಿನ್ನನ್ನು ಸ್ವೀಕರಿಸಿ ರಾಕ್ಷಸರು ತೃಪ್ತರಾಗಿ

**ಮೇನಮಧಮಂ ತಮೋ ನಯಾಮೀಷೇ ತ್ವಾ ಘೃತೇನ ದ್ಯಾವಾ**

**ಪೃಥಿವೀ ಪ್ರೋರ್ಣ್ವಾಥಾಮಚ್ಛಿನ್ನೋ ರಾಯಃ ಸುವೀರ**

---

ಏನಮ್ । ಅಧಮಮ್ । ತಮಃ । ನಯಾಮಿ* । ಇಷೇ । ತ್ವಾ । ಘೃತೇನ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಪ್ರೇತಿ । ಊರ್ಣ್ವಾಥಾಮ್ । ಅಚ್ಛಿನ್ನಃ । ರಾಯಃ । ಸುವೀರ ಇತಿ ಸು-ವೀರಃ ।

---

| ಮಂತ್ರ | ವಿನಿಯೋಗ |
|---|---|
| ಘೃತೇನ....ಪ್ರೋರ್ಣ್ವಾಥಾಮ್ । | ವಪಾಶ್ರಪಣಿಗಳ ಮೇಲೆ ವಪೆಯನ್ನು ಮುಚ್ಚಲು. |
| ಅಚ್ಛಿನ್ನೋ........ಸುವೀರಃ । | ವಪೆಯನ್ನು ಕೆಳಭಾಗದಲ್ಲಿ ಕತ್ತರಿಸಲು |

---

**ಅಧಮಮ್ ತಮಃ** = ನಿಕೃಷ್ಟನರಕವನ್ನು/ಮಹಾದುಃಖವನ್ನು; **ನಯಾಮಿ** = ಹೊಂದಿಸುತ್ತೇನೆ. ✣ ಎಲೈ ವಪೆಯೇ! **ಇಷೇ**=[ಯಜಮಾನನಿಗೂ ದೇವತೆಗಳಿಗೂ] ಇಷ್ಟವಾದ ಅನ್ನದ ಸಿದ್ಧಿಗಾಗಿ; **ತ್ವಾ** = ನಿನ್ನನ್ನು; [ಮೇಲಕ್ಕೆ ತೆಗೆಯುತ್ತೇನೆ.] ✣ **ದ್ಯಾವಾಪೃಥಿವೀ** = ಆಕಾಶಪೃಥಿವೀಸ್ವರೂಪವಾಗಿರುವ ವಪಾಶ್ರಪಣಿಗಳೇ! [ಭೂಮ್ಯಾಕಾಶಗಳೇ!]; **ಘೃತೇನ** = ತುಪ್ಪದಂತಿರುವ [ದೇವತೆಗಳಿಗೆ ಪ್ರಿಯವಾದ] ವಪೆಯಿಂದ; **ಪ್ರೋರ್ಣ್ವಾಥಾಮ್** = [ನಿಮ್ಮನ್ನು] ಆಚ್ಛಾದಿಸಿಕೊಳ್ಳಿರಿ. **ಅಚ್ಛಿನ್ನಃ** = [ಕತ್ತರಿಸಲ್ಪಟ್ಟರೂ ಮಂತ್ರಪ್ರಭಾವದಿಂದ] ಅಚ್ಛಿನ್ನ[ಕತ್ತರಿಸಲ್ಪಡದ]ವಾಗಿರುವ; **ಸುವೀರಃ**=[ಯಜಮಾನನಿಗೆ] ಪುತ್ರಪೌತ್ರಾದಿಗಳನ್ನು ಕೊಡಬಲ್ಲ ವಪಾಭಾಗವು; **ರಾಯಃ** = ಧನಸಮೃದ್ಧಿಯನ್ನು [ಯಜಮಾನನಿಗೆ

---

ಹೊರಟುಹೋಗಲಿ. ಉಳಿದ ರಕ್ತವನ್ನು ಕುಡಿಯಲು ಯತ್ನಿಸುವ ರಕ್ಷಸ್ಸನ್ನು ಅಧ್ವರ್ಯುವಾದ ನಾನು ಹೀನವಾದ ನರಕಕ್ಕೆ ಒಯ್ಯುತ್ತೇನೆ. ಹೆಚ್ಚಾದ ದುಃಖವನ್ನು ಅನುಭವಿಸುವಂತೆ ಮಾಡುತ್ತೇನೆ. ನಮ್ಮನ್ನು ಯಾವನು ದ್ವೇಷಿಸುತ್ತಾನೆಯೋ, ನಾವು ಯಾವನನ್ನು ದ್ವೇಷಿಸುತ್ತೇವೆಯೋ ಆ ಮನುಷ್ಯರನ್ನು ಈ ದರ್ಭೆಯನ್ನು ಮೆಟ್ಟುವುದರಿಂದ ನರಕಕ್ಕೆ/ಅತಿಯಾದ ದುಃಖಕ್ಕೆ ಒಯ್ಯುತ್ತೇನೆ. ★ ಎಲೈ ವಪೆಯೇ! ಯಜಮಾನನ ಇಷ್ಟವಾದ ಫಲರೂಪವಾದ ಅನ್ನದ ಸಿದ್ಧಿಗಾಗಿ ನಿನ್ನನ್ನು ತೆಗೆಯುತ್ತೇನೆ. ವಪೆಯು ದೇವತೆಗಳಿಗೆ

ಉರ್ವಂತರಿಕ್ಷಮನ್ವಿಹಿ ವಾಯೋ ವೀಹಿ ಸ್ತೋಕಾನಾಗ್ಂ

---

ಉರು । ಅಂತರಿಕ್ಷಮ್ । ಅನ್ವಿತಿ । ಇಹಿ । ವಾಯೋ ಇತಿ । ವೀತಿ । ಇಹಿ । ಸ್ತೋಕಾನಾಮ್ ।

---

| ಮಂತ್ರ | ವಿನಿಯೋಗ |
|---|---|
| ಉರ್ವಂತರಿಕ್ಷಮನ್ವಿಹಿ । | ವಪೆಯನ್ನು ಶ್ರಪಣಕ್ಕಾಗಿ ಒಯ್ಯಲು* |
| ವಾಯೋ.......ಸ್ತೋಕಾನಾಮ್ । | ಆಹವನೀಯಾಗ್ನಿಯ ಕೊನೆಯ ಭಾಗದ ಕೆಂಡದಲ್ಲಿ ಎರಡು ಅಗ್ರಗಳಿರುವ ಶಾಖೆಯಿಂದ ಹಿಡಿಯಲ್ಪಟ್ಟು, ಬೇಯಿಸಲ್ಪಡುತ್ತಿರುವ ವಪೆಯ ಕೆಳಭಾಗದಲ್ಲಿ ದರ್ಭಾಗ್ರವನ್ನು ಹಾಕಲು. |

---

ಕೊಡಲಿ.] ✣ [ಎಲೈ ವಪೆಯೆ! ನೀನು ವಪೋದ್ಧಾರವೆಂಬ ಕ್ರೂರಕರ್ಮದ ಶಾಂತಿಗಾಗಿ] ಉರು = ವಿಸ್ತೀರ್ಣವಾಗಿರುವ; ಅಂತರಿಕ್ಷಮ್ = ಆಕಾಶಪ್ರದೇಶವನ್ನು; ಅನು= ಅನುಸರಿಸಿ ಪ್ರವೇಶಿಸಿ; ಇಹಿ = ಆಹವನೀಯಸಮೀಪಕ್ಕೆ ಹೋಗು. ✣ ವಾಯೋ = [ಬರ್ಹಿಸ್ಸಿನ ಅಗ್ರಭಾಗದ ಉರಿಯುವಿಕೆಯಿಂದ ಉಂಟಾದ] ವಾಯುವೇ! ಸ್ತೋಕಾನಾಮ್ = ವಪೆಯ ಮೇಲ್ಭಾಗದಲ್ಲಿ ಹೋಮ ಮಾಡುವ ಆಜ್ಯದ ಬಿಂದುಗಳನ್ನು; ವೀಹಿ = ಪ್ರತ್ಯೇಕವಾಗುವಂತೆ ಮಾಡು/ಕುಡಿದುಬಿಡು.

---

ಇಷ್ಟವಾದ ಅನ್ನವಾಗಿದೆ. ದೇವತೆಗಳಿಗೆ ಸಮರ್ಪಿಸುವುದಕ್ಕಾಗಿ ಯಜಮಾನನಿಗೂ ಇಷ್ಟವಾಗಿದೆ. ಯಜಮಾನನಿಗೆ ಫಲವನ್ನು ಕೊಡುವ ಅನ್ನವೂ ಆಗಿದೆ. ಅಂತಹ ವಪೆಯನ್ನು ಮೇಲಕ್ಕೆ ತೆಗೆಯುತ್ತೇನೆ. ★ ವಪೆಯನ್ನು ಬೇಯಿಸುವುದಕ್ಕಾಗಿರುವ ದ್ಯಾವಾಪೃಥಿವೀರೂಪವಾದ ವಪಾಶ್ರಪಣಿಗಳೇ! ತುಪ್ಪದಂತಿರುವ ವಪೆಯಿಂದ ನಿಮ್ಮನ್ನು ಮುಚ್ಚಿಕೊಳ್ಳಿರಿ. ★ [ದ್ಯಾವಾಪೃಥಿವೀಗಳೇ! ಜಲದಿಂದ ವಿಶ್ವನ್ನು ಆಚ್ಛಾದಿಸಿರಿ ಭ.ಭಾ.ಭಾ.] ★ ಕತ್ತರಿಸಲ್ಪಟ್ಟರೂ ಮಂತ್ರಪ್ರಭಾವದಿಂದ ನೋವನ್ನುಂಟುಮಾಡದೇ ಇದ್ದುದರಿಂದ ಕತ್ತರಿಸಲ್ಪಡದ, ಪುತ್ರಪೌತ್ರಾದಿಗಳನ್ನು ಯಜಮಾನನಿಗೆ ನೀಡುವ ವಪಾಭಾಗವು ಯಜಮಾನನಿಗೆ ಧನಸಮೃದ್ಧಿಯನ್ನು ನೀಡಲಿ. ★ ಎಲೈ ವಪೆಯೇ! ವಿಸ್ತಾರವಾದ ಆಕಾಶಮಾರ್ಗವನ್ನು ಅನುಸರಿಸಿ ಆಹವನೀಯದ ಸಮೀಪಕ್ಕೆ ಬಾ.

---

*ವಪೋತ್ಖಾದವನ್ನು ಮಾಡಿರುವುದು ಕ್ರೂರಕಾರ್ಯವನ್ನು ಮಾಡಿದಂತೆ. ಈ ಮಂತ್ರವನ್ನು ಹೇಳಿ ವಪೆಯನ್ನು ಶ್ರಪಣಾರ್ಥವಾಗಿ ಆಹವನೀಯದ ಸಮೀಪಕ್ಕೆ ಒಯ್ಯುವುದರಿಂದ ಆ ಕ್ರೂರಕರ್ಮದ ಶಾಂತಿಯಾಗುತ್ತದೆ.

## ಸ್ವಾಹೋರ್ಧ್ವನಭಸಂ ಮಾರುತಂ ಗಚ್ಛತಮ್ ॥ ೯-17 ॥

### [ಆದ್ಭ್ಯೋ ವೀಹಿ ಪಂಚ ಚ ॥]

---

ಸ್ವಾಹಾ । ಊರ್ಧ್ವನಭಸಮಿತ್ಯೂರ್ಧ್ವ-ನಭಸಮ್। ಮಾರುತಮ್ । ಗಚ್ಛತಮ್ ॥೯॥

---

| ಮಂತ್ರ | ವಿನಿಯೋಗ |
|---|---|
| ಸ್ವಾಹೋರ್ಧ್ವ......ಗಚ್ಛತಮ್ ॥ | ವಪಾಶ್ರಪಣಿಗಳನ್ನು ಆಹವನೀಯದಲ್ಲಿ ಹಾಕಲು.. |

---

❖ [ಎಲೈ! ವಪಾಶ್ರಪಣಿಗಳೇ ನೀವು] ಸ್ವಾಹಾ = ಚೆನ್ನಾಗಿ ಆಹುತಿ ಮಾಡಲ್ಪಟ್ಟವರಾಗಿ; ಊರ್ಧ್ವನಭಸಮ್ = ಊರ್ಧ್ವನಭನೆಂಬ ಹೆಸರುಳ್ಳ [ದೇವತೆಗಳಿಗೆ ವಪಾಪ್ರಹರಣವನ್ನು ಮಾಡುವ] ಮಾರುತಮ್ = ಮರುತ್ಪುತ್ರನನ್ನು, ಗಚ್ಛತಮ್ = ಹೊಂದಿರಿ. [ಆ ಊರ್ಧ್ವನಭಸನೇ ನಿಮ್ಮನ್ನು ಅಗ್ನಿಯಲ್ಲಿ ಸಮರ್ಪಿಸಿದಂತೆ ಆಗಲಿ.]

---

ತ್ವಾಮುತೇ [ತೈ.ಸಂ. 3.1.4.] ಎಂಬ ಮಂತ್ರದಿಂದ ವಪೆಯ ಮೇಲ್ಭಾಗದಲ್ಲಿ ಆಜ್ಯಹೋಮವನ್ನು ಮಾಡಬೇಕು. ಆ ಸಮಯದಲ್ಲಿ ಹಾರುವ ಬಿಂದುಗಳೇ ಸ್ತೋಕಗಳು. ವಾಯುವೇ! ಈ ಸ್ತೋಕಗಳನ್ನು ವಿಭಾಗಿಸಿ ಸ್ವೀಕರಿಸು. [ವೃಷ್ಟಿಯನ್ನು ಕೊಡು.]

ಮೇಲೆ ಸಂಚರಿಸುವುದರಿಂದ ಊರ್ಧ್ವನಭಸನೆಂದು ಪ್ರಸಿದ್ಧನಾಗಿರುವ ಮರುತ್ಪುತ್ರನು ದೇವತೆಗಳ ಯಾಗದಲ್ಲಿ ವಪಾಶ್ರಪಣಿಗಳನ್ನು ಅಗ್ನಿಯಲ್ಲಿ ಹಾಕತಕ್ಕವನು. ನನ್ನಿಂದ (ಅಗ್ನೀಧ್ರನಿಂದ) ನೀವು (ವಪಾಶ್ರಪಣಿಗಳು) ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟವರಾಗಿ ಆ ಊರ್ಧ್ವನಭಸನನ್ನು ಹೊಂದಿರಿ. ಆತನೇ ನಿಮ್ಮನ್ನು ಆಹವನೀಯಾಗ್ನಿಯಲ್ಲಿ ಸಮರ್ಪಿಸಿದಂತೆ ಆಗಲಿ.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

## ವಿನಿಯೋಗ ಸಂಗ್ರಹ

1-8 ವಾಗಷ್ಟಾಪ್ಯಾಯನೇ ಶೇಷಂ ಶಮಹೋ 9 ನಿನಯೇದ್ಭುವಿ ।
ಓಷ 10 ಸ್ವಧಿ 11 ಯಥಾಪೂರ್ವಂ ರಕ್ಷ 12 ದರ್ಭಂ ಸಲೋಹಿತಮ್ ॥
ತ್ಯಜೇದಿದಂ 13 ಬಾಧನೀಯಮಿಷ 14 ಉತ್ಪಿದ್ಯತೇ ವಪಾ ।
ಘೃತೇ 15 ಶ್ರಪಣ್ಯಾವಾಚ್ಛಾದ್ಯೇ ಅಚ್ಛಿ 16 ಸಾ ಕೃತ್ಯತೇ ವಪಾ ॥
ಉರು 17 ಪೂರ್ವಾನಲಂ ಗತ್ವಾ ವಾಯೋ 18 ದರ್ಭಮಧಃ ಕ್ಷಿಪೇತ್ ।
ಸ್ವಾಹಾ 19 ಶ್ರಪಣ್ಯುಪಕ್ಷೇಪೋ ಮಂತ್ರಾ ಏಕೋನವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ 18
ಆಪಸ್ತಂಬ 19

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

॥

೧೮) ವಾಯೋ......ಸ್ತೋಕಾನಾಮ್ । ವಾಯುವೇ! ಮೊದಲು ಸ್ತೋಕಗಳನ್ನು ವಿಭಾಗಿಸು. ಅನಂತರ ವೃಷ್ಟಿರೂಪದಿಂದ ಅವುಗಳನ್ನು ಕೊಡು. ಮೋಡಗಳನ್ನು ನಿನ್ನ ವೇಗದಿಂದ ವಿಭಾಗಿಸು. ಅನಂತರ ನೀರಿನ ಹನಿಗಳನ್ನು ಭೂಮಿಗೆ ಕೊಡು.

### ಆ) ಮೀಮಾಂಸಾ

ಈ ಅನುವಾಕದಲ್ಲಿ ಮೀಮಾಂಸಾವಿಶೇಷವಿಲ್ಲ.

### ಇ) ಛಂದಸ್ಸು

ಸಾಯಣರ ಮತದಂತೆ ಈ ಅನುವಾಕದಲ್ಲಿ ಎಲ್ಲವೂ ಯಜುಸ್ಸುಗಳೇ. ಭಟ್ಟ ಭಾಸ್ಕರರ ಮತದಂತೆ ಈ ಕೆಳಗಿನ ಛಂದಸ್ಸು.

॥

ಯಾ ತೇ......ಶುಂಧತಾಮ್ । ಪಂಚಪದಾ ಬೃಹತೀ

[8-6-8-6-8 ಅಕ್ಷರಗಳಿಂದ ಕೂಡಿದ ಪಾದಗಳುಳ್ಳದ್ದು.]

---

## ॥ ದಶಮೋಽನುವಾಕಃ ॥

**ಸಂ ತೇ ಮನಸಾ ಮನಸ್ಸಂ ಪ್ರಾಣೇನ ಪ್ರಾಣೋ ಜುಷ್ಟಂ**

**ದೇವೇಭ್ಯೋ ಹವ್ಯಂ**

---

**ಸಮಿತಿ** । ತೇ । ಮನಸಾ । ಮನಃ । ಸಮಿತಿ । ಪ್ರಾಣೇನೇತಿ ಪ್ರ-ಅನೇನ । ಪ್ರಾಣ ಇತಿ ಪ್ರ-ಅನಃ । ಜುಷ್ಟಮ್ । ದೇವೇಭ್ಯಃ । ಹವ್ಯಮ್ ।

---



ಒಂಬತ್ತನೆಯ ಅನುವಾಕದಲ್ಲಿ ವಸಾಪ್ರಯೋಗವು ಹೇಳಲ್ಪಟ್ಟಿದೆ. ಈ ಹತ್ತನೆಯ ಅನುವಾಕದಲ್ಲಿ ವಸಾ(ಪಶುರಸ)ಹೋಮವು ಹೇಳಲ್ಪಡುತ್ತದೆ.

| ಮಂತ್ರ | ವಿನಿಯೋಗ |
|---|---|
| ಸಂ ತೇ ಮನಸಾ......ಸ್ವಾಹಾ । | *ಪೃಷದಾಜ್ಯದಿಂದ ಹೃದಯಾಭಿಘಾರಣವನ್ನು ಮಾಡಲು. |

---

[ಎಲೈ! ಹೃದಯವೇ!] **ತೇ** = ನಿನ್ನ **ಮನಸಾ** = ಮನಸ್ಸಿನ ಸ್ಥಾನದಲ್ಲಿರುವ ಪೃಷದಾಜ್ಯದಿಂದ; **ಮನಃ**= [ದೇವತೆಗಳ] ಮನಸ್ಸು; **ಸಮ್** = ಹೊಂದಿಕೊಂಡು ಇರುವುದಾಗಲಿ. [ಎಲೈ! ಹೃದಯವೇ!] **ಪ್ರಾಣೇನ** = ಪ್ರಾಣಸದೃಶವಾದ ಪೃಷದಾಜ್ಯದಿಂದ; **ಪ್ರಾಣಃ** = [ದೇವತೆಗಳ] ಪ್ರಾಣವು; **ಸಮ್** = ಸೇರಿಕೊಳ್ಳಲಿ; **ಹವ್ಯಮ್** = [ದೇವತೆಗಳ] ಹವಿಸ್ಸಾಗಿರುವ [ನಿನ್ನನ್ನು]; **ದೇವೇಭ್ಯಃ ಜುಷ್ಟಮ್** = ದೇವತೆಗಳಿಗೆ ಪ್ರಿಯವಾಗುವಂತೆಯೂ; **ಘೃತವತ್** = ತುಪ್ಪದಿಂದ ಕೂಡಿದಂತೆಯೂ ಆಗುವಂತೆ; **ಸ್ವಾಹಾ** = ಅಭಿಘಾರ ಮಾಡುತ್ತೇನೆ; [ನೀನು ಹೀಗೆ ಅಭಿಘಾರಣ ಹೊಂದಿದ್ದಾಗಿ; **ದೇವೇಭ್ಯಃ ಜುಷ್ಟಮ್** = ದೇವತೆಗಳಿಗೆ ಅತಿಪ್ರಿಯವೂ; **ಘೃತವತ್ ಹವ್ಯಮ್**=ಈ

---

ಎಲೈ! ಪಶುಹೃದಯವೇ! ನಿನ್ನ ಮನಸ್ಸಿನಂತಿರುವ ಈ ಪೃಷದಾಜ್ಯದಿಂದ ದೇವತೆಗಳ ಮನಸ್ಸು ಸದಾ ಹೊಂದಿಕೊಂಡಿರಲಿ. ದೇವತೆಗಳ ಮನಸ್ಸಿಗೆ ಇಷ್ಟವಾಗಿರಲಿ.

---

*ಪೃಷದಾಜ್ಯವೆಂದರೆ ತುಪ್ಪದಿಂದ ಬೆರೆಸಿದ ಮೊಸರು. 'ಪೃಷದಾಜ್ಯಂ ಸದಧ್ಯಾಜ್ಯೇ'-ಅಮರಕೋಶ. ಬ್ರಹ್ಮವರ್ಗ.

श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:

ಘೃತವತ್ಸ್ವಾಹೈಂದ್ರಃ ಪ್ರಾಣೋ ಅಂಗೇಅಂಗೇ ನಿದೇಧ್ಯ

ದ್ಯೈಂದ್ರೋಽಪಾನೋ ಅಂಗೇಅಂಗೇ ವಿಬೋಭುವದ್ದೇವ

ತ್ವಷ್ಟರ್ಭೂರಿ ತೇ

---

ಘೃತವದಿತಿ ಘೃತ-ವತ್ । ಸ್ವಾಹಾ ಐಂದ್ರಃ । ಪ್ರಾಣ ಇತಿ ಪ್ರ-ಅನಃ । ಅಂಗೇಅಂಗ ಇತ್ಯಂಗೇ-ಅಂಗೇ । ನೀತಿ । ದೇಧ್ಯತ್ । ಐಂದ್ರಃ । ಅಪಾನ ಇತ್ಯಪ-ಅನಃ । ಅಂಗೇ-ಅಂಗ ಇತ್ಯಂಗೇ-ಅಂಗೇ । ವೀತಿ । ಬೋಭುವತ್ । ದೇವ । ತ್ವಷ್ಟಃ । ಭೂರಿ । ತೇ।

---

| ಮಂತ್ರ | ವಿನಿಯೋಗ |
|---|---|
| ಐಂದ್ರಃ..........ಮದಂತು । | ಅವದಾನ ಮಾಡುವ ಹೃದಯವೇ ಮೊದಲಾದ ಹನ್ನೊಂದು ಅವಯವಗಳನ್ನು ಸ್ಪರ್ಶಿಸಲು. |

---

ಪೃಷದಾಜ್ಯಯುಕ್ತವಾಗಿ ಹವನಕ್ಕೆ ಯೋಗ್ಯವಾಗಿ ಆಗುತ್ತೀಯೆ, ಸ್ವಾಹಾ = ಹೀಗೆ ಅಭಿಘಾರ ಮಾಡುತ್ತೇನೆಂದು ಪ್ರಜಾಪತಿಯ ಸ್ವೀಯವಾದ ವಾಕ್ಯ ಹೇಳುತ್ತದೆ. ಇಂತಹ ನೀನು ಸ್ವಾಹಾಕಾರ ಮಾಡಲು ಯೋಗ್ಯನಾಗುವೆ.] ಐಂದ್ರಃ = ಇಂದ್ರದೇವತಾಕವಾದ [ಅಂತರ್ವರ್ತಿಯಾದ ಆತ್ಮನಿಗೆ ಸಂಬಂಧಿಸಿದ] ಪ್ರಾಣಃ = ಪ್ರಾಣವು; ಅಂಗೇಅಂಗೇ = [ಹೃದಯಾದಿಯಾದ] ಎಲ್ಲ ಅವಯವಗಳಲ್ಲಿಯೂ; ನಿ ದೇಧ್ಯತ್ = ಚೆನ್ನಾಗಿ ಸ್ಥಾಪಿಸಲ್ಪಡಲಿ. [ಸ್ಥಿರವಾಗಿರಲಿ.] ಐಂದ್ರಃ = ಇಂದ್ರದೇವತಾಕವಾದ; ಅಪಾನಃ = ಅಪಾನ ವಾಯುವೂ; ಅಂಗೇಅಂಗೇ = ಸರ್ವಾವಯವಗಳಲ್ಲಿಯೂ; ವಿಬೋಭುವತ್ = ವಿಶೇಷ ರೂಪದಿಂದ ಇರಲಿ. ದೇವ ತ್ವಷ್ಟಃ = ತ್ವಷ್ಟೃದೇವನೇ! ತೇ = ನಿನ್ನ [ಅನುಗ್ರಹದಿಂದ] ಭೂರಿ = ಎಲ್ಲ ಅಂಗಸಮೂಹವೂ;

---

ನಿನ್ನ ಪ್ರಾಣದಂತಿರುವ (ಪ್ರಾಣಸಾಧನವಾದ) ಈ ಪೃಷದಾಜ್ಯದಿಂದ ದೇವತೆಗಳ ಪ್ರಾಣಗಳೂ ಹೊಂದಿಕೊಂಡಿರಲಿ. ಹೀಗೆ ಪೃಷದಾಜ್ಯದಿಂದ ಅಭಿಘಾರ ಹೊಂದಿದ ಮೇಲೆ ನೀನು ದೇವತೆಗಳಿಗೆ ಪ್ರಿಯವಾಗುತ್ತೀಯೆ. ಹವನ ಮಾಡಲು ಯೋಗ್ಯವಾಗುತ್ತೀಯೆ. ಘೃತದಂತಿರುವ ಪೃಷದಾಜ್ಯದಿಂದ ಯುಕ್ತವೂ ಆಗುತ್ತೀಯೆ. ಇದಕ್ಕಾಗಿ ಪೃಷದಾಜ್ಯದಿಂದ ನಿನ್ನನ್ನು ಅಭಿಘಾರಣ ಮಾಡುತ್ತೇನೆ.

श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:

ಸಗ್‌ಂಸಮೇತು ವಿಷುರೂಪಾ ಯತ್ಸಲಕ್ಷ್ಮಾಣೋ ಭವಥ ದೇವ-
ತ್ರಾ ಯಂತಮವಸೇ ಸಖಾಯೋಽನು ತ್ವಾ ಮಾತಾ ಪಿತರೋ

---

ಸಗ್‌ಂಸಮಿತಿ ಸಮ್-ಸಮ್ । ಏತು । ವಿಷುರೂಪಾ ಇತಿ ವಿಷು-ರೂಪಾಃ । ಯತ್।
ಸಲಕ್ಷ್ಮಾಣ ಇತಿ ಸ - ಲಕ್ಷ್ಮಾಣಃ । ಭವಥ । ದೇವತ್ರೇತಿ ದೇವ-ತ್ರಾ । ಯಂತಮ್ ।
ಅವಸೇ । ಸಖಾಯಃ । ಅನ್ವಿತಿ । ತ್ವಾ । ಮಾತಾ । ಪಿತರಃ । ಮದಂತು ।

---

**ಸಗ್‌ಂ ಸಮ್ ಏತು** = [ಛೇದನದಿಂದ ಬೇರೆ ಬೇರೆಯಾಗಿದ್ದರೂ] ಪರಸ್ಪರ ಸಮವೇತವಾಗಿಯೇ ಇರಲಿ; [ಎಲೈ! ಹೃದಯಾದ್ಯವಯವಗಳೇ!] **ಯತ್** = ಯಾವ ಕಾರಣದಿಂದ; **ವಿಷುರೂಪಾಃ** = ವಿಲಕ್ಷಣವಾದ ರೂಪವುಳ್ಳವರಾಗಿ [ಆಗಿದ್ದೀರೋ ಆ ಕಾರಣದಿಂದ] [ಈಗ;] **ಸಲಕ್ಷ್ಮಾಣಃ** = [ಹವಿಸ್ಸಾಗುವುದೆಂಬ] ಸಮಾನಲಕ್ಷಣವುಳ್ಳವರಾಗಿ; **ಭವಥ** = ಆಗುತ್ತೀರಿ; [ಎಲೈ ಪಶುವೇ!] **ದೇವತ್ರಾ ಯಂತಮ್** = ದೇವತೆಗಳಲ್ಲಿ [ಹವಿಸ್ಸಾಗಿ] ಹೋಗುತ್ತಿರುವ **ತ್ವಾ** = ನಿನ್ನನ್ನು; **ಸಖಾಯಃ** = [ನಿನ್ನ] ಮಿತ್ರರಾದ ಇತರ ಪಶುಗಳೂ; **ಮಾತಾ** = ನಿನ್ನ ತಾಯಿಯೂ; **ಪಿತರಃ** = ತಂದೆಯರೂ; **ಅವಸೇ** = [ನಿನ್ನಿಂದ ತಮ್ಮ ಕುಲವೆಲ್ಲವನ್ನೂ] ರಕ್ಷಿಸುವುದಕ್ಕೆ; **ಅನು ಮದಂತು** = ಒಪ್ಪಲಿ/ಅನುಮತಿ ನೀಡಲಿ.

---

ಎಲೈ ಹೃದಯವೇ ಮೊದಲಾದ ಅವಯವಗಳೇ! ಪ್ರಾಣಕ್ಕೆ ಇಂದ್ರನು ದೇವತೆ. ಇಂದ್ರದೇವತಾಕವಾದ ಪ್ರಾಣವು ಎಲ್ಲ ಅಂಗಗಳಲ್ಲಿಯೂ ಚೆನ್ನಾಗಿ ನೆಲಸಲಿ. ಹಾಗೆಯೇ ಇಂದ್ರದೇವತಾಕವಾದ ಅಪಾನವಾಯುವೂ ಸರ್ವಾಂಗಗಳಲ್ಲಿಯೂ ವಿಶೇಷರೂಪದಿಂದ ಇರಲಿ. ಹೇ ತ್ವಷ್ಟೃದೇವನೇ! ನಿನ್ನ ಅನುಗ್ರಹದಿಂದ ವಿಚ್ಛಿನ್ನವಾಗಿರುವ ಅಂಗಗಳೂ ಸೇರಿಕೊಂಡವುಗಳಾಗಿಯೇ ಇರಲಿ. ಈಗ ಬೇರೆ ಬೇರೆಯ ಲಕ್ಷಣವನ್ನು ಹೊಂದಿರುವ ಅವಯವಗಳು ದೇವತೆಗಳಿಗೆ ಹವಿಸ್ಸಾಗುವುದೆಂಬ ಒಂದೇ ರೂಪವನ್ನು ಹೊಂದಲಿ. ಸ್ವಕುಲದ ರಕ್ಷಣೆಗಾಗಿ ದೇವತೆಗಳ ಹವಿಸ್ಸಾಗಲು ಹೋಗುತ್ತಿರುವ ನಿನ್ನನ್ನು(ಪಶುವನ್ನು) ಮಿತ್ರರಾದ ಇತರ ಪಶುಗಳೂ ತಾಯಿತಂದೆಯರೂ ಅನುಮತಿಸಿ ಕಳುಹಿಸಿಕೊಡಲಿ. [ಒಂದು ಪಶುವು ಯಾಗದಲ್ಲಿ ದೇವತೆಗಳಿಗೆ ಸಮರ್ಪಿಸಲ್ಪಟ್ಟರೆ, ಅದರ ಕುಲವೇ ಉದ್ಧಾರ ಹೊಂದುತ್ತದೆ. ಆ ಪಶುವು ದೇವಲೋಕವನ್ನು ಹೊಂದುತ್ತದೆ.]

ಮದಂತು ಶ್ರೀರಸ್ಯಗ್ನಿಸ್ತ್ವಾ ಶ್ರೀಣಾತ್ವಾಪಸ್ಸಮರಿಣನ್ವಾತಸ್ಯ

(೧) ತ್ವಾ ಧ್ರಜ್ಯೈ ಪೂಷ್ಣೋ ರಗ್ಂಹ್ಯಾ ಅಪಾಮೋಷಧೀ-

ನಾಗ್ಂ ರೋಹಿಷ್ಯೈ

---

ಶ್ರೀಃ । ಅಸಿ । ಅಗ್ನಿಃ । ತ್ವಾ । ಶ್ರೀಣಾತು । ಆಪಃ । ಸಮಿತಿ । ಅರಿಣನ್ । *ವಾತಸ್ಯ[೧]।

ತ್ವಾ । ಧ್ರಜ್ಯೈ । ಪೂಷ್ಣಃ । ರಗ್ಂಹ್ಯೈ । ಅಪಾಮ್ । ಓಷಧೀನಾಮ್ । ರೋಹಿಷ್ಯೈ*।

---

| ಮಂತ್ರ | ವಿನಿಯೋಗ |
|---|---|
| ಶ್ರೀರಸ್ಯಗ್ನಿಸ್ತ್ವಾ....ರೋಹಿಷ್ಯೈ । | ಪಾರ್ಶ್ವಾಸ್ಥಿಯ ಅಗ್ರಭಾಗದಿಂದ ವಸೆ(ಪಶುರಸ) ಯನ್ನು ಆಲೋಡನೆ ಮಾಡಲು–ಬೌಧಾಯನ. |
| ೧) ಶ್ರೀರಸ್ಯಗ್ನಿಸ್ತ್ವಾ...ಅರಿಣನ್ । | ಪಶುರಸವನ್ನು ಆಲೋಡನೆ ಮಾಡಲು |
| ೨) ವಾತಸ್ಯ........ರೋಹಿಷ್ಯೈ । | ವಸೆಯನ್ನು ಆಚ್ಛಾದನ ಮಾಡಲು –ಆಪಸ್ತಂಬ. |

---

✣ ಎಲೈ ವಸೆಯೇ! ನೀನು; **ಶ್ರೀಃ** = ಆಶ್ರಯಿಸಬೇಕಾದುದಾಗಿ; **ಅಸಿ** = ಇರುವೆ; **ಅಗ್ನಿಃ** = ಆಹವನೀಯಾಗ್ನಿಯು; **ತ್ವಾ** = ನಿನ್ನನ್ನು; **ಶ್ರೀಣಾತು** = ಆಶ್ರಯಿಸಲಿ/ಸ್ವೀಕರಿಸಲಿ; **ಆಪಃ** = ಜಲಗಳು[ನೀರುಗಳು]; **ಸಮರಿಣನ್** = ಚೆನ್ನಾಗಿ ಹೊಂದಲಿ; [ನೀನು ಒಣಗದಂತೆ ಮಾಡಲಿ. ನಿನ್ನಲ್ಲಿಯೇ ಒಂದಾಗಿರಲಿ.] ವಸೆಯೇ! **ತ್ವಾ** = ನಿನ್ನನ್ನು; [ಅಪಿದಧಾಮಿ = ಮುಚ್ಚುತ್ತೇನೆ] [ಏತಕ್ಕೆಂದರೆ] **ವಾತಸ್ಯ** = ವಾಯುವಿನ; **ಧ್ರಜ್ಯೈ** = ಗಮನಕ್ಕಾಗಿಯೂ; **ಪೂಷ್ಣಃ** = ಪೋಷಕನಾದ ಆದಿತ್ಯನ; **ರಗ್ಂಹ್ಯೈ** = ಗತಿಗಾಗಿಯೂ; [ಉದಯಕ್ಕಾಗಿಯೂ]; **ಅಪಾಮ್** = ನೀರಿಗೆ ಸಂಬಂಧಿಸಿದ; **ಓಷಧೀನಾಮ್** = ಓಷಧಿ ಸಸ್ಯಗಳ; **ರೋಹಿಷ್ಯೈ** = ಬೆಳವಣಿಗೆಗಾಗಿಯೂ; [ನಿನ್ನನ್ನು ಪಾರ್ಶ್ವಾಸ್ಥಿಯಿಂದ ಮುಚ್ಚುತ್ತೇನೆ.] [ಕಲಕುತ್ತೇನೆ]

---

ವಸೆಯೇ! ನೀನು ಆಶ್ರಯಿಸಲು (ಪಾರ್ಶ್ವಾಸ್ಥಿಯಿಂದ ಮಿಶ್ರಣ ಮಾಡಲು) ತಕ್ಕುದಾಗಿರುವೆ. ನಿನ್ನನ್ನು ಆಹವನೀಯಾಗ್ನಿಯು ಸ್ವೀಕರಿಸಲಿ.

ಘೃತಂ ಘೃತಪಾವಾನಃ ಪಿಬತ ವಸಾಂ ವಸಾಪಾವಾನಃ

ಪಿಬತಾಂತರಿಕ್ಷಸ್ಯ ಹವಿರಸಿ ಸ್ವಾಹಾ ತ್ವಾಂಽತರಿಕ್ಷಾಯ

---

ಘೃತಮ್ । ಘೃತಪಾವಾನ ಇತಿ ಘೃತ-ಪಾವಾನಃ । ಪಿಬತ । ವಸಾಮ್ । ವಸಾಪಾವಾನ ಇತಿ ವಸಾ - ಪಾವಾನಃ । ಪಿಬತ । ಅಂತರಿಕ್ಷಸ್ಯ । ಹವಿಃ । ಅಸಿ । ಸ್ವಾಹಾ । ತ್ವಾ । ಅಂತರಿಕ್ಷಾಯ ।

---



| ಮಂತ್ರ | ವಿನಿಯೋಗ |
| --- | --- |
| ಘೃತಂ......ಅಂತರಿಕ್ಷಾಯ । | ವಸಾಹೋಮವನ್ನು ಮಾಡಲು |

---

✣ ಘೃತಪಾವಾನಃ = ಎಲೈ! ತುಪ್ಪವನ್ನು ಕುಡಿಯುವ (ಸ್ವೀಕರಿಸುವ) ದೇವತೆಗಳೇ! [ನೀವು]; ಘೃತಮ್= ತುಪ್ಪವನ್ನು; ಪಿಬತ = ಕುಡಿಯಿರಿ; ವಸಾಪಾವಾನಃ = ಎಲೈ! ವಸೆಯನ್ನು ಕುಡಿಯುವ ದೇವತೆಗಳೇ! ವಸಾಮ್ = ಪಶುರಸವನ್ನು; ಪಿಬತ = ಕುಡಿಯಿರಿ; ಎಲೈ! ಪಶುವೇ! [ವಸೆಯೇ!] [ನೀನು] ಅಂತರಿಕ್ಷಸ್ಯ= ಅಂತರಿಕ್ಷವಾಸಿಯಾದ ದೇವ ಸಮೂಹದ; ಹವಿಃ ಅಸಿ = ಹವಿಸ್ಸಾಗಿರುವೆ. ತ್ವಾ = ನಿನ್ನನ್ನು; ಅಂತರಿಕ್ಷಾಯ = ಆಕಾಶವಾಸಿ ದೇವಗಣಕ್ಕಾಗಿ ಸ್ವಾಹಾ = ಹೋಮ ಮಾಡುತ್ತೇನೆ.

---

ನೀರು ನಿನ್ನನ್ನು ಒಣಗದಂತೆ ಮಾಡಲಿ. ಒಣಗದೆ ಆರ್ದ್ರವಾಗಿರುವ ನಿನ್ನ ಹೋಮದಿಂದ ವಾಯುವೇ ಮೊದಲಾದ ದೇವತೆಗಳು ತೃಪ್ತರಾಗಿ ವೃಷ್ಟಿ, ಸಸ್ಯವೃದ್ಧಿ ಮೊದಲಾದ ಲೋಕವ್ಯವಹಾರವು ಚೆನ್ನಾಗಿ ನಡೆಯುವಂತೆ ಮಾಡಲಿ. ಆದಕ್ಕಾಗಿ ನಿನ್ನನ್ನು ಪಾರ್ಶ್ವಾಸ್ಥಿಯಿಂದ ಕಲಕುತ್ತೇನೆ/ಮುಚ್ಚುತ್ತೇನೆ.

ತುಪ್ಪವನ್ನು ಕುಡಿಯುವ ದೇವತೆಗಳೇ! ನೀವು ತುಪ್ಪವನ್ನು ಕುಡಿದು ತೃಪ್ತರಾಗಿರಿ.

## ದಿಶಃ ಪ್ರದಿಶ ಆದಿಶೋ ವಿದಿಶ ಉದ್ದಿಶಃ ಸ್ವಾಹಾ

## ದಿಗ್ಭ್ಯೋ ನಮೋ ದಿಗ್ಭ್ಯಃ ॥ ೧೦-19 ॥

[ವಾತಸ್ಯಾಷ್ಟಾವಿಗ್ಂಶತಿಶ್ಚ ।]

---

ದಿಶಃ । ಪ್ರದಿಶ ಇತಿ ಪ್ರ-ದಿಶಃ । ಆದಿಶ ಇತ್ಯಾ - ದಿಶಃ । ವಿದಿಶ ಇತಿ ವಿ - ದಿಶಃ। ಉದ್ದಿಶ ಇತ್ಯುತ್-ದಿಶಃ । ಸ್ವಾಹಾ । ದಿಗ್ಭ್ಯ ಇತಿ ದಿಕ್-ಭ್ಯಃ । ನಮಃ । ದಿಗ್ಭ್ಯ ಇತಿ ದಿಕ್-ಭ್ಯಃ ॥ ೧೦ ॥

---



| ಮಂತ್ರ | ವಿನಿಯೋಗ |
| --- | --- |
| ದಿಶಃ.......ದಿಗ್ಭ್ಯಃ । | ವಸೋದ್ರೇಕಹೋಮದಲ್ಲಿ |
| ನಮೋ ದಿಗ್ಭ್ಯಃ । | ದಿಗ್ದೇವತೆಗಳಿಗೆ ನಮಸ್ಕರಿಸಲು |

---

✣ ದಿಶಃ = ಪೂರ್ವದಿಗ್ದೇವತೆಗೆ, ಸ್ವಾಹಾ = ಉದ್ರೇಕವು (ಶೇಷವು) ಹುತವಾಗಲಿ; ಪ್ರದಿಶಃ = ದಕ್ಷಿಣದಿಗ್ದೇವತೆಗೆ [ಹುತವಾಗಲಿ.]; ಆದಿಶಃ = ಪಶ್ಚಿಮದಿಗ್ದೇವತೆಗೆ [ಹುತವಾಗಲಿ.] ವಿದಿಶಃ = ಉತ್ತರದಿಗ್ದೇವತೆಗೆ [ಹುತವಾಗಲಿ.] ಉದ್ದಿಶಃ = ಮಧ್ಯದಿಗ್ದೇವತೆಗೆ [ಹುತವಾಗಲಿ.] ದಿಗ್ಭ್ಯಃ = ಸರ್ವದಿಗ್ದೇವತೆಗಳಿಗೆ [ಹುತವಾಗಲಿ] ✣ ದಿಗ್ಭ್ಯಃ = ದಿಗ್ದೇವತೆಗಳಿಗೆ; ನಮಃ = ನಮಸ್ಕರಿಸುತ್ತೇನೆ.

---

ವಸೆಯನ್ನು ಕುಡಿಯುವ ದೇವತೆಗಳೇ! ನೀವು ಪಶುರಸವನ್ನು ಕುಡಿಯಿರಿ. ಎಲೈ ಪಶುವೇ! ವಸೆಯೇ! ನೀನು ಅಂತರಿಕ್ಷವಾಸಿಗಳಿಗೆ ಇಷ್ಟವಾದ ಹವಿಸ್ಸಾಗಿರುವೆ. ಆ ದೇವತೆಗಳಿಗಾಗಿ ನಿನ್ನನ್ನು ಹೋಮ ಮಾಡುತ್ತೇನೆ.

ವಸೆಯ ಶೇಷವನ್ನು, ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮತ್ತು ಮಧ್ಯ ದಿಕ್ಕಿನ ದೇವತೆಗಳಿಗೆ ಹೋಮ ಮಾಡುತ್ತೇನೆ. ★ ಆ ದೇವತೆಗಳನ್ನು ನಮಸ್ಕರಿಸುತ್ತೇನೆ.

# ವಿನಿಯೋಗ ಸಂಗ್ರಹ

[1]ಸಂ ತೇಽಭಿಘಾರ್ಯ ಹೃದಯಮ್ಮೈಂದ್ರೋ[2]ಽವತ್ತಾಭಿಮರ್ಶನಮ್ ।
ಶ್ರೀಃ[3] ಪಾರ್ಶ್ವೇನ ವಸಾಂ ಯೌತಿ ವಾತ[4] ಪಾರ್ಶ್ವವ್ಯತಾ ವಸಾ ॥
ಘೃತಂ[5] ವಸಾಹುತಿಃ ಷಡ್ಭಿರ್ದಿಗ್ಭ್ಯೋಮಾ[6-11] ನಮ[12] ಇತ್ಯತಃ ।
ದಿಶ್ಯುಪಸ್ಥಾನಮತ್ರೈತೇ ಮಂತ್ರಾ ದ್ವಾದಶ ವರ್ಣಿತಾಃ ॥

| | | |
|---|---|---|
| ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ | ಬೌಧಾಯನ | 11 |
| | ಆಪಸ್ತಂಬ | 12 |

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೩) ಶ್ರೀರಸಿ.....ರೋಹಿಷ್ಯೈ । ವಾಯುವಿನ ಸದಾ ಗಮನಕ್ಕಾಗಿ, ಸೂರ್ಯಗಮನಕ್ಕಾಗಿ, ನೀರಿನ ಓಷಧಿಗಳ ರಸವೃದ್ಧಿಗಾಗಿ ನೀರು ನಿನ್ನನ್ನು [ವಸೆಯನ್ನು] ಒಣಗದಂತೆ ಮಾಡಿ ಯಾಗವು ಸಫಲವಾಗುವಂತೆ ಮಾಡಲಿ.

೫) ಘೃತಂ.......ತ್ವಾಂತರಿಕ್ಷಾಯ । ಎಲೈ ವಸೆಯೇ! ನೀನು ದೇವತೆಗಳಿಗೆ ಹವಿಸ್ಸಾಗಿರುವೆ.[ಸಾಯಣರು 'ಎಲೈ ಪಶುವೇ! ನೀನು ದೇವತೆಗಳಿಗೆ ಹವಿಸ್ಸಾಗಿರುವೆ.' ಎಂದು ವಿವರಿಸಿದ್ದಾರೆ.]

೬) ದಿಶಃ......ಸ್ವಾಹಾ ದಿಗ್ಭ್ಯಃ । ಆದಿಶ, ಪ್ರದಿಶ, ವಿದಿಶ ಮೊದಲಾದವುಗಳು ದಿಗ್ವಿಶೇಷಗಳು.

### ಆ) ಮೀಮಾಂಸಾ

**೧) ಪಶುಯಾಗದ ಪ್ರಯಾಜಾದಿಗಳು ಪಶುಪುರೋಡಾಶಕ್ಕೆ ಉಪಕಾರಕಗಳೇ?**

**[ಜೈ.ಸೂ. 12-1-2]**

ಅಗ್ನೀಷೋಮೀಯಪಶುವಿಗಾಗಿ ವಿಧಿವಾಕ್ಯದಂತೆ ಪ್ರಯಾಜಾದಿಗಳನ್ನು ಅನುಷ್ಠಿಸಲಾಗುತ್ತದೆ. ಪಶುಯಾಗದಲ್ಲಿಯೇ ಬರುವ ಪುರೋಡಾಶಯಾಗಕ್ಕೂ ಆ ವಿಧಿಗಳು

ಉಪಕಾರಕಗಳೇ? ಎಂಬುದು ಇಲ್ಲಿನ ಸಂಶಯ.

**ಪೂರ್ವಪಕ್ಷ** : ಆ ವಿಧಿಗಳು ಪುರೋಡಾಶಯಾಗಕ್ಕೂ ಉಪಕಾರಕಗಳೆಂದು ತಿಳಿಸುವ ವಿಧಿಯಿಲ್ಲ. ಅತಿದೇಶ (ಚೋದಕ)ದಿಂದ ಪಶುಯಾಗದಲ್ಲಿ ಅಂಗಾನುಷ್ಠಾನ ಮಾಡುವಂತೆ ಚೋದಕದಿಂದಲೇ ಪಶುಪುರೋಡಾಶಕ್ಕೂ ಅಂಗಾನುಷ್ಠಾನವು ಪ್ರಾಪ್ತವಾಗಬೇಕು. ಚೋದಕವು ಇಲ್ಲವಾದುದರಿಂದ ಪುರೋಡಾಶಯಾಗಕ್ಕೆ ಪ್ರಯಾಜಾದಿಗಳನ್ನು ಪ್ರತ್ಯೇಕವಾಗಿ ಅನುಷ್ಠಿಸಬೇಕು.

ಸಿದ್ಧಾಂತ : **'ವಪಯಾ ಪ್ರಚರ್ಯ ಪುರೋಡಾಶೇನ ಪ್ರಚರತಿ'** [ತೈ.ಸಂ. 6. 3. 10.] ಎಂಬ ವಿಧಿವಾಕ್ಯವು ಪಶುಯಾಗದ ಮಧ್ಯದಲ್ಲಿಯೇ ಪುರೋಡಾಶಯಾಗವನ್ನು ಹೇಳಿದೆ. ಹೇಗೆ ಮನೆ ಅಂಗಳದಲ್ಲಿ ಪ್ರಕಾಶಕ್ಕಾಗಿ ಹೊತ್ತಿಸಿದ ದೀಪವು ಮಾರ್ಗವನ್ನೂ ಬೆಳಗುವುದೋ, ಹಾಗೆಯೇ ಬೇರೆ ವಿಧಿವಾಕ್ಯವಿಲ್ಲದಿದ್ದರೂ ಪಶುಯಾಗಕ್ಕಾಗಿ ಅನುಷ್ಠಿಸಿದ ಪ್ರಯಾಜಾದಿಕರ್ಮಗಳು ಪಶುಯಾಗದ ಮಧ್ಯದಲ್ಲಿ ವಿಹಿತವಾಗಿರುವ ಪುರೋಡಾಶಯಾಗಕ್ಕೂ ಉಪಕಾರಕವಾಗುತ್ತವೆ. ಪ್ರತ್ಯೇಕವಾಗಿ ಅನುಷ್ಠಾನಮಾಡ ಬೇಕಾಗಿಲ್ಲ.

**೨) ಪಶುಪುರೋಡಾಶಯಾಗದಲ್ಲಿ ಆಜ್ಯಭಾಗಗಳು ಇವೆಯೇ?**

**[ಜೈ.ಸೂ. 12-1-3]**

**'ತೌ ನ ಪಶೌ ಕರೋತಿ'** [ಆಪ.ಶ್ರೌ.ಸೂ. 7-20-8] ಎಂಬ ವಚನದಿಂದ ಪಶುಯಾಗದಲ್ಲಿ ಆಜ್ಯಭಾಗಗಳ ನಿಷೇಧವಿದೆ. ಪಶುಯಾಗಕ್ಕಾಗಿ ಅನುಷ್ಠಿಸಿರುವ ಪ್ರಯಾಜಾದಿಗಳಿಂದ ಪುರೋಡಾಶಯಾಗಕ್ಕೂ ಪ್ರಸಂಗಸಿದ್ಧಿಯಾಗಿದೆ. **'ಪ್ರಸಂಗಸಿದ್ಧಿ'** ಯೆಂದರೆ ಒಂದು ಕರ್ಮದ ಅಂಗಗಳನ್ನು ಅನುಷ್ಠಿಸಿ, ಅದರ ಉಪಕಾರವನ್ನು ಉಪಯೋಗಿಸಿಕೊಳ್ಳುವುದು. ಹಾಗೆಯೇ ಪಶುಯಾಗಕ್ಕೆ ಆಜ್ಯಭಾಗಗಳ ನಿಷೇಧವಿರುವುದರಿಂದ ಈ ನಿಷೇಧವನ್ನು ಪುರೋಡಾಶಯಾಗಕ್ಕೂ ಅನ್ವಯಿಸಿ, ಪುರೋಡಾಶಯಾಗದಲ್ಲಿಯೂ ಆಜ್ಯಭಾಗಗಳನ್ನು ಅನುಷ್ಠಿಸಬೇಕಾಗಿಲ್ಲವೆಂಬುದು **'ಪೂರ್ವಪಕ್ಷ'**.

ಇಲ್ಲಿಯ 'ಸಿದ್ಧಾಂತ'ವು ಹೀಗಿದೆ : ಪಶುಪುರೋಡಾಶಯಾಗಕ್ಕೂ **'ಪ್ರಕೃತಿವತ್ ವಿಕೃತಿಃ'** ಎಂಬ ಅತಿದೇಶದಿಂದ ಅಂಗಗಳ ಅನುಷ್ಠಾನವು ಪ್ರಾಪ್ತವಾಗುತ್ತದೆ. ಪ್ರಯಾಜಾದಿಗಳಲ್ಲಿ ಪ್ರಸಂಗಸಿದ್ಧಿಯಿಂದ ಬೇರೆಯಾದ ಪ್ರಯೋಗವು ಮಾತ್ರ ಬಾಧಿಸಲ್ಪಡುತ್ತದೆ. ಆಜ್ಯಭಾಗವು ಪಶುಯಾಗದಲ್ಲಿ ಇಲ್ಲವಾದುದರಿಂದ ಅನುಷ್ಠಾನ ವಿರುವುದಿಲ್ಲ. ಹೀಗಾಗಿ ಪುರೋಡಾಶಯಾಗಕ್ಕೆ ಆಜ್ಯಭಾಗಗಳ ಪ್ರಸಂಗಸಿದ್ಧಿ ಇಲ್ಲ.

ಆದುದರಿಂದ ಪಶುಯಾಗದಲ್ಲಿ ಆಜ್ಯಭಾಗವು ಇಲ್ಲದಿದ್ದರೂ, ಪಶುಯಾಗದ ಮಧ್ಯದಲ್ಲಿ ಅನುಷ್ಠಿಸಬೇಕಾದ ಪುರೋಡಾಶಯಾಗದಲ್ಲಿ ಆಜ್ಯಭಾಗಗಳನ್ನು ಅನುಷ್ಠಿಸಬೇಕು.

**೩) ವಿಶೇಷಾಂಗವಿರುವಲ್ಲಿ ಅತಿದೇಶವಿದೆಯೇ? [ಜೈ.ಸೂ. 10.3.1/2]**

ಪಶುಯಾಗದಲ್ಲಿ ಹನ್ನೊಂದು ಪ್ರಯಾಜಗಳನ್ನು ಅನುಷ್ಠಿಸಬೇಕು. ಚಾತುರ್ಮಾಸ್ಯೇಷ್ಟಿಯಲ್ಲಿ ಒಂಬತ್ತು ಪ್ರಯಾಜಗಳು. ವಾಯವ್ಯಪಶುವಿನಲ್ಲಿ 'ಹಿರಣ್ಯಗರ್ಭಃ' ಎಂಬುದು ಆಘಾರಮಂತ್ರ. ಹೀಗೆ ವಿಶೇಷಾಂಗಗಳನ್ನು ಹೇಳಿರುವಲ್ಲಿ ಅತಿದೇಶದಿಂದ ಬರುವ ಸಾಮಾನ್ಯ ಅಂಗಗಳಾದ ಸಾಮಿಧೇನೀ ಮುಂತಾದವುಗಳನ್ನು ಅನುಷ್ಠಿಸಬೇಕೆ? ಇಲ್ಲವೇ? ಇದು ಇಲ್ಲಿನ ಸಂಶಯ.

ಉಪದೇಶದಿಂದ ಬರುವ ಅಂಗಗಳಿಂದಲೇ ಉಪಕಾರವು ಲಭಿಸುವುದರಿಂದ ಅತಿದೇಶವು ಬೇಕಿಲ್ಲ. ಆದುದರಿಂದ ಸಾಮಿಧೇನೀ ಮುಂತಾದವುಗಳನ್ನು ಅನುಷ್ಠಿಸಬೇಕಾಗಿಲ್ಲ. ಇದು ಇಲ್ಲಿನ ಪೂರ್ವಪಕ್ಷ.

ವಿಶೇಷಾಂಗಗಳನ್ನು ಹೇಳಿರುವಲ್ಲಿ ನೂತನವಾದ ವಿಧಿಯಿರುವುದಿಲ್ಲ. ಅತಿದೇಶದಿಂದ ಪ್ರಯಾಜಗಳನ್ನು ಅನುಷ್ಠಿಸಬೇಕೆಂದು ಪ್ರಾಪ್ತವಾಗುತ್ತದೆ. ಸಂಖ್ಯಾ ವಿಶೇಷವನ್ನು ಮಾತ್ರ ಹೇಳುವುದು ಲಾಘವವೆನಿಸುತ್ತದೆ. ಹೀಗೆಯೇ ಆಘಾರಾನುಷ್ಠಾನಕ್ಕೆ ಮಂತ್ರವಿಶೇಷವನ್ನು ಮಾತ್ರ ಹೇಳುವುದು ಲಾಘವ. ಆಯಾ ಪ್ರಕರಣದಲ್ಲಿ ಹೇಳಿದ ವಿಶೇಷಸಂಖ್ಯಾದಿಗಳಿಂದ ಪ್ರಕೃತಿಯಿಂದ ಅತಿದೇಶಪ್ರಾಪ್ತವಾಗಿ ಬರುವ ಸಂಖ್ಯಾದಿಗಳಿಗೆ ಮಾತ್ರ ಬಾಧ. ಅತಿದೇಶದಿಂದ ಬರುವ ಸಾಮಿಧೇನ್ಯಾದಿಗಳಿಗೆ ಬಾಧವಿಲ್ಲ. ಇವುಗಳನ್ನು ಅನುಷ್ಠಿಸಲೇಬೇಕು. ಇದು ಇಲ್ಲಿನ ಸಿದ್ಧಾಂತ.

**೪) ಪಶುಯಾಗದಲ್ಲಿ ಹವಿರ್ಧರ್ಮವು ಯಾವುದಕ್ಕೆ? [ಜೈ.ಸೂ. 10-7-1]**

**'ಅಗ್ನೀಷೋಮೀಯಂ ಪಶುಮಾಲಭೇತ'** ಎಂಬ ವಿಧಿಯು ಪೂರ್ಣ ಪಶುವಿನಲ್ಲಿಯೇ ಹವಿಷ್ಟ್ವ(ಹವಿಸ್ಸಿನ ಧರ್ಮ)ವಿದೆಯೆಂದು ತಿಳಿಸುತ್ತಿದೆ. ಹೃದಯವೇ ಮೊದಲಾದ ಅಂಗಗಳು ಅವಯವಗಳೇ ಹೊರತು ಹವಿಸ್ಸಲ್ಲ. ಆದುದರಿಂದ ಪೂರ್ಣ ಪಶುವೇ ಹವಿಸ್ಸೆಂಬುದು ಇಲ್ಲಿನ ಪೂರ್ವಪಕ್ಷ.

**'ಅವತ್ತಂ ಜುಹೋತಿ'** ಎಂಬ ವಚನದಂತೆ ಜುಹೂವಿನಲ್ಲಿ ತೆಗೆದು ಇರಿಸಿದ [ಅವದಾನ] ದ್ರವ್ಯಕ್ಕೇ ಹೋಮ. ಅದೇ ಹವಿಸ್ಸೆನಿಸುತ್ತದೆ. ಪಶುಪ್ರಕರಣದಲ್ಲಿ **'ಏಕಾದಶಾವದಾನಾನ್ಯವದ್ಯತಿ' 'ಹೃದಯಸ್ಯಾಗ್ರೇಽವದ್ಯತಿ'** ಎಂದು ಹೇಳಿರುವುದರಿಂದ ಹೃದಯಾದಿಗಳೇ ಪ್ರತ್ಯೇಕ ಹವಿಸ್ಸುಗಳು. ಆಗ ಹೃದಯಾದಿ ಅಂಗಪೂರ್ವಕವಾಗಿಯೇ

ಪಶುವು ಹವಿಸ್ಸೆನಿಸುವುದು. ಆಗ 'ಪಶುಮಾಲಭೇತ' ಎಂಬ ವಚನವೂ ಸಂಗತವಾಗುತ್ತದೆ.

**೫) ಪಶುವಿನ ಎಷ್ಟು ಅವಯವಗಳಿಂದ ಹೋಮ? [ಜೈ.ಸೂ. 10-7-2/3]**

ಪಶುವಿನ ಎಲ್ಲ ಅವಯವಗಳಲ್ಲಿ ಒಂದೊಂದರಿಂದ ಮಾತ್ರ ಹೋಮವೇ? ಅಥವಾ ಹೃದಯವೇ ಮೊದಲಾದ ಹನ್ನೊಂದು ಅವಯವಗಳಿಂದ ಹೋಮವೇ? ವಿಹಿತವಾದ ಹನ್ನೊಂದು ಅವಯವಗಳಲ್ಲಿ ವಿಕಲ್ಪದಿಂದ ಒಂದೊಂದರ ಹೋಮವೇ? ಎಂಬುದು ಸಂಶಯ.

ಪಶುವೇ ಹವಿಸ್ಸಾದುದರಿಂದ ಪಶುವಿನ ಯಾವುದಾದರೂ ಅವಯವದಿಂದ ಹೋಮವನ್ನು ಮಾಡಬಹುದು. ಅಥವಾ 'ದಧ್ನಾ ಜುಹೋತಿ' 'ಪಯಸಾ ಜುಹೋತಿ' ಎಂಬಂತೆ ವಿಕಲ್ಪದಿಂದ ಒಂದೊಂದು ಅವಯವದಿಂದ ಮಾತ್ರ ಹೋಮವನ್ನು ಮಾಡಬೇಕೆಂದು ಇಲ್ಲಿನ ಪೂರ್ವಪಕ್ಷ.

ಹೃದಯವೇ ಮೊದಲಾದ ಹನ್ನೊಂದು ಅವಯವಗಳಿಗೆ ಅವದಾನವನ್ನು ಹೇಳಿರುವುದರಿಂದ ಇವುಗಳನ್ನು ಹೊರತು ಉಳಿದ ಅಂಸ (ಭುಜ) ಮುಂತಾದವುಗಳು ಹವಿಸ್ಸಲ್ಲವೆಂದು 'ಅಂಸಾದೀನಿ ನಾವದ್ಯೇತ್' ಎಂಬ ಪರಿಸಂಖ್ಯಾವಿಧಿಯಿಂದ ತಿಳಿದುಬರುತ್ತದೆ. ಹೃದಯಾದಿಗಳೇ ಹವಿಸ್ಸುಗಳು ಎಂದು ಪರಿಸಂಖ್ಯೆಯಿಂದ ತಿಳಿದ ಅರ್ಥ. ಪರಿಸಂಖ್ಯಾವಿಧಿಯಲ್ಲಿ ಸ್ವಾರ್ಥತ್ಯಾಗ, ಪರಾರ್ಥಸ್ವೀಕಾರ ಮತ್ತು ಪ್ರಾಪ್ತ ಬಾಧಗಳೆಂಬ ಮೂರು ದೋಷಗಳು ಇವೆ. ಆದರೂ ಗತ್ಯಂತರವಿಲ್ಲದಿರುವಾಗ ದೋಷವಿಲ್ಲ.'ನಾಂಸಯೋರವದ್ಯತಿ' ಮೊದಲಾದ ಶ್ರುತಿಯೂ ಇದನ್ನೇ ತಿಳಿಸುತ್ತದೆ. ಆದುದರಿಂದ ಹೃದಯವೇ ಮೊದಲಾದ ಹನ್ನೊಂದು ಅಂಗಗಳಿಗೆ ಮಾತ್ರ ಅವದಾನ ಮತ್ತು ಹೋಮ. ಉಳಿದ ಅಂಗಗಳಿಗಿಲ್ಲ. ಇದು ಇಲ್ಲಿನ ಸಿದ್ಧಾಂತ.

**೬) ಸ್ವಿಷ್ಟಕೃತ್ ಹೋಮದ ಅಂಗಗಳು ಯಾವುವು? [ಜೈ.ಸೂ. 10-7-4]**

'ತ್ರ್ಯಂಗೈಃ ಸ್ವಿಷ್ಟಕೃತಂ ಯಜತಿ' ಎಂಬ ವಚನವು ಪಶುಯಾಗದ ಸ್ವಿಷ್ಟಕೃದ್ಧೋಮದಲ್ಲಿ ಮೂರು ಅಂಗಗಳನ್ನು ಹವಿಸ್ಸಾಗಿ ಹೇಳಿದೆ. ಹೃದಯಾದಿ ಹನ್ನೊಂದು ಅವಯವಗಳು ಹವಿಸ್ಸಾಗಿರುವುದರಿಂದ ಅವುಗಳಲ್ಲಿ ಯಾವುದಾದರೂ ಮೂರು ಅಂಗಗಳ ಶೇಷದಿಂದ ಸ್ವಿಷ್ಟಕೃತ್ ಹೋಮವೇ? ಅಥವಾ ಬೇರೆಯ ಮೂರು ಅಂಗಗಳೇ? ಎಂಬುದು ಇಲ್ಲಿನ ಸಂಶಯ.

ಪ್ರಕೃತಿಯಾದ ದರ್ಶ-ಪೂರ್ಣಮಾಸೇಷ್ಟಿಯಲ್ಲಿ ಹವಿಸ್ಸಿನ ಶೇಷದಿಂದ ಸ್ವಿಷ್ಟಕೃದ್ಧೋಮವಿದೆ. ಆದುದರಿಂದ ಇಲ್ಲಿಯೂ ಸಹ ಹೃದಯಾದಿ ಹವಿಸ್ಸುಗಳ

ಶೇಷದಿಂದ ಸ್ವಿಷ್ಟಕೃತ್ ಹೋಮವನ್ನು ಮಾಡುವುದು ಯುಕ್ತವೆಂಬುದು ಇಲ್ಲಿನ ಪೂರ್ವಪಕ್ಷ.

'ದೋಃ ಪೂರ್ವಾರ್ಧಸ್ಯ ಗುದಂ ಮಧ್ಯತಃ ಶ್ರೋಣಿಂ ಜಘನಾರ್ಧಸ್ಯ'

[ತೈ.ಸಂ. 6-3-10]

ಎಂಬುದಾಗಿ ಹೃದಯಾದಿಗಳಿಗಿಂತ ಬೇರೆಯಾದ ಅವಯವಗಳನ್ನೇ ಸ್ವಿಷ್ಟಕೃತ್‌ಹೋಮಕ್ಕೆ ಹೇಳಿರುವುದರಿಂದ ಅವುಗಳಿಂದಲೇ ಈ ಸ್ವಿಷ್ಟಕೃದ್ಧೋಮವನ್ನು ಮಾಡಬೇಕೆಂದು ಇಲ್ಲಿನ ಸಿದ್ಧಾಂತ.

**೨) ಪಶುವಿನಲ್ಲಿ ಪುರೋಡಾಶದ ಧರ್ಮವೇ? ಸಾನ್ನಾಯ್ಯಧರ್ಮವೇ?**

[ಜೈ.ಸೂ. : 8-2-2]

ಪಶುಹವಿಸ್ಸಿನಲ್ಲಿ ಪುರೋಡಾಶಹವಿಸ್ಸಿನಂತೆ ಹವಿರ್ಧರ್ಮವೇ? ಸಾನ್ನಾಯ್ಯ ಹವಿಸ್ಸಿನಂತೆಯೇ? ಎಂಬುದು ಸಂಶಯ.

ಪುರೋಡಾಶಕ್ಕೂ ಅಗ್ನೀಷೋಮವೇ ದೇವತೆ. ಪಶುವೂ ಸಹ ಅಗ್ನೀಷೋಮೀಯವೇ ಆಗಿದೆ. ಆದುದರಿಂದ ಪಶುಹವಿಸ್ಸಿನಲ್ಲಿ ಪುರೋಡಾಶಧರ್ಮವೇ ಉಚಿತ. ಇದು ಪೂರ್ವಪಕ್ಷ.

ದೇವತಾಸಾದೃಶ್ಯಕ್ಕಿಂತಲೂ ದ್ರವ್ಯಸಾದೃಶ್ಯವು ಪ್ರಬಲ. ಸಾನ್ನಾಯ್ಯವು ಪಶುವಿನಿಂದ ದೊರೆಕಿದುದು. ಪಶುವೂ ಸಹ ಪಶುವಿನಿಂದಲೇ ದೊರಕಿದುದು. ಹೀಗೆ ಪಶುಪ್ರಭವ[ಪಶುವಿನಿಂದ ಉಂಟಾದದ್ದು]ವೆಂಬ ದ್ರವ್ಯಸಾದೃಶ್ಯವು ಪ್ರಬಲವಾದುದರಿಂದ ಸಾನ್ನಾಯ್ಯಧರ್ಮವೇ ಪಶುವಿಗೆ ಬರುತ್ತದೆಯೆಂಬುದು ಸಿದ್ಧಾಂತ.

## ೩) ಛಂದಸ್ಸು

ಐಂದ್ರಃ ಪ್ರಾಣೋ.....ಮದಂತು । ಷಟ್ಪದಾ ಅನುಷ್ಟುಪ್ [ಭ.ಭಾ.ಭಾ.]

ಸಾಯಣಾಚಾರ್ಯರ ಮತದಂತೆ ಈ ಅನುವಾಕದಲ್ಲಿ ಛಂದಸ್ಸು ಇಲ್ಲ.

---

## ॥ ಏಕಾದಶೋऽನುವಾಕಃ ॥

ಸಮುದ್ರಂ ಗಚ್ಛ ಸ್ವಾಹಾಽನ್ತರಿಕ್ಷಂ ಗಚ್ಛ ಸ್ವಾಹಾ ದೇವಗ್ಂ ಸವಿತಾರಂ ಗಚ್ಛ ಸ್ವಾಹಾಽಹೋರಾತ್ರೇ ಗಚ್ಛ ಸ್ವಾಹಾ

---

ಸಮುದ್ರಮ್ । ಗಚ್ಛ । ಸ್ವಾಹಾ । ಅಂತರಿಕ್ಷಮ್ । ಗಚ್ಛ । ಸ್ವಾಹಾ । ದೇವಮ್ । ಸವಿತಾರಮ್ । ಗಚ್ಛ । ಸ್ವಾಹಾ । ಅಹೋರಾತ್ರೇ ಇತ್ಯಹಃ-ರಾತ್ರೇ । ಗಚ್ಛ । ಸ್ವಾಹಾ।

---



| ಮಂತ್ರ | ವಿನಿಯೋಗ |
|---|---|
| ೧) ಸಮುದ್ರಂ... ಸ್ವಾಹಾ । ೫) ಮಿತ್ರಾವರುಣೌ...। | ಅನೂಯಾಜಹೋಮದ |
| ೨) ಅಂತರಿಕ್ಷಂ.....। | ವಷಟ್ಕಾರದ ಸಮಯದಲ್ಲಿ ಪ್ರತಿಪ್ರಸ್ಥಾತನು |
| ೩) ದೇವಗ್ಂ......। | ಗುದಕಾಂಡವನ್ನು ಹನ್ನೊಂದು ಭಾಗಗಳನ್ನಾಗಿ |
| ೪) ಅಹೋರಾತ್ರೇ......। | ಕತ್ತರಿಸಿ ಒಂದೊಂದಾಗಿ ಹೋಮ ಮಾಡಲು* |

---

ಎಲೈ ಹವಿಸ್ಸೇ! ಸಮುದ್ರಮ್ = ಸಮುದ್ರದೇವತೆಯನ್ನು; ಗಚ್ಛ = ಹೊಂದು; ಸ್ವಾಹಾ=[ಆ ದೇವತೆಗಾಗಿ] ನಿನ್ನನ್ನು ಹೋಮ ಮಾಡುತ್ತೇನೆ; ❖ ಅಂತರಿಕ್ಷಮ್ = ಅಂತರಿಕ್ಷಾಧಿದೇವತೆಯನ್ನು; ಗಚ್ಛ=ಹೊಂದು; ಸ್ವಾಹಾ=[ಅಂತರಿಕ್ಷದೇವತೆಗಾಗಿ ನಿನ್ನನ್ನು] ಹೋಮ ಮಾಡುತ್ತೇನೆ. ❖ ದೇವಮ್ ಸವಿತಾರಮ್ = ಸರ್ವಪ್ರೇರಕನಾದ ಸವಿತೃದೇವನನ್ನು; ಗಚ್ಛ=ಹೊಂದು; ಸ್ವಾಹಾ=[ಸವಿತೃದೇವನಿಗಾಗಿ ನಿನ್ನನ್ನು] ಹೋಮ ಮಾಡುತ್ತೇನೆ;

---

ಎಲೈ! ಗುದಕಾಂಡರೂಪವಾದ ಹವಿಸ್ಸೇ! ನೀನು ಸಮುದ್ರದೇವತೆಯನ್ನು ಹೊಂದು. ಆ ಸಮುದ್ರಗೇವನಿಗಾಗಿ ನಿನ್ನನ್ನು ಹೋಮ ಮಾಡುತ್ತೇನೆ.

---

*ಈ ಹೋಮಗಳಿಗೆ 'ಉಪಯಡ್ಢೋಮ' ಗಳೆಂದು ಹೆಸರು. ಅನೂಯಾಜಸಮೀಪೇ ಇಜ್ಯಂತೇ ಇತಿ ಉಪಯಜಃ ।

ಮಿತ್ರಾವರುಣೌ ಗಚ್ಛ ಸ್ವಾಹಾ ಸೋಮಂ ಗಚ್ಛ ಸ್ವಾಹಾ ಯಜ್ಞಂ ಗಚ್ಛ ಸ್ವಾಹಾ ಛಂದಾಗ್ಂಸಿ ಗಚ್ಛ ಸ್ವಾಹಾ ದ್ಯಾವಾಪೃಥಿವೀ

---

ಮಿತ್ರಾವರುಣಾವಿತಿ ಮಿತ್ರಾ-ವರುಣೌ । ಗಚ್ಛ । ಸ್ವಾಹಾ । ಸೋಮಮ್ । ಗಚ್ಛ । ಸ್ವಾಹಾ । ಯಜ್ಞಮ್ । ಗಚ್ಛ । ಸ್ವಾಹಾ । ಛಂದಾಗ್ಂಸಿ । ಗಚ್ಛ । ಸ್ವಾಹಾ। ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ ।

---



| ಮಂತ್ರ | | ವಿನಿಯೋಗ |
|---|---|---|
| ೧) ಸೋಮಂ.......। | ೨) ಯಜ್ಞಂ........। | |
| ೩) ಛಂದಾಗ್ಂಸಿ.....। | ೪) ದ್ಯಾವಾಪೃಥಿವೀ...। | ಹಿಂದಿನಂತೆಯೇ |

---

✣ ಅಹೋರಾತ್ರೇ = ಹಗಲು ಇರುಳುಗಳ ದೇವತೆಯನ್ನು; ಗಚ್ಛ = ಹೊಂದು; ಸ್ವಾಹಾ= [ಅಹೋರಾತ್ರದೇವತೆಗಳಿಗೆ ನಿನ್ನನ್ನು] ಅಗ್ನಿಯಲ್ಲಿ ಸಮರ್ಪಿಸುತ್ತೇನೆ; ಮಿತ್ರಾವರುಣೌ =[ಪ್ರಜೆಗಳ ಪ್ರಾಣಾಪಾನರೂಪರಾದ] ಮಿತ್ರಾವರುಣದೇವತೆಗಳನ್ನು; ಗಚ್ಛ = ಹೊಂದು; [ಆ ಮಿತ್ರಾವರುಣರಿಗಾಗಿ] ಸ್ವಾಹಾ = ನಿನ್ನನ್ನು ಹೋಮ ಮಾಡುತ್ತೇನೆ; ✣ ಸೋಮಮ್ =[ಪ್ರಜಾದೇವತೆಯಾದ] ಸೋಮನನ್ನು; ಗಚ್ಛ = ಹೊಂದು; ಸ್ವಾಹಾ = [ಸೋಮದೇವತೆಗಾಗಿ ನಿನ್ನನ್ನು] ಹೋಮ ಮಾಡುತ್ತೇನೆ. ✣ ಯಜ್ಞಮ್ = [ಪ್ರಜೆಗಳಿಗೆ ಅಭ್ಯುದಯಕಾರಿಯಾದ] ಯಜ್ಞವನ್ನು; ಗಚ್ಛ = ಹೊಂದು; [ಆ ಯಜ್ಞದೇವನಿಗಾಗಿ] ಸ್ವಾಹಾ = [ನಿನ್ನನ್ನು] ಹೋಮಮಾಡುತ್ತೇನೆ. ✣ ಛಂದಾಗ್ಂಸಿ = [ಪಶುರೂಪವಾದ] ಛಂದೋದೇವತೆಗಳನ್ನು; ಗಚ್ಛ=ಹೊಂದು; [ಗಾಯತ್ರ್ಯಾದಿ ಛಂದೋದೇವತೆಗಳಿಗಾಗಿ] ಸ್ವಾಹಾ=[ನಿನ್ನನ್ನು]ಹೋಮ ಮಾಡುತ್ತೇನೆ; ✣ ದ್ಯಾವಾಪೃಥಿವೀ = [ಪ್ರಜಾವೃದ್ಧಿಕಾರಣಗಳಾದ] ಭೂಮ್ಯಂತರಿಕ್ಷ

---

ಹಾಗೆಯೇ ಅಂತರಿಕ್ಷ, ಸವಿತೃದೇವ, ಅಹೋರಾತ್ರಗಳು, ಮಿತ್ರಾವರುಣದೇವತೆಗಳು, ಸೋಮದೇವ, ಯಜ್ಞದೇವತೆ, ಛಂದೋದೇವತೆಗಳು, ದ್ಯಾವಾಪೃಥಿವೀ ದೇವತೆಗಳು,

ಗಚ್ಛ ಸ್ವಾಹಾ ನಭೋ ದಿವ್ಯಂ ಗಚ್ಛ ಸ್ವಾಹಾಗ್ನಿಂ ವೈಶ್ವಾನರಂ

ಗಚ್ಛ ಸ್ವಾಹಾಽದ್ಭ್ಯಸ್ತ್ವೌಷಧೀಭ್ಯೋ ಮನೋ ಮೇ

---

ಗಚ್ಛ। ಸ್ವಾಹಾ। ನಭಃ। ದಿವ್ಯಮ್। ಗಚ್ಛ। ಸ್ವಾಹಾ। ಅಗ್ನಿಮ್। ವೈಶ್ವಾನರಮ್। ಗಚ್ಛ।

ಸ್ವಾಹಾ। ಅದ್ಭ್ಯ ಇತ್ಯತ್-ಭ್ಯಃ। ತ್ವಾ। ಓಷಧೀಭ್ಯ ಇತ್ಯೋಷಧಿ-ಭ್ಯಃ। ಮನಃ। ಮೇ।

---

ಮಂತ್ರ ವಿನಿಯೋಗ

೧೦) ನಭೋ..........।

೧೧) ಅಗ್ನಿಂ ವೈಶ್ವಾನರಂ.....। ಉಭಯದೇವತೆಯೇ

ಅದ್ಭ್ಯಸ್ತ್ವೌಷಧೀಭ್ಯಃ। ಕೈಗಳ ಲೇಪವನ್ನು ಬರ್ಹಿಸ್ಸಿನಲ್ಲಿ ಹಾಕಲು



---

ದೇವತೆಗಳನ್ನು; ಗಚ್ಛ = ಹೊಂದು; ಸ್ವಾಹಾ = [ಆ ಭೂಮಿ-ಅಂತರಿಕ್ಷ (ಭೂಮಿ-ಸ್ವರ್ಗ) ದೇವತೆಗಳಿಗಾಗಿ ನಿನ್ನನ್ನು] ಅಗ್ನಿಯಲ್ಲಿ ಸಮರ್ಪಿಸುತ್ತೇನೆ. ದಿವ್ಯಂ ನಭಃ = ಅಂತರಿಕ್ಷದಲ್ಲಿ ಉತ್ಪನ್ನವಾಗುವ, ದೇವತೆಗಳಿಗೆ ಹಿತವಾದ ವೃಷ್ಟಿಜಲವನ್ನು; ಗಚ್ಛ = ಹೊಂದು; ಸ್ವಾಹಾ =[ಆ ದಿವ್ಯನಭಸ್ಸಿಗಾಗಿ] ನಿನ್ನನ್ನು ಹೋಮ ಮಾಡುತ್ತೇನೆ. ✣ ವೈಶ್ವಾನರಮ್ ಅಗ್ನಿಮ್ = ಎಲ್ಲರಲ್ಲಿಯೂ ಇರುವ ಜಠರಾಗ್ನಿರೂಪನಾದ ವೈಶ್ವಾನರನನ್ನು; ಗಚ್ಛ = ಹೊಂದು; ಸ್ವಾಹಾ = [ವೈಶ್ವಾನರಾಗ್ನಿಗಾಗಿ ನಿನ್ನನ್ನು] ಹೋಮ ಮಾಡುತ್ತೇನೆ. ✣ ಎಲೈ ಲೇಪವೇ! ತ್ವಾ = ನಿನ್ನನ್ನು; ಅದ್ಭ್ಯಃ = ನೀರಿನ ಕಾರ್ಯಗಳಾಗಿರುವ [ಜಲಸಿದ್ಧಿಗಾಗಿಯೂ]; ಓಷಧೀಭ್ಯಃ = ಸಸ್ಯಸಿದ್ಧಿಗಾಗಿಯೂ; [ನೀರಿನಿಂದ ಬರ್ಹಿಸ್ಸಿನಲ್ಲಿ ತೊಳೆದು ಹಾಕುತ್ತೇನೆ;] ✣ ಸಮುದ್ರಾದಿ ದೇವತಾಸಮೂಹವೇ! [ಲೇಪವೇ!] ಮೇ = ನನಗೆ;

---

ದಿವ್ಯವೃಷ್ಟಿಜಲದೇವತೆ ಮತ್ತು ವೈಶ್ವಾನರಾಗ್ನಿ [ಜಾಠರಾಗ್ನಿ] ದೇವತೆ ಇವರನ್ನು ಹೊಂದು. ಈ ದೇವತೆಗಳಿಗಾಗಿ ನಿನ್ನನ್ನು ಅಗ್ನಿಯಲ್ಲಿ ಹೋಮ ಮಾಡುತ್ತೇನೆ. ಸಮುದ್ರಾದಿಗಳೆಲ್ಲವೂ ಪ್ರಜೋತ್ಪತ್ತಿಯಲ್ಲಿಯೂ, ಪ್ರಜಾವೃದ್ಧಿಯಲ್ಲಿಯೂ ಕಾರಣರಾಗಿರುವುದರಿಂದ ಆ ದೇವತೆಗಳಿಗಾಗಿ ನಿನ್ನನ್ನು ಹೋಮ ಮಾಡುತ್ತೇನೆ. ★ ಕೈಗಳಿಗೆ ಅಂಟಿಕೊಂಡಿರುವ ಗುದಾವದಾನಲೇಪವೇ! ನಿನ್ನನ್ನು ನೀರಿನಿಂದ ಬರ್ಹಿಸ್ಸಿನಲ್ಲಿ ತೊಳೆಯುತ್ತೇನೆ.

**ಹಾರ್ದಿಯಚ್ಛ ತನೂಂ ತ್ವಚಂ ಪುತ್ರಂ ನಪ್ತಾರಮಶೀಯ ಶುಗಸಿ ತಮಭಿಶೋಚ ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ**

---

ಹಾರ್ದಿ। ಯಚ್ಛ । ತನೂಮ್ । ತ್ವಚಮ್ । ಪುತ್ರಮ್ । ನಪ್ತಾರಮ್ । ಅಶೀಯ। ಶುಕ್ । ಅಸಿ । ತಮ್ । ಅಭೀತಿ । ಶೋಚ । ಯಃ । ಅಸ್ಮಾನ್ । ದ್ವೇಷ್ಟಿ । ಯಮ್। ಚ । ವಯಮ್। ದ್ವಿಷ್ಮಃ ।

---

| ಮಂತ್ರ | ವಿನಿಯೋಗ |
|---|---|
| ಮನೋ.....ನಪ್ತಾರಮಶೀಯ । | ಜಪಿಸಲು |
| ಶುಗಸಿ.....ದ್ವಿಷ್ಮಃ । | ಹೃದಯಶೂಲದ ಉದ್ವಾಸನೆ ಮಾಡಲು. |

---

ಹಾರ್ದಿ = ಸಂತೋಷವುಳ್ಳ; ಮನಃ = ಮನಸ್ಸನ್ನು; ಯಚ್ಛ = ಕೊಡು; ತನೂಮ್ = [ಉತ್ತಮವಾದ] ಶರೀರವನ್ನೂ; ತ್ವಚಮ್ = ಕಾಂತಿಯಿಂದ ಕೂಡಿದ ರೂಪವನ್ನೂ; ಪುತ್ರಮ್=[ಉತ್ತಮ] ಪುತ್ರನನ್ನೂ; ನಪ್ತಾರಮ್=ಮೊಮ್ಮಗನನ್ನೂ; ಅಶೀಯ=[ನಿನ್ನ ಅನುಗ್ರಹದಿಂದ] ನಾನು ಹೊಂದುವಂತಾಗಲಿ. ❖ [ಎಲೈ ಹೃದಯಶೂಲವೇ! ನೀನು] ಶುಕ್ ಅಸಿ=ಶೋಕರೂಪವಾಗಿರುವೆ. ಯಃ=ಯಾವನು; ಅಸ್ಮಾನ್ = ನಮ್ಮನ್ನು; ದ್ವೇಷ್ಟಿ = ದ್ವೇಷಿಸುತ್ತಾನೆಯೋ; ಚ=ಮತ್ತು; ಯಮ್=ಯಾವನನ್ನು; ವಯಮ್=ನಾವು; ದ್ವಿಷ್ಮಃ = ದ್ವೇಷಿಸುತ್ತೇವೆಯೋ; ತಮ್ = ಅವನನ್ನು; ಅಭಿಶೋಚ = ಆಶ್ರಯಿಸಿ ದುಃಖಪಡಿಸು.

---

ಇದರಿಂದ ಯಜಮಾನನಿಗೆ ಜಲಸಮೃದ್ಧಿಯೂ, ಜಲದಿಂದಾಗುವ ಸಸ್ಯಸಮೃದ್ಧಿಯೂ ಆಗಲಿ.

ಸಮುದ್ರಾದಿದೇವತೆಗಳೇ! [ಲೇಪವೇ!] ನನಗೆ ಯಾವಾಗಲೂ ಸಂತೋಷಗೊಂಡಿರುವ ಮನಸ್ಸನ್ನು ಕೊಡಿ. ನಿಮ್ಮ ಅನುಗ್ರಹದಿಂದ ಉತ್ತಮ ಶರೀರವೂ, ಸುಂದರರೂಪವೂ, ಪುತ್ರ ಪೌತ್ರಾದಿ ಸಂಪತ್ತೂ ನನಗೆ ಲಭಿಸಲಿ.

ಹೃದಯಶೂಲವೇ! ಶೋಕರೂಪನಾದ ನೀನು ನಮ್ಮನ್ನು ದ್ವೇಷಿಸುವವನ್ನೂ, ನಾವು ದ್ವೇಷಿಸುವವನ್ನೂ ಹೊಂದಿ ದುಃಖ ಪಡುವಂತೆ ಮಾಡು.

**ಧಾಮ್ನೋ ಧಾಮ್ನೋ ರಾಜನ್ನಿತೋ ವರುಣ ನೋ ಮುಂಚ ಯದಾಪೋ ಅಘ್ನಿಯಾ ವರುಣೇತಿ ಶಪಾಮಹೇ ತತೋ ವರುಣ ನೋ ಮುಂಚ ॥ ೧೧-20 ॥**

**[ಅಪಿ ಷಡ್ವಿಗ್ಂಶತಿಶ್ಚ ।]**

---

**ಧಾಮ್ನೋ ಧಾಮ್ನ ಇತಿ ಧಾಮ್ನಃ - ಧಾಮ್ನಃ । ರಾಜನ್ನ್ । ಇತಃ । ವರುಣ । ನಃ । ಮುಂಚ । ಯತ್ । ಆಪಃ । ಅಘ್ನಿಯಾಃ । ವರುಣ । ಇತಿ । ಶಪಾಮಹೇ । ತತಃ । ವರುಣ । ನಃ । ಮುಂಚ ॥ ೧೧ ॥**

---

| **ಮಂತ್ರ** | **ವಿನಿಯೋಗ** |
|---|---|
| **ಧಾಮ್ನೋ...... ತತೋ ವರುಣ ನೋ ಮುಂಚ ।** | **ನೀರಿನಿಂದ ಪ್ರೋಕ್ಷಿಸಿಕೊಳ್ಳಲು.** |

---

❖ **ವರುಣ**=ಎಲೈ ವರುಣನೇ! **ರಾಜನ್** = ರಾಜನೇ! **ಇತಃ ಧಾಮ್ನೋ ಧಾಮ್ನಃ** = [ಶತ್ರುಗಳಿಗೆ ಶೋಕವುಂಟಾಗಲೆಂದು ಹಾರೈಸುವುದರಿಂದ ಉಂಟಾದ] ಈ ಪಾಪದ ಸ್ಥಾನದಿಂದ; **ನಃ** = ನಮ್ಮನ್ನು; **ಮುಂಚ** = ಬಿಡಿಸು/ಪಾರುಮಾಡು; **ಆಪಃ** = 'ಜಲದೇವತೆಗಳೇ!' **ಅಘ್ನಿಯಾಃ** = "ಗೋವುಗಳೇ"! **ವರುಣ**= 'ವರುಣನೇ'! **ಇತಿ ಶಪಾಮಹೇ ಯತ್**=ಹೀಗೆ [ಹೆಸರನ್ನು ಹೇಳಿ] ನಿಮ್ಮನ್ನು ಕ್ಲೇಶಪಡಿಸುತ್ತೇವೆ ಎಂಬುದು ಯಾವುದುಂಟೋ; **ತತಃ**= ಆದರಿಂದಲೂ; **ವರುಣ** = ಎಲೈ ವರುಣನೇ!; **ನಃ** = ನಮ್ಮನ್ನು; **ಮುಂಚ** = ಬಿಡಿಸು.

---

ವರುಣರಾಜನೇ! ನಮ್ಮಿಂದಲೂ ಶತ್ರುಗಳಿಂದಲೂ ದ್ವೇಷಸ್ಥಾನವಾದ ಹೃದಯದಿಂದ ದ್ವೇಷವನ್ನು ಹೋಗಲಾಡಿಸು. ಇತರರಿಗೆ ಕೇಡನ್ನು ಹಾರೈಸುವುದರಿಂದ ಉಂಟಾದ ಪಾಪವನ್ನು ಪರಿಹರಿಸು. 'ಆಪಃ' 'ಅಘ್ನಿಯಾಃ' 'ವರುಣ' ಹೀಗೆಂದು ನಾಮಸಂಕೀರ್ತನ ಮಾಡಿ ಬೇರೆಯವರಿಗೆ ಕೇಡಾಗಲೆಂದು ಹರಸಿಕೊಂಡೆವು. ಪ್ರಶಸ್ತದೇವತೆಗಳಿಂದ ಇತರರಿಗೆ ಕೇಡನ್ನು ಹಾರೈಸುವುದು ಶಾಪ. ಆದರಿಂದ ಉಂಟಾದ ಪಾಪದಿಂದಲೂ ನಮ್ಮನ್ನು ಬಿಡಿಸು. ಈ ಪ್ರೋಕ್ಷಣದಿಂದ ಪಾಪವು ಪರಿಹಾರವಾಗಲಿ.

## ವಿನಿಯೋಗ ಸಂಗ್ರಹ

ಸಮುದ್ರಂ[1-11] ಗುದಕಾಂಡಸ್ಯ ಹೋಮಾ ಅಧ್ವ್ಯಸ್ತು[12] ಬರ್ಹಿಷಿ ।
ಲೇಪಂ ಮಾರ್ಷ್ಟಿ ಮನೋ[13] ಜಪ್ಯಃ [14]ಶುಕ್ಸಂಧಾವಾರ್ದ್ರಶುಷ್ಕಯೋಃ ॥
ತ್ಯಕ್ತ್ವಾ ಶೂಲಂ ಧಾಮ್ನೋ[15] ಮೃಜ್ಯಂ ಭವೇತ್ ಪಂಚದಶೋದಿತಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 15

### ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರ ಸಂಖ್ಯೆ**

೧೨) ಅಧ್ವ್ಯಃ....।

೧೪) ಮನೋ.....ಮಶೀಯ । ಈ ಎರಡು ಮಂತ್ರಗಳನ್ನು ಮಿಶ್ರರು

೧) ಅಧ್ವ್ಯಃ...ಹಾರ್ದಿ ಯಚ್ಛ । ೨) ತನೂಂ....ಮಶೀಯ । ಎಂದು ವಿಭಾಗ ಮಾಡಿರುತ್ತಾರೆ. ಮೊದಲನೆಯ ಮಂತ್ರಕ್ಕೆ ಕೈಗಳನ್ನು ತೊಳೆಯಲು ವಿನಿಯೋಗವೆಂದೂ, ಎರಡನೆಯ ಮಂತ್ರಕ್ಕೆ ಧೂಮಾನ್ವೀಕ್ಷಣದಲ್ಲಿ (ಹೊಗೆಯನ್ನು ನೋಡುವುದು) ವಿನಿಯೋಗವೆಂದೂ ತಿಳಿಸಿರುತ್ತಾರೆ.

ಈ ಅನುವಾಕದಲ್ಲಿ ಮೀಮಾಂಸಾ ಮತ್ತು ಛಂದಸ್ಸಿನ ವಿಶೇಷಗಳು ಇಲ್ಲ.

---

## ॥ ದ್ವಾದಶೋಽನುವಾಕಃ ॥

ಹವಿಷ್ಮತೀರಿಮಾ ಆಪೋ ಹವಿಷ್ಮಾನ್ದೇವೋ ಅಧ್ವರೋ

ಹವಿಷ್ಮಾಗ್‌ಂ ಆವಿವಾಸತಿ ಹವಿಷ್ಮಾಗ್‌ಂ ಅಸ್ತು ಸೂರ್ಯಃ॥

---

ಹವಿಷ್ಮತೀಃ । ಇಮಾಃ । ಆಪಃ । ಹವಿಷ್ಮಾನ್ । ದೇವಃ । ಅಧ್ವರಃ । ಹವಿಷ್ಮಾನ್। ಏತಿ । ವಿವಾಸತಿ। ಹವಿಷ್ಮಾನ್ । ಅಸ್ತು । ಸೂರ್ಯಃ ।

---

ಹನ್ನೊಂದನೆಯ ಅನುವಾಕದಲ್ಲಿ ಉಪಯಜಹೋಮಗಳು ಹೇಳಲ್ಪಟ್ಟವು. ಪಶು ಪ್ರಕರಣವು ಮುಗಿಯಿತು. ಈ ಹನ್ನೆರಡನೆಯ ಅನುವಾಕದಲ್ಲಿ ಸೋಮಾಭಿಷವದಲ್ಲಿ ಉಪಯುಕ್ತವಾಗುವ 'ವಸತೀವರೀ' ಸಂಜ್ಞೆಯುಳ್ಳ ನೀರುಗಳ ತರುವಿಕೆ ಮುಂತಾದವುಗಳು ಹೇಳಲ್ಪಡುತ್ತವೆ.

| ಮಂತ್ರ | ವಿನಿಯೋಗ |
|---|---|
| ಹವಿಷ್ಮತೀರಿಮಾ....ಸೂರ್ಯಃ । | ವಸತೀವರೀಗ್ರಹಣವನ್ನು ಮಾಡಲು. |

---

ಇಮಾಃ = ಈ; ಆಪಃ = ['ವಸತೀವರೀ' ಸಂಜ್ಞೆಯುಳ್ಳ] ನೀರುಗಳು; ಹವಿಷ್ಮತೀಃ = [ಸೋಮಸಂಬಂಧವಾದ] ಹವಿಸ್ಸುಳ್ಳವುಗಳಾಗುತ್ತವೆ. ದೇವಃ = ಇಂದ್ರದೇವನು; ಹವಿಷ್ಮಾನ್ = [ವಸತೀವರಿಗಳಿಂದ ಸಂಸ್ಕೃತವಾದ ಸೋಮವನ್ನು ಸ್ವೀಕರಿಸಿ] ಹವಿಸ್ಸುಳ್ಳವನಾಗಿ; ಅಸ್ತು=ಆಗಲಿ; ಅಧ್ವರಃ = ಹಿಂಸಾರಹಿತವಾದ ಯಾಗವು; ಹವಿಷ್ಮಾನ್ = [ಸೋಮರೂಪವಾದ] ಪ್ರಶಸ್ತವಾದ ಹವಿಸ್ಸುಳ್ಳದ್ದಾಗಿ; ಆ ವಿವಾಸತಿ = ವಿಶೇಷಪ್ರಕಾರದಿಂದ ಪ್ರವರ್ತಿತವಾಗಲಿ. [ಯಜಮಾನನು ಹವಿಷ್ಮಾನ್ ಆಗಿ ದೇವತೆಗಳನ್ನು ಪರಿಚರಿಸಲಿ.] ಸೂರ್ಯಃ = ಸೂರ್ಯದೇವನು; ಹವಿಷ್ಮಾನ್ = [ಹಗಲಿನಲ್ಲಿಯೇ ಸೋಮಾಭಿಷವ

---

ಸೋಮಾಭಿಷವದಲ್ಲಿ ಉಪಯುಕ್ತವಾಗುವ 'ವಸತೀವರೀ' ಸಂಜ್ಞೆಯುಳ್ಳ ಜಲಗಳು

ಅಗ್ನೇ ರ್ವೋಽಪನ್ನಗೃಹಸ್ಯ ಸದಸಿ ಸಾದಯಾಮಿ ಸುಮ್ನಾಯ

---

ಅಗ್ನೇಃ । ವಃ । ಅಪನ್ನಗೃಹಸ್ಯೇತ್ಯಪನ್ನ-ಗೃಹಸ್ಯ । ಸದಸಿ । ಸಾದಯಾಮಿ । ಸುಮ್ನಾಯ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇರ್ವೋಽಪನ್ನ....ಸಾದಯಾಮಿ । | ವಸತೀವರಿಯ ಸಾದನ ಮಾಡಲು |
| ಸುಮ್ನಾಯ.....ಧತ್ತ । | ವಸತೀವರೀಸಾದನಕಾಲದಲ್ಲಿ ಯಜಮಾನನು ಜಪಿಸಲು |

---

ಸಂಬಂಧಿಯಾದ ವಸತೀವರಿಗಳನ್ನು ಗ್ರಹಣ ಮಾಡಬೇಕಾದುದರಿಂದ] ಹವಿಷ್ಮಂತನಾಗಿ; ಅಸ್ತು=ಆಗಲಿ. ✣ ಎಲೈ! ವಸತೀವರಿಗಳೇ! ವಃ=ನಿಮ್ಮನ್ನು; ಅಪನ್ನಗೃಹಸ್ಯ = ವಿನಾಶ ವಿಲ್ಲದ ಗೃಹವುಳ್ಳ; ಅಗ್ನೇಃ=ಶಾಲಾಮುಖೀಯಾಗ್ನಿಯ; ಸದಸಿ=ಸದಸ್ಸಿನಲ್ಲಿ; ಸಾದ ಯಾಮಿ= [ಶಾಲಾಮುಖೀಯಾಗ್ನಿಯ ಸಮೀಪದಲ್ಲಿ] ಇಡುತ್ತೇನೆ. ✣ ಸುಮ್ನಿನೀಃ = ಸುಖಸ್ವರೂಪರಾದ ವಸತೀವರಿಗಳೇ! ಸುಮ್ನಾಯ = ಸರ್ವಪ್ರಾಣಿಸುಖಕ್ಕಾಗಿ [ಪ್ರವೃತ್ತ

---

ಸೋಮಸಂಬಂಧದಿಂದ ಹವಿಸ್ಸುಳ್ಳವುಗಳಾಗಲಿ. ಸೋಮಯಾಗದಲ್ಲಿ ಪ್ರಧಾನದೇವತೆ ಯಾದ ಇಂದ್ರನು ಸೋಮರೂಪಹವಿಸ್ಸಿನ ಸ್ವೀಕಾರದಿಂದ ಹವಿಷ್ಮಂತನಾಗಲಿ. ಯಜ್ಞವೂ ಸೋಮರೂಪಹವಿಸ್ಸುಳ್ಳದ್ದಾಗಿ ಚೆನ್ನಾಗಿ ಪ್ರವೃತ್ತವಾಗಲಿ. ಯಜಮಾನನೂ ಹವಿಷ್ಮಂತನಾಗಿ ಸೋಮರೂಪಹವಿಸ್ಸಿನಿಂದ ದೇವತೆಗಳನ್ನು ಪರಿಚರಿಸಲಿ. ಹಗಲಿ ನಲ್ಲಿಯೇ ವಸತೀವರಿಗ್ರಹಣ ಮಾಡಬೇಕಾದುದರಿಂದ ಸೂರ್ಯನೂ ಸೋಮರೂಪ ಹವಿಸ್ಸಂಬಂಧವುಳ್ಳವನಾಗಲಿ.

ವಸತೀವರಿಗಳೇ! ನಿಮ್ಮನ್ನು ಅನಶ್ವರವಾದ ಗೃಹವುಳ್ಳ ಶಾಲಾಮುಖೀಯಾಗ್ನಿಯ ಸಮೀಪದಲ್ಲಿ ಇಡುತ್ತೇನೆ.[ಇಡುವ ಪ್ರಕಾರವನ್ನು ಶ್ರುತಿಯಲ್ಲಿ ಸವಿಸ್ತರವಾಗಿ ಹೇಳಿದೆ.]

ಎಲೈ ವಸತೀವರಿಗಳೇ! ಸದಾ ಲೋಕಸುಖಕ್ಕಾಗಿ ಪ್ರವೃತ್ತರಾಗಿರುವ ನೀವು ಸ್ವತಃ ಸುಖಸ್ವರೂಪರಾಗಿದ್ದೀರಿ. ನನ್ನನ್ನೂ ಸುಖದಲ್ಲಿ ಇರಿಸಿರಿ. [ಹೀಗೆ ಯಜಮಾನನು ಪ್ರಾರ್ಥಿಸುತ್ತಾನೆ.]

ಸುಮ್ನಿನೀಃ ಸುಮ್ನೇ ಮಾ ಧತ್ತೇಂದ್ರಾಗ್ನಿಯೋರ್ಭಾಗಧೇಯೀಃ

ಸ್ಥ ಮಿತ್ರಾವರುಣಯೋರ್ಭಾಗಧೇಯೀಃ ಸ್ಥ ವಿಶ್ವೇಷಾಂ

---

ಸುಮ್ನಿನೀಃ । ಸುಮ್ನೇ । ಮಾ । ಧತ್ತ । ಇಂದ್ರಾಗ್ನಿಯೋರಿತೀಂದ್ರ-ಅಗ್ನಿಯೋಃ ಭಾಗ ಧೇಯೀರಿತಿ ಭಾಗ-ಧೇಯೀಃ । ಸ್ಥ । ಮಿತ್ರಾವರುಣಯೋರಿತಿ ಮಿತ್ರಾ-ವರುಣಯೋಃ ಭಾಗಧೇಯೀರಿತಿ ಭಾಗ-ಧೇಯೀಃ । ಸ್ಥ । ವಿಶ್ವೇಷಾಮ್ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನಿಯೋಃ....ಸ್ಥ । | ಉತ್ತರವೇದಿಯ ಬಲಭಾಗದ ತುದಿಯಲ್ಲಿ ವಸತೀವರಿಗಳನ್ನು ಇಡಲು. |
| ಮಿತ್ರಾ....ಸ್ಥ । | ಉತ್ತರವೇದಿಯ ಎಡಭಾಗದ ಶ್ರೋಣಿಯಲ್ಲಿ ವಸತೀವರಿಗಳನ್ನು ಸ್ಥಾಪಿಸಲು |
| ವಿಶ್ವೇಷಾಂ......ಸ್ಥ । | ಧಿಷ್ಣಿಯದ ಸಮೀಪದಲ್ಲಿ ವಸತೀವರಿಗಳನ್ನು ಸ್ಥಾಪಿಸಲು. |

---

ರಾಗಿರಿ.] ಮಾ=ನನ್ನನ್ನು; ಸುಮ್ನೇ = ಸುಖದಲ್ಲಿ; ಧತ್ತ = ಸ್ಥಾಪಿಸಿರಿ. ⁘ [ವಸತೀವರಿಗಳೇ! ನೀವು] ಇಂದ್ರಾಗ್ನಿಯೋಃ=ಇಂದ್ರಾಗ್ನಿದೇವತೆಗಳಿಗೆ; ಭಾಗಧೇಯೀಃ=ಭಾಗರೂಪವಾಗಿ; ಸ್ಥ = ಆಗಿದ್ದೀರಿ. ⁘ [ಎಲೈ ವಸತೀವರಿಗಳೇ! ನೀವು] ಮಿತ್ರಾವರುಣಯೋಃ = ಮಿತ್ರಾವರುಣದೇವತೆಗಳಿಗೆ; ಭಾಗಧೇಯೀಃ= ಭಾಗರೂಪವಾಗಿ; ಸ್ಥ = ಆಗಿರುತ್ತೀರಿ.

---

ಸೋಮಾಭಿಷವದಲ್ಲಿ ಉಪಯುಕ್ತವಾಗುವುದರಿಂದ ನೀವು [ವಸತೀವರಿಗಳು] ಸೋಮಮೂಲಕವಾಗಿ ಇಂದ್ರಾಗ್ನಿದೇವತೆಗಳ ಭಾಗವಾಗಿದ್ದೀರಿ.

ದೇವಾನಾಂ ಭಾಗಧೇಯೀಃ ಸ್ಥ ಯಜ್ಞೇ ಜಾಗೃತ ॥೧೨-21॥

[ಹವಿಷ್ಕೃತೀಶ್ಚತುಸ್ತ್ರಿಗ್‌ಂಶತ್ ।]

---

ದೇವಾನಾಮ್ । ಭಾಗಧೇಯೀರಿತಿ ಭಾಗ-ಧೇಯೀಃ । ಸ್ಥ । ಯಜ್ಞೇ । ಜಾಗೃತ ॥ ೧೨॥

---

| ಮಂತ್ರ | ವಿನಿಯೋಗ |
|---|---|
| ಯಜ್ಞೇ ಜಾಗೃತ । | ವಸತೀವರಿಗಳ ಅಭಿಮಂತ್ರಣವನ್ನು ಮಾಡಲು. |

---

✣ [ಎಲ್ಲೈ! ವಸತೀವರಿಗಳೇ! ನೀವು] ವಿಶ್ವೇಷಾಂ ದೇವಾನಾಮ್ = ವಿಶ್ವೇ ದೇವತೆಗಳಿಗೆ; ಭಾಗಧೇಯೀಃ = ಭಾಗಸ್ವರೂಪರಾಗಿ; ಸ್ಥ = ಇರುವಿರಿ. ✣ [ಎಲ್ಲೈ! ವಸತೀವರಿಗಳೇ! ನೀವು] ಯಜ್ಞೇ = ಯಜ್ಞದಲ್ಲಿ [ರಕ್ಷೋಬಾಧಾಪರಿಹಾರಕ್ಕಾಗಿ] ಜಾಗೃತ = ಎಚ್ಚರವಾಗಿರಿ.

---

ಎಲ್ಮೆ ವಸತೀವರಿಗಳೇ! ನೀವು ಮಿತ್ರಾವರುಣದೇವತೆಗಳಿಗೆ ಭಾಗ ರೂಪರಾಗಿರುವಿರಿ.

ಎಲ್ಮೆ ವಸತೀವರಿಗಳೇ! ನೀವು ವಿಶ್ವೇದೇವತೆಗಳ ಭಾಗರೂಪರಾಗಿರುವಿರಿ.

ಎಲ್ಮೆ! ವಸತೀವರಿಗಳೇ! ನೀವು ಯಜ್ಞರಕ್ಷಣೆಯ ವಿಷಯದಲ್ಲಿ ಸದಾ ಜಾಗರೂಕರಾಗಿರಿ.

## ವಿನಿಯೋಗ ಸಂಗ್ರಹ

[1]ಹವಿರ್ಗೃಹ್ಣಾತಿ ವಸತೀವರೀರಗ್ನೇ[2]ಸ್ತು ಸಾದಯೇತ್ ।
ಶಾಲಾಮುಖೀಯತಃ ಪಶ್ಚಾತ್ ಸುಮ್ನಾ[3] ಸ್ವಾಮೀ ಜಪೇತ್ಪುನಃ ॥
ಇಂದ್ರ[4] ಮಿತ್ರ[5] ದ್ವಯಾದ್ವೇದಿಶ್ರೋಣ್ಯೋರಾಸಾದಯೇತ್ಕ್ರಮಾತ್ ।

ವಿಶ್ವೇ[6]ಹ್ಯಾಗ್ನೀಧ್ರ ಧಿಷ್ಣ್ಯಸ್ಯ ಪಶ್ಚಾದಾಸಾದಯೇತ್ ಪುನಃ ॥

[7]ಯಜ್ಞೇತಿ ಮಂತ್ರಯೇತ್ ಸನ್ನಾಃ ಸಪ್ತ ಮಂತ್ರಾ ಇಹೋದಿತಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 7

## ಅನುವಾಕದ ವಿಶೇಷ ವಿಷಯಗಳು

### ಅ) ಭ.ಭಾ. ಭಾಷ್ಯ

**ಮಂತ್ರಸಂಖ್ಯೆ**

೨) ಅಗ್ನೇ....ಸಾದಯಾಮಿ ।



೩) ಸುಮ್ನಾಯ....ಧತ್ತ । ಈ ಎರಡೂ ಮಂತ್ರಗಳೂ ಒಂದೇ ಮಂತ್ರವೆಂದು ಮಿಶ್ರರು ವ್ಯಾಖ್ಯಾನ ಮಾಡಿರುತ್ತಾರೆ.

ವಸತೀವರಿಗಳ ಸಾದನಕಾಲದಲ್ಲಿ ಅಧ್ವರ್ಯುವು ಈ ಮಂತ್ರವನ್ನು ಹೇಳಬೇಕು.

೭) ಯಜ್ಞೇ ಜಾಗೃತ । ಈ ಮಂತ್ರಕ್ಕೂ ವಸತೀವರಿಗಳ ಸಾದನದಲ್ಲಿಯೇ ವಿನಿಯೋಗ.

### ಆ) ಛಂದಸ್ಸು

೧) ಹವಿಷ್ಮತೀ......ಸೂರ್ಯಃ । ಅನುಷ್ಟುಪ್

ಈ ಅನುವಾಕದಲ್ಲಿ ಮೀಮಾಂಸಾವಿಶೇಷವು ಇಲ್ಲ.

---

## ॥ ತ್ರಯೋದಶೋಽನುವಾಕಃ ॥

**ಹೃದೇ ತ್ವಾ ಮನಸೇ ತ್ವಾ ದಿವೇ ತ್ವಾ ಸೂರ್ಯಾಯ ತ್ವೋ-**
**ರ್ಧ್ವಮಿಮಮಧ್ವರಂ ಕೃಧಿ ದಿವಿ ದೇವೇಷು ಹೋತ್ರಾ ಯಚ್ಛ**

---

**ಹೃದೇ । ತ್ವಾ । ಮನಸೇ । ತ್ವಾ । ದಿವೇ । ತ್ವಾ । ಸೂರ್ಯಾಯ । ತ್ವಾ । ಊರ್ಧ್ವಮ್।**
**ಇಮಮ್ । ಅಧ್ವರಮ್ । ಕೃಧಿ । ದಿವಿ । ದೇವೇಷು । ಹೋತ್ರಾಃ । ಯಚ್ಛ ।**

---

| ಮಂತ್ರ | ವಿನಿಯೋಗ |
| --- | --- |
| ಹೃದೇ.........ಯಚ್ಛ । | ಸೋಮನನ್ನು (ಸೋಮಲತೆಯನ್ನು) ಹವಿರ್ಧಾನ ಶಕಟದಿಂದ ಕೃಷ್ಣಾಜಿನದಲ್ಲಿ ಇಳಿಸಲು. |

---

[ಎಲೈ! ಸೋಮದೇವನೇ!] **ಹೃದೇ** = ಒಳ್ಳೆಯ ಹೃದಯವುಳ್ಳ [ಮನುಷ್ಯರಿಗಾಗಿ] **ತ್ವಾ** = ನಿನ್ನನ್ನು; [ಉಪಾವಹರಾಮಿ = ಇಳಿಸುತ್ತೇನೆ] ; **ಮನಸೇ** = ಮನಸ್ವಂತರಾದ [ಪಿತೃದೇವತೆಗಳಿಗಾಗಿ] **ತ್ವಾ** = ನಿನ್ನನ್ನು; [ಉಪಾವಹರಾಮಿ = ಇಳಿಸುತ್ತೇನೆ.] **ದಿವೇ** = ಸ್ವರ್ಗದಲ್ಲಿರುವ [ದೇವತೆಗಳಿಗಾಗಿ] **ತ್ವಾ** = ನಿನ್ನನ್ನು; **ಸೂರ್ಯಾಯ** = [ವಿಶೇಷವಾಗಿ] ಸೂರ್ಯನಿಗೋಸ್ಕರ; **ತ್ವಾ** = ನಿನ್ನನ್ನು; [ಉಪಾವಹರಾಮಿ = ಇಳಿಸುತ್ತೇನೆ] [ನೀನು] **ಇಮಮ್ ಅಧ್ವರಮ್** = ನಾಶವಿಲ್ಲದ ಈ ಯಾಗವನ್ನು; [ಇಮಮ್ = ಈ ಯಜ್ಞವನ್ನು; ಅಧ್ವರಮ್ = ನಾಶರಹಿತವನ್ನಾಗಿ] **ಊರ್ಧ್ವಮ್** = ಶ್ರೇಷ್ಠವಾದದ್ದನ್ನಾಗಿಯೂ; [ಸಮಾಪ್ತವಾದುದನ್ನಾಗಿಯೂ] **ಕೃಧಿ** = ಮಾಡು; **ದಿವಿ** = ಸ್ವರ್ಗದಲ್ಲಿರುವ ; **ದೇವೇಷು** = ದೇವತೆಗಳಲ್ಲಿ; **ಹೋತ್ರಾಃ** = ಸ್ತುತಿರೂಪವಾದ ನಮ್ಮ ಮಾತುಗಳನ್ನು; **ಯಚ್ಛ** = ಕೊಡು/ಮುಟ್ಟಿಸು.

---

ಎಲೈ! ಸೋಮರಾಜನೇ! ಹೃದಯವಂತರಾದ ಮನುಷ್ಯರಿಗಾಗಿಯೂ ಮನಸ್ವಂತ

**ಸೋಮ ರಾಜನ್ನೇಹ್ಯವರೋಹ ಮಾ ಭೇರ್ಮಾ ಸಂ ವಿಕ್ಥಾ ಮಾ ತ್ವಾ ಹಿಗ್ಂಸಿಷಂ ಪ್ರಜಾಸ್ತ್ವಮುಪಾವರೋಹ ಪ್ರಜಾಸ್ತ್ವಾ ಮುಪಾವರೋಹಂತು**

---

**ಸೋಮ । ರಾಜನ್ನ್ । ಏತಿ । ಇಹಿ । ಅವೇತಿ । ರೋಹ । ಮಾ । ಭೇಃ । ಮಾ । ಸಮಿತಿ । ವಿಕ್ಥಾಃ । ಮಾ । ತ್ವಾ । ಹಿಗ್ಂಸಿಷಮ್ । ಪ್ರಜಾ ಇತಿ ಪ್ರ-ಜಾಃ । ತ್ವಮ್। ಉಪಾವರೋಹೇತ್ಯುಪ - ಅವರೋಹ । ಪ್ರಜಾ ಇತಿ ಪ್ರ - ಜಾಃ। ತ್ವಾಮ್ । ಉಪಾವ-ರೋಹಂತ್ವಿತ್ಯುಪ - ಅವರೋಹಂತು ।**

---

| ಮಂತ್ರ | ವಿನಿಯೋಗ |
| --- | --- |
| **ಸೋಮ....ಉಪಾವರೋಹಂತು ।** | ಸೋಮಲತೆಯನ್ನು ಇಳಿಸಲು(ಹಿಂದಿನಂತೆಯೇ) |

---

❖ **ಸೋಮ ರಾಜನ್** = ರಾಜನಾದ ಸೋಮನೇ! **ಏಹಿ**=[ಅಭಿಷವಸ್ಥಾನಕ್ಕೆ (ನನ್ನ ಕೈಗೆ)] ಬಾ; **ಅವರೋಹ** = [ಹವಿರ್ಧಾನಶಕಟದಿಂದ] ಇಳಿದು ಬಾ; **ಮಾ ಭೇಃ** = ಹೆದರಬೇಡ; **ಮಾ ಸಂವಿಕ್ಥಾಃ** = ನಡುಗಬೇಡ; [ನಾನು] **ತ್ವಾ** = ನಿನ್ನನ್ನು; **ಮಾ ಹಿಗ್ಂಸಿಷಮ್** = ಹಿಂಸೆ ಮಾಡುವುದಿಲ್ಲ. **ತ್ವಮ್** = ನೀನು; **ಪ್ರಜಾಃ** = [ದೇವಲೋಕದ ಮತ್ತು ಮನುಷ್ಯಲೋಕದ] ಪ್ರಜೆಗಳನ್ನು; **ಉಪಾವರೋಹ** = ಹೊಂದು/ಸ್ವೀಕರಿಸು; **ಪ್ರಜಾಃ** = ಪ್ರಜೆಗಳು; **ತ್ವಾಮ್** = ನಿನ್ನನ್ನು; **ಉಪಾವರೋಹಂತು** = ಹೊಂದಲಿ/ಹಿಂಬಾಲಿಸಲಿ.

---

ರಾದ ಪಿತೃಗಳಿಗಾಗಿಯೂ, ಸ್ವರ್ಗದಲ್ಲಿರುವ ದೇವತೆಗಳಿಗಾಗಿಯೂ, ಸೂರ್ಯನಿಗಾಗಿಯೂ ನಿನ್ನನ್ನು ಹವಿರ್ಧಾನಶಕಟದಿಂದ ಇಳಿಸುತ್ತೇನೆ. ನೀನು ಯಜ್ಞವನ್ನು ವಿನಾಶರಹಿತವನ್ನಾಗಿಯೂ, ದೇವತೆಗಳಿಗೆ ಇಷ್ಟವಾದುದನ್ನಾಗಿಯೂ, ವಿಘ್ನವಿಲ್ಲದೆ ಸಮಾಪ್ತಿ ಹೊಂದುವುದನ್ನಾಗಿಯೂ ಮಾಡು. ನಮ್ಮ ಸ್ತುತಿರೂಪವಾದ ಮಾತುಗಳನ್ನು ಸ್ವರ್ಗವಾಸಿಗಳಾದ ದೇವತೆಗಳಲ್ಲಿ ಮುಟ್ಟಿಸು. (ತಿಳಿಸು)

**ಶೃಣೋತ್ವಗ್ನಿಃ ಸಮಿಧಾ ಹವಂ ಮೇ ಶೃಣ್ವಂತ್ವಾಪೋ ಧಿಷಣಾಶ್ಚ ದೇವೀಃ । ಶೃಣೋತ ಗ್ರಾವಾಣೋ ವಿದುಷೋ ನು (೧) ಯಜ್ಞಗ್ಂ ಶೃಣೋತು ದೇವಃ ಸವಿತಾ ಹವಂ ಮೇ ॥**

---

ಶೃಣೋತು । ಅಗ್ನಿಃ । ಸಮಿಧೇತಿ ಸಮ್ - ಇಧಾ । ಹವಮ್ । ಮೇ । ಶೃಣ್ವಂತು। ಆಪಃ । ಧಿಷಣಾಃ । ಚ । ದೇವೀಃ ॥ ಶೃಣೋತ । ಗ್ರಾವಾಣಃ । ವಿದುಷಃ । ನು (೧) ಯಜ್ಞಮ್ । ಶೃಣೋತು । ದೇವಃ । ಸವಿತಾ । ಹವಮ್ । ಮೇ ॥

---

| ಮಂತ್ರ | ವಿನಿಯೋಗ |
|---|---|
| ಶೃಣೋತ್ವಗ್ನಿಃ ... ಸವಿತಾ ಹವಂ ಮೇ । | ಪ್ರಾತರನುವಾಕದ ಅಂತ್ಯದಲ್ಲಿ ಅಧ್ವರ್ಯುವು ಹೋಮ ಮಾಡಲು* |

---

❖ ಸಮಿಧಾ=ಆಜ್ಯಾಹುತಿಯಿಂದ [ಪ್ರಜ್ವಲಿತನಾದ] ಅಗ್ನಿಃ = ಅಗ್ನಿದೇವನು; ಮೇ=ನನ್ನ; ಹವಮ್=ಆಹ್ವಾನವನ್ನು; ಶೃಣೋತು=ಕೇಳಲಿ; ಚ=ಮತ್ತು; ದೇವೀಃ=ಪ್ರಕಾಶಮಾನವಾಗಿರುವ/ದೇವಸ್ವರೂಪರಾದ; ಧಿಷಣಾಃ=ವಿದ್ಯಾಸ್ವರೂಪವಾಗಿರುವ; ಆಪಃ=ಜಲದೇವತೆಗಳೂ; [ನನ್ನ ಆಹ್ವಾನವನ್ನು] ಶೃಣ್ವಂತು=ಕೇಳಲಿ; ಗ್ರಾವಾಣಃ = [ಸೋಮಾಭಿಷವಕ್ಕಾಗಿ ತಂದಿರುವ] ಗ್ರಾವಗಳೇ! ವಿದುಷೋ ನು = [ನೀವು] ವಿದ್ವಾಂಸರೇ. ಯಜ್ಞಮ್ = [ನನ್ನ]

---

ಸೋಮರಾಜನೇ! ನೀನು [ಅಭಿಷವಸ್ಥಾನಕ್ಕೆ] ಬಾ. ಹವಿರ್ಧಾನಶಕಟದಿಂದ ಇಳಿದು

---

*ಪ್ರಾತಃಕಾಲಕ್ಕೆ ಮೊದಲೇ ಹೋತೃವು ಹೇಳುವ ಋಙ್ಮಂತ್ರಸಮೂಹವು ಪ್ರಾತರನುವಾಕ. 'ಅಭೂದುಷಾಃ' [ಋ-ಸಂ. 7.75.9]ಎಂಬ ಋಕ್ಕು ಪ್ರಾತರನುವಾಕದ ಕೊನೆಯ ಋಕ್ಕು. ಹೋತೃವು ಹೇಳಿದ ಮಂತ್ರವನ್ನು ಕೇಳಿದೊಡನೆ ಅಧ್ವರ್ಯುವು ಹೋಮ ಮಾಡಬೇಕು. ಪ್ರಾತರನುವಾಕದ ಕಡೆಯಋಕ್ಕಿನ ಪೂರ್ಣಪಾಠ ಹೀಗಿದೆ:

ಅಭೂದುಷಾ ರುಶತ್ಪಶುರಾಗ್ನಿರಧಾಯ್ಯೃತ್ವಿಯಃ ॥ ಅಯೋಜಿ ವಾಂ ವೃಷಣ್ವಸೂ
ರಥೋ ದಸ್ರಾವಮರ್ತ್ಯೋ ಮಾಧ್ವೀ ಮಮ ಶ್ರುತಂ ಹವಮ್ ॥

ಏಕಧನಸಂಜ್ಞೆ ಮತ್ತು ಪನ್ನೇಜನೀಸಂಜ್ಞೆಯುಳ್ಳ ನೀರುಗಳನ್ನು ಯಜ್ಞಕ್ಕಾಗಿ ತರಬೇಕು. ಆದಕ್ಕಾಗಿ ಮೊದಲು ದೇವತೆಗಳಿಗೆ ತಿಳಿಸಿ ನೀರನ್ನು ತರಲು ಹೊರಡುತ್ತಾನೆ. ಆಗ ಈ ಹೋಮವನ್ನು ಅಧ್ವರ್ಯುವು ಮಾಡುತ್ತಾನೆ.

**ದೇವೀರಾಪೋ ಅಪಾಂ ನಪಾದ್ಯ ಊರ್ಮಿರ್ ಹವಿಷ್ಯ**

**ಇಂದ್ರಿಯಾವಾನ್ಮದಿಂತಮಸ್ತಂ ದೇವೇಭ್ಯೋ ದೇವತ್ರಾ ಧತ್ತ**

---

**ದೇವೀಃ। ಆಪಃ। ಅಪಾಮ್। ನಪಾತ್। ಯಃ। ಊರ್ಮಿಃ। ಹವಿಷ್ಯಃ। ಇಂದ್ರಿಯಾವಾನಿ-ತೀಂದ್ರಿಯ-ವಾನ್। ಮದಿಂತಮಃ। ತಮ್। ದೇವೇಭ್ಯಃ। ದೇವತ್ರೇತಿ ದೇವ-ತ್ರಾ। ಧತ್ತ।**

---

| ಮಂತ್ರ | ವಿನಿಯೋಗ |
|---|---|
| ದೇವೀರಾಪೋ ...... ಸ್ವಾಹಾ । | ತರಭೇಕಾದ ಏಕಧನ ಮತ್ತು ಪನ್ನೇಜನೀ ಎಂಬ ಹೆಸರಿನ ನೀರಿನಲ್ಲಿ ಬರ್ಹಿಸ್ಸನ್ನು ಹಾಕಿ ಹೋಮ ಮಾಡಲು. |

---

ಯಜ್ಞದ ವಿಷಯವನ್ನು; **ಶೃಣೋತ** = ಕೇಳಿರಿ; **ದೇವಃ ಸವಿತಾ** = ಸರ್ವಪ್ರೇರಕನಾದ ಸವಿತೃದೇವನು; **ಮೇ** = ನನ್ನ; **ಹವಮ್** = ಆಹ್ವಾನವನ್ನು; **ಶೃಣೋತು** = ಕೇಳಲಿ. ❖ **ದೇವೀಃ ಆಪಃ** = ಎಲೈ ಜಲದೇವತೆಯರೇ ! ಹೇ **ಅಪಾಂ ನಪಾತ್** = [ನೀರಿನಲ್ಲಿ ಗೂಢನಾಗಿದ್ದರೂ ನೀರನ್ನು ನಾಶಪಡಿಸದ] ಅಪಾಂನಪಾತನೆಂಬ ಅಗ್ನಿಯೇ! **ಹವಿಷ್ಯಃ** = ಸೋಮನೆಂಬ ಹವಿಸ್ಸಿಗೆ ಹಿತವಾದ; **ಇಂದ್ರಿಯಾವಾನ್** = ಇಂದ್ರಿಯಗಳ ಶಕ್ತಿಯನ್ನು ವೃದ್ಧಿಗೊಳಿಸುವ; **ಮದಿಂತಮಃ** = [ಕುಡಿಯಲ್ಪಟ್ಟವನಾಗಿ] ಅತ್ಯಂತ ಸಂತೋಷವನ್ನುಂಟು ಮಾಡುವ; **ಯಃ ಊರ್ಮಿಃ** = ಯಾವ ನಿಮ್ಮ ಅಲೆಯುಂಟೋ;

---

ಬಾ. ಹೆದರಬೇಡ. ನಡುಗಬೇಡ. ನಾನು ನಿನ್ನನ್ನು ಹಿಂಸಿಸುವುದಿಲ್ಲ. ದೇವತೆಗಳಿಗೆ ಸಮರ್ಪಿಸುತ್ತೇನೆ. ನೀನು ಆ ದೇವಲೋಕದ ಪ್ರಜೆಗಳನ್ನು [ಮತ್ತು ಮನುಷ್ಯಲೋಕದ ಪ್ರಜೆಗಳನ್ನು] ಹೊಂದು. ಅವರು ನಿನ್ನನ್ನು ರಾಜನನ್ನಾಗಿ ಹೊಂದಲಿ.

ಈ ಆಜ್ಯಾಹುತಿಯಿಂದ ಪ್ರಜ್ವಲಿತನಾದ ಅಗ್ನಿಯು ನನ್ನ ಆಹ್ವಾನವನ್ನು ಕೇಳಲಿ. ವಿದ್ಯುಚ್ಛರೂಪರಾದ, ದಾನ-ಪ್ರಕಾಶಾದಿಗುಣಸಂಪನ್ನರಾದ ಜಲದೇವತೆಗಳೂ ನನ್ನ ಆಹ್ವಾನವನ್ನು ಕೇಳಲಿ. ಹಾಗೆಯೇ ಅಭಿಷವೋಪಯೋಗಿಗಳಾಗಿ ವಿದ್ವಾಂಸರೇ ಆಗಿರುವ ಗ್ರಾವಗಳು ನನ್ನ ಯಜ್ಞದ ವಿಷಯವನ್ನು ಕೇಳಲಿ. ಸರ್ವಪ್ರೇರಕನಾದ ಸವಿತೃದೇವನೂ ನನ್ನ ಆಹ್ವಾನವನ್ನು ಕೇಳಲಿ. ★ ಎಲೈ! ಜಲದೇವತೆಗಳೇ! ನೀರಿನಲ್ಲಿ ಗೂಢನಾಗಿದ್ದರೂ

**ಶುಕ್ರಗ್ಂ ಶುಕ್ರಪೇಭ್ಯೋ ಯೇಷಾಂ ಭಾಗಸ್ಸ್ಥ ಸ್ವಾಹಾ ಕಾರ್ಷಿ ರಸ್ಯಪಾಪಾಂ ಮೃಧ್ರಗ್ಂ ಸಮುದ್ರಸ್ಯ ವೋಽಕ್ಷಿತ್ಯಾ ಉನ್ನಯೇ।**

**ಶುಕ್ರಮ್। ಶುಕ್ರಪೇಭ್ಯ ಇತಿ ಶುಕ್ರ-ಪೇಭ್ಯಃ। ಯೇಷಾಮ್। ಭಾಗಃ। ಸ್ಥ। ಸ್ವಾಹಾ। ಕಾರ್ಷಿಃ। ಅಸಿ। ಅಪೇತಿ। ಅಪಾಮ್। ಮೃಧ್ರಮ್। ಸಮುದ್ರಸ್ಯ। ವಃ। ಅಕ್ಷಿತ್ಯೈ। ಉದಿತಿ। ನಯೇ।**

| ಮಂತ್ರ | ವಿನಿಯೋಗ |
|---|---|
| ಕಾರ್ಷಿಃ ........ ಮೃಧ್ರಮ್ । | ದರ್ಭೆಗಳಿಂದ [ಮೈತ್ರಾವರುಣಚಮಸದಿಂದ] ಹೋಮ ಮಾಡಿದ ಆಜ್ಯವನ್ನು ಬೇರ್ಪಡಿಸಲು |
| ಸಮುದ್ರಸ್ಯ ...ಉನ್ನಯೇ । | ಮೈತ್ರಾವರುಣಚಮಸದಿಂದ ನೀರನ್ನು ತೆಗೆದುಕೊಳ್ಳಲು |

**ಶುಕ್ರಮ್** = ಪ್ರಕಾಶಮಾನವಾದ (ಸೋಮನಾಗುವ); **ತಮ್** = ಆ ಊರ್ಮಿ [ಅಲೆ]ಯನ್ನು; [ನೀವು] **ಯೇಷಾಮ್**=ಯಾವ ದೇವತೆಗಳಿಗೆ; **ಭಾಗಃ ಸ್ಥ** = ಭಾಗವಾಗಿದ್ದೀರೋ; [ಆ]; **ಶುಕ್ರಪೇಭ್ಯಃ**=ಸೋಮವನ್ನು ಪಾನಮಾಡುವ; **ದೇವೇಭ್ಯಃ** = ದೇವತೆಗಳಿಗೆ [ಕೊಡುವುದಕ್ಕಾಗಿ] ; **ದೇವತ್ರಾ**=ದೇವತೆಗಳಲ್ಲಿ; **ಧತ್ತ**=ಸ್ಥಾಪಿಸಿರಿ; **ಸ್ವಾಹಾ** = [ಈ ಆಜ್ಯವು ನಿಮಗೆ] ಹುತವಾಗಲಿ; ✣ [ಎಲೈ! ನೀರಿನಲ್ಲಿ ಹೋಮಮಾಡಿದ ಆಜ್ಯವೇ! ನೀನು] **ಅಪಾಮ್** = ನೀರುಗಳ; **ಮೃಧ್ರಮ್** = ಅನಿಷ್ಟರೂಪನಾಗಿರುವೆ; [ಆದುದರಿಂದ] **ಕಾರ್ಷಿಃ ಅಸಿ** = ತೆಗೆದುಹಾಕಬೇಕಾದುದಾಗಿರುವೆ; [ನಿನ್ನನ್ನು] **ಅಪ** [ನಯಾಮಿ] = ತೆಗೆದುಹಾಕುತ್ತೇನೆ. ✣ [ಎಲೈ! ನೀರುಗಳೇ!] **ಸಮುದ್ರಸ್ಯ ಅಕ್ಷಿತ್ಯೈ** = ಸಮುದ್ರದಂತೆ ನೀವು ಅಕ್ಷಯವಾಗಿರುವುದಕ್ಕಾಗಿ [ಹಿಂದಿನ ದಿನ ಗ್ರಹಣ ಮಾಡಿದ ವಸತೀವರಿಗಳೆಂಬ ಜಲರಾಶಿಯು ಕ್ಷಯಿಸದಿರುವುದಕ್ಕಾಗಿ] **ವಃ** = ನಿಮ್ಮನ್ನು; **ಉನ್ನಯೇ** = ಮೇಲಕ್ಕೆ ತೆಗೆದುಕೊಳ್ಳುತ್ತೇನೆ;

ನೀರನ್ನು ನಾಶಪಡಿಸದ '**ಅಪಾಂ ನಪಾತ್**' ಎಂಬ ಅಗ್ನಿಯೇ! ನಿಮ್ಮಲ್ಲಿ ಸೋಮವೆಂಬ ಹವಿಸ್ಸನ್ನು ಸಿದ್ಧಪಡಿಸುವ ಅಲೆಯಿದೆ. ಅದು ಇಂದ್ರಿಯಗಳ ಶಕ್ತಿಯನ್ನು ವೃದ್ಧಿಗೊಳಿಸಬಲ್ಲುದು. ಕುಡಿದಾಗ ಅತಿ ಸಂತೋಷವನ್ನೂ ಉಂಟುಮಾಡಬಲ್ಲುದು. ಪ್ರಕಾಶಮಾನವಾದ ಸೋಮಕ್ಕೆ ಸೇರಿ ಸೋಮವಾಗುವ ಆ ಅಲೆಯನ್ನು-ನೀವು ಯಾರಿಗೆ ಭಾಗವಾಗಿ ಇರುವಿರೋ, ಅಂತಹ ಸೋಮಪರಾದ-ದೇವತೆಗಳಿಗೆ ಕೊಡುವುದಕ್ಕಾಗಿ ದೇವತೆಗಳಲ್ಲಿ

**ಯಮಗ್ನೇ ಪೃತ್ಸು ಮರ್ತ್ಯಮಾವೋ ವಾಜೇಷು ಯಂ ಜುನಾಃ।**

**ಸ ಯಂತಾ ಶಶ್ವತೀರಿಷಃ ॥ ೧೩-23 ॥**

**[ ನು ಸಪ್ತಚತ್ವಾರಿಗ್‌ಂಶಚ್ಚ। ]**

---

**ಯಮ್। ಅಗ್ನೇ। ಪೃತ್ಸ್ವಿತಿ ಪೃತ್-ಸು । ಮರ್ತ್ಯಮ್ । ಆವಃ । ವಾಜೇಷು । ಯಮ್।**

**ಜುನಾಃ ॥ ಸಃ । ಯಂತಾ । ಶಶ್ವತೀಃ । ಇಷಃ ॥ ೧೩ ॥**

---

| ಮಂತ್ರ | ವಿನಿಯೋಗ |
|---|---|
| ಯಮಗ್ನೇ ... ಶಶ್ವತೀರಿಷಃ । | ಕ್ರತುಕರಣಹೋಮವನ್ನು ಮಾಡಲು |

---

❖ **ಅಗ್ನೇ** = ಎಲೈ ಅಗ್ನಿಯೇ! **ಯಮ್ ಮರ್ತ್ಯಮ್** = ಯಾವ ಮನುಷ್ಯನನ್ನು; **ಪೃತ್ಸು** = ಯುದ್ಧಗಳಲ್ಲಿ [ ಕಷ್ಟಗಳಲ್ಲಿ]; **ಆವಃ** = ರಕ್ಷಿಸುತ್ತೀಯೋ; **ವಾಜೇಷು** = ಅನ್ನಗಳ [ಹವಿಸ್ಸುಗಳ] ವಿಷಯದಲ್ಲಿ, **ಯಮ್** = ಯಾವ ಮನುಷ್ಯನನ್ನು [ಕುರಿತು;] **ಜುನಾಃ** = ಹೋಗುತ್ತೀಯೋ; **ಸಃ** = ಆ ಮನುಷ್ಯನು; **ಶಶ್ವತೀಃ ಇಷಃ** = ಶಾಶ್ವತವಾದ ಅನ್ನಧನಾದಿಗಳನ್ನು; **ಯಂತಾ** = ಹೊಂದಲಿ [ಹೊಂದುತ್ತಾನೆ].

---

ಇಡಿರಿ. ಈ ಆಜ್ಯವನ್ನು ನಿಮಗಾಗಿ ಹೋಮ ಮಾಡುತ್ತೇನೆ. ★ ಎಲೈ! ನೀರಿನಲ್ಲಿ ಹೋಮ ಮಾಡಿದ ಆಜ್ಯವೇ! ನೀನು ನೀರಿಗೆ ಯುದ್ಧದಂತೆ ಅನಿಷ್ಟನಾಗಿದ್ದೀಯೆ. ನೀನು ತೆಗೆದುಹಾಕತಕ್ಕವನೂ ಆಗಿದ್ದೀಯೆ. ಆದುದರಿಂದ ನಿನ್ನನ್ನು ಬೇರ್ಪಡಿಸುತ್ತೇನೆ.

ಎಲೈ! ನೀರುಗಳೇ! ನೀವು ಸಮುದ್ರದಂತೆ ಅಕ್ಷಯವಾಗಿರಬೇಕು. ಆದಕ್ಕಾಗಿ ಪೂರ್ವದಿನದಲ್ಲಿ ವಸತೀವರಿಗಳನ್ನು ಗ್ರಹಣಮಾಡಿದ್ದರೂ ನಿಮ್ಮನ್ನು ತೆಗೆದು ಕೊಳ್ಳುತ್ತೇನೆ. [ವಸತೀವರಿಗಳೇ ಸಮುದ್ರ. ಅದು ಕ್ಷಯಿಸದಿರುವುದಕ್ಕಾಗಿ ನಿಮ್ಮನ್ನೂ ಗ್ರಹಿಸುತ್ತೇನೆ.]

ಅಗ್ನಿಯೇ! ಯಾವ ಮನುಷ್ಯನು ಕೊಡುವ ಹವಿಸ್ಸುಗಳಿಂದ ತೃಪ್ತನಾಗುತ್ತೀಯೋ, ಯಾವ ಮನುಷ್ಯನ ಕಷ್ಟಗಳನ್ನು ಪರಿಹರಿಸುತ್ತೀಯೋ, ಆ ಮನುಷ್ಯನು ನಿನ್ನ ಅನುಗ್ರಹದಿಂದ ಶಾಶ್ವತವಾದ ಅನ್ನಾದಿ ಧನಗಳನ್ನು ಪಡೆಯುತ್ತಾನೆ.

## ವಿನಿಯೋಗ ಸಂಗ್ರಹ

[1]ಹೃದೇ ಸೋಮ[2]ದ್ವಯಾತ್ ಸೋಮಂ ಶಕಟಾದವರೋಹಯೇತ್ ।
[3]ಶೃಣೋಽಗ್ನೌ ಜುಹುಯಾದ್ದೇವೀ[4]ರಪ್ಸು ಹುತ್ವಾಥ ದರ್ಭಕೈಃ ॥
ಅಪ್ಸ್ವಪಪ್ಲಾವಯೇತ್ಕಾರ್ಷಿ[5] ಸಮುದ್ರೋ[6] ಗೃಹ್ಯತೇ ಜಲಮ್ ।
ಯಮಗ್ನೇ[7] ಕ್ರತುಕೃದ್ಧೋಮೋ ಮಂತ್ರಾಃ ಸಪ್ತೇಹ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 7

## ಅನುವಾಕದ ವಿಶೇಷವಿಷಯಗಳು.

### ಅ) ಭ.ಭಾ. ಭಾಷ್ಯ.

**ಮಂತ್ರಸಂಖ್ಯೆ**



೨) ಸೋಮ ...........। ಸೋಮನೇ! ನೀನು ದೇವತೆಗಳಿಂದ ಸ್ವೀಕರಿಸಲ್ಪಟ್ಟು ಉತ್ತಮಗತಿಯನ್ನು ಹೊಂದುವೆ ಎಂಬ ಅರ್ಥವನ್ನೂ ತಿಳಿಸಿರುತ್ತಾರೆ.

### ಆ) ಮೀಮಾಂಸಾ

೧) 'ಚಮಸಾಧ್ವರ್ಯೂನ್ ವೃಣೀತೇ' ಎಂಬುದರ ತಾತ್ಪರ್ಯ ಏನು?

[ಜೈ.ಸೂ.8-7-18]

'ಚಮಸಾಧ್ವರ್ಯೂನ್ ವೃಣೀತೇ' ಎಂಬ ವಿಧಿಯು ಅಧ್ವರ್ಯು ಮೊದಲಾದ ಋತ್ವಿಜರನ್ನೇ ಹೇಳುತ್ತದೆಯೇ? ಅಥವಾ ಬೇರೆಯವರನ್ನು ಹೇಳುತ್ತದೆಯೇ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ: ಅಧ್ವರ್ಯು ಮೊದಲಾದ ಋತ್ವಿಜರೇ ಚಮಸಗಳನ್ನು ಹಿಡಿದಾಗ ಚಮಸಗಳ ಸಂಬಂಧದಿಂದ 'ಚಮಸಾಧ್ವರ್ಯು'ಗಳೆನ್ನಿಸಿಕೊಳ್ಳುತ್ತಾರೆ. ದೇವದತ್ತನು ಅಡಿಗೆ ಮಾಡುವಾಗ ಪಾಚಕನೆನಿಸಿಕೊಳ್ಳುತ್ತಾನಲ್ಲವೇ? ಆದುದರಿಂದ ಚಮಸಾಧ್ವರ್ಯುಗಳು ಬೇರೆಯವರಲ್ಲ. ಅಧ್ವರ್ಯುವೇ ಮೊದಲಾದ ಋತ್ವಿಜರೇ.

'ಹೋತ್ರಕಾಣಾಂ ಚಮಸಾಧ್ವರ್ಯವಃ' 'ಮಧ್ಯತಃಕಾರಿಣಾಂ ಚಮಸಾಧ್ವರ್ಯವಃ'

ಎಂಬ ವಾಕ್ಯಗಳಿವೆ. ಹೋತ್ರಕರೆಂದರೆ ಪ್ರತಿಪ್ರಸ್ಥಾತೃ ಮೊದಲಾದವರು. ಮಧ್ಯತಃಕಾರಿಗಳೆಂದರೆ ಹೋತೃ ಮೊದಲಾದವರು. ಹೋತ್ರಕರಿಗೆ ಸಂಬಂಧಿಸಿದ ಚಮಸಾಧ್ವರ್ಯುಗಳು ಎಂಬ ಅರ್ಥವನ್ನು ನೀಡುವ ಷಷ್ಠೀವಿಭಕ್ತಿಯಿದೆ. ಇದು ಹೋತ್ರಕರು ಮತ್ತು ಚಮಮಸಾಧ್ವರ್ಯುಗಳಿಗೆ ಭೇದವನ್ನು ತಿಳಿಸುತ್ತದೆ. ಆದುದರಿಂದ ಚಮಸಾಧ್ವರ್ಯುಗಳು ಬೇರೆಯವರೇ ಎಂಬುದು ಇಲ್ಲಿನ ಸಿದ್ಧಾಂತ.

**೨) 'ಚಮಸಾಧ್ವರ್ಯೂನ್' ಎಂಬಲ್ಲಿ ಬಹುವಚನದ ಅರ್ಥ ಏನು?** **[ಜೈ.ಸೂ.3.7.19.]**

**'ಚಮಸಾಧ್ವರ್ಯೂನ್ ವೃಣೀತೇ'** ಎಂಬ ವಿಧಿವಾಕ್ಯದಲ್ಲಿ ಬಹುವಚನವು ತಿಳಿಸುತ್ತಿರುವ ಬಹುತ್ವವು ವಿವಕ್ಷಿತವೇ? ಅವಿವಕ್ಷಿತವೇ? ಎಂಬುದು **ಸಂಶಯ.**

'ಗ್ರಹಂ ಸಂಮಾರ್ಷ್ಟಿ' ಎಂಬಲ್ಲಿ ಗ್ರಹಗಳನ್ನು ಉದ್ದೇಶಿಸಿ ಸಮ್ಮಾರ್ಜನವನ್ನು ವಿಧಿಸಿರುವುದರಿಂದ ಉದ್ದೇಶ್ಯವಾದ ಗ್ರಹಗಳಲ್ಲಿ ಏಕತ್ವವು ಅವಿವಕ್ಷಿತ. ಅಂತೆಯೇ ಎಲ್ಲ ಗ್ರಹಗಳನ್ನೂ ತೊಳೆಯಬೇಕು.

ಆದರಂತೆಯೇ 'ಚಮಸಾಧ್ವರ್ಯೂನ್' ಎಂಬಲ್ಲಿಯ ಬಹುವಚನವು ಉದ್ದೇಶ್ಯಗತವಾದುದರಿಂದ ಬಹುತ್ವವು ಅವಿವಕ್ಷಿತವಾಗುತ್ತದೆ. ಆದುದರಿಂದ ಒಬ್ಬ ಚಮಸಾಧ್ವರ್ಯುವನ್ನು ವರಣ ಮಾಡಿದರೂ ಸಾಕು. ಇದು ಇಲ್ಲಿನ **ಪೂರ್ವಪಕ್ಷ.**

'ಗ್ರಹಂ ಸಂಮಾರ್ಷ್ಟಿ' ಎಂಬುದು ಉತ್ಪತ್ತಿವಾಕ್ಯವಲ್ಲ. ಆದರೆ 'ಚಮಸಾಧ್ವರ್ಯೂನ್ ವೃಣೀತೇ' ಎಂಬುದು ಉತ್ಪತ್ತಿವಾಕ್ಯ. ಆದುದರಿಂದ ಉಪಾದೇಯಗತವಾದ ಬಹುತ್ವವು ವಿವಕ್ಷಿತವಾಗುತ್ತದೆ. 'ಚಮಸಾಧ್ವರ್ಯುಕರಣಕ ವರಣೇನ ಇಷ್ಟಂ ಭಾವಯೇತ್' ಎಂದು ವಾಕ್ಯಾರ್ಥ. ಆದುದರಿಂದ ಎಲ್ಲ ಚಮಸಾಧ್ವರ್ಯುಗಳನ್ನೂ ವರಣ ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

**೩) ಚಮಸಾಧ್ವರ್ಯುಗಳ ಸಂಖ್ಯೆ ಎಷ್ಟು?** **[ಜೈ.ಸೂ.3.7.20]**

ಚಮಸಾಧ್ವರ್ಯುಗಳ ಸಂಖ್ಯೆಯು ನಿಯತವೇ? ಅನಿಯತವೇ? ಇದು **ಸಂಶಯ.**

ನಿಯಾಮಕವಿಲ್ಲದ್ದರಿಂದ ಅವರ ಸಂಖ್ಯೆಯು ನಿಯತವಲ್ಲ. ಎಷ್ಟಾದರೂ ಆಗಬಹುದು. ಇದು **ಪೂರ್ವಪಕ್ಷ.**

**ಸಿದ್ಧಾಂತವು** ಹೀಗಿದೆ; ಚಮಸಾಧ್ವರ್ಯುಗಳ ಸಂಖ್ಯೆಯನ್ನು ಹೇಳದಿದ್ದರೂ 'ಚಮಸಗಳು ಹತ್ತು' ಎಂದು ಹೇಳಿರುವುದರಿಂದ ಚಮಸಾಧ್ವರ್ಯುಗಳು ಹತ್ತು ಜನರೇ ಆಗಬೇಕು.

## ೩) ಛಂದಸ್ಸು

1. ಶೃಣೋತ್ವಗ್ನಿಃ ....... ಹವಂ ಮೇ । ತ್ರಿಷ್ಟುಪ್

2. ಯಮಗ್ನೇ ....... ರಿಷಃ । ಗಾಯತ್ರೀ

3. ದೇವೀರಾಪಃ.....ಸ್ವಾಹಾ । ಯಜುರಂತಾ ಗಾಯತ್ರೀ (ಭ.ಭಾ.)

'ಹೃದೇ ತ್ವಾ' 'ಸೋಮ ರಾಜನ್' ಈ ಎರಡು ಮಂತ್ರಗಳಿಗೆ ಛಂದಸ್ಸನ್ನು ಹೇಳಿಲ್ಲ. ಇವುಗಳನ್ನು ಯಜುರ್ಮಂತ್ರಗಳೆಂದು ತಿಳಿಯಬಹುದು.

---



## ॥ ಚತುರ್ದಶೋಽನುವಾಕಃ ॥

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಗ್ಂ**

**● ವೈ ● ತ್ವಮ್। ಅಗ್ನೇ। ರುದ್ರಃ । ಅಸುರಃ । ಮಹಃ । ದಿವಃ । ತ್ವಮ್ ।**

ಹದಿಮೂರನೆಯ ಅನುವಾಕದಲ್ಲಿ ಸೋಮಾವರೋಹವನ್ನು ಹೇಳಿಯಾಯಿತು. ಮುಂದೆ ಅಭಿಷವಾದಿಗಳನ್ನು ಹೇಳಬೇಕು. ಈಗ ಅಧ್ಯಯನಪಾಠಕ್ರಮವನ್ನು ಅನುಸರಿಸಿ ವೈಶ್ವದೇವಕಾಂಡದ ಕಾಮ್ಯೇಷ್ಟಿಯಾಜ್ಯಾಕಾಂಡದಲ್ಲಿ ಯಾಜ್ಯಾ-ಪುರೋನುವಾಕ್ಯಗಳನ್ನು ವ್ಯಾಖ್ಯಾನ ಮಾಡಿರುತ್ತಾರೆ. ರಾಕ್ಷೋಘ್ನೇಷ್ಟಿಯ ಅನಂತರದ ಇಷ್ಟಿಗಳ ಯಾಜ್ಯಾ-ಪುರೋನುವಾಕ್ಯೆಗಳು ಈ ಅನುವಾಕದಲ್ಲಿವೆ. ಶತ್ರುಮಾರಣಕಾಮನಿಗೆ 'ಅಗ್ನಯೇ ರುದ್ರವತೇ' [ತೈ.ಸಂ. 2.2.2] ಎಂದು ಹೇಳುವ ಇಷ್ಟಿಯ ಯಾಜ್ಯಾ-ಪುರೋನುವಾಕ್ಯಗಳು ಮೊದಲ ಎರಡು ಮಂತ್ರಗಳಾಗಿವೆ.

| ಮಂತ್ರ | ವಿನಿಯೋಗ |
|---|---|
| ತ್ವಮಗ್ನೇ........ತ್ಮನಾ ॥ | ಶತ್ರುಮಾರಣಕಾಮನು ಮಾಡುವ 'ಆಗ್ನೇಯ ರುದ್ರವತೀಷ್ಟಿ'ಯ ಪುರೋನುವಾಕ್ಯೆಯಾಗಿ. |

**ಅಗ್ನೇ** = ಎಲೈ ಅಗ್ನಿದೇವನೇ! **ತ್ವಮ್** = ನೀನು; **ರುದ್ರಃ** = ಭಯಂಕರರೂಪವುಳ್ಳವನು/ದುಷ್ಟರನ್ನು ಅಳುವಂತೆ ಮಾಡುವವನು. **ಅಸುರಃ** = [ಶತ್ರುಗಳನ್ನು] ದೂರಕ್ಕೆ ಎಸೆದುಬಿಡುವವನು/ಪ್ರಳಯಕಾಲದಲ್ಲಿ ಸರ್ವಸಂಹಾರಕನು. **ದಿವಃ ಮಹಃ** = [ಹವಿಸ್ಸನ್ನು ದೇವತೆಗಳಿಗೆ ಒಯ್ಯುವುದರಿಂದ] ದೇವಲೋಕಕ್ಕೆ ಉತ್ಸವರೂಪನು/ಮಹಾದೇವನೂ* [ಆಗಿದ್ದೀಯೆ] **ತ್ವಮ್** = ನೀನು;

ರುದ್ರರೂಪನಾದ ಅಗ್ನಿಯೇ! 'ಏಷಾ ವಾ ಅಸ್ಯ ಘೋರಾ ತನೂಃ, ಯದ್ರುದ್ರಃ' ಎಂಬಂತೆ ಭಯಂಕರಸ್ವರೂಪನು ನೀನು.

*ಭ.ಭಾ. ಭಾಷ್ಯದ ವಿಶೇಷಾಂಶಗಳಲ್ಲಿ ಇಲ್ಲಿಯೇ ಕೆಲವನ್ನು ನೀಡಲಾಗಿದೆ.

**ಶರ್ಧೋ ಮಾರುತಂ ಪೃಕ್ಷ ಈಶಿಷೇ । ತ್ವಂ ವಾತೈರರುಣೈ**

**ರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ॥**

---

ಶರ್ಧಃ । ಮಾರುತಮ್। ಪೃಕ್ಷಃ । ಈಶಿಷೇ ॥ ತ್ವಮ್ । ವಾತೈಃ । ಅರುಣೈಃ । ಯಾಸಿ।

ಶಂಗಯ ಇತಿ ಶಮ್-ಗಯಃ । ತ್ವಮ್ । ಪೂಷಾ । ವಿಧತ ಇತಿ ವಿ-ಧತಃ । ಪಾಸಿ ।

ನು । ತ್ಮನಾ ।

---

**ಮಾರುತಂ ಶರ್ಧಃ** = ಮರುದ್ಗಣಗಳ ಬಲವಾಗಿದ್ದೀಯೆ. [ಮರುತ್ತುಗಳೂ ನಿನ್ನಿಂದಲೇ ಬಲವನ್ನು ಪಡೆಯುತ್ತಾರೆ. ನೀನು ದೇವಸೇನಾಪತಿ.] **ಪೃಕ್ಷಃ** = ಮರುತ್ತುಗಳಿಂದ ಕೂಡಿಕೊಂಡವನಾಗಿ; **ಈಶಿಷೇ** = [ಅವರ ಸೈನ್ಯವನ್ನು] ನಿಯಮಿಸುವೆ; ಅನ್ನಕ್ಕೆ ಒಡೆಯನಾಗಿರುವೆ. **ತ್ವಮ್** = ನೀನು; **ಶಂಗಯಃ** = ಸುಖವನ್ನು ಹೊಂದಿದವನಾಗಿ; **ವಾತೈಃ** = ವಾಯುವೇಗವುಳ್ಳ; **ಅರುಣೈಃ**= ಎಳೆಗೆಂಪಾದ ಬಣ್ಣವುಳ್ಳ [ಕುದುರೆಗಳಿಂದ] **ಯಾಸಿ** = ಹೋಗುತ್ತೀಯೆ; **ಪೂಷಾ** = ಪೋಷಕನಾದ; **ತ್ವಮ್** = ನೀನು; **ನು ತ್ಮನಾ** = ನೀನಾಗಿಯೇ; ಕ್ಷಿಪ್ರವಾಗಿ ನೀನೇ; **ವಿಧತಃ** = [ಹವಿಸ್ಸುಗಳ ಮೂಲಕ ನಿನ್ನನ್ನು] ಸೇವಿಸುವವರನ್ನು; **ಪಾಸಿ** = ರಕ್ಷಿಸುತ್ತೀಯೆ; ನೀನು ನಮ್ಮ ಶತ್ರುಗಳನ್ನು ನಾಶಪಡಿಸು.

---

ಪ್ರಳಯಕಾಲದಲ್ಲಿ ಸರ್ವಸಂಹಾರಕನೂ, ದುಷ್ಟರನ್ನು ಅಳುವಂತೆ ಮಾಡುವವನೂ ನೀನೇ. ಮರುದ್ಗಣಗಳಿಗೆ ನೀನೇ ಬಲವನ್ನು ಕೊಡುವೆ. ಹವಿಸ್ಸನ್ನು ಒಯ್ಯುವುದರಿಂದ ನೀನು ದೇವಲೋಕಕ್ಕೆ ಉತ್ಸವರೂಪನಾಗಿರುವೆ. ಮಹಾದೇವನೂ ನೀನೇ. ಅನ್ನಸ್ವಾಮಿಯೂ ನೀನೇ. ಮರುದ್ಗಣಗಳ ಸೈನ್ಯವನ್ನು ನಿಯಂತ್ರಿಸುವ ದೇವಸೇನಾಪತಿಯೂ ನೀನೇ. ನೀನು ಸುಖವಾಗಿ ವಾಯುವೇಗವುಳ್ಳ ಎಳೆಗೆಂಪುಬಣ್ಣದ ಕುದುರೆಗಳ ರಥದಲ್ಲಿ ಪ್ರಯಾಣ ಮಾಡುತ್ತೀಯೆ. ಪೋಷಕನೂ ನೀನೇ. ಹವಿಸ್ಸುಗಳನ್ನು ಸಮರ್ಪಿಸಿ ನಿನ್ನ ಸೇವೆ ಮಾಡುವವರನ್ನು ಕ್ಷಿಪ್ರವಾಗಿ ನೀನೇ ರಕ್ಷಿಸುವೆ. ನಮ್ಮ ಶತ್ರುಗಳನ್ನು ನಾಶಪಡಿಸು.

**ಆ ವೋ ರಾಜಾನಮಧ್ವರಸ್ಯ ರುದ್ರಗ್ಂ ಹೋತಾರಗ್ಂ ಸತ್ಯಯಜಗ್ಂ ರೋದಸ್ಯೋಃ । ಅಗ್ನಿಂ ಪುರಾ ತನಯಿತ್ನೋ-ರಚಿತ್ತಾದ್ಧಿರಣ್ಯರೂಪಮವಸೇ ಕೃಣುಧ್ವಮ್॥**

---

ಏತಿ । ವಃ । ರಾಜಾನಮ್ । ಅಧ್ವರಸ್ಯ । ರುದ್ರಮ್ । ಹೋತಾರಮ್ । ಸತ್ಯಯಜಮಿತಿ ಸತ್ಯ-ಯಜಮ್ । ರೋದಸ್ಯೋಃ ॥ ಅಗ್ನಿಮ್ । ಪುರಾ । ತನಯಿತ್ನೋಃ । ಅಚಿತ್ತಾತ್। ಹಿರಣ್ಯರೂಪಮಿತಿ ಹಿರಣ್ಯ-ರೂಪಮ್ । ಅವಸೇ । ಕೃಣುಧ್ವಮ್ ॥

---

| ಮಂತ್ರ | ವಿನಿಯೋಗ |
|---|---|
| ಆ ವೋ.......ಕೃಣುಧ್ವಮ್ । | ರುದ್ರವದಗ್ನಿಯಾಗದ ಯಾಜ್ಯಾನುವಾಕ್ಯೆ. |

---

❖ ಎಲ್ಲೈ ಋತ್ವಿಗ್ಯಜಮಾನರೇ! **ವಃ** = ನಿಮ್ಮ; **ಅವಸೇ** = ರಕ್ಷಣಕ್ಕಾಗಿ/ತೃಪ್ತಿಗಾಗಿ; **ಅಧ್ವರಸ್ಯ ರಾಜಾನಮ್** = ಯಜ್ಞಕ್ಕೆ ಅಧಿಪತಿಯಾದ; **ರುದ್ರಮ್** = ಶತ್ರುಗಳಿಗೆ ಭಯಂಕರನಾದ; **ಹೋತಾರಮ್** = [ಫಲವನ್ನು ಕೊಡಲು ನಿಮ್ಮನ್ನು] ಕರೆಯುವ/ಇಷ್ಟಗಳನ್ನು ಕೊಡುವ; **ರೋದಸ್ಯೋಃ** = ಭೂಲೋಕಸ್ವರ್ಗಲೋಕಗಳಲ್ಲಿ; **ಸತ್ಯಯಜಮ್** = ಅವಶ್ಯವಾಗಿ ಕರ್ಮಫಲವನ್ನು ಕೊಡುವ; **ಹಿರಣ್ಯರೂಪಮ್** = ಚಿನ್ನದಂತಹ ರೂಪವುಳ್ಳ; **ಅಗ್ನಿಮ್** = ಅಗ್ನಿಯನ್ನು; **ತನಯಿತ್ನೋಃ** = ಶತ್ರುಗಳಿಂದ ವಿಸ್ತೃತವಾಗಿರುವ/ಮೋಡದಂತೆ ಅನಿಶ್ಚಿತವಾದ; **ಅಚಿತ್ತಾತ್ ಪುರಾ** = ಮನಸ್ಸಿನ ವ್ಯಾಪಾರವು ನಿಂತುಹೋಗುವ ಮರಣಕ್ಕಿಂತ ಮೊದಲೇ; **ಆ ಕೃಣುಧ್ವಮ್** = ಒಲಿಸಿಕೊಳ್ಳಿರಿ./ಒಲಿಸಿಕೊಂಡು ಅವನ

---

ಎಲ್ಲೈ ಋತ್ವಿಗ್ಯಜಮಾನರೇ! ಆ ರುದ್ರಸ್ವರೂಪನಾದ ಅಗ್ನಿಯು ಯಜ್ಞಕ್ಕೆ ಒಡೆಯನು. ಫಲಗಳನ್ನು ಕೊಡಲು ಭಕ್ತರನ್ನು ಕರೆಯುವವನು. ಫಲಗಳನ್ನು ಕೊಡುವವನು. ಭೂಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ ಕರ್ಮಫಲಗಳನ್ನು ಕರುಣಿಸುವವನು. ಚಿನ್ನದಂತಹ ಬಣ್ಣವುಳ್ಳವನು. ಇಂತಹ ಅಗ್ನಿದೇವನನ್ನು ನಿಮ್ಮ ರಕ್ಷಣೆಗಾಗಿ ಶತ್ರುಗಳು ನಿಮ್ಮನ್ನು ಕುಟಿಲೋಪಾಯಗಳನ್ನು ವಿಸ್ತರಿಸಿ ಸಂಹರಿಸುವುದಕ್ಕಿಂತ ಮೊದಲೇ ಒಲಿಸಿಕೊಳ್ಳಿರಿ. ಒಲಿಸಿಕೊಂಡು ಆತನ ಅನುಗ್ರಹದಿಂದ ಶತ್ರುಗಳನ್ನು ನಾಶಪಡಿಸಿರಿ.

**ಅಗ್ನಿರ್ ಹೋತಾ ನಿಷಸಾದಾ ಯಜೀಯಾನುಪಸ್ಥೇ ಮಾತುಃ ಸುರಭಾವು ಲೋಕೇ। ಯುವಾ ಕವಿಃ ಪುರುನಿಷ್ಠ [ಪುರುನಿಷ್ಠಃ(೧) ಋತಾವಾ] ಋತಾವಾ ಧರ್ತಾ ಕೃಷ್ಟೀನಾಮುತ ಮಧ್ಯ ಇದ್ಧಃ॥**

**ಅಗ್ನಿಃ। ಹೋತಾ। ನೀತಿ। ಸಸಾದ। ಯಜೀಯಾನ್। ಉಪಸ್ಥ ಇತ್ಯುಪ-ಸ್ಥೇ। ಮಾತುಃ। ಸುರಭೌ। ಉ। ಲೋಕೇ॥ ಯುವಾ। ಕವಿಃ। ಪುರುನಿಷ್ಠ ಇತಿ ಪುರು - ನಿಷ್ಠಃ [೧]। ಋತಾವೇತ್ಯೃತ-ವಾ। ಧರ್ತಾ। ಕೃಷ್ಟೀನಾಮ್। ಉತ। ಮಧ್ಯೇ। ಇದ್ಧಃ॥**

| ಮಂತ್ರ | ವಿನಿಯೋಗ |
|---|---|
| ಅಗ್ನಿರ್ ಹೋತಾ......ಇದ್ಧಃ। | ಸುರಭಿಮತೀಷ್ಟಿಯ ಪುರೋನುವಾಕ್ಯೆ |

[ಮನೆಯಲ್ಲಿ ಗೋ ಮುಂತಾದ ಪ್ರಾಣಿಗಳೂ, ಜನರೂ ಆಕಸ್ಮಿಕವಾಗಿ ಸಾಯುತ್ತಿದ್ದರೆ ಅಥವಾ ಮರಣಭಯವುಂಟಾದರೆ ಅದರ ಪ್ರತಿರೋಧಕ್ಕಾಗಿ ಮಾಡುವ ಇಷ್ಟಿ]

ಅನುಗ್ರಹದಿಂದ ಶತ್ರುಗಳನ್ನು ನಿಗ್ರಹಿಸಿರಿ. **ಹೋತಾ** = ದೇವತೆಗಳನ್ನು ಆಹ್ವಾನಿಸುವ; **ಯಜೀಯಾನ್** = [ಮನುಷ್ಯನಾದ ಹೋತೃವಿಗಿಂತಲೂ] ಅತಿಶಯವಾಗಿ ಯಾಗ ಮಾಡುವ; **ಯುವಾ** = ನಿತ್ಯತರುಣನಾದ; **ಕವಿಃ** = ಮೇಧಾವಿಯಾದ; **ಪುರುನಿಷ್ಠಃ** = [ಗಾರ್ಹಪತ್ಯಾದಿ] ಹಲವು ಸ್ಥಾನಗಳಲ್ಲಿರುವ; **ಋತಾವಾ** = ಸತ್ಯವಂತನಾದ/ಯಜ್ಞವಂತನಾದ; **ಕೃಷ್ಟೀನಾಂ ಧರ್ತಾ** = ಮನುಷ್ಯರನ್ನು ಧರಿಸುವ; **ಉತ** = ಮತ್ತು; **ಮಧ್ಯೇ** =[ಮಾನವರ] ಜಠರದಲ್ಲಿ/ಹೃದಯದಲ್ಲಿ; **ಇದ್ಧಃ**= ಪ್ರಕಾಶಿಸುವ; **ಅಗ್ನಿಃ**= ಅಗ್ನಿದೇವನು; **ಮಾತುಃ** = ತಾಯಿಯಂತಿರುವ/ಸರ್ವನಿರ್ಮಾತ್ರಿಯಾದ; [ವೇದಿಯ]; **ಉಪಸ್ಥೇ** = ತೊಡೆಯಂತಿರುವ [ಸಮೀಪದಲ್ಲಿರುವ]; **ಸುರಭೌ** = ಸುರಭಿಹವಿರ್ಗಂಧಯುಕ್ತವಾದ; **ಲೋಕೇ ಉ** = ಆಹವನೀಯಸ್ಥಾನರೂಪಪ್ರದೇಶದಲ್ಲಿಯೇ; **ನಿಷಸಾದ** = ಉಪಸ್ಥಿತನಾಗಿರುತ್ತಾನೆ. ಆತನು ನಮಗೆ ಭೈಷಜ್ಯವನ್ನು ಮಾಡಲಿ.

ಈ ಅಗ್ನಿದೇವನು ದೇವತೆಗಳನ್ನು ಯಜ್ಞಕ್ಕೆ ಕರೆಯುವ ಹೋತನು. ಮಾನವ-

ಸಾಧ್ವೀಮಕರ್ದೇವವೀತಿಂ ನೋ ಅದ್ಯ ಯಜ್ಞಸ್ಯ ಜಿಹ್ವಾಮ-
ವಿದಾಮ ಗುಹ್ಯಾಮ್ । ಸ ಆಯುರಾಗಾತ್ಸುರಭಿರ್ವಸಾನೋ

---

ಸಾಧ್ವೀಮ್। ಅಕಃ। ದೇವವೀತಿಮಿತಿ ದೇವ-ವೀತಿಮ್। ನಃ। ಅದ್ಯ। ಯಜ್ಞಸ್ಯ। ಜಿಹ್ವಾಮ್।
ಅವಿದಾಮ । ಗುಹ್ಯಾಮ್ ॥ ಸಃ । ಆಯುಃ । ಏತಿ । ಅಗಾತ್ । ಸುರಭಿಃ । ವಸಾನಃ।

---

| ಮಂತ್ರ | ವಿನಿಯೋಗ |
|---|---|
| ಸಾಧ್ವೀಮಕಃ.........ಅದ್ಯ ॥ | ಸುರಭಿಮತ್ಯೀಷ್ಟಿಯ ಯಾಜ್ಯಾನುವಾಕ್ಯೆ |

---

❖ [ಈ ಅಗ್ನಿಯು]; ಅದ್ಯ = ಈಗ; ನಃ = ನಮ್ಮ; ದೇವವೀತಿಮ್ = ದೇವತೆಗಳಿಗೆ ಸಮರ್ಪಿಸಿದ ಪುರೋಡಾಶಾಹುತಿಯನ್ನು; ಸಾಧ್ವೀಮ್ = ಒಳ್ಳೆಯದನ್ನಾಗಿ/ರುಚಿಕರವಾದುದನ್ನಾಗಿ; ಅಕಃ = ಮಾಡಿದನು; ಆದುದರಿಂದ [ವಯಮ್ = ನಾವು] ಯಜ್ಞಸ್ಯ ಜಿಹ್ವಾಮ್ = ಯಜ್ಞದೇವನ ನಾಲಿಗೆಯಂತಿರುವ; ಗುಹ್ಯಾಮ್ = ಗುಟ್ಟಾಗಿ ಇಡಬೇಕಾದ [ಅಗ್ನಿದೇವತೆಯನ್ನು]; ಅವಿದಾಮ = ಹೊಂದಿದೆವು/ತಿಳಿದೆವು. ಸುರಭಿಃ = [ಪುರೋಡಾಶ-ಆಜ್ಯಾದಿ] ಸುಗಂಧಯುಕ್ತನಾದ, ಸಃ = ಅಗ್ನಿಯು; ಆಯುಃ ವಸಾನಃ = [ನಮ್ಮ] ಆಯುಸ್ಸನ್ನು ಮುಚ್ಚುವವನಾಗಿ/ರಕ್ಷಿಸುವವನಾಗಿ;

---

ಹೋತೃವಿಗಿಂತಲೂ ಅತಿಶಯವಾಗಿ ಯಾಗಮಾಡತಕ್ಕವನು.* ಆ ಅಗ್ನಿದೇವನು ನಿತ್ಯತರುಣನು. ಮೇಧಾವಿ. ಗಾರ್ಹಪತ್ಯಾದಿ ಹಲವು ಸ್ಥಾನಗಳಲ್ಲಿ ಇರತಕ್ಕವನು. ಸತ್ಯವಂತನು. ಯಜ್ಞಗಳಲ್ಲಿ ಇರತಕ್ಕವನು. ಮನುಷ್ಯರನ್ನು ಧರಿಸಿರುವವನು. ಮನುಷ್ಯರ ಜಠರದಲ್ಲಿಯೂ ಜ್ವಲಿಸುತ್ತಿರುವವನು. ಹೃದಯದಲ್ಲಿರುವ ಪರಮಾತ್ಮಸ್ವರೂಪನು. ಇಂತಹ ಅಗ್ನಿಯು ಸಕಲನಿರ್ಮಾತ್ರಿಯಾದ ಮಾತೆಯಾದ ಭೂದೇವಿಯ ತೊಡೆಯಂತಿರುವ ವೇದಿಯ ಸಮೀಪಪ್ರದೇಶದಲ್ಲಿರುವ ಪ್ರಕಾಶಯುಕ್ತವಾದ ಹೋಮದ ಸುರಭಿಗಂಧಯುಕ್ತವಾದ ಆಹವನೀಯಸ್ಥಾನದಲ್ಲಿ ಸ್ಥಿತನಾಗಿರುತ್ತಾನೆ. ಆತನು ನಮಗೆ

---

*ಹೋತೃವು 'ಯಜ' ಎಂದು ಹೇಳಿದ ಮೇಲೆ ಅಧ್ವರ್ಯುವು ಯಾಗ ಮಾಡುತ್ತಾನೆ.

**ಭದ್ರಾ ಮಕರ್ದೇವಹೂತಿಂ ನೋ ಅದ್ಯ ॥ ಅಕ್ರಂದದಗ್ನಿಃ**

**ಸ್ತನಯನ್ನಿವ ದ್ಯೌಃ ಕ್ಷಾಮಾ ರೇರಿಹದ್ವೀರುಧಃ ಸಮಂಜನ್ ।**

---

ಭದ್ರಾಮ್। ಅಕಃ। ದೇವಹೂತಿಮಿತಿ ದೇವ-ಹೂತಿಮ್। ನಃ। ಅದ್ಯ। ಅಕ್ರಂದತ್॥ ಅಗ್ನಿಃ।

ಸ್ತನಯನ್। ಇವ। ದ್ಯೌಃ। ಕ್ಷಾಮ । ರೇರಿಹತ್। ವೀರುಧಃ। ಸಮಂಜನ್ನಿತಿ ಸಮ್-ಅಂಜನ್।

---

| ಮಂತ್ರ | ವಿನಿಯೋಗ |
|---|---|
| **ಅಕ್ರಂದದಗ್ನಿಃ....ಭಾತ್ಯಂತಃ ।** | ಕ್ಷಾಮವತೀಷ್ಟಿಯ ಪುರೋನುವಾಕ್ಯೆ. |

[ಯುದ್ಧವು ಪ್ರಾಪ್ತವಾದಾಗ, ಆಕಸ್ಮಿಕ ಮರಣಗಳು ಮನೆಯಲ್ಲಿ ಸಂಭವಿಸಿದಾಗ ಮತ್ತು ಮನೆಯು ಸುಟ್ಟಾಗ ಈ ಮೂರು ಸಂದರ್ಭಗಳಲ್ಲಿ ಪರಿಹಾರಕ್ಕಾಗಿ ಮಾಡುವ ಇಷ್ಟಿ.]

---

**ಆ ಅಗಾತ್** = ಬರಲಿ; **ಅದ್ಯ** = ಈಗ; **ನಃ** = ನಮ್ಮ; **ದೇವಹೂತಿಮ್** = ದೇವತೆಗಳಿಗೆ ಕೊಡುವ ಹೋಮವನ್ನು; **ಭದ್ರಾಮ್ ಅಕಃ** = ಮಂಗಲಪ್ರದವನ್ನಾಗಿ/ಶಾಸ್ತ್ರಕ್ಕೆ ತಕ್ಕಂತೆ ಅನುಷ್ಠಿತವಾದದ್ದನ್ನಾಗಿ ಮಾಡಲಿ; ಆಯುಸ್ಸಿನ ರಕ್ಷಣೆಗಾಗಿ ಮಾಡಿದ ಯಾಗವು ಸಫಲವಾಗುವಂತೆ ಮಾಡಲಿ. **ಹೇ ಅಗ್ನಿಃ**=ಅಗ್ನಿದೇವನು; **ಸ್ತನಯನ್**=ಗುಡುಗುತ್ತಿರುವ; **ದ್ಯೌಃ ಇವ** = ಅಂತರಿಕ್ಷದಂತೆ; **ಅಕ್ರಂದತ್** = [ನಮ್ಮ ಅನಿಷ್ಟನಿವಾರಣಾರ್ಥವಾಗಿ] ಗರ್ಜಿಸಲಿ; **ಕ್ಷಾಮ**= ನಮಗೆ ವಿರುದ್ಧವಾದ ದಾಹಕವಸ್ತುಗಳನ್ನು; **ರೇರಿಹತ್** = ತಿಂದು ತೇಗುತ್ತಾ; **ವೀರುಧಃ** = [ನಮಗೆ ಬೇಕಾದ] ಮರಗಿಡಬಳ್ಳಿಗಳನ್ನು; **ಸಮಂಜನ್** = ಪ್ರಕಾಶಪಡಿಸುತ್ತಾ

---

ಭೈಷಜ್ಯವನ್ನು ಮಾಡಲಿ. ಮತ್ತೆ ಮರಣವೆಂಬ ದುರ್ಗಂಧವು ಹರಡದಂತೆ ಮಾಡಲಿ.

ಅಗ್ನಿದೇವನಲ್ಲಿ ನಾವು ದೇವತೆಗಳಿಗಾಗಿ ಸಮರ್ಪಿಸಿದ ಪುರೋಡಾಶಾಹುತಿಯನ್ನು ಅಗ್ನಿದೇವನು ಒಳ್ಳೆಯ ರುಚಿಕರವನ್ನಾಗಿ ಮಾಡಿದನು. ಯಜ್ಞದೇವನ ನಾಲಿಗೆಯಂತಿರುವ, ರಕ್ಷಣೆ ಮಾಡಬೇಕಾದ ಅಗ್ನಿಯನ್ನು ನಾವು ಶರಣು ಹೊಂದಿದೆವು. ಆತನ ಮಹಿಮೆಯನ್ನು ತಿಳಿದೆವು. ಪುರೋಡಾಶ-ಆಜ್ಯಾದಿ ಸುಗಂಧಯುಕ್ತನಾದ ಆ ಅಗ್ನಿದೇವನು ನಮಗೆ ಆಯುಸ್ಸನ್ನು ಕೊಟ್ಟು ರಕ್ಷಿಸುವವನಾಗಿ ಬರಲಿ. ಆತನು ನಾವು ದೇವತೆಗಳಿಗೆ ಸಮರ್ಪಿಸುವ ಆಹುತಿಗಳನ್ನು ಫಲಪ್ರದಗಳನ್ನಾಗಿ ಮಾಡಲಿ. ನಮ್ಮಲ್ಲಿ ಆಕಸ್ಮಿಕ ಮರಣಗಳುಂಟಾಗದಿರಲಿ. ಮರಣಭೀತಿಯು ತಪ್ಪಲಿ.

ಸದ್ಯೋ ಜಜ್ಞಾನೋ ವಿಹೀಮಿದ್ಧೋ ಅಖ್ಯದಾರೋದಸೀ

ಭಾನುನಾ ಭಾತ್ಯಂತಃ ॥

---

ಸದ್ಯಃ । ಜಜ್ಞಾನಃ । ವೀತಿ । ಹಿ । ಈಮ್ । ಇದ್ಧಃ । ಅಖ್ಯತ್ । ಏತಿ । ರೋದಸೀ ಇತಿ । ಭಾನುನಾ । ಭಾತಿ । ಅಂತಃ ।

---

[ದಹಿಸದೆ] ಇರಲಿ. ಹಿ = ಯಾವ ಕಾರಣದಿಂದ [ಏತಕ್ಕೆಂದರೆ]; ಜಜ್ಞಾನಃ = ಉತ್ಪನ್ನನಾಗಿ; ಸದ್ಯಃ ಈಮ್ = ಒಡನೆಯೇ; ಇದ್ಧಃ = ಪ್ರಜ್ವಲಿಸಿದವನಾಗಿ [ಅಗ್ನಿಯು]; ವಿ ಅಖ್ಯತ್ = ಜಗತ್ತನ್ನು ಪ್ರಕಾಶಗೊಳಿಸುತ್ತಾನೆ; ರೋದಸೀ = ಭೂಮ್ಯಂತರಿಕ್ಷಗಳ; ಅಂತಃ = ಮಧ್ಯದಲ್ಲಿ [ಒಳಗೆ]; ಭಾನುನಾ = ಕಿರಣಗಳಿಂದ[ಜ್ವಾಲೆಗಳಿಂದ]; ಆ ಭಾತಿ = ಸುತ್ತಲೂ ಪ್ರಕಾಶಿಸುತ್ತಾನೆ.* [ಆತನು ನಮ್ಮ ಇಷ್ಟಾರ್ಥಗಳನ್ನು ಸಲ್ಲಿಸಲಿ.]

---

ಈ ಅಗ್ನಿಯು-ಮೋಡಗಳಿಂದ ಕೂಡಿದ ಅಂತರಿಕ್ಷವು ಗುಡುಗುತ್ತಾ ಸಸ್ಯಗಳು ಒಣಗಬಹುದೆಂಬ ಭೀತಿಯನ್ನು ಪರಿಹರಿಸುವಂತೆ ತಾನು ಗರ್ಜಿಸುತ್ತಾ ನಮ್ಮ ಅನಿಷ್ಟವೂ ಕ್ಲೇಶಗಳೂ ದೂರವಾಗುವವೆಂಬ ಭರವಸೆಯನ್ನುಂಟುಮಾಡಿ ಭಯವನ್ನು ಹೋಗಲಾಡಿಸಲಿ. [ಶತ್ರುಗಳನ್ನು ಭಯಪಡಿಸಲಿ.] ನಮಗೆ ವಿರುದ್ಧವಾದ ದಾಹಾದಿಗಳನ್ನು ಪರಿಹರಿಸಲಿ. ನಮ್ಮ ಶತ್ರುಗಳನ್ನು ಕ್ಷೀಣ ಮಾಡಿ ದಹಿಸಲಿ. ನಮಗೆ ಉಪಕಾರಿಗಳಾದ ಗಿಡಬಳ್ಳಿಗಳನ್ನು ಸುಡದಿರಲಿ. ಕಾಡುಗಿಚ್ಚು ಎಲ್ಲವನ್ನೂ ಸುಟ್ಟು ಹಾಕುವಂತೆ ನಮ್ಮ ಹಗೆಗಳನ್ನು ನಾಶಪಡಿಸಲಿ. ಹುಟ್ಟಿದೊಡನೆಯೇ ಪ್ರಜ್ವಲಿಸುತ್ತಾ, ಭೂಮ್ಯಂತರಿಕ್ಷಗಳ ಮಧ್ಯವನ್ನು ಬೆಳಗುತ್ತಾ ಕಿರಣಗಳಿಂದ (ಜ್ವಾಲೆಗಳಿಂದ) ಪ್ರಕಾಶಿಸುವ ಮಹಾತೇಜಸ್ವಿಯೇ ಈ ಅಗ್ನಿಯು. ಈತನ ಅನುಗ್ರಹದಿಂದ ಶತ್ರುನಾಶವೂ, ಅಪಮೃತ್ಯುಪರಿಹಾರವೂ ಆಗಲಿ. ಪುರೋಡಾಶಾಹುತಿಯಿಂದ ತೃಪ್ತನಾದ ಈ ಅಗ್ನಿಯು ನಮ್ಮವರನ್ನು ಆಹುತಿ ತೆಗೆದುಕೊಳ್ಳದಿರಲಿ. ಮತ್ತೊಮ್ಮೆ ಮನೆಗಳನ್ನು ಸುಡದಿರಲಿ.

---

*ಇಲ್ಲಿಯ ಮೂರು ಇಷ್ಟಿಗಳಿಗೆ ತಕ್ಕಂತೆ ಈ ಮಂತ್ರಾರ್ಥವನ್ನು ಭಟ್ಟಭಾಸ್ಕರಮಿಶ್ರರು ಬೇರೆ ಬೇರೆಯ ರೀತಿಯಲ್ಲಿ ತಿಳಿಸಿರುತ್ತಾರೆ.

## ತ್ವೇ ವಸೂನಿ ಪುರ್ವಣೀಕ [(೨) ಹೋತರ್ದೋಷಾ]

ಹೋತರ್ದೋಷಾ ವಸ್ತೋರೇರಿರೇ ಯಜ್ಞಿಯಾಸಃ । ಕ್ಷಾಮೇವ ವಿಶ್ವಾ ಭುವನಾನಿ ಯಸ್ಮಿನ್ಥ್ಸಗ್ಂ ಸೌಭಗಾನಿ ದಧಿರೇ ಪಾವಕೇ।

ತ್ವೇ ಇತಿ । ವಸೂನಿ । ಪುರ್ವಣೀಕೇತಿ ಪುರು - ಅನೀಕ [೨] । ಹೋತಃ । ದೋಷಾ । ವಸ್ತೋಃ । ಆ । ಇತಿ । ಈರಿರೇ । ಯಜ್ಞಿಯಾಸಃ ॥ ಕ್ಷಾಮ । ಇವ । ವಿಶ್ವಾ । ಭುವನಾನಿ ಯಸ್ಮಿನ್ನ್ । ಸಮಿತಿ । ಸೌಭಗಾನಿ । ದಧಿರೇ । ಪಾವಕೇ ॥

| ಮಂತ್ರ | ವಿನಿಯೋಗ |
|---|---|
| ತ್ವೇ ವಸೂನಿ........ಪಾವಕೇ। | ಕ್ಷಾಮವತೀಷ್ಟಿಯ ಯಾಜ್ಯಾನುವಾಕ್ಯೆ. |

ಪುರ್ವಣೀಕ = ವಿಶ್ವವ್ಯಾಪಿಯೇ! [ಬಹುಬಲನೇ!]; ಹೋತಃ = [ಯಜ್ಞಕ್ಕೆ ದೇವತೆಗಳನ್ನು] ಆಹ್ವಾನಿಸುವವನೇ! ದೋಷಾ ವಸ್ತೋಃ = ರಾತ್ರಿ ಹಗಲುಗಳಲ್ಲಿ; ಯಜ್ಞಿಯಾಸಃ = ಯಜ್ಞಾರ್ಹವಾದ; ವಸೂನಿ = ಹವಿಸ್ಸುಗಳು; ತ್ವೇ = ನಿನ್ನಲ್ಲಿ; ಏರಿರೇ = ಬರುತ್ತವೆ/ ಪ್ರಾಪ್ತವಾಗುತ್ತವೆ; [ಯಜ್ಞಾರ್ಹರಾದ ಯಜಮಾನರು ಹವಿಸ್ಸಿನ ರೂಪವಾದ ಧನಗಳನ್ನು ನಿನ್ನಲ್ಲಿ ಅರ್ಪಿಸುತ್ತಾರೆ.] [ನಿನ್ನ ಅನುಗ್ರಹವಿಲ್ಲದಿರುವಾಗ] ಕ್ಷಾಮ ಇವ = ಸುಟ್ಟುಬಟ್ಟೆ ಯಂತಿರುವ [ಕ್ಷೀಣವಾದಂತಿರುವ] ವಿಶ್ವಾ ಭುವನಾನಿ = [ನಿಸ್ಸಾರವಾದ] ವಸ್ತುಗಳೆಲ್ಲವೂ; ಯಸ್ಮಿನ್ ಪಾವಕೇ ತ್ವೇ [ಅನುಗೃಹ್ಣತಿ ಸತಿ]=ಯಾವ ಪಾವಕ (ಶೋಧಕ) ನಾದ ನೀನು ಅನುಗ್ರಹಿಸಲಾಗಿ; ಸೌಭಗಾನಿ = ಸಮಸ್ತ ಸೌಭಾಗ್ಯಗಳನ್ನೂ; ಸಮ್ ದಧಿರೇ = ಚೆನ್ನಾಗಿ

ಅಗ್ನಿಯು ಸರ್ವವ್ಯಾಪಿಯು, ಮಹಾಬಲನು. ಯಜ್ಞಕ್ಕೆ ದೇವತೆಗಳನ್ನು ಆಹ್ವಾನಿಸುವವನು. ಇಂತಹ ಅಗ್ನಿಯಲ್ಲಿ ಹಗಲೂ ಇರುಳೂ ಯಜ್ಞಾರ್ಹವಾದ ಹವಿಸ್ಸಿನ ರೂಪವಾದ ಧನಗಳು ಬೀಳುತ್ತಿರುತ್ತವೆ. ಯಜಮಾನರು ಅಗ್ನಿಯಲ್ಲಿ ಹವಿಸ್ಸುಗಳನ್ನು ಅರ್ಪಿಸುತ್ತಾರೆ. ಅಗ್ನಿಯ ಅನುಗ್ರಹವು ಇಲ್ಲದಿದ್ದರೆ ದಾಹವು ಉಂಟಾಗಬಹುದು. ಎಲ್ಲಾ ವಸ್ತುಗಳೂ ಕೃಶವಾಗಿರಬಹುದು. ಅದೇ ಅಗ್ನಿಯು ಸುಪ್ರೀತನಾದಾಗ ಎಲ್ಲ ವಸ್ತುಗಳೂ ಸಕಲ ಸೌಭಾಗ್ಯಗಳನ್ನೂ ಹೊಂದುತ್ತವೆ. ಅನಿಷ್ಟಪರಿಹಾರವೂ ಆಗುತ್ತದೆ.

**ತುಭ್ಯಂ ತಾ ಅಂಗಿರಸ್ತಮ ವಿಶ್ವಾಃ ಸುಕ್ಷಿತಯಃ ಪೃಥಕ್ । ಅಗ್ನೇ ಕಾಮಾಯ ಯೇಮಿರೇ ॥ ಅಶ್ಯಾಮ ತಂ ಕಾಮಮಗ್ನೇ**

---

ತುಭ್ಯಮ್। ತಾಃ । ಅಂಗಿರಸ್ತಮೇತ್ಯಂಗಿರಃ-ತಮ । ವಿಶ್ವಾಃ । ಸುಕ್ಷಿತಯ ಇತಿ ಸು-ಕ್ಷಿತಯಃ। ಪೃಥಕ್ ॥ ಅಗ್ನೇ। ಕಾಮಾಯ। ಯೇಮಿರೇ॥ ಅಶ್ಯಾಮ । ತಮ್ । ಕಾಮಮ್ । ಅಗ್ನೇ।

---

| ಮಂತ್ರ | ವಿನಿಯೋಗ |
|---|---|
| ತುಭ್ಯಮ್......ಯೇಮಿರೇ ॥ | ಕಾಮ[ಇಷ್ಟಾರ್ಥ]ಪ್ರಾಪ್ತಿಗಾಗಿ ವಿಹಿತವಾದ ಕಾಮೇಷ್ಟಿಯ ಪುರೋನುವಾಕ್ಯೆ. |
| ಅಶ್ಯಾಮ....ತೇ ॥ | ಕಾಮೇಷ್ಟಿಯ ಯಾಜ್ಯಾನುವಾಕ್ಯೆ |

---

ಹೊಂದಿದವು; [ಅಂತಹ ನೀನು ನಮ್ಮನ್ನು ಅನುಗ್ರಹಿಸು] ✣ ಅಂಗಿರಸ್ತಮ = ಅತ್ಯಂತ ದೇಹಸಾರವುಳ್ಳವನೇ! ಅತ್ಯಂತವಾಗಿ ಹೊಂದಬೇಕಾದವನೇ! ಅತ್ಯಂತ ಶೀಘ್ರಗತಿಯುಳ್ಳವನೇ! ಅಗ್ನೇ = ಅಗ್ನಿಯೇ! ಸುಕ್ಷಿತಯಃ = ಶೋಭನಭೂಮಿಯಾದ ವೇದಿಯಲ್ಲಿರುವ; ವಿಶ್ವಾಃ = ಎಲ್ಲಾ; ತಾಃ = ಆ [ಪ್ರಜೆಗಳು]; ಪೃಥಕ್ = ಪ್ರತ್ಯೇಕವಾದ ತಮ್ಮ ಕಾಮಗಳಿಗಾಗಿ; ತುಭ್ಯಮ್ ಕಾಮಾಯ = ಕಾಮಿತಾರ್ಥಸಿದ್ಧಿಪ್ರದನಾದ ನಿನಗಾಗಿ; ಯೇಮಿರೇ = ನಿಯಮಗಳನ್ನು ಸ್ವೀಕರಿಸಿದರು; [ನಿಯಮಪೂರ್ವಕವಾಗಿ ಅಗ್ನಿಯನ್ನು ಆರಾಧಿಸಿ ಇಷ್ಟಾರ್ಥವನ್ನು ಪಡೆದರು. ಅಂತಹ ನೀನು ನಮ್ಮ ಕಾಮನೆಗಳನ್ನೂ ಪೂರ್ಣಗೊಳಿಸು.] ✣ ಅಗ್ನೇ = ಎಲೈ! ಅಗ್ನಿದೇವನೇ! ತವ = ನಿನ್ನ; ಊತೀ = ರಕ್ಷಣೆಯಿಂದ/ಅನುಗ್ರಹದಿಂದ; ತಮ್ ಕಾಮಮ್ = [ನಾವು ಅಪೇಕ್ಷಿಸಿದ] ಆ ಇಷ್ಟಾರ್ಥವನ್ನು; ಅಶ್ಯಾಮ = ಹೊಂದೋಣ[ಹೊಂದುವಂತಾಗಲಿ].

---

ಅಂತಹ ಪ್ರಭಾವಶಾಲಿಯಾದ ಅಗ್ನಿಯು ನಮಗೆ ಯುದ್ಧದಲ್ಲಿ ಜಯವನ್ನುಂಟು ಮಾಡಲಿ. ನಮ್ಮಲ್ಲಿ ಆಕಸ್ಮಿಕಮರಣವು ಒದಗದಂತೆ ಅನುಗ್ರಹಿಸಲಿ. ಮತ್ತೊಮ್ಮೆ ನಮ್ಮ ಗೃಹಾದಿಗಳನ್ನು ಸುಡದಿರಲಿ.

ಅತ್ಯಂತ ಶೀಘ್ರಗತಿಯುಳ್ಳವನಾಗಿ ಶೀಘ್ರವಾಗಿ ಇಷ್ಟಾರ್ಥಗಳನ್ನು ಕೊಡುವ ಸಾರವತ್ತಾದ ಅಂಗಗಳುಳ್ಳ ಅಗ್ನಿಯೇ! ಯಜ್ಞವೇದಿಯನ್ನು ಹೊಂದಿದ ಪ್ರಜೆಗಳೆಲ್ಲರೂ

**ತವೋತ್ಯಶ್ಯಾಮ ರಯಿಗ್ಂ ರಯಿವಃ ಸುವೀರಮ್ । ಅಶ್ಯಾಮ ವಾಜಮಭಿವಾಜಯಂತೋಽಶ್ಯಾಮ ದ್ಯುಮ್ನಮಜರಾಜರಂ ತೇ ॥**

---

ತವ। ಊತೀ। ಅಶ್ಯಾಮ। ರಯಿಮ್। ರಯಿವ ಇತಿ ರಯಿ-ವಃ। ಸುವೀರಮಿತಿ ಸು-ವೀರಮ್॥ ಅಶ್ಯಾಮ । ವಾಜಮ್ । ಅಭೀತಿ । ವಾಜಯಂತಃ । ಅಶ್ಯಾಮ । ದ್ಯುಮ್ನಮ್। ಅಜರ। ಅಜರಮ್ । ತೇ ॥

---



ರಯಿವಃ = ಧನವಂತನಾದ ಅಗ್ನಿಯೇ! ಸುವೀರಮ್ = ಸುಪುತ್ರಪೌತ್ರಾದಿಗಳಿಂದ ಕೂಡಿದ; ರಯಿಮ್ = ಧನವನ್ನು ಅಶ್ಯಾಮ = ಹೊಂದೋಣ. ವಾಜಯಂತಃ = ಅನ್ನವನ್ನು ಅಪೇಕ್ಷಿಸುವ ನಾವು; ವಾಜಮ್ = ಅನ್ನವನ್ನು; ಅಭಿ ಅಶ್ಯಾಮ = ಎಲ್ಲೆಡೆಯಲ್ಲಿಯೂ ಹೊಂದೋಣ; ಅಜರ = ಮುಪ್ಪಿಲ್ಲದವನೇ! ತೇ = ನಿನ್ನ [ಅನುಗ್ರಹದಿಂದ]; ಅಜರಮ್ = ಶಾಶ್ವತವಾದ/ಕ್ಷಯಸದ, ದ್ಯುಮ್ನಮ್ = ಯಶಸ್ಸನ್ನು; ಅಶ್ಯಾಮ = ಹೊಂದೋಣ. [ನಿನ್ನ ಅನುಗ್ರಹದಿಂದ ನಮ್ಮ ಸಕಲ ಕಾಮನೆಗಳೂ ಲಭಿಸಲಿ].

---

ಪ್ರತ್ಯೇಕವಾದ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಸರ್ವಕಾಮಪ್ರದನಾದ ನಿನ್ನನ್ನು ಒಲಿಸಿಕೊಳ್ಳಲು ನಿಯಮಗಳನ್ನು ಸ್ವೀಕರಿಸಿ ಯಾಗಾದಿಗಳನ್ನು ಮಾಡಿದರು. ಯಾಗ ಮಾಡುತ್ತಿರುವ ನಮಗೂ ಕಾಮಪ್ರದನಾದ ನೀನು ಇಷ್ಟಾರ್ಥಗಳನ್ನಿತ್ತು ಅನುಗ್ರಹಿಸು.

ಅಗ್ನಿದೇವನೇ! ನಿನ್ನ ರಕ್ಷಣೆಯಿಂದ ನಾವು ಅಪೇಕ್ಷಿಸಿದ ಇಷ್ಟಾರ್ಥವನ್ನು ಹೊಂದುವಂತಾಗಲಿ. ಒಳ್ಳೆಯ ಮಕ್ಕಳು, ಮೊಮ್ಮಕ್ಕಳು, ಮೊದಲಾದ ಧನವನ್ನು ಧನವಂತನಾದ ನಿನ್ನ ಅನುಗ್ರಹದಿಂದ ನಾವು ಪಡೆಯೋಣ. ಅನ್ನವನ್ನು ಅಪೇಕ್ಷಿಸುವ ನಾವು ನಿನ್ನ ಅನುಗ್ರಹದಿಂದ ಎಲ್ಲೆಡೆ ಅನ್ನವನ್ನು ಹೊಂದೋಣ. ಅಕ್ಷಯನಾದ ನಿನ್ನ ಅನುಗ್ರಹದಿಂದ ಕ್ಷಯರಹಿತವಾದ ಶಾಶ್ವತಯಶಸ್ಸನ್ನು ಹೊಂದೋಣ. ಸರ್ವಕಾಮ ಪ್ರದನಾದ ನಿನ್ನ ಅನುಗ್ರಹದಿಂದ ನಮ್ಮ ಸಕಲ ಕಾಮನೆಗಳೂ ಪೂರ್ಣವಾಗಲಿ.

ಅಗ್ನಿಯೇ! ನೀನು ಸದಾ ತರುಣನು. ಅತಿಶಯವಾಗಿ ವಿಯೋಗವನ್ನು ಉಂಟುಮಾಡಬಲ್ಲವನು. ಬೇರೆಯವರಿಂದ ತಂದುಕೊಡಬಲ್ಲವನು. ಋತ್ವಿಜರಿಂದ

ಶ್ರೇಷ್ಠಂ ಯವಿಷ್ಠ ಭಾರತಾಗ್ನೇ ದ್ಯುಮಂತಮಾಭರ । (೩)

ವಸೋ ಪುರುಸ್ಪೃಹಗ್ಂ ರಯಿಮ್ । ಸಶ್ವಿತಾನಸ್ತನ್ಯತೂ

ರೋಚನಸ್ಥಾ ಅಜರೇಭಿರ್ನಾನದದ್ಭಿರ್ಯವಿಷ್ಠಃ ।

---

ಶ್ರೇಷ್ಠಮ್। ಯವಿಷ್ಠ। ಭಾರತ। ಅಗ್ನೇ। ದ್ಯುಮಂತಮಿತಿ ದ್ಯು-ಮಂತಮ್। ಆ। ಭರ॥(೩)

ವಸೋ ಇತಿ ಪುರುಸ್ಪೃಹಮಿತಿ ಪುರು-ಸ್ಪೃಹಮ್। ರಯಿಮ್॥ ಸಃ। ಶ್ವಿತಾನಃ। ತನ್ಯತುಃ।

ರೋಚನಸ್ಥಾ ಇತಿ ರೋಚನ-ಸ್ಥಾಃ। ಅಜರೇಭಿಃ। ನಾನದದ್ಭಿರಿತಿ ನಾನದತ್-ಭಿಃ॥ ಯವಿಷ್ಠಃ॥

---



| ಮಂತ್ರ | ವಿನಿಯೋಗ |
|---|---|
| ಶ್ರೇಷ್ಠಂ........ರಯಿಮ್ । | ಯವಿಷ್ಠೇಷ್ಟ್ಯಿಯ ಪುರೋನುವಾಕ್ಯೆ. |
| ಸ ಶ್ವಿತಾನಃ........ಭವನ್ । | ಯವಿಷ್ಠೇಷ್ಟ್ಯಿಯ ಯಾಜ್ಯಾನುವಾಕ್ಯೆ. |

[ಬೇರೆಯವರಿಗಿಂತ ಮೇಲಾಗಲು ಸ್ಪರ್ಧಿಸುವವನು, ಮತ್ತು ಬೇರೆಯವರು ಮಾಡುವ ಅಭಿಚಾರನಿವಾರಣೆಯನ್ನು ಅಪೇಕ್ಷಿಸುವವನು— ಈ ಇಬ್ಬರಿಗೂ ವಿಹಿತವಾದ ಇಷ್ಟಿ]

---

❖ ಯವಿಷ್ಠ = ಅತ್ಯಂತವಾದ ವಿಯೋಗ ಮಾಡಬಲ್ಲವನೇ!/ಅತ್ಯಂತ ತರುಣನೇ! ಭಾರತ = ಋತ್ವಿಜರಿಂದ ಭರಿಸಲ್ಪಡುವವನೇ! ವಸೋ = ಆಹುತಿಗಳ ವಾಸಸ್ಥಾನವಾದವನೇ! ಅಗ್ನೇ = ಅಗ್ನಿಯೇ! ಶ್ರೇಷ್ಠಮ್ = ಅತಿಪ್ರಶಸ್ತವಾದ; ದ್ಯುಮಂತಮ್ = ಪ್ರಕಾಶಮಾನವಾದ; ಪುರುಸ್ಪೃಹಮ್ = ಹಲವರು ಅಪೇಕ್ಷಿಸುವಂತಹ; ರಯಿಮ್ = [ಮಣಿ, ಮುತ್ತು ಮುಂತಾದ] ಐಶ್ವರ್ಯವನ್ನು; ಆ ಭರ = ತಂದುಕೊಡು;

---

ಭರಿಸಲ್ಪಡುವವನು. ಆಹುತಿಗಳಿಗೆ ಸ್ಥಾನನಾದವನು. ನೀನು ನಮಗೆ ಶ್ರೇಷ್ಠವಾದ, ಪ್ರಕಾಶಮಾನವಾದ, ಹಲವರು ಅಪೇಕ್ಷಿಸುವಂತಹ ಮಣಿ-ಮುಕ್ತಾದಿ ಧನವನ್ನು ಕೊಡು. ಅನುಗ್ರಹಿಸು. ಬೇರೆಯವರಿಗಿಂತ ಮೇಲಾಗುವಂತೆ ಮಾಡು.

**ಯಃ ಪಾವಕಃ ಪುರುತಮಃ ಪುರೂಣಿ ಪೃಥೂನ್ಯಗ್ನಿರನುಯಾತಿ ಭರ್ವನ್ನ್। ಆಯುಷ್ಟೇ ವಿಶ್ವತೋ ದಧದಯಮಗ್ನಿರ್ವರೇಣ್ಯಃ।**

ಯಃ । ಪಾವಕಃ । ಪುರುತಮ ಇತಿ ಪುರು-ತಮಃ । ಪುರೂಣಿ । ಪೃಥೂನಿ । ಅಗ್ನಿಃ । ಅನುಯಾತೀತ್ಯನು-ಯಾತಿ। ಭರ್ವನ್ನ್ ॥ ಆಯುಃ। ತೇ । ವಿಶ್ವತಃ। ದಧತ್ । ಅಯಮ್। ಅಗ್ನಿಃ । ವರೇಣ್ಯಃ ॥

| ಮಂತ್ರ | ವಿನಿಯೋಗ |
|---|---|
| ಆಯುಷ್ಟೇ......ಸುವಾಮಿ ತೇ ॥ | ಆಯುಷ್ಕಾಮೇಷ್ಟಿಯ ಪುರೋನುವಾಕ್ಯ. [ಆಯುಸ್ಸನ್ನು ಬಯಸುವವನಿಗೆ ವಿಹಿತವಾದ ಇಷ್ಟಿ.] |

❖ **ಯಃ ಅಗ್ನಿಃ** = ಯಾವ ಅಗ್ನಿಯು; **ಪಾವಕಃ** = ಶುದ್ಧಿಗೊಳಿಸುವವನಾಗಿಯೂ; **ಪುರುತಮಃ** = ಆಹವನೀಯಾದಿರೂಪಗಳಿಂದಲೂ/ಯವಿಷ್ಠಾದಿ ವಿಶೇಷಣಗಳಿಂದಲೂ ಬಹುರೂಪನಾಗಿಯೂ; **ಪುರೂಣಿ** = ಹಲವಾರು; **ಪೃಥೂನಿ** = ವಿಸ್ತೃತವಾದ [ಪುರೋಡಾಶಾದಿ ಹವಿಸ್ಸುಗಳನ್ನು] **ಭರ್ವನ್ನ್** = ಭಕ್ಷಿಸುತ್ತಾ, **ಅನುಯಾತಿ** = [ಯಜಮಾನರ ಮನೆಗಳಿಗೆ] ಪ್ರತಿದಿನವೂ ಬರುತ್ತಾನೆಯೋ; **ಸಃ** = ಆ ಪ್ರಸಿದ್ಧನಾದ [ಅಗ್ನಿಯು] **ಶ್ವಿತಾನಃ** = ಪ್ರಕಾಶಮಾನನಾಗಿಯೂ; **ತನ್ವತುಃ** = [ಫಲಗಳನ್ನು/ಸಿದ್ಧಿಗಳನ್ನು/ಪ್ರಕಾಶವನ್ನು] ವಿಸ್ತಾರಗೊಳಿಸುವವನೂ; **ರೋಚನಸ್ಥಾಃ** = ಮುಪ್ಪಿಲ್ಲದ[ಕ್ಷೀಣರಲ್ಲದ] **ನಾನದದ್ಭಿಃ** = ಸ್ತುತಿಸುತ್ತಿರುವ ದೇವತೆಗಳಿಂದ ಕೂಡಿದವನಾಗಿಯೂ [ಸ್ತುತಿಸುತ್ತಿರುವ ಋತ್ವಿಜರಿಂದಲೂ, ಯಜಮಾನರಿಂದಲೂ ಕೂಡಿದವನಾಗಿಯೂ] **ಯವಿಷ್ಠಃ** = ಶತ್ರುವಿಯೋಗವನ್ನು ಮಾಡುವವನಾಗಿಯೂ; [ಅತ್ಯಂತ ಯುವಕನಾಗಿಯೂ] ಇರುತ್ತಾನೆ. [ಇಂತಹ ಯವಿಷ್ಠಾಗ್ನಿಯು ನಮ್ಮ ಇಷ್ಟಾರ್ಥವನ್ನೀಯಲಿ.] ❖ ಎಲೈ ಯಜಮಾನನೇ! **ವರೇಣ್ಯಃ** = ಶ್ರೇಷ್ಠನಾದ;

ಎಲ್ಲ ವಸ್ತುಗಳನ್ನೂ ಶುದ್ಧಿಗೊಳಿಸುವ ಈ ಅಗ್ನಿಯು ಆಹವನೀಯಾದಿಭೇದದಿಂದಲೂ, ಯವಿಷ್ಠಾದಿವಿಶೇಷಣಗಳಿಂದಲೂ ಬಹುರೂಪನಾಗಿದ್ದಾನೆ. ಪುರೋಡಾಶವೇ ಮೊದಲಾದ ಹಲವು ಬಗೆಯ ಹವಿಸ್ಸನ್ನು ಸ್ವೀಕರಿಸುತ್ತಾನೆ. ಆದರ ಸಲುವಾಗಿ ಯಾಗ ಮಾಡುವವರ

**ಪುನಸ್ತೇ ಪ್ರಾಣ ಆಯತಿ ಪರಾ ಯಕ್ಷ್ಮಗ್ಂ ಸುವಾಮಿ ತೇ॥**

**ಆಯುರ್ದಾ ಅಗ್ನೇ ಹವಿಷೋ ಜುಷಾಣೋ ಘೃತಪ್ರತೀಕೋ**

ಪುನಃ । ತೇ । ಪ್ರಾಣ ಇತಿ ಪ್ರ - ಅನಃ । ಏತಿ । ಆಯತಿ । ಪರೇತಿ । ಯಕ್ಷ್ಮಮ್।

ಸುವಾಮಿ । ತೇ ॥ ಆಯುರ್ದಾ ಇತ್ಯಾಯುಃ-ದಾಃ । ಅಗ್ನೇ । ಹವಿಷಃ । ಜುಷಾಣಃ।

ಘೃತಪ್ರತೀಕ ಇತಿ ಘೃತ-ಪ್ರತೀಕಃ ।

---

| ಮಂತ್ರ | ವಿನಿಯೋಗ |
|---|---|
| ಆಯುರ್ದಾ ಅಗ್ನೇ....ರಕ್ಷತಾದಿಷ್ಮವಮ್ ॥ | ಆಯುಷ್ಕಾಮೇಷ್ಟಿಯ ಯಾಜ್ಯೆ. |

---

ಆಯಮ್ ಅಗ್ನಿಃ = ಈ ಅಗ್ನಿಯು; ತೇ = ನಿನಗೆ; ವಿಶ್ವತಃ = ಎಲ್ಲ ಕಡೆಗಳಿಂದಲೂ [ಸಂಪೂರ್ಣವಾದ] ಆಯುಃ = ಆಯುಸ್ಸನ್ನು; ದಧತ್ = ಉಂಟುಮಾಡಲಿ; [ಅಪಮೃತ್ಯುವಿನಿಂದ ಹಿಡಿಯಲ್ಪಟ್ಟಿದ್ದರೂ] ತೇ ಪ್ರಾಣಃ = ನಿನ್ನ ಪ್ರಾಣವು; ಪುನಃ = ಮತ್ತೆ; ಆ ಆಯತಿ = ಹಿಂದಿರುಗಿ ಬರಲಿ. [ಬರುತ್ತದೆ] ತೇ ಯಕ್ಷ್ಮಮ್ = [ಆಯುರ್ವಿನಾಶಕರವಾದ ಈ] ನಿನ್ನ ರೋಗವನ್ನು; ಪರಾ ಸುವಾಮಿ = [ಈ ಪುರೋಡಾಶಾಹುತಿಯಿಂದ] ಹೋಗಲಾಡಿಸುತ್ತೇನೆ. ✣ ಅಗ್ನೇ = ಎಲೈ ಅಗ್ನಿದೇವನೇ! ಹವಿಷಃ ಜುಷಾಣಃ = [ಪುರೋಡಾಶವೇ ಮುಂತಾದ] ಹವಿಸ್ಸನ್ನು ಸೇವಿಸುವವನೂ; ಘೃತಪ್ರತೀಕಃ = ಉಪಕ್ರಮದಲ್ಲಿ [ಆಘಾರ, ಪ್ರಯಾಜಾದಿಗಳು] ಆಜ್ಯಾಹುತಿಯಿಂದ ಪ್ರಜ್ವಲಿತನಾದವನೂ;

---

ಮನೆಗಳಿಗೆ ನಿತ್ಯವೂ ಬರುತ್ತಾನೆ. ಆತನು ಪ್ರಕಾಶಿಸತಕ್ಕವನು; ವಿಸ್ತೃತವಾದ ಫಲಸಿದ್ಧಿಯನ್ನುಂಟುಮಾಡಬಲ್ಲವನು. ಪ್ರಕಾಶಮಾನವಾದ ಯಾಗಶಾಲೆಗಳಲ್ಲಿ [ಸ್ಥಳಗಳಲ್ಲಿ] ಇರತಕ್ಕವನು. ಮುಪ್ಪಿಲ್ಲದವರಾಗಿರುವ, ತನ್ನನ್ನು ಹೊಗಳುತ್ತಿರುವ ದೇವತೆಗಳಿಂದ ಕೂಡಿಕೊಂಡಿರುವವನು/ಅಕ್ಷೀಣರಾದ ಋತ್ವಿಜರಿಂದಲೂ ಯಜಮಾನರಿಂದಲೂ ಸ್ತುತಿಸಲ್ಪಡುವವನು. ಸದಾ ತರುಣನು. ಶತ್ರುನಾಶವನ್ನುಂಟುಮಾಡತಕ್ಕವನು. ಇಂತಹ ಅಗ್ನಿಯು ನಮ್ಮ ಹವಿಸ್ಸನ್ನು ಸ್ವೀಕರಿಸಿ, ನಮ್ಮ ಕಾಮನೆಗಳನ್ನು ಪೂರೈಸಲಿ.

ಎಲೈ ಯಜಮಾನನೇ! ಆಯುಃಪ್ರದನಾದ ಶ್ರೇಷ್ಠನಾದ ಈ ಅಗ್ನಿಯು ನಿನಗೆ ಸಂಪೂರ್ಣವಾದ ಆಯುಸ್ಸನ್ನು ಕೊಡಲಿ. ಈ ಅಗ್ನಿಯ ಅನುಗ್ರಹದಿಂದ ಅಪಮೃತ್ಯು-

**ಘೃತಯೋನಿರೇಧಿ । ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ ಪುತ್ರಮಭಿ [ಪುತ್ರಮಭಿ (ಳ) ರಕ್ಷತಾದಿಮಮ್॥]**

**ರಕ್ಷತಾದಿಮಮ್ ॥**

---

ಘೃತಯೋನಿರಿತಿ ಘೃತ-ಯೋನಿಃ । ಏಧಿ ॥ ಘೃತಮ್ । ಪೀತ್ವಾ । ಮಧು । ಚಾರು । ಗವ್ಯಮ್ । ಪಿತಾ । ಇವ । ಪುತ್ರಮ್ । ಅಭೀತಿ [ಳ] । ರಕ್ಷತಾತ್ । ಇಮಮ್ ॥

---



**ಘೃತಯೋನಿಃ** = ಅಂತ್ಯದಲ್ಲಿ [ಅನೂಯಾಜಾದಿಹೋಮಗಳು] ಜ್ವಲಿಸಲು ಆಜ್ಯವೇ ಕಾರಣವಾಗಿ ಇರುವವನೂ ಆದ [ನೀನು]; [ಈ ಯಜಮಾನನಿಗೆ] ಆಯುರ್ದಾ: ಏಧಿ= ದೀರ್ಘಾಯುಷ್ಯವನ್ನು ಕೊಡುವವನಾಗು, ಮಧು = ರುಚಿಕರವೂ; ಚಾರು = ಮನೋಹರವೂ, ಶುದ್ಧವೂ ಆಗಿರುವ; ಗವ್ಯಮ್ ಘೃತಮ್=ಗೋ ಸಂಬಂಧಿಘೃತವನ್ನು; ಪೀತ್ವಾ = ಕುಡಿದು; ಇಮಮ್=ಈ ಯಜಮಾನನನ್ನು; ಪಿತಾ = ತಂದೆಯು; ಪುತ್ರಮ್ ಇವ= ಮಗನನ್ನು ಹೇಗೋ ಹಾಗೆ, ಅಭಿ ರಕ್ಷತಾತ್ = [ಯಾವಾಗಲೂ] ಅಭಿಮುಖನಾಗಿ

---

ವಿನಿಂದ ಗ್ರಸ್ತವಾಗಿ ಹೊರಟಿರುವ ನಿನ್ನ ಪ್ರಾಣವೂ ಮತ್ತೆ ಹಿಂದಿರುಗಿ ಬರಲಿ./ಬರುತ್ತದೆ. ಇಂತಹ ಶಕ್ತಿಯುಳ್ಳ ಅಗ್ನಿಯಲ್ಲಿ ಈ ಪುರೋಡಾಶಾಹುತಿಯನ್ನರ್ಪಿಸಿ, ನಿನ್ನ ಪ್ರಾಣಹಾರಕವಾದ ರೋಗವನ್ನು ನಾಶಪಡಿಸುತ್ತೇನೆ. ಹವಿಸ್ಸಿನಿಂದ ತೃಪ್ತನಾದ ಅಗ್ನಿಯು ನಿನ್ನ ರೋಗಗಳನ್ನು ದೂರಮಾಡಿ, ಅಪಮೃತ್ಯುವನ್ನು ಹೋಗಲಾಡಿಸಿ ನಿನಗೆ ಪೂರ್ಣಾಯುಷ್ಯವನ್ನು ಕೊಡಲಿ.

ಯಾಗಗಳಲ್ಲಿ ಮೊದಲು ಪ್ರಯಾಜ - ಆಘಾರಾದಿಗಳಲ್ಲಿ ತುಪ್ಪದ ಹೋಮಗಳಿಂದ ಅಗ್ನಿಯನ್ನು ಸೇವಿಸುತ್ತಾರೆ. ಕೊನೆಯಲ್ಲಿ ಅನೂಯಾಜಾದಿಗಳಲ್ಲಿ ಆಜ್ಯಾಹುತಿಗಳನ್ನು ನೀಡಿ ಅಗ್ನಿಯು ಪ್ರಜ್ವಲಿಸುವಂತೆ ಮಾಡುತ್ತಾರೆ. ಇಂತಹ ಅಗ್ನಿಯು ಈಗ ಸಮರ್ಪಿಸುವ ಪುರೋಡಾಶರೂಪವಾದ ಹವಿಸ್ಸನ್ನು ಸ್ವೀಕರಿಸಿ ಯಜಮಾನನಿಗೆ ದೀರ್ಘಾಯುಸ್ಸನ್ನು ಕೊಡಲಿ. ಅಗ್ನಿಯು ರುಚಿಯೂ, ಶುಚಿಯೂ ಆಗಿರುವ ಹಸುವಿನ ತುಪ್ಪವನ್ನು ಸವಿದು, ತಂದೆಯು ಮಗನನ್ನು ರಕ್ಷಿಸುವಂತೆ ಈ ಯಜಮಾನನನ್ನು ಎಲ್ಲಾ ಕಡೆಗಳಲ್ಲಿಯೂ ರಕ್ಷಿಸಲಿ/ಅಗ್ನಿಯೇ! ನೀನು ಇವನನ್ನು ರಕ್ಷಿಸು.

**ತಸ್ಮೈ ತೇ ಪ್ರತಿಹರ್ಯತೇ ಜಾತವೇದೋ ವಿಚರ್ಷಣೇ । ಅಗ್ನೇ ಜನಾಮಿ ಸುಷ್ಟುತಿಮ್ ॥ ದಿವಸ್ಪರಿ ಪ್ರಥಮಂ ಜಜ್ಞೇ**

---

**ತಸ್ಮೈ** । ತೇ । ಪ್ರತಿಹರ್ಯತ ಇತಿ ಪ್ರತಿ-ಹರ್ಯತೇ । ಜಾತವೇದ ಇತಿ ಜಾತ-ವೇದಃ । ವಿಚರ್ಷಣ ಇತಿ ವಿ-ಚರ್ಷಣೇ ॥ ಅಗ್ನೇ । ಜನಾಮಿ । ಸುಷ್ಟುತಿಮಿತಿ ಸು-ಸ್ತುತಿಮ್॥ ದಿವಃ । ಪರೀತಿ । ಪ್ರಥಮಮ್ । ಜಜ್ಞೇ ।

---

| ಮಂತ್ರ | ವಿನಿಯೋಗ |
| --- | --- |
| **ತಸ್ಮೈ ತೇ.......ಸುಷ್ಟುತಿಮ್ ।** | ಜಾತವೇದಸೇಷ್ಟಿಯ ಪುರೋನುವಾಕ್ಯೆ. [ಐಶ್ವರ್ಯವನ್ನು ಬಯಸುವವನಿಗೆ ವಿಹಿತವಾದ ಇಷ್ಟಿ.] |

---

ಕಾಪಾಡು; [ಅಗ್ನಿಯು ಕಾಪಾಡಲಿ.] ❖ **ವಿಚರ್ಷಣೇ** = ವಿವಿಧ ಯಜಮಾನರಿಂದ ಸೇವಿಸಲ್ಪಡುವ/ವಿವಿಧವಾದ ದರ್ಶನವುಳ್ಳ; **ಜಾತವೇದಃ** =ಪ್ರಜ್ಞಾಶಾಲಿಯಾದ/ಹುಟ್ಟಿದವರೆಲ್ಲರನ್ನೂ ತಿಳಿದಿರುವ/ಎಲ್ಲರಲ್ಲಿಯೂ ಜಠರಾಗ್ನಿರೂಪದಲ್ಲಿರುವ; **ಅಗ್ನೇ** = ಅಗ್ನಿದೇವನೇ! **ಪ್ರತಿಹರ್ಯತೇ** = ಪ್ರತಿದಿನವೂ ಯಜಮಾನರ ಮನೆಗೆ ಆಹುತಿಗಳನ್ನು ಸ್ವೀಕರಿಸಲು ಬರುವ/ಸ್ತುತಿಯನ್ನು ಅಪೇಕ್ಷಿಸುವ; **ತಸ್ಮೈ ತೇ** = ಅಂತಹ ನಿನಗೆ; **ಸುಸ್ತುತಿಮ್** = ಶುಭಸ್ತುತಿಯನ್ನು; **ಜನಾಮಿ** = ಉಂಟುಮಾಡುತ್ತೇನೆ. ❖ **ಅಗ್ನಿಃ** = ಈ ಅಗ್ನಿದೇವನು; **ಪ್ರಥಮಮ್** = ಮೊದಲು; **ದಿವಃ ಪರಿ** = ದೇವಲೋಕದ ಮೇಲೆ; **ಜಜ್ಞೇ** = [ಸೂರ್ಯರೂಪದಿಂದ] ಹುಟ್ಟಿದನು.

---

ಈ ಅಗ್ನಿಯು ಎಲ್ಲವನ್ನೂ ತಿಳಿದವನು. ಎಲ್ಲರಲ್ಲಿಯೂ ಇರುವವನು. ಆದುದರಿಂದ ಜಾತವೇದಸನೆನಿಸಿಕೊಂಡಿದ್ದಾನೆ. ಈತನು ಹಲವು ಯಜಮಾನರಿಂದ ಆರಾಧಿಸಲ್ಪಡುವುದರಿಂದ/ಪ್ರಜೆಗಳ ಉತ್ಪತ್ತಿಗೆ ಕಾರಣನಾದುದರಿಂದ ವಿಚರ್ಷಣಿಯಾಗಿರುತ್ತಾನೆ. ಈ ಅಗ್ನಿದೇವನು ಸ್ತುತಿಪ್ರಿಯನು. ಯಜಮಾನರ ಮನೆಗೆ ಹವಿಸ್ಸುಗಳ ಸ್ವೀಕಾರಕ್ಕಾಗಿ ಬಂದು ಹೋಗುತ್ತಾನೆ. ಇಂತಹ ಅಗ್ನಿದೇವನನ್ನು ಇಷ್ಟಾರ್ಥಸಿದ್ಧಿಗಾಗಿ ಸ್ತುತಿಸುತ್ತೇನೆ.

**ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ । ತೃತೀಯಮಪ್ಸು**

**ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥**

---

ಅಗ್ನಿಃ । ಅಸ್ಮತ್ । ದ್ವಿತೀಯಮ್ । ಪರೀತಿ । ಜಾತವೇದಾ ಇತಿ ಜಾತ -ವೇದಾಃ ॥ ತೃತೀಯಮ್ । ಅಪ್ಸ್ವಿತ್ಯಪ್ - ಸು । ನೃಮಣಾ ಇತಿ ನೃ - ಮನಾಃ । ಅಜಸ್ರಮ್ । ಇಂಧಾನಃ । ಏನಮ್ । ಜರತೇ । ಸ್ವಾಧೀರಿತಿ ಸ್ವ-ಧೀಃ ॥

---

| ಮಂತ್ರ | ವಿನಿಯೋಗ |
|---|---|
| ದಿವಸ್ಪರಿ..........ಸ್ವಾಧೀಃ ॥ | ಜಾತವೇದಸೇಷ್ಟಿಯ ಯಾಜ್ಯಾನುವಾಕ್ಯೆ. |

---

**ಅಸ್ಮತ್ ಪರಿ** = ನಮ್ಮ [ಈ ಮನುಷ್ಯಲೋಕದ] ಮೇಲೆ; **ಜಾತವೇದಾಃ** = ಹುಟ್ಟಿದುದೆಲ್ಲವನ್ನೂ ತಿಳಿದಿರುವ; ಐಶ್ವರ್ಯವನ್ನುಂಟುಮಾಡುವ, ಅಗ್ನಿಯಾಗಿ; **ದ್ವಿತೀಯಮ್ ಜಜ್ಞೇ** = ಎರಡನೆಯ ಜನ್ಮವನ್ನು ತಾಳಿದನು; **ಅಪ್ಸು** = ಸಮುದ್ರದ ನೀರಿನಲ್ಲಿ [ಬಡಬಾನಲರೂಪದಿಂದ] ಅಂತರಿಕ್ಷದಲ್ಲಿರುವ ಮೋಡದಲ್ಲಿರುವ ನೀರಿನಲ್ಲಿ ಮಿಂಚಿನ ರೂಪದಿಂದ; **ತೃತೀಯಮ್ ಜಜ್ಞೇ** = ಮೂರನೆಯ ಜನ್ಮವನ್ನು ಪಡೆದನು; **ಈ** ಅಗ್ನಿದೇವನು **ಅಜಸ್ರಮ್** = ಯಾವಾಗಲೂ/ಎಲ್ಲ ಜನ್ಮಗಳಲ್ಲಿಯೂ; **ನೃಮಣಾಃ** = ಮನುಷ್ಯರಲ್ಲಿ/ಯಜಮಾನರಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿರುತ್ತಾನೆ; **ಏನಮ್** = ಈ ಅಗ್ನಿದೇವನನ್ನು; **ಇಂಧಾನಃ** = [ಸಮಿತ್ತು, ಚರು, ಆಜ್ಯ, ಪುರೋಡಾಶಾದಿಗಳಿಂದ] ಪ್ರಜ್ವಲಿಸುವಂತೆ ಮಾಡುತ್ತಾ; **ಸ್ವಾಧೀಃ**= ಸ್ವಾಧೀನವಾದ ಮನಸ್ಸುಳ್ಳ/ಸ್ವಕರ್ಮನಿಷ್ಠನಾದ /ಆತ್ಮನಿಷ್ಠನಾದ ಯಜಮಾನನು; **ಜರತೇ** = ಮುಪ್ಪನ್ನು ಹೊಂದುತ್ತಾನೆ. [ಮುಪ್ಪಿನವರೆಗೂ ಪರಿಚರಿಸುತ್ತಾನೆ/ಸ್ತುತಿಸುತ್ತಾನೆ.]

---

ಅಗ್ನಿಯು ಮೊದಲು ಸೂರ್ಯರೂಪದಿಂದ ದೇವಲೋಕದ ಮೇಲೆ ಹುಟ್ಟಿದನು. ಜಾತವೇದನಾಗಿ[ವೈಶ್ವಾನರರೂಪನಾಗಿ] ಮನುಷ್ಯಲೋಕದ ಮೇಲೆ ಹುಟ್ಟಿದನು. [ಜಾಠರಾಗ್ನಿರೂಪದಿಂದ ನಮ್ಮಲ್ಲಿ ಹುಟ್ಟಿದನು.] ಇದು ಆತನ ಎರಡನೆಯ ಜನ್ಮ. ಸಮುದ್ರದಲ್ಲಿ ಬಡಬಾಗ್ನಿರೂಪದಿಂದ ಹುಟ್ಟಿದನು./ಅಂತರಿಕ್ಷದ ಮೋಡಗಳ ನೀರಿನಲ್ಲಿ

**ಶುಚಿಃ ಪಾವಕ ವಂದ್ಯೋಽಗ್ನೇ ಬೃಹದ್ವಿರೋಚಸೇ। ತ್ವಂ ಘೃತೇಭಿರಾಹುತಃ ॥ ದೃಶಾನೋ ರುಕ್ಮ ಉರ್ವ್ಯಾ ವ್ಯದ್ಯೌ**

**ಶುಚಿಃ । ಪಾವಕ । ವಂದ್ಯಃ । ಅಗ್ನೇ । ಬೃಹತ್ । ವೀತಿ । ರೋಚಸೇ ॥ ತ್ವಮ್ । ಘೃತೇಭಿಃ। ಆಹುತ ಇತ್ಯಾ-ಹುತಃ ॥ ದೃಶಾನಃ । ರುಕ್ಮಃ । ಉರ್ವ್ಯಾ । ವೀತಿ। ಅದ್ಯೌತ್।**

| ಮಂತ್ರ | ವಿನಿಯೋಗ |
|---|---|
| ಶುಚಿಃ.........ಆಹುತಃ ॥ | ರುಕ್ಮಾಮೇಷ್ಟಿಯ ಪುರೋನುವಾಕ್ಯೆ[ಕಾಂತಿಯನ್ನು ಅಪೇಕ್ಷಿಸುವವನಿಗೆ ವಿಹಿತವಾದ ಇಷ್ಟಿ.] |
| ದೃಶಾನೋ.........ಸುರೇತಾಃ । | ರುಕ್ಮಾಮೇಷ್ಟಿಯ ಯಾಜ್ಯಾನುವಾಕ್ಯೆ. |

❖ ಪಾವಕ = ಎಲೈ! ಶುದ್ಧಿಗೊಳಿಸುವವನೇ! ಅಗ್ನೇ = ಅಗ್ನಿದೇವನೇ! ತ್ವಮ್ = ನೀನು; ಶುಚಿಃ = ಶುದ್ಧನೂ [ಕಾಂತಿಯುಕ್ತನೂ] ಮತ್ತು; ವಂದ್ಯಃ = ಸ್ತುತಿಯೋಗ್ಯನೂ/ನಮಸ್ಕಾರಾರ್ಹನೂ; [ಆಗಿರುವೆ]; [ನೀನು] ಘೃತೇಭಿಃ = ತುಪ್ಪವೇ ಮೊದಲಾದ ಹವಿಸ್ಸುಗಳಿಂದ; ಆಹುತಃ = ಸುತ್ತಲೂ ಹೋಮಮಾಡಲ್ಪಟ್ಟವನಾಗಿ; ಬೃಹತ್ = ಹೆಚ್ಚಾಗಿ [ಅಧಿಕವಾಗಿ] ವಿರೋಚಸೇ = ಪ್ರಕಾಶಿಸುತ್ತೀಯೆ; ❖ ಅಗ್ನಿಃ = ಈ ಅಗ್ನಿದೇವನು; ದೃಶಾನಃ = ಒಳ್ಳೆಯ ರೂಪವುಳ್ಳವನೂ [ಒಳ್ಳೆಯ ಅಂಶಗಳನ್ನು ತಿಳಿಸಿಕೊಡುವವನೂ] ರುಕ್ಮಃ= ಚಿನ್ನದಂತೆ ಹೊಳೆಯುವವನೂ [ಆಗಿರುತ್ತಾನೆ]. [ಈತನು]

---

ಮಿಂಚಿನ ರೂಪದಿಂದ ಹುಟ್ಟಿದನು. ಇದು ಅವನ ಮೂರನೆಯ ಹುಟ್ಟು. ಈ ಅಗ್ನಿಯು ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ಜನ್ಮಗಳಲ್ಲಿಯೂ ಮನುಷ್ಯರಿಗೆ ಉಪಕಾರ ಮಾಡುವ ಬುದ್ಧಿಯುಳ್ಳವನೇ ಆಗಿದ್ದಾನೆ. ಈತನನ್ನು ಯಜಮಾನನು ಸ್ವಾಧೀನಮನಸ್ಕನಾಗಿ, ಸ್ವಕರ್ಮನಿಷ್ಠನಾಗಿ, ಆತ್ಮನಿಷ್ಠನಾಗಿ ಸಮಿತ್ತು, ಚರು, ಆಜ್ಯ ಮುಂತಾದವುಗಳಿಂದ ಪ್ರಜ್ವಲಿಸುವಂತೆ ಮಾಡುತ್ತಾ ಆಜೀವಪರ್ಯಂತವೂ ಸೇವಿಸಲಿ/ಸ್ತುತಿಸಲಿ.

ಓ! ಅಗ್ನಿದೇವನೇ! ನೀನು ಎಲ್ಲವನ್ನೂ ಶುದ್ಧಿಗೊಳಿಸುವವನೂ ಆಗಿರುವೆ. ಸ್ವತಃ ಪರಿಶುದ್ಧನೂ, ಕಾಂತಿಯುಕ್ತನೂ ಆಗಿರುವೆ. ನೀನು ನಮಸ್ಕಾರಾರ್ಹನೂ, ಸ್ತುತ್ಯರ್ಹನೂ ಆಗಿರುತ್ತೀಯೆ. ಮೊದಲೇ ಪ್ರಕಾಶಮಾನನಾದ ನೀನು ತುಪ್ಪವೇ ಮೊದಲಾದ ಹವಿಸ್ಸು

ದ್ರ್ದುರ್ಮರ್ಷಮಾಯುಃ ಶ್ರಿಯೇ ರುಚಾನಃ । ಅಗ್ನಿರಮೃತೋ ಅಭವದ್ವಯೋಭಿ [ವಯೋಭಿಃ (೫)ಯದೇನಂ..] ರ್ಯದೇನಂ ದ್ಯೌರಜನಯತ್ಸುರೇತಾಃ ॥

---

ದುರ್ಮರ್ಷಮಿತಿ ದುಃ-ಮರ್ಷಮ್। ಆಯುಃ । ಶ್ರಿಯೇ । ರುಚಾನಃ ॥ ಅಗ್ನಿಃ । ಅಮೃತಃ। ಅಭವತ್ । ವಯೋಭಿರಿತಿ ವಯಃ-ಭಿಃ [೫]। ಯತ್ । ಏನಮ್ । ದ್ಯೌಃ । ಅಜನಯತ್। ಸುರೇತಾ ಇತಿ ಸು-ರೇತಾಃ ॥

---

**ದುರ್ಮರ್ಷಮ್** = ಬೇರೆಯವರಿಂದ ತಿರಸ್ಕರಿಸಲು ಸಾಧ್ಯವಿಲ್ಲದ; [ಬೇರೆಯವರು ಸಹಿಸಲು ಸಾಧ್ಯವಿಲ್ಲದ] **ಆಯುಃ** = ಆಯುಸ್ಸನ್ನು [ಅನ್ನವನ್ನು] **ಶ್ರಿಯೇ** = ಪಡೆಯಲು; **ರುಚಾನಃ** = ಅಪೇಕ್ಷಿಸುವವನಾಗಿ, **ಉರ್ವ್ಯಾ** = ಮಹತ್ತಾದ ದೀಪ್ತಿಯಿಂದ [ಬೆಳಕಿನಿಂದ] **ವ್ಯದ್ಯೌತ್** = ವಿಶೇಷವಾಗಿ ಪ್ರಕಾಶಿಸುತ್ತಾನೆ. **ಯತ್** = ಯಾವ ಕಾರಣದಿಂದ; **ಸುರೇತಾಃ** = [ಎಲ್ಲವನ್ನೂ ಉತ್ಪತ್ತಿ ಮಾಡಲು] ಒಳ್ಳೆಯ ಬೀಜವಿರುವ [ಉತ್ಪತ್ತಿಕಾರಣವುಳ್ಳ] **ದ್ಯೌಃ** = ದೇವಲೋಕದಲ್ಲಿರುವ ದೇವಗಣವು; **ಏನಮ್** = ಈ ಅಗ್ನಿಯನ್ನು; **ಅಜನಯತ್** = ಉಂಟುಮಾಡಿತೋ [ಆ ಕಾರಣದಿಂದ] **ಅಗ್ನಿಃ** = ಅಗ್ನಿಯು; **ವಯೋಭಿಃ**= ಹವೀರೂಪವಾದ ಅನ್ನಗಳಿಂದ; **ಅಮೃತಃ** = ಸಾವಿಲ್ಲದವನಾಗಿ; **ಅಭವತ್** = ಆದನು.

---

ಗಳನ್ನು ಸ್ವೀಕರಿಸಿ ಮತ್ತೂ ಹೆಚ್ಚಾಗಿ ಪ್ರಜ್ವಲಿಸುತ್ತೀಯೆ. ನೀನು ಯಜಮಾನನಿಗೆ ಕಾಂತಿಯನ್ನು ಕರುಣಿಸು. ೫ *ಚಿನ್ನದಂತೆ ಹೊಳೆಯುವ ಈ ಅಗ್ನಿಯು ಸುರೂಪನಾಗಿದ್ದಾನೆ. ಇತರರು ಪಡೆಯಲಾಗದ ಜೀವನವನ್ನೂ, ಅನ್ನವನ್ನೂ ಹೊಂದಲು ಅಪೇಕ್ಷಿಸುವವನಾಗಿ ಮಹತ್ತಾದ ಜ್ವಾಲೆಯಿಂದ ಕೂಡಿ ವಿಶೇಷವಾಗಿ ಪ್ರಕಾಶಿಸುತ್ತಾನೆ. ಎಲ್ಲವನ್ನೂ ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿದ ದೇವಗಣವು ಅಗ್ನಿಯನ್ನು ಹುಟ್ಟಿಸಿತು. ಆತನಿಗೆ ತುಪ್ಪ,

*ಋಗ್ವೇದದ ಎರಡು ಮಂತ್ರಗಳಲ್ಲಿ[ಪ್ರಯಾಜಾನ್ಮೇ..। ಮತ್ತು ತವ ಪ್ರಯಾಜಾ..।] ಅಗ್ನಿಯು ಪ್ರಯಾಜಾದಿ ಯಾಗಗಳನ್ನೂ; ಆಯುಸ್ಸನ್ನೂ ತನ್ನ ಭಾಗವಾಗಿ ಕೊಡುವಂತೆ ದೇವತೆಗಳನ್ನು ಕೇಳಿದನೆಂದೂ, ದೇವತೆಗಳು ಅದಕ್ಕೆ ಒಪ್ಪಿದರೆಂದೂ ಹೇಳಲಾಗಿದೆ. ಆ ಅಂಶವನ್ನು ಈ ಮಂತ್ರದಲ್ಲಿಯೂ ಹೇಳಲಾಗಿದೆ. [ಋ.ಸಂ. 10-51-8/9]

ಆ ಯದಿಷೇ ನೃಪತಿಂ ತೇಜ ಆನಟ್ಛುಚಿ ರೇತೋ ನಿಷಿಕ್ತಂ ದ್ಯೌರಭೀಕೇ । ಅಗ್ನಿಃ ಶರ್ಧಮನವದ್ಯಂ ಯುವಾನಗ್ಂ ಸ್ವಾಧಿಯಂ ಜನಯತ್ಸೂದಯಚ್ಚ ॥

---

ಏತಿ । ಯತ್। ಇಷೇ । ನೃಪತಿಮಿತಿ ನೃ-ಪತಿಮ್। ತೇಜಃ । ಆನಟ್ । ಶುಚಿ । ರೇತಃ। ನಿಷಿಕ್ತಮಿತಿ ನಿ-ಸಿಕ್ತಮ್ । ದ್ಯೌಃ । ಅಭೀಕೇ ॥ ಅಗ್ನಿಃ । ಶರ್ಧಮ್ । ಅನವದ್ಯಮ್। ಯುವಾನಮ್। ಸ್ವಾಧಿಯಮಿತಿ ಸ್ವ-ಧಿಯಮ್ । ಜನಯತ್ । ಸೂದಯತ್ । ಚ ॥

---



| ಮಂತ್ರ | ವಿನಿಯೋಗ |
|---|---|
| ಆ ಯದಿಷೇ......ಸೂದಯಚ್ಚ ॥ | ತೇಜಸ್ಕಾಮೇಷ್ಟಿಯ ಪುರೋನುವಾಕ್ಯೆ [ತೇಜಸ್ಸನ್ನು ಬಯಸುವವನಿಗೆ ವಿಹಿತವಾದ ಇಷ್ಟಿ] |

---

❖ **ಯತ್ ತೇಜಃ** = ಯಾವ ತೇಜಸ್ಸು; **ಇಷೇ** = ಅನ್ನಕ್ಕಾಗಿ [ಅಭೀಷ್ಟಸಿದ್ಧಿಗಾಗಿ] **ನೃಪತಿಮ್** = ಯಜಮಾನನ [ಪ್ರಜೆಗಳ] ರಕ್ಷಕನಾದ ಅಗ್ನಿಯನ್ನು; **ಆ ಆನಟ್** = ಸುತ್ತಲೂ ವ್ಯಾಪಿಸಿತೋ; **ಯತ್** = ಯಾವ; **ಶುಚಿ** = ಶುದ್ಧವಾದ; **ರೇತಃ** = [ಶುಕ್ರಶೋಣಿತ ರೂಪವಾದ] ರೇತಸ್ಸು; **ನಿಷಿಕ್ತಮ್** = [ಮಾತಾಪಿತೃಗಳಿಂದ] ಸೇಚಿಸಲ್ಪಟ್ಟಿತೋ; [ಆ ತೇಜಸ್ಸಿನಿಂದ] **ದ್ಯೌಃ** = ದ್ಯುಲೋಕಸ್ಥನಾದ; **ಅಗ್ನಿಃ** = ಅಗ್ನಿಯು [ಪ್ರಕಾಶಮಾನನಾದ ಅಗ್ನಿಯು] **ಅಭೀಕೇ** = ಸಮೀಪಕಾಲದಲ್ಲಿ; **ಶರ್ಧಮ್** = ಬಲವಂತನಾದ; **ಅನವದ್ಯಮ್** = ದೋಷರಹಿತನಾದ; **ಯುವಾನಮ್** = ತರುಣನಾದ; **ಸ್ವಾಧಿಯಮ್** = ಸ್ವಾಧೀನಚಿತ್ತನಾದ [ಸ್ವಕರ್ಮನಿಷ್ಠನಾದ] ಪುರುಷನನ್ನು; **ಜನಯತ್** = ಉಂಟುಮಾಡುತ್ತಾನೆ; **ಚ** = ಮತ್ತು; **ಸೂದಯತ್** = [ವಿರೋಧಿಯಾದ ಪಾಪವನ್ನು] ನಾಶಪಡಿಸುತ್ತಾನೆ. [ಇಂತಹ

---

ಪುರೋಡಾಶಾದಿಗಳನ್ನು ಭಾಗವಾಗಿ ಕೊಟ್ಟಿತು. ಇಂತಹ ಹವಿಸ್ಸುಗಳನ್ನು ಸವಿದು ಅಗ್ನಿಯು ಅಮರನಾಗಿದ್ದಾನೆ. ಆತನು ಯಜಮಾನನಿಗೆ ಕಾಂತಿಯನ್ನು ಕೊಡಲಿ. ★ ಯಾವ ತೇಜಸ್ಸು ಪ್ರಜಾಪಾಲಕನಾದ ಅಗ್ನಿಯನ್ನು ಅನ್ನಾದಿಪ್ರಾಪ್ತಿಗಾಗಿ, ಸಸ್ಯಾದಿನಿಷ್ಪತ್ತಿಗಾಗಿ ಸೇರಿತೋ, ಯಾವ ಶುದ್ಧವಾದ ತೇಜಸ್ಸು ತಾಯಿ-ತಂದೆಗಳಿಂದ ಸೇಚಿಸಲ್ಪಟ್ಟಿತೋ

**ಸ ತೇಜೀಯಸಾ ಮನಸಾ ತ್ವೋತ ಉತ ಶಿಕ್ಷ ಸ್ವಪತ್ಯಸ್ಯ ಶಿಕ್ಷೋಃ।**

**ಅಗ್ನೇ ರಾಯೋ ನೃತಮಸ್ಯ ಪ್ರಭೂತೌ ಭೂಯಾಮ ತೇ**

---

**ಸಃ । ತೇಜೀಯಸಾ । ಮನಸಾ । ತ್ವೋತಃ । ಉತ । ಶಿಕ್ಷ । ಸ್ವಪತ್ಯಸ್ಯೇತಿ ಸು-ಅಪತ್ಯಸ್ಯ। ಶಿಕ್ಷೋಃ ॥ ಅಗ್ನೇ। ರಾಯಃ । ನೃತಮಸ್ಯೇತಿ ನೃ-ತಮಸ್ಯ । ಪ್ರಭೂತಾವಿತಿ ಪ್ರ-ಭೂತೌ। ಭೂಯಾಮ । ತೇ ।**

---

| ಮಂತ್ರ | ವಿನಿಯೋಗ |
|---|---|
| ಸ ತೇಜೀಯಸಾ.........ವಸ್ವಃ ॥ | ತೇಜಸ್ಕಾಮೇಷ್ಟಿಯ ಯಾಜ್ಯಾನುವಾಕ್ಯೆ |

---

ಅಗ್ನಿಯು ಯಜಮಾನನಿಗೆ ತೇಜಸ್ಸನ್ನೀಯಲಿ]. ✣ **ಸಃ** = ಆ [ಯಜಮಾನನು]; **ತೇಜೀಯಸಾ** = ಅತ್ಯಂತ ತೇಜೋಯುಕ್ತವಾದ; **ಮನಸಾ** = ಮನಸ್ಸಿನಿಂದ [ಸಾವಧಾನವಾದ ಮನಸ್ಸಿನಿಂದ] **ತ್ವೋತಃ** = ನಿನ್ನಿಂದ ರಕ್ಷಿತನಾಗಿದ್ದಾನೆ.[ರಕ್ಷಿತನಾಗಲಿ.] **ಉತ** = ಮತ್ತು; **ಅಗ್ನೇ** = ಅಗ್ನಿದೇವನೇ! **ಸ್ವಪತ್ಯಸ್ಯ** = ಒಳ್ಳೆಯ ಮಕ್ಕಳು - ಮೊಮ್ಮಕ್ಕಳುಳ್ಳ; **ಶಿಕ್ಷೋಃ** = ಶಕ್ತಿಯನ್ನು ಇಚ್ಛಿಸುವ; **ನೃತಮಸ್ಯ** = ಮನುಷ್ಯ ಶ್ರೇಷ್ಠನಾದ[ಯಜಮಾನನಿಗೆ] **ರಾಯಃ** = ಧನಗಳನ್ನು; **ಶಿಕ್ಷ** = ಕೊಡು; **ತೇ** = ನಿನ್ನ

---

*[ಭೂಮ್ಯಾಕಾಶಗಳಿಂದ ವೃಷ್ಟಿಜಲರೂಪವಾದ ರೇತಸ್ಸು ಸುರಿಸಲ್ಪಟ್ಟಿತೋ] ಆ ತೇಜಸ್ಸಿನಿಂದ ದ್ಯುಲೋಕದಲ್ಲಿರುವ ಅಗ್ನಿಯು ಸಮೀಪಕಾಲದಲ್ಲಿ ಬಲಿಷ್ಠನಾದ, ದೋಷರಹಿತನಾದ, ತರುಣನಾದ, ಸ್ವಾಧೀನವಾಗಿರುವ ಮನಸ್ಸುಳ್ಳ, ಸ್ವಕರ್ಮನಿಷ್ಠನಾದ ಪುರುಷನನ್ನು ಉಂಟುಮಾಡುತ್ತಾನೆ. ಅಗ್ನಿಯ ಅನುಗ್ರಹದಿಂದ ಬಲ ಮುಂತಾದವು ಉಂಟಾಗುತ್ತವೆ. ಅಗ್ನಿಯು ವಿರೋಧಿಯಾದ ಪಾಪವನ್ನೂ ಪರಿಹಾರ ಮಾಡುತ್ತಾನೆ. ಅಗ್ನಿಯ ಅನುಗ್ರಹದಿಂದ ಯಜಮಾನನು ತೇಜಸ್ವಿಯಾಗಲಿ.

---

* 'ಅಗ್ನಿರ್ವೈ ರೇತೋಧಾಃ' 'ಇಮೇ ವಿವಾಸ್ಮೈ ಸಮೀಚೀ ರೇತಃ ಸಿಂಚತಃ' ಮುಂತಾದ ವಚನಗಳಲ್ಲಿ ಅಗ್ನಿಯನ್ನು ಪ್ರಜೋತ್ಪಾದಕನೆಂದೂ, ದ್ಯಾವಾಪೃಥಿವೀಗಳು ತಾಯಿತಂದೆಗಳಂತೆ ಸಸ್ಯಾದಿಗಳ ಉತ್ಪತ್ತಿಗೆ ಕಾರಣವಾದ ಜಲರೂಪವಾದ ರೇತಸ್ಸನ್ನು ಸುರಿಸುತ್ತವೆಯೆಂದೂ, ಆ ಸಸ್ಯಗಳನ್ನು ಪ್ರಾಣಿಗಳು ಭಕ್ಷಿಸಿದಾಗ ಅವರಲ್ಲಿ ಸೇರಿದ ಆಹಾರವು ಪ್ರಜೋತ್ಪತ್ತಿಗೆ ಕಾರಣವಾದ ರೇತಸ್ಸಾಗುವುದೆಂದೂ ವರ್ಣನೆಗಳಿವೆ. ಅವುಗಳನ್ನು ಈ ಮಂತ್ರದಲ್ಲಿ ಸೂಚಿಸಲಾಗಿದೆ.

**ಸುಷ್ಟುತಯಶ್ಚ ವಸ್ವಃ ॥ ಅಗ್ನೇ ಸಹಂತಮಾಭರ ದ್ಯುಮ್ನಸ್ಯ ಪ್ರಾಸಹಾ ರಯಿಮ್। ವಿಶ್ವಾ ಯ [ವಿಶ್ವಾ ಯಃ(೬)ಚರ್‌ಷಣೇ]**

---

ಸುಷ್ಟುತಯ ಇತಿ ಸು-ಸ್ತುತಯಃ । ಚ । ವಸ್ವಃ ॥ ಅಗ್ನೇ । ಸಹಂತಮ್। ಏತಿ । ಭರ। ದ್ಯುಮ್ನಸ್ಯ । ಪ್ರಾಸಹೇತಿ ಪ್ರ - ಸಹಾ। ರಯಿಮ್ ॥ ವಿಶ್ವಾಃ । ಯಃ (೬)।

---

| ಮಂತ್ರ | ವಿನಿಯೋಗ |
|---|---|
| **ಅಗ್ನೇ ಸಹಂತಂ......ಸಾಸಹತ್ ॥** | ಸಾಹಂತ್ಯೇಷ್ಟಿಯ ಪುರೋನುವಾಕ್ಯ [ವೈರಿಗಳನ್ನು ಮೀರಿಸಿ ಬಾಳಬೇಕೆನ್ನುವವನಿಗೆ ವಿಹಿತವಾದ ಇಷ್ಟಿ] |

---

[ಅನುಗ್ರಹದಿಂದ]; **ಪ್ರಭೂತಾ** = ಪ್ರಭುತ್ವವುಂಟಾಗಲು; ವಯಮ್=ನಾವು; **ವಸ್ವಃ**= ಅತಿ ಶ್ರೀಮಂತರಾಗಿಯೂ; **ಚ** = ಮತ್ತು; **ಸುಷ್ಟುತಯಃ** = ಒಳ್ಳೆಯ ಸ್ತುತಿಯುಳ್ಳವರೂ/ ಯಜ್ಞಗಳನ್ನು ಮಾಡಿ ಅದರ ಸ್ತೋತ್ರ-ಶಸ್ತ್ರಾದಿ ಸ್ತುತಿಯುಳ್ಳವರಾಗಿ; **ಭೂಯಾಮ** = ಆಗೋಣ. ✣ **ಅಗ್ನೇ** = ಅಗ್ನಿದೇವನೇ! **ದ್ಯುಮ್ನಸ್ಯ** = [ನಮ್ಮ] ಯಶಸ್ಸನ್ನು; **ಸಹಂತಮ್** = ಮೆಟ್ಟುತ್ತಿರುವ[ವೈರಿಯನ್ನು]; **ಪ್ರಾಸಹಾ** = ಬಲಾತ್ಕಾರವಾಗಿ [ಅಡಗಿಸಿದವನಾಗಿ] **ಆ ಭರ** = ನಮ್ಮ ಅಧೀನನನ್ನಾಗಿ ಮಾಡು; **ರಯಿಮ್** = [ಅವನ] ಧನವನ್ನೂ; **ಆ ಭರ** = [ನಮಗೆ] ತಂದುಕೊಡು; [**ದ್ಯುಮ್ನಸ್ಯ** = ಯಶಸ್ವಿಯಾದ ನಮ್ಮ ವೈರಿಯನ್ನು; **ಪ್ರಾಸಹಾ** = ಬಲಾತ್ಕಾರದಿಂದ [ ಸೋಲಿಸಿದವನಾಗಿ]; **ಸಹಂತಮ್** = ಬೇರೆಯವರನ್ನು ಸೋಲಿಸಲು [ಮೀರಿಸಲು] ಸಮರ್ಥವಾದ; **ರಯಿಮ್**= ಧನಾದಿಗಳನ್ನು; **ಆ ಭರ** = ತಂದುಕೊಡು;] **ಯಃ** = ಯಾವ ನೀನು; **ವಿಶ್ವಾಃ ಚರ್‌ಷಣೀಃ** = ಸಮಸ್ತ ಶತ್ರುಸಮೂಹ

---

ಅಗ್ನಿದೇವನೇ! ನಿನ್ನ ಅನುಗ್ರಹಕ್ಕೆ ಪಾತ್ರನಾದ ಆ ಯಜಮಾನನನ್ನು ಸಾವಧಾನವಾದ ಮನಸ್ಸಿನಿಂದ ರಕ್ಷಿಸು. ಮತ್ತೂ ಒಳ್ಳೆಯ ಪುತ್ರ ಪೌತ್ರಾದಿಗಳನ್ನು ಅಪೇಕ್ಷಿಸುವ [ಪಡೆದಿರುವ] ಮನುಷ್ಯಶ್ರೇಷ್ಠನಾದ, ಹೆಚ್ಚಿನ ಶಕ್ತಿಯನ್ನು ಇಚ್ಛಿಸುವ ಯಜಮಾನನಿಗೆ [ಹೆಚ್ಚಿನ ಪ್ರಭಾವಕ್ಕಾಗಿ] ಧನಾದಿಗಳನ್ನು ಕೊಡು. ನಿನ್ನ ಅನುಗ್ರಹವಿದ್ದರೆ ನಾವು ಶ್ರೀಮಂತರಾಗಿ ಯಾಗಗಳನ್ನು ಮಾಡುತ್ತಾ, ಸ್ತೋತ್ರ-ಶಸ್ತ್ರಾದಿರೂಪಗಳಾದ ದೇವಸ್ತುತಿಗಳುಳ್ಳವರಾಗಿ ಆಗುವೆವು. ಇಂತಹ ಪ್ರಭಾವಶಾಲಿಯಾದ ನೀನು ಯಜಮಾನನಿಗೆ ತೇಜಸ್ಸನ್ನು ಕೊಡು.

**ಶ್ಚರ್‌ಷಣೀರಭ್ಯಾಸಾ ವಾಜೇಷು ಸಾಸಹತ್ ॥ ತಮಗ್ನೇ**

**ಪೃತನಾಸಹಗ್ಂ ರಯಿಗ್ಂ ಸಹಸ್ವ ಆ ಭರ ।**

---

ಚರ್‌ಷಣೀಃ। ಅಭೀತಿ । ಆಸಾ । ವಾಜೇಷು । ಸಾಸಹತ್॥ ತಮ್ । ಅಗ್ನೇ । ಪೃತನಾಸಹಮಿತಿ ಪೃತನಾ- ಸಹಮ್ । ರಯಿಮ್ । ಸಹಸ್ವಃ । ಏತಿ । ಭರ ॥

---

| ಮಂತ್ರ | ವಿನಿಯೋಗ |
| --- | --- |
| ತಮಗ್ನೇ..........ಗೋಮತಃ ॥ | ಸಾಹಂತ್ಯೇಷ್ಟಿಯ ಯಾಜ್ಯಾನುವಾಕ್ಯ. |

---

ಗಳನ್ನೂ; ವಾಜೇಷು = [ನಮ್ಮ] ಅನ್ನಾದಿನಿಮಿತ್ತವಾಗಿ; ಆಸಾ = ನಿನ್ನ ಸಮೀಪಸ್ಥಿತಿ ಮಾತ್ರದಿಂದಲೇ; ಅಭಿ ಸಾಸಹತ್ = ಸೋಲಿಸುತ್ತೀಯೋ; [ಅಂತಹ ನೀನು ಶತ್ರುಗಳಿಗಿಂತಲೂ ಶ್ರೇಷ್ಠತೆಯನ್ನು ಕೊಡು]; ಸಹಸ್ವಃ = ಶತ್ರುಗಳನ್ನು ಅಡಗಿಸಬಲ್ಲ ಮಹಾಬಲಶಾಲಿಯೇ! ಅಗ್ನೇ = ಅಗ್ನಿದೇವನೇ! ಪೃತನಾಸಹಮ್ = ಶತ್ರುಸೈನ್ಯಗಳನ್ನು (ಸಮೂಹಗಳನ್ನು) ಅಡಗಿಸಲು ತಕ್ಕುದಾದ; ತಮ್ ರಯಿಮ್ = ಆ ಧನವನ್ನು; ಆ ಭರ = ನಮಗೆ ತಂದುಕೊಡು.

---

ಅಗ್ನಿದೇವನೇ! ನಮ್ಮ ಯಶಸ್ಸಿಗೆ ಅಡ್ಡಿತರುತ್ತಿರುವ ಶತ್ರುಗಳನ್ನು ಸೋಲಿಸಿ [ಕೀಳುಮಾಡಿ] ನಮ್ಮ ಅಧೀನರಾಗುವಂತೆ ಮಾಡು. ಅವರ ಧನವನ್ನೂ ನಮಗೆ ತಂದುಕೊಡು. [ಯಶಸ್ವಿಯಾದ ನಮ್ಮ ವೈರಿಯನ್ನು ಬಲಾತ್ಕಾರದಿಂದ ನಿಗ್ರಹಿಸಿ, ಶತ್ರುಗಳನ್ನು ಮೀರಿ ಬದುಕಲು ತಕ್ಕಷ್ಟು ಧನಾದಿಗಳನ್ನು ತಂದುಕೊಡು.] ನೀನು ನಿನ್ನ ಸನ್ನಿಧಿಮಾತ್ರದಿಂದಲೇ ನಮ್ಮ ಶತ್ರುಗಳೆಲ್ಲರನ್ನೂ ಅಡಗಿಸಿ, ನಮಗೆ ಶತ್ರುಗಳಿಗಿಂತಲೂ ಮಿಗಿಲಾದ ಧನಗಳನ್ನುಂಟುಮಾಡಲು ಸಮರ್ಥನು. ನಿನ್ನ ಅನುಗ್ರಹದಿಂದ ನಮಗೆ ಶ್ರೇಷ್ಠತೆಯು ಬರಲಿ.

**ತ್ವಗ್ಂ ಹಿ ಸತ್ಯೋ ಅದ್ಭುತೋ ದಾತಾ ವಾಜಸ್ಯ ಗೋಮತಃ॥**

**ಉಕ್ಷಾನ್ನಾಯ ವಶಾನ್ನಾಯ ಸೋಮಪೃಷ್ಠಾಯ ವೇಧಸೇ ।**

---

ತ್ವಮ್ । ಹಿ । ಸತ್ಯಃ । ಅದ್ಭುತಃ । ದಾತಾ । ವಾಜಸ್ಯ । ಗೋಮತ ಇತಿ ಗೋ-ಮತಃ॥

ಉಕ್ಷಾನ್ನಾಯೇತ್ಯುಕ್ಷ - ಅನ್ನಾಯ । ವಶಾನ್ನಾಯೇತಿ ವಶಾ - ಅನ್ನಾಯ । ಸೋಮಪೃಷ್ಠಾಯೇತಿ ಸೋಮ-ಪೃಷ್ಠಾಯ । ವೇಧಸೇ ॥

---

| ಮಂತ್ರ | ವಿನಿಯೋಗ |
|---|---|
| ಉಕ್ಷಾನ್ನಾಯ..ವಿಧೇಮಾಗ್ನಯೇ ॥ | ಅನ್ನವದಿಷ್ಟಿಯ ಪುರೋನುವಾಕ್ಯ. [ಅನ್ನಸಮೃದ್ಧಿಯನ್ನು ಬಯಸುವವನಿಗೆ ವಿಹಿತವಾದ ಇಷ್ಟಿ.] |

---

**ತ್ವಮ್** = ನೀನು; **ಸತ್ಯಃ** = ನಾಶರಹಿತನಾಗಿ ಯಾವಾಗಲೂ ಇರತಕ್ಕವನು; **ಅದ್ಭುತಃ** = ಆಶ್ಚರ್ಯಕರವಾದ [ಚರಿತ್ರೆಯುಳ್ಳವನು]; **ಗೋಮತಃ** = ಗೋಸಹಿತವಾದ; **ವಾಜಸ್ಯ** = ಅನ್ನವನ್ನು; **ದಾತಾ** = ಕೊಡುವವನೂ ಆಗಿದ್ದೀಯೆ. [ಇಂತಹ ಪ್ರಭಾವವುಳ್ಳ ನೀನು ನಮಗೆ ಶತ್ರುಗಳಿಗಿಂತಲೂ ಮೇಲಾಗಿರುವಿಕೆಯನ್ನು ಕೊಡು. ✢ **ಉಕ್ಷಾನ್ನಾಯ** = [ಯಾಗವಿಶೇಷದಲ್ಲಿ] ವೃಷಭವನ್ನು ಅನ್ನವನ್ನಾಗಿ ಸ್ವೀಕರಿಸುವ; **ವಶಾನ್ನಾಯ** = [ಬೇರೊಂದು ಯಾಗದಲ್ಲಿ] ಬಂಜೆಯಾದ ಹಸುವನ್ನು ಹವಿಸ್ಸನ್ನಾಗಿ ಹೊಂದಿರುವ; **ಸೋಮಪೃಷ್ಠಾಯ** = ಅನೇಕ ಪೃಷ್ಠಸ್ತೋತ್ರಾದಿಗಳುಳ್ಳ ಸೋಮಯಾಗದಲ್ಲಿ ಸೋಮನನ್ನು ಹವಿಸ್ಸನ್ನಾಗಿ ಸವಿಯುವ; **ವೇಧಸೇ** = [ಉಪಾಸಿಸುವ ಯಜಮಾನರಿಗೆ] ಅನ್ನವನ್ನು ಉಂಟುಮಾಡುವ[ಕೊಡುವ];

---

ಅಗ್ನಿಯೇ! ನೀನು ಶತ್ರುಸಮೂಹವನ್ನು ಅಡಗಿಸಬಲ್ಲವನಾಗಿರುವೆ. ನೀನು ವೈರಿ ಸಮೂಹಗಳನ್ನು ಮೀರಿ ಬಾಳಲು ಬೇಕಾದ ಧನಾದಿಗಳನ್ನು ತಂದುಕೊಡು. ನೀನಾದರೋ ನಾಶರಹಿತನು. ಆಶ್ಚರ್ಯಕರವಾದ ಚರಿತ್ರೆಯುಳ್ಳವನು. ಗೋಧನವನ್ನೂ ಅನ್ನಾದಿಸಮೃದ್ಧಿಯನ್ನೂ ಕೊಡುವವನೂ ಆಗಿರುತ್ತೀಯೆ. ನೀನು ನಮಗೆ ನಮ್ಮ ಹಗೆಗಳಿಗಿಂತಲೂ ಮೇಲಾಗಿರುವಿಕೆಯನ್ನು ಕರುಣಿಸು.

**ಸ್ತೋಮೈರ್ವಿಧೇಮಾಗ್ನಯೇ ॥ ವದ್ಮಾ ಹಿ ಸೂನೋ ಅಸ್ಯ**
**ದ್ಮಸದ್ವಾ ಚಕ್ರೇ ಅಗ್ನಿರ್ಜನುಷಾಜ್ಮಾನ್ನಮ್ । ಸ ತ್ವಂ ನ**

---

ಸ್ತೋಮೈಃ । ವಿಧೇಮ । ಅಗ್ನಯೇ॥ ವದ್ಮಾ । ಹಿ । ಸೂನೋ ಇತಿ । ಅಸಿ । ಅದ್ಮಸ-ದ್ವೇತ್ಯದ್ಮ-ಸದ್ವಾ। ಚಕ್ರೇ । ಅಗ್ನಿಃ। ಜನುಷಾ। ಅಜ್ಮ । ಅನ್ನಮ್॥ ಸಃ । ತ್ವಮ್। ನಃ।

---

| ಮಂತ್ರ | ವಿನಿಯೋಗ |
|---|---|
| ವದ್ಮಾ ಹಿ.........ಕ್ಷೇಷ್ಯಂತಃ ॥ | ಅನ್ನವದಿಷ್ಟಿಯ ಯಾಜ್ಯಾನುವಾಕ್ಯೆ.* |

---

**ಅಗ್ನಯೇ** = ಅಗ್ನಿದೇವನಿಗೆ; **ಸ್ತೋಮೈಃ** = ಸ್ತೋತ್ರಗಳಿಂದ; **ವಿಧೇಮ** = ಪರಿಚರ್ಯೆಯನ್ನು ಮಾಡೋಣ. [ಆ ಅಗ್ನಿದೇವನು ಯಜಮಾನನಿಗೆ ಅನ್ನಸಂಪತ್ತನ್ನು ಕೊಡಲಿ] ✢ **ಸೂನೋ** = ಮಗನಂತೆ ಇಷ್ಟವಾದುದನ್ನು ಮಾಡಿಕೊಡುವವನೇ! [ಸಹಸನ ಮಗನೇ!/ಯಜಮಾನನಿಂದ ಆಧಾನದಲ್ಲಿ ಉತ್ಪನ್ನನಾದವನೇ!/ಎಲ್ಲವನ್ನೂ ಉಂಟುಮಾಡಿಕೊಡುವವನೇ!] [ಅಗ್ನಿದೇವನೇ! ನೀನು] **ವದ್ಮಾ ಹಿ ಅಸಿ** = ವಾಗ್ರೂಪನಾಗಿದ್ದೀಯಷ್ಟೆ.* [ಪ್ರಾಣರೂಪನಾಗಿದ್ದೀಯಷ್ಟೆ.] **ಅದ್ಮಸದ್ವಾ**= ಅನ್ನದಲ್ಲಿ = ಅನ್ನವನ್ನು ಜೀರ್ಣ ಮಾಡಲು ಜಠರದಲ್ಲಿ ಇರುವ; **ಅಗ್ನಿಃ** = ಅಗ್ನಿದೇವನು; [ನಮಗಾಗಿ]; **ಜನುಷಾ** = ಹುಟ್ಟಿನಿಂದಲೇ; **ಅಜ್ಮ** = ಗೃಹವನ್ನೂ; [ಗೃಹಸ್ಥಾಶ್ರಮವನ್ನೂ] **ಅನ್ನಮ್** = ಅನ್ನವನ್ನೂ; **ಚಕ್ರೇ** = ಮಾಡಿದನು [ಮಾಡಿರುತ್ತಾನೆ.]

---

ಅಗ್ನಿದೇವನು ಯಾಗವಿಶೇಷದಲ್ಲಿ ವೃಷಭವನ್ನು ಹವಿಸ್ಸನ್ನಾಗಿ ಸ್ವೀಕರಿಸುತ್ತಾನೆ. ಮತ್ತೊಂದು ಯಾಗವಿಶೇಷದಲ್ಲಿ ಬಂಜೆಯಾದ ಹಸುವನ್ನೇ ಹವಿಸ್ಸನ್ನಾಗಿ ಸವಿಯುತ್ತಾನೆ. ಪೃಷ್ಠಸ್ತೋತ್ರಾದಿಗಳುಳ್ಳ ಸೋಮಯಾಗದಲ್ಲಿ ಸೋಮರೂಪಹವಿಸ್ಸನ್ನು ಆಸ್ವಾದಿಸುತ್ತಾನೆ. ಹೀಗೆಯೇ ಯಾಗ-ಹೋಮಾದಿಗಳಲ್ಲಿ ಬೇರೆ ಬೇರೆಯ ಹವಿಸ್ಸನ್ನೂ ಸ್ವೀಕರಿಸುತ್ತಾನೆ. ಅನ್ನವನ್ನು ಕೊಡತಕ್ಕವನೂ ಅಗ್ನಿಯೇ. ಇಂತಹ ಅಗ್ನಿದೇವನು

---

*ಅನ್ನಾದನಾಗಬೇಕೆನ್ನುವವನಿಗೆ ಹೇಳಿರುವ ಅನ್ನಾದೇಷ್ಟಿಗೂ, ಅನ್ನಪತಿಯಾಗಬೇಕೆನ್ನುವವನಿಗೆ ಹೇಳಿರುವ ಅನ್ನಪತೀಷ್ಟಿಗೂ ಸಹ ಇದು ಮತ್ತು ಹಿಂದಿನ ಮಂತ್ರಗಳೇ ಯಾಜ್ಯಾ-ಪುರೋನುವಾಕ್ಯೆಗಳಾಗುತ್ತವೆ. ಅಥವಾ ಆ ಮಂತ್ರಗಳು ಶಾಖಾಂತರದಲ್ಲಿದ್ದರೆ ಉಪಯೋಗಿಸಿಕೊಳ್ಳಬಹುದು.

***ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ ।** - ಐತರೇಯೋಪನಿಷತ್ I-2-4.

**ಊರ್ಜಸನ ಊರ್ಜಂ ಧಾ ರಾಜೇವ ಜೇರವೃಕೇ ಕ್ಷೇಷ್ಯಂತಃ॥**

**ಅಗ್ನ ಆಯೂಗ್ಂಷಿ [ಆಯೂಗ್ಂಷಿ (೭) ಪವಸ] ಪವಸ**

---

ಊರ್ಜಸನ ಇತ್ಯೂರ್ಜ - ಸನೇ । ಊರ್ಜಮ್ । ಧಾಃ । ರಾಜಾ । ಇವ । ಜೇಃ ।

ಅವೃಕೇ । ಕ್ಷೇಷಿ । ಅಂತಃ ॥ ಅಗ್ನೇ । ಆಯೂಗ್ಂಷಿ (೭) । ಪವಸೇ ।

---

| ಮಂತ್ರ | ವಿನಿಯೋಗ |
|---|---|
| ಅಗ್ನ...........ದುಚ್ಛುನಾಮ್ ॥ | ಪವಮಾನೇಷ್ಟಿಯ ಪುರೋನುವಾಕ್ಯೆ. |

[ದೀರ್ಘರೋಗನಿವಾರಣೆಗಾಗಿಯೂ, ನೇತ್ರಸೌಷ್ಠವಪ್ರಾಪ್ತಿಗಾಗಿಯೂ ವಿಹಿತವಾದ ಇಷ್ಟಿ. ಈ ಇಷ್ಟಿಗೆ ಮೂರು ಹವಿಸ್ಸುಗಳು]

---

**ಊರ್ಜಸನೇ** = ರಸವನ್ನು [ರಸಯುಕ್ತವಾದ ಅನ್ನವನ್ನು ಕೊಡುವ] ಕೊಡುವ [ಅಗ್ನಿಯೇ!]; **ಸಃ ತ್ವಮ್** = ಅಂತಹ ಪ್ರಸಿದ್ಧನಾದ ನೀನು; **ನಃ** = ನಮಗೆ; **ಊರ್ಜಮ್** = ರಸವನ್ನು [ರಸಯುಕ್ತವಾದ ಅನ್ನವನ್ನು] **ಧಾಃ** = ಉಂಟುಮಾಡು; [ನೀನು] **ರಾಜಾ ಇವ** = ರಾಜನಂತೆ; **ಜೇಃ** = ಜಯಿಸು; **ಅವೃಕೇ** = ಹಿಂಸಾದಿದೋಷರಹಿತನಾದ [ಕಾಮಕ್ರೋಧಾದಿ ರಹಿತನಾದ/ಸ್ವಾತ್ಮನಿರತನಾದ] ಯಜಮಾನನಲ್ಲಿ; **ಅಂತಃ** = ಒಳಭಾಗದಲ್ಲಿ [ಹೃದಯದಲ್ಲಿ] **ಕ್ಷೇಷಿ** = [ಅನುಗ್ರಹಾರ್ಥವಾಗಿ] ವಾಸಿಸುತ್ತೀಯೆ; [ನೀನು ಯಜಮಾನನಿಗೆ ಅನ್ನವನ್ನಿತ್ತು ಅನ್ನವಂತನನ್ನಾಗಿಸು] ❖ **ಅಗ್ನೇ** = ಅಗ್ನಿದೇವನೇ!; **ಆಯೂಗ್ಂಷಿ** = [ನಮ್ಮ] ಜೀವನಗಳನ್ನು; **ಪವಸೇ** = ಶುದ್ಧಿಗೊಳಿಸಿ ವೃದ್ಧಿಗೊಳಿಸುತ್ತೀಯೆ;

---

ಯಜಮಾನನನ್ನು ಅನ್ನವಂತನನ್ನಾಗಿ ಮಾಡಲಿ.

ಎಲೈ ಅಗ್ನಿದೇವನೇ! ನೀನು ಮಗನಂತೆ ಯಜಮಾನನಿಗೆ ಬೇಕಾದುದನ್ನು ಮಾಡಿಕೊಡತಕ್ಕವನಾಗಿದ್ದೀಯೆ. [ಸಹಸನ ಮಗನಾಗಿದ್ದೀಯೆ/ಯಜಮಾನನಿಂದ ಆಧಾನದಲ್ಲಿ ಉತ್ಪನ್ನನಾಗಿದ್ದೀಯೆ/ಎಲ್ಲವನ್ನೂ ಉತ್ಪತ್ತಿಮಾಡತಕ್ಕವನಾಗಿದ್ದೀಯೆ.] ನೀನು ವಾಗ್ರೂಪನು. ಅನ್ನದಲ್ಲಿ ಇರುವವನು. [ನೀನು ಜಠರಾಗ್ನಿಯು.] ಇಂತಹ ಅಗ್ನಿಯು

**ಆ ಸುವೋರ್ಜಮಿಷಂ ಚ ನಃ । ಆರೇ ಬಾಧಸ್ವ ದುಚ್ಛುನಾಮ್॥**

**ಅಗ್ನೇ ಪವಸ್ವ ಸ್ವಪಾ ಅಸ್ಮೇ ವರ್ಚಃ ಸುವೀರ್ಯಮ್ ।**

**ದಧತ್ಪೋಷಗ್ಂ ರಯಿಂ ಮಯಿ ॥**

---

ಏತಿ । ಸುವ । ಊರ್ಜಮ್ । ಇಷಮ್ । ಚ । ನಃ ॥ ಆರೇ । ಬಾಧಸ್ವ । ದುಚ್ಛುನಾಮ್॥ ಅಗ್ನೇ । ಪವಸ್ವ । ಸ್ವಪಾ ಇತಿ ಸು-ಅಪಾಃ । ಅಸ್ಮೇ ಇತಿ । ವರ್ಚಃ । ಸುವೀರ್ಯಮಿತಿ ಸು-ವೀರ್ಯಮ್ ॥ ದಧತ್ । ಪೋಷಮ್ । ರಯಿಮ್ । ಮಯಿ ॥

---



| ಮಂತ್ರ | ವಿನಿಯೋಗ |
|---|---|
| ಅಗ್ನೇ......ಮಯಿ ॥ | ಪವಮಾನೇಷ್ಟಿಯ ಯಾಜ್ಯಾನುವಾಕ್ಯೆ. |

---

ನಃ = ನಮಗೆ; **ಊರ್ಜಮ್** = [ಕ್ಷೀರಾದಿ] ರಸವನ್ನೂ; **ಚ** = ಮತ್ತು; **ಇಷಮ್**= ಅನ್ನವನ್ನೂ; **ಆ ಸುವ** = [ನಮಗೆ] ಸಿಕ್ಕುವಂತೆ ಮಾಡು; **ದುಚ್ಛುನಾಮ್** = [ರೋಗಾದಿ] ಉಪದ್ರವಗಳನ್ನು; **ಆರೇ** = ದೂರದಲ್ಲಿ ಇರುವಂತೆ ಮಾಡಿ; **ಬಾಧಸ್ವ** = ಪರಿಹರಿಸು; ❖ **ಅಗ್ನೇ** = ಅಗ್ನಿದೇವನೇ! **ಸ್ವಪಾಃ** = ಶೋಭನಕರ್ಮಗಳುಳ್ಳ ನೀನು; **ಅಸ್ಮೇ** = ನಮ್ಮದಾದ[ನಮಗಾಗಿ]; **ವರ್ಚಃ** = ಬ್ರಹ್ಮವರ್ಚಸವನ್ನೂ; **ಸುವೀರ್ಯಮ್** = ಒಳ್ಳೆಯ ಸಾಮರ್ಥ್ಯವನ್ನೂ; **ಪವಸ್ವ** = ಶೋಧಿಸು [ವೃದ್ಧಿಹೊಂದಿಸು.] **ಮಯಿ** = ನನ್ನಲ್ಲಿ; **ಪೋಷಮ್** = ಪುಷ್ಟಿಯನ್ನೂ; **ರಯಿಮ್** = ಧನವನ್ನೂ; **ದಧತ್** = ಸ್ಥಾಪಿಸು/ಸ್ಥಿರವಾಗಿರುವಂತೆ ಮಾಡು. [ಮಯಿ ಪೋಷಮ್ ರಯಿಂ ದಧತ್ = ಇಟ್ಟು; ವರ್ಚಃ ಸುವೀರ್ಯಂ

---

ಮಾನವನಿಗೆ ಗೃಹವನ್ನೂ [ಗೃಹಸ್ಥಾಶ್ರಮವನ್ನೂ] ಅನ್ನವನ್ನೂ ಉಂಟುಮಾಡುತ್ತಾನೆ. ರಸಯುಕ್ತವಾದ ಅನ್ನವನ್ನು ಕೊಡುವ ಅಗ್ನಿಯು ನಮಗೆ ಅಂತಹ ಅನ್ನವನ್ನು ಕೊಡಲಿ. ಎಲೈ! ಅಗ್ನಿಯೇ! ನೀನು ಸನ್ನಿಧಿಮಾತ್ರದಿಂದಲೇ ರಾಜನಂತೆ ಶತ್ರುಗಳನ್ನು ಜಯಿಸು. ನೀನು ಅನುಗ್ರಹಾರ್ಥವಾಗಿ ಹಿಂಸಾರಹಿತನಾದ[ಕಾಮಕ್ರೋಧಾದಿಗಳಿಲ್ಲದ] ಯಜಮಾನನ ಹೃದಯದಲ್ಲಿ ವಾಸಿಸುತ್ತೀಯೆ. ನೀನು ಯಜಮಾನನನ್ನು ಅನ್ನವಂತನನ್ನಾಗಿ ಮಾಡು.

ಅಗ್ನೇ ಪಾವಕ ರೋಚಿಷಾ ಮಂದ್ರಯಾ ದೇವ ಜಿಹ್ವಯಾ।

ಆ ದೇವಾನ್, ವಕ್ಷಿ ಯಕ್ಷಿ ಚ ॥

---

ಅಗ್ನೇ । ಪಾವಕ । ರೋಚಿಷಾ । ಮಂದ್ರಯಾ। ದೇವ । ಜಿಹ್ವಯಾ ॥ ಏತಿ । ದೇವಾನ್।

ವಕ್ಷಿ । ಯಕ್ಷಿ । ಚ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ............ಚ ॥ | ಪಾವಕೇಷ್ಟ್ಯಾಂ ಪುರೋನುವಾಕ್ಯೆ. |

---

ಚ ಪವಸ್ವ । ಎಂದೂ ಅನ್ವಯ ಮಾಡಬಹುದು.] ∴ ಅಗ್ನೇ = ಅಗ್ನಿದೇವನೇ! ಪಾವಕ = ಶುದ್ಧಿಮಾಡುವವನೇ! ದೇವ = ಪ್ರಕಾಶಮಾನನಾದವನೇ! [ನೀನು] ರೋಚಿಷಾ = ಪ್ರಕಾಶಮಾನವಾದ; ಮಂದ್ರಯಾ = ಮೃದುಮಧುರವಾದ; ಜಿಹ್ವಯಾ = ಮಾತಿನಿಂದ [ನಾಲಿಗೆಯಿಂದ] ದೇವಾನ್ = ದೇವತೆಗಳನ್ನು; ಆ ವಕ್ಷಿ = ಆಹ್ವಾನಿಸು; ಚ = ಮತ್ತು; ಯಕ್ಷಿ = ಯಾಗಮಾಡು.

---

ಅಗ್ನಿದೇವನೇ! ಅನ್ನಾದಿದೋಷಗಳಿಂದ ರೋಗಗಳುಂಟಾಗುತ್ತವೆ. ನೀನು ಆ ದೋಷಗಳನ್ನು ಪರಿಹರಿಸಿ, ಜೀವನವನ್ನು ಶುದ್ಧಿಗೊಳಿಸಿ, ವೃದ್ಧಿಹೊಂದುವಂತೆ ಮಾಡು. ಒಳ್ಳೆಯ ಕ್ಷೀರಾದಿರಸಗಳನ್ನೂ, ಅನ್ನವನ್ನೂ ನಮಗೆ ಒದಗಿಸಿ, ನಮ್ಮ ಉಪದ್ರವಗಳನ್ನು ದೂರದಲ್ಲಿಯೇ ಹೋಗಲಾಡಿಸು. ಹತ್ತಿರಕ್ಕೆ ಬರದಂತೆ ಮಾಡು. ★ ಅಗ್ನಿದೇವನೇ! ನೀನು ಒಳ್ಳೆಯ ಕೆಲಸಗಳನ್ನು ಮಾಡತಕ್ಕವನು. ನಮ್ಮ ಬ್ರಹ್ಮವರ್ಚಸವನ್ನೂ, ಒಳ್ಳೆಯ ಸಾಮರ್ಥ್ಯವನ್ನೂ ಶುದ್ಧವಾಗಿ ವೃದ್ಧಿಹೊಂದುವಂತೆ ಮಾಡು. ನಮ್ಮಲ್ಲಿ ಪುಷ್ಟಿಯನ್ನೂ ಧನವನ್ನೂ ಸ್ಥಾಪಿಸು. ★ ಶೋಧಕನಾದ ಪ್ರಕಾಶಮಾನನಾದ ಅಗ್ನಿದೇವನೇ! ನೀನು ದೇದೀಪ್ಯಮಾನವಾದ ಮೃದುಮಧುರವಾದ ಮಾತಿನಿಂದ ದೇವತೆಗಳನ್ನು ಆಹ್ವಾನಿಸು.*

---

*'ಅಗ್ನಿರ್ವೈ ದೇವಾನಾಗ್ಂ ಹೋತಾ' 'ಅಗ್ನಿಮುಖಾ ವೈ ದೇವಾಃ' ಮೊದಲಾದ ಶ್ರುತಿವಾಕ್ಯಗಳು ಅಗ್ನಿಯು ಯಜ್ಞಕ್ಕೆ ದೇವತೆಗಳನ್ನು ಆಹ್ವಾನಿಸುವವನೆಂದೂ, ದೇವತೆಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಆಹುತಿಗಳನ್ನು ಸಮರ್ಪಿಸುವುದರಿಂದ ದೇವತೆಗಳನ್ನು ಅಗ್ನಿಮುಖರೆಂದೂ ಹೇಳುತ್ತವೆ.

ಸ ನಃ ಪಾವಕ ದೀದಿವೋಽಗ್ನೇ ದೇವಾಗ್ಂ ಇಹಾವಹ ।

ಉಪ ಯಜ್ಞಗ್ಂ ಹವಿಶ್ಚ ನಃ ॥ ಅಗ್ನಿಃ ಶುಚಿವ್ರತತಮಃ

---

ಸಃ । ನಃ । ಪಾವಕ । ದೀದಿವಃ । ಅಗ್ನೇ । ದೇವಾನ್ । ಇಹ । ಏತಿ । ವಹ ॥

ಉಪೇತಿ । ಯಜ್ಞಮ್ । ಹವಿಃ । ಚ । ನಃ ॥ ಅಗ್ನಿಃ । ಶುಚಿವ್ರತತಮ ಇತಿ ಶುಚಿವ್ರತ-ತಮಃ।

---

| ಮಂತ್ರ | ವಿನಿಯೋಗ |
|---|---|
| ಸ ನಃ..............ನಃ ॥ | ಪಾವಕೇಷ್ಟ್ಯಯ ಯಾಜ್ಯಾನುವಾಕ್ಯೆ |
| ಅಗ್ನಿಃ.........ಆಹುತಃ ॥ | ಶುಚೀಷ್ಟ್ಯಯ ಪುರೋನುವಾಕ್ಯೆ. |

---

❖ ಪಾವಕ = ಪರಿಶೋಧಕನೇ! ದೀದಿವಃ = ದೇದೀಪ್ಯಮಾನನೇ! ಅಗ್ನೇ = ಅಗ್ನಿದೇವನೇ! ಸಃ [ತ್ವಮ್] = ಅಂತಹ ಪ್ರಸಿದ್ಧನಾದ ನೀನು; ನಃ = ನಮಗಾಗಿ; ಇಹ = ಈ ಯಾಗಕರ್ಮದಲ್ಲಿ; ದೇವಾನ್ = ದೇವತೆಗಳನ್ನು; ಆ ವಹ = ಆಹ್ವಾನಿಸು; ನಃ = ನಮ್ಮ; ಯಜ್ಞಮ್ = ಯಜ್ಞವನ್ನು; ಚ = ಮತ್ತು; ಹವಿಃ = ಪುರೋಡಾಶಾದಿ ಹವಿಸ್ಸುಗಳನ್ನೂ; ಉಪ [ದೇವಾನ್ ವಹ] = ದೇವತೆಗಳಿಗೆ ದೊರೆಯುವಂತೆ ಮಾಡು.[ದೇವತೆಗಳ ಸಮೀಪಕ್ಕೆ ಒಯ್ಯು] ❖ ಅಗ್ನಿಃ = ಅಗ್ನಿದೇವನು; ಶುಚಿವ್ರತತಮಃ = [ದಾಹ, ಪಾಕ, ಪ್ರಕಾಶಗಳೆಂಬ ಮೂರು ವಿಧವಾದ ಶುದ್ಧಿಯ ಆಚರಣೆಯುಳ್ಳವನಾದುದರಿಂದ] ಅತ್ಯಂತ ಶುದ್ಧನು;

---

ನಿನ್ನಲ್ಲಿ ಕೊಟ್ಟ ಆಹುತಿಗಳನ್ನು ದೇವತೆಗಳಿಗೆ ಕೊಡು. ಯಜಮಾನನ ಇಷ್ಟವನ್ನು ಪೂರ್ಣ ಮಾಡು.

ಪರಿಶೋಧಕನೂ, ದೀಪ್ಯಮಾನನೂ ಆಗಿರುವ ಅಗ್ನಿದೇವನೇ! ನೀನು ನಮಗಾಗಿ ಯಜ್ಞಕ್ಕೆ ದೇವತೆಗಳನ್ನು ಹವಿಃಸ್ವೀಕಾರಕ್ಕೆ ಬರುವಂತೆ ಆಹ್ವಾನಿಸು. ನಮ್ಮ ಯಜ್ಞವನ್ನೂ ಹವಿಸ್ಸುಗಳನ್ನೂ ದೇವತೆಗಳ ಸಮೀಪಕ್ಕೆ ಒಯ್ಯುವವನಾಗು. ನಿನ್ನ ಮತ್ತು ದೇವತೆಗಳ ಅನುಗ್ರಹದಿಂದ ಯಜಮಾನನ ಕಾಮವು ಫಲಿಸಲಿ.

**ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ ॥**

**ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ ।**

---

ಶುಚಿಃ । ವಿಪ್ರಃ । ಶುಚಿಃ । ಕವಿಃ ॥ ಶುಚಿಃ । ರೋಚತೇ । ಆಹುತ ಇತ್ಯಾ-ಹುತಃ ॥

ಉದಿತಿ । ಅಗ್ನೇ । ಶುಚಯಃ । ತವ । ಶುಕ್ರಾಃ । ಭ್ರಾಜಂತಃ । ಈರತೇ ॥

---

| ಮಂತ್ರ | ವಿನಿಯೋಗ |
|---|---|
| ಉದಗ್ನೇ..........ಅರ್ಚಯಃ । | ಶುಚೀಷ್ಯಯ ಯಾಜ್ಯಾನುವಾಕ್ಯೆ. |

---

ವಿಪ್ರಃ = ಬ್ರಾಹ್ಮಣನಾದುದರಿಂದ; ಶುಚಿಃ = [ಮತ್ತೂ] ಶುದ್ಧನು; ಕವಿಃ = ಕವಿಯಾದುದರಿಂದ; ಶುಚಿಃ = [ಇನ್ನೂ] ಶುಚಿಯು; ಈತನು; [ಆತನು] ಆಹುತಃ = ಹೋಮಮಾಡಲ್ಪಟ್ಟವನಾಗಿ; ಶುಚಿಃ = ಜ್ವಾಲೆಯುಳ್ಳವನಾಗಿ; ರೋಚತೇ = ಪ್ರಕಾಶಿಸುತ್ತಾನೆ. ❖ ಅಗ್ನೇ = ಅಗ್ನಿದೇವನೇ! ಶುಚಯಃ = ಶುದ್ಧವಾದ; ಶುಕ್ರಾಃ = ನಿನ್ನ ಕಿರಣಗಳು [ಜ್ವಾಲೆಗಳು]; ಭ್ರಾಜಂತಃ = ಬೆಳಗುತ್ತಾ; ಉತ್ ಈರತೇ = ಮೇಲಕ್ಕೆ ಹೋಗುತ್ತವೆ;

---

ದಾಹ, ಪಾಕ, ಪ್ರಕಾಶಗಳು ವಸ್ತುಗಳನ್ನು ಶುದ್ಧಿಗೊಳಿಸುತ್ತವೆ. ಬೆಂಕಿಗೆ ಹಾಕುವುದರಿಂದ, ಬೇಯಿಸುವುದರಿಂದ, ಸೂರ್ಯಾದಿಗಳ ಪ್ರಕಾಶದಲ್ಲಿ ಹಾಕುವುದರಿಂದ ವಸ್ತು ಶುದ್ಧಿಯಾಗುವುದೆಂದು ಶಾಸ್ತ್ರಗಳಲ್ಲಿ ಹೇಳಿದೆ.

ಈ ಮೂರು ವಿಧವಾದ ಶುದ್ಧಿವ್ರತಾಚರಣೆಯ ಕ್ರಮಗಳೂ ಅಗ್ನಿಯಲ್ಲಿ ಇರುವುದರಿಂದ ಆತನು ಅತ್ಯಂತ ಶುದ್ಧನು. ಬ್ರಾಹ್ಮಣನಾದುದರಿಂದ [ಬ್ರಾಹ್ಮಣೋ ಹ್ಯೇಷಃ] ಇನ್ನೂ ಶುದ್ಧನು. ಕವಿಯಾದುದರಿಂದ [ ವಾಙ್ಮಯವನ್ನು ಸ್ವಾಧೀನ ಪಡಿಸಿಕೊಂಡವನು, ತತ್ತ್ವಗಳನ್ನು ತಿಳಿದವನು] ಮತ್ತಷ್ಟು ಪರಿಶುದ್ಧನು. ಆಹುತಿಗಳನ್ನು ಸ್ವೀಕರಿಸಿ ಜ್ವಲಿಸುತ್ತಿರುವ ಈತನು ಮತ್ತಷ್ಟು ಪ್ರಕಾಶಮಾನನಾಗಿದ್ದಾನೆ.

ಅಗ್ನಿದೇವನೇ! ಶುದ್ಧವಾದ ನಿನ್ನ ರಶ್ಮಿಗಳು ಜ್ವಲಿಸುತ್ತಾ ಮೇಲಕ್ಕೆ ಹೋಗುತ್ತವೆ.

## ತವ ಜ್ಯೋತೀಗ್ಂಷ್ಯರ್ಚಯಃ ॥ ೧೪ - 31 ॥

[ಪುರುನಿಷ್ಠಃ ಪುರ್ವಣೀಕ ಭರಾಭಿ ವಯೋಭ್ರಿರ್ಯ ಆಯೂಗ್ಂಷಿ

ವಿಪ್ರಃ ಶುಚಿಶ್ಚತುರ್ದಶ ಚ ॥]

---

ತವ । ಜ್ಯೋತೀಗ್ಂಷಿ । ಅರ್ಚಯಃ ॥

---

**ತವ** = ನಿನ್ನ; **ಅರ್ಚಯಃ** = ಪೂಜಕರು; **ಜ್ಯೋತೀಗ್ಂಷಿ** = ಬೆಳಗುವ ದೇವತಾರೂಪಗಳನ್ನು [ಹೊಂದುತ್ತಾರೆ.] [ಜ್ಯೋತೀರೂಪವಾದ ಆದಿತ್ಯಾದಿ ಸ್ವರೂಪಗಳೂ ನಿನ್ನವೇ. ಕಾಂತಿಗಳೂ ನಿನ್ನವೇ.]

---

ನಿನ್ನನ್ನು ಪೂಜಿಸುವವರು ಜ್ಯೋತೀರೂಪವಾದ ದೇವತಾಸ್ವರೂಪವನ್ನು ಪಡೆಯುತ್ತಾರೆ. ಸೂರ್ಯಾದಿಜ್ಯೋತೀರೂಪಗಳೂ ನಿನ್ನವೇ ಆಗಿವೆ. ಕಿರಣಗಳೆಲ್ಲವೂ ನಿನ್ನವೇ ಆಗಿವೆ.



ದೇವಸ್ಯ ರಕ್ಷೋಹಣೋ ವಿಭೂಸ್ತ್ವಗ್ಂ ಸೋಮಾತ್ಯನ್ಯಾನಗಾಂ

ಪೃಥಿವ್ಯಾ ಇಷೇ ತ್ವಾ ಕನ್ಯದ್ರೇ ಪಾತ್ರೇ ಸಂತೇ ಸಮುದ್ರಗ್ಂ

ಹವಿಷ್ಮತೀರ್ ಹೃದೇ ತ್ವಮಗ್ನೇ ರುದ್ರಶ್ಚತುರ್ದಶ ॥ ೧೪ ॥

ದೇವಸ್ಯ ಗಮಧ್ಯೇ ಹವಿಷ್ಮತೀಃ ಪವಸ ಏಕತ್ರಿಗ್ಂಶತ್ ॥ 31 ॥

॥ ದೇವಸ್ಯಾರ್ಚಯಃ ॥

ಹರಿಃ ಓಂ । ಶ್ರೀಕೃಷ್ಣಾರ್ಪಣಮಸ್ತು.

ಇತಿ ಪ್ರಥಮಕಾಂಡೇ ತೃತೀಯಃ ಪ್ರಶ್ನಃ

## ವಿನಿಯೋಗ ಸಂಗ್ರಹ

ತ್ವಂ[1-2] ಯಾಜ್ಯಾ ರುದ್ರವದ್ಯಾಗೇ ಹ್ಯಗ್ನಿಃ[3-4] ಸುರಭಿಸಂಯುತೇ।
ಅಕ್ರನ್[5-6] ಕ್ಷಾಮಯುಜೇ ತುಭ್ಯಂ[7-8] ಕಾಮಿನಿ ಶ್ರೇಷ್ಠಮಿ[9-10]ಮಿತ್ಯಸೌ॥
ಯವಿಷ್ಠಯುತ ಆಯುಷ್ಟೇ[11-12] ಆಯುಷ್ಮತಿ ತಥೋಪರಿ ।
ಜಾತವೇದಯುತೇ ತಸ್ಮೈ[13-14] ಶುಚೀ[15-16] ರುಕ್ಮಯುತೇ ತಥಾ ॥
[17-18]ಆ ಯತ್ತೇಜೋಯುತೇ ಹ್ಯಗ್ನೇ[19-20] ಸಾಂಹತ್ಯಗುಣಸಂಯುತೇ ।
[21-22]ಉಕ್ಷಾನ್ನಸಂಯುತೇ ಹ್ಯಗ್ನೇ[23-24]ಪವಮಾನಯುತೇ ತಥಾ ॥
[25-26]ಅಗ್ನೇ ಪಾವಕವತ್ಯಗ್ನಿಃ [27-28] ಶುಚಾವಷ್ಟೌ ಚ ವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 28



ಒಂದೊಂದು ಇಷ್ಟಿಗೆ ಎರಡು ಮಂತ್ರಗಳು ಯಾಜ್ಯಾ-ಪುರೋನುವಾಕ್ಯಗಳಾಗಿವೆ. ಒಟ್ಟು 14 ಇಷ್ಟಿಗಳಿವೆ.

| | | | |
|---|---|---|---|
| 1 | ಆಗ್ನೇಯ ರುದ್ರವತೀಷ್ಟಿ | 8 | ರುಕ್ಮಮೇಷ್ಟಿ |
| 2 | ಸುರಭಿಮತೀಷ್ಟಿ | 9 | ತೇಜಸ್ಕಾಮೇಷ್ಟಿ |
| 3 | ಕ್ಷಾಮವತೀಷ್ಟಿ | 10 | ಸಾಂಹತ್ಯೇಷ್ಟಿ |
| 4 | ಕಾಮೇಷ್ಟಿ | 11 | ಅನ್ನವದಿಷ್ಟಿ/ಅನ್ನಾದೇಷ್ಟಿ/ಅನ್ನಪತೀಷ್ಟಿ* |
| 5 | ಯವಿಷ್ಠೇಷ್ಟಿ | 12 | ಪವಮಾನೇಷ್ಟಿ |
| 6 | ಆಯುಷ್ಕಾಮೇಷ್ಟಿ | 13 | ಪಾವಕೇಷ್ಟಿ |
| 7 | ಜಾತವೇದಸೇಷ್ಟಿ | 14 | ಶುಚೀಷ್ಟಿ. |

*ಈ ಮೂರೂ ಇಷ್ಟಿಗಳಿಗೂ ಯಾಜ್ಯಾ-ಪುರೋನುವಾಕ್ಯಗಳು ಒಂದೇ ಜೋಡಿ.

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

ಈ ಅನುವಾಕದಲ್ಲಿ ಮೀಮಾಂಸಾವಿಶೇಷವು ಇಲ್ಲ.

## ಆ) ಛಂದಸ್ಸು

ಈ ಅನುವಾಕದಲ್ಲಿ ಎಲ್ಲವೂ ಛಂದೋಬದ್ಧವಾದ ಋಕ್‌ಗಳಾಗಿದ್ದು ಬೇರೆ ಬೇರೆ ಛಂದಸ್ಸಿನಲ್ಲಿವೆ. ಈ ಕೆಳಗಿನ ಕೋಷ್ಟಕದಿಂದ ಮಂತ್ರಗಳ ಛಂದಸ್ಸುಗಳನ್ನು ತಿಳಿಯಬಹುದು.

| | ಮಂತ್ರಗಳು | ಛಂದಸ್ಸು |
|---|---|---|
| ೧. | ತ್ವಮಗ್ನೇ.........ತ್ಮನಾ । | ತ್ರಿಷ್ಟುಪ್ |
| ೨. | ಆ ವೋ.............ಕೃಣುಧ್ವಮ್ । | ತ್ರಿಷ್ಟುಪ್ |
| ೩. | ಅಗ್ನಿರ್ ಹೋತಾ......ಇದ್ಧಃ । | ತ್ರಿಷ್ಟುಪ್ |
| ೪. | ಸಾಧ್ವೀಮಕಃ.........ಅದ್ಯ । | ತ್ರಿಷ್ಟುಪ್ |
| ೫. | ಆಕ್ರಂದದಗ್ನಿಃ.....ಭಾತ್ಯಂತಃ । | ತ್ರಿಷ್ಟುಪ್ |
| ೬. | ತ್ವೇ ವಸೂನಿ..........ಪಾವಕೇ । | ತ್ರಿಷ್ಟುಪ್ |
| ೭. | ತುಭ್ಯಂ ತಾ.........ಯೇಮಿರೇ । | ಗಾಯತ್ರೀ |
| ೮. | ಅಶ್ಯಾಮ ತಂ........ತೇ । | ತ್ರಿಷ್ಟುಪ್ |
| ೯. | ಶ್ರೇಷ್ಠಂ.........ರಯಿಮ್ । | ಗಾಯತ್ರೀ |
| ೧೦. | ಸ ಶ್ವಿತಾನಃ........ಭರ್ವನ್ । | ತ್ರಿಷ್ಟುಪ್ |
| ೧೧. | ಆಯುಷ್ಟೇ.......ಸುವಾಮಿ ತೇ । | ಅನುಷ್ಟುಪ್ |
| ೧೨. | ಆಯುರ್ದಾ......ರಕ್ಷತಾದಿಮಮ್ । | ತ್ರಿಷ್ಟುಪ್ |
| ೧೩. | ತಸ್ಮೈ ತೇ.......ಸುಷ್ಟುತಿಮ್ । | ಗಾಯತ್ರೀ |



| | | |
|---|---|---|
| ೧೪. | ದಿವಸ್ಪರಿ........ಸ್ವಾಧೀಃ । | ತ್ರಿಷ್ಟುಪ್ |
| ೧೫. | ಶುಚಿಃ ಪಾವಕ.....ಘೃತೇಭಿರಾಹುತಃ । | ಗಾಯತ್ರೀ |
| ೧೬. | ದೃಶಾನೋ.......ಸುರೇತಾಃ । | ತ್ರಿಷ್ಟುಪ್ |
| ೧೭. | ಆ ಯದಿಷೇ.......ಸೂದಯಚ್ಚ । | ತ್ರಿಷ್ಟುಪ್ |
| ೧೮. | ಸ ತೇಜೀಯಸಾ.......ವಸ್ವಃ । | ತ್ರಿಷ್ಟುಪ್ |
| ೧೯. | ಅಗ್ನೇ.......ಸಾಸಹತ್ । | ಅನುಷ್ಟುಪ್ |
| ೨೦. | ತಮಗ್ನೇ......ಗೋಮತಃ । | ಅನುಷ್ಟುಪ್ |
| ೨೧. | ಉಕ್ಷಾನ್ನಾಯ.......ವಿಧೇಮಾಗ್ನಯೇ । | ಗಾಯತ್ರೀ |
| ೨೨. | ವದ್ಮಾಹಿ ಸೂನೋ.....ಕ್ಷೇಷ್ಯಂತಃ । | ತ್ರಿಷ್ಟುಪ್ |
| ೨೩. | ಅಗ್ನ ಆಯೂಗ್‌ಂಷಿ....ದುಚ್ಛುನಾಮ್ । | ಗಾಯತ್ರೀ |
| ೨೪. | ಅಗ್ನೇ ಪವಸ್ವ......ಮಯಿ । | ಗಾಯತ್ರೀ |
| ೨೫. | ಅಗ್ನೇ ಪಾವಕ.......ಯಕ್ಷಿ ಚ । | ಗಾಯತ್ರೀ |
| ೨೬. | ಸ ನಃ ಪಾವಕ........ನಃ । | ಗಾಯತ್ರೀ |
| ೨೭. | ಅಗ್ನಿಃ ಶುಚಿವ್ರತತಮಃ.......ಆಹುತಃ । | ಗಾಯತ್ರೀ |
| ೨೮. | ಉದಗ್ನೇ........ಜ್ಯೋತಿಷಗ್‌ಂಷ್ಯರ್ಚಯಃ । | ಗಾಯತ್ರೀ |



---

ಶ್ರೀ ವೇದಪರಬ್ರಹ್ಮಣೇ ನಮಃ

ಶ್ರೀ ಶಾರದಾಗುರುಗಣಪತಿಭ್ಯೋ ನಮಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಚತುರ್ಥಃ ಪ್ರಶ್ನಃ

ಆ ದದೇ ಗ್ರಾವಾಸ್ಯಧ್ವರಕೃದ್ದೇವೇಭ್ಯೋ ಗಂಭೀರಮಿಮಮಧ್ವರಂ ಕೃಧ್ಯು
ತ್ತಮೇನ ಪವಿನೇಂದ್ರಾಯ ಸೋಮಗ್‍ಂ ಸುಷುತಂ ಮಧುಮಂತಂ
ಪಯಸ್ವಂತಂ ವೃಷ್ಟಿವನಿಮಿಂದ್ರಾಯ ತ್ವಾ ವೃತ್ರಘ್ನ ಇಂದ್ರಾಯ ತ್ವಾ
ವೃತ್ರತುರ ಇಂದ್ರಾಯ ತ್ವಾಽಭಿಮಾತಿಘ್ನ ಇಂದ್ರಾಯ ತ್ವಾಽಽದಿತ್ಯವತ
ಇಂದ್ರಾಯ ತ್ವಾ ವಿಶ್ವದೇವ್ಯಾವತೇ ಶ್ವಾತ್ರಾಃ ಸ್ಥ ವೃತ್ರತುರೋ ರಾಧೋ
ಗೂರ್ತಾ ಅಮೃತಸ್ಯ ಪತ್ನೀಸ್ತಾ ದೇವೀರ್ದೇವತ್ರೇಮಂ ಯಜ್ಞಂ ಧತ್ತೋ
ಪಹೂತಾಃ ಸೋಮಸ್ಯ ಪಿಬತೋಪಹೂತೋ ಯುಷ್ಮಾಕಗ್‍ಂ [ಯುಷ್ಮಾ
ಕಮ್ (೧)] ಸೋಮಃ ಪಿಬತು ಯತ್ತೇ ಸೋಮ ದಿವಿ ಜ್ಯೋತಿರ್ಯ
ತ್ಪೃಥಿವ್ಯಾಂ ಯದುರಾವಂತರಿಕ್ಷೇ ತೇನಾಸ್ಮೈ ಯಜಮಾನಾಯೋರು

ರಾಯಾ ಕೃಧ್ಯಧಿ ದಾತ್ರೇ ವೋಚೋ ಧಿಷಣೇ ವೀಡೂ ಸತೀ ವೀಡಯೇಥಾ

ಮೂರ್ಜಂ ದಧಾಥಾಮೂರ್ಜಂ ಮೇ ಧತ್ತಂ ಮಾ ವಾಗ್ಂ ಹಿಗ್ಂಸಿಷಂ

ಮಾ ಮಾ ಹಿಗ್ಂಸಿಷ್ಟಂ ಪ್ರಾಗಪಾಗುದಗಧರಾಕ್ತಾಸ್ತ್ವಾ ದಿಶ ಆ ಧಾ-

ವಂತ್ವಂಬ ನಿಷ್ಪರ। ಯತ್ತೇ ಸೋಮಾದಾಭ್ಯಂ ನಾಮ ಜಾಗೃವಿ ತಸ್ಮೈ

ತೇ ಸೋಮ ಸೋಮಾಯ ಸ್ವಾಹಾ ॥ ೧-2 ॥

[ಯುಷ್ಮಾಕಗ್ಂ ಸ್ವರ ಯತ್ತೇ ನವ ಚ॥]



ವಾಚಸ್ಪತಯೇ ಪವಸ್ವ ವಾಜಿನ್ವೃಷಾ ವೃಷ್ಣೋ ಅಗ್ಂಶುಭ್ಯಾಂ ಗಭಸ್ತಿ

ಪೂತೋ ದೇವೋ ದೇವಾನಾಂ ಪವಿತ್ರಮಸಿ ಯೇಷಾಂ ಭಾಗೋಽಸಿ

ತೇಭ್ಯಸ್ತ್ವಾ ಸ್ವಾಂಕೃತೋಽಸಿ ಮಧುಮತೀರ್ನ ಇಷಸ್ಕೃಧಿ ವಿಶ್ವೇಭ್ಯ

ಸ್ತ್ವೇಂದ್ರಿಯೇಭ್ಯೋ ದಿವ್ಯೇಭ್ಯಃ ಪಾರ್ಥಿವೇಭ್ಯೋ ಮನಸ್ತ್ವಾಷ್ಟು

ರ್ವಂತರಿಕ್ಷಮನ್ವಿಹಿ ಸ್ವಾಹಾ ತ್ವಾ ಸುಭವಸ್ಸೂರ್ಯಾಯ ದೇವೇಭ್ಯಸ್ತ್ವಾ

ಮರೀಚಿಪೇಭ್ಯ ಏಷ ತೇ ಯೋನಿಃ ಪ್ರಾಣಾಯ ತ್ವಾ ॥ ೨-3 ॥

[ವಾಚಸ್ಪತ್ಯ ಚತ್ವಾರಿಗ್ಂಶತ್ ॥]

ಉಪಯಾಮಗೃಹೀತೋಽಸ್ಯ೦ತರ್ಯಚ್ಛ ಮಘವನ್ಪಾಹಿ ಸೋಮಮು

ರುಷ್ಯ ರಾಯಃ ಸಮಿಷೋ ಯಜಸ್ವಾಂತಸ್ತೇ ದಧಾಮಿ ದ್ಯಾವಾಪೃಥಿವೀ

ಅಂತರುರ್ವಂತರಿಕ್ಷಗ್ಂ ಸಜೋಷಾ ದೇವೈರವರೈಃ ಪರೈಶ್ಚಾಂತರ್ಯಾಮೇ

ಮಘವನ್ಮಾದಯಸ್ವ ಸ್ವಾಂಕೃತೋಽಸಿ ಮಧುಮತೀರ್ನ ಇಷಸ್ಕೃಧಿ

ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ ದಿವ್ಯೇಭ್ಯಃ ಪಾರ್ಥಿವೇಭ್ಯೋ ಮನ

ಸ್ತ್ವಾಽಷ್ಟೂರ್ವಂತರಿಕ್ಷಮನ್ವಿಹಿ ಸ್ವಾಹಾ ತ್ವಾ ಸುಭವಸ್ಸೂರ್ಯಾಯ ದೇವೇ

ಭ್ಯಸ್ತ್ವಾ ಮರೀಚಿಪೇಭ್ಯ ಏಷ ತೇ ಯೋನಿರಪಾನಾಯ ತ್ವಾ ||೩-4||



[ದೇವೇಭ್ಯಃ ಸಪ್ತ ಚ||]

ಆ ವಾಯೋ ಭೂಷ ಶುಚಿಪಾ ಉಪ ನಸ್ಸಹಸ್ರಂ ತೇ ನಿಯುತೋ

ವಿಶ್ವವಾರ |ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವದಧಿಷೇ

ಪೂರ್ವಪೇಯಮ್ || ಉಪಯಾಮಗೃಹೀತೋಽಸಿ ವಾಯವೇ ತ್ವೇಂದ್ರ

ವಾಯೂ ಇಮೇ ಸುತಾಃ| ಉಪ ಪ್ರಯೋಭಿರಾಗತಮಿಂದವೋ ವಾಮು-

-ಶಂತಿ ಹಿ । ಉಪಯಾಮಗೃಹೀತೋಽಸೀಂದ್ರವಾಯುಭ್ಯಾಂ ತ್ವೈಷ ತೇ ಯೋನಿಸ್ಸಜೋಷಾಭ್ಯಾಂ ತ್ವಾ ॥ ೪-5 ॥

[ಆ ವಾಯೋ ತ್ರಿಚತ್ವಾರಿಗ್‌ಂಶತ್]

ಅಯಂ ವಾಂ ಮಿತ್ರಾವರುಣಾ ಸುತಸ್ಸೋಮ ಋತಾವೃಧಾ । ಮಮೇದಿಹ ಶ್ರುತಗ್‌ಂ ಹವಮ್ ॥ ಉಪಯಾಮಗೃಹೀತೋಽಸಿ ಮಿತ್ರಾವರುಣಾಭ್ಯಾಂ ತ್ವೈಷ ತೇ ಯೋನಿರ್ ಋತಾಯುಭ್ಯಾಂ ತ್ವಾ॥ ೫-6 ॥



[ಅಯಂ ವಾಂ ಏಗ್‌ಂಶತಿಃ ।]

ಯಾ ವಾಂ ಕಶಾ ಮಧುಮತ್ಯಶ್ವಿನಾ ಸೂನೃತಾವತೀ । ತಯಾ ಯಜ್ಞಂ ಮಿಮಿಕ್ಷತಮ್ ॥ ಉಪಯಾಮಗೃಹೀತೋಽಸ್ಯಶ್ವಿಭ್ಯಾಂ ತ್ವೈಷ ತೇ ಯೋನಿರ್ಮಾಧ್ವೀಭ್ಯಾಂ ತ್ವಾ ॥ ೬-7 ॥

[ಯಾ ವಾಮಷ್ಟಾದಶ ।]

ಪ್ರಾತರ್ಯುಜಾ ವಿಮುಚ್ಯೇಥಾಮಶ್ವಿನಾವೇಹ ಗಚ್ಛತಮ್ । ಅಸ್ಯ
ಸೋಮಸ್ಯ ಪೀತಯೇ । ಉಪಯಾಮಗೃಹೀತೋಽಸ್ಯಶ್ವಿಭ್ಯಾಂ ತ್ವೈಷ ತೇ
ಯೋನಿರಶ್ವಿಭ್ಯಾಂ ತ್ವಾ ॥ ೭-8 ॥

[ಪ್ರಾತರ್ಯುಜಾವೇಕಾನ್ನವಿಗ್ಂಶತಿಃ]

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಜ್ಯೋತಿರ್ಜರಾಯೂ ರಜಸೋ
ವಿಮಾನೇ । ಇಮಮಪಾಗ್ಂ ಸಂಗಮೇ ಸೂರ್ಯಸ್ಯ ಶಿಶುಂ ನ ವಿಪ್ರಾ
ಮತಿಭೀ ರಿಹಂತಿ ॥ ಉಪಯಾಮಗೃಹೀತೋಽಸಿ ಶಂಡಾಯ ತ್ವೈಷ ತೇ
ಯೋನಿರ್ವೀರತಾಂ ಪಾಹಿ ॥ ೭-9 ॥

[ಅಯಂ ವೇನಃ ಪಂಚವಿಗ್ಂಶತಿಃ॥]

ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ ಜ್ಯೇಷ್ಠತಾತಿಂ ಬರ್ಹಿಷದಗ್ಂ
ಸುವರ್ವಿದಂ ಪ್ರತೀಚೀನಂ ವೃಜನಂ ದೋಹಸೇ ಗಿರಾಽಽಶುಂ ಜಯಂತ
ಮನು ಯಾಸು ವರ್ಧಸೇ । ಉಪಯಾಮಗೃಹೀತೋಽಸಿ ಮರ್ಕಾಯ

ತ್ವೈಷ ತೇ ಯೋನಿಃ ಪ್ರಜಾಃ ಪಾಹಿ || ೯-10 ||

[ತಗ್ಂ ಷಡ್ವಿಗ್ಂಶತಿಃ|]

ಯೇ ದೇವಾ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶ ಸ್ಥಾಪ್ಸುಷದೋ
ಮಹಿನ್ಯೈಕಾದಶ ಸ್ಥ ತೇ ದೇವಾ ಯಜ್ಞಮಿಮಂ ಜುಷಧ್ವಮುಪಯಾಮ
ಗೃಹೀತೋಽಸ್ಯಾಗ್ರಯಣೋಽಸಿ ಸ್ವಾಗ್ರಯಣೋ ಜಿನ್ವ ಯಜ್ಞಂ ಜಿನ್ವ
ಯಜ್ಞಪತಿಮಭಿ ಸವನಾ ಪಾಹಿ ವಿಷ್ಣುಸ್ತ್ವಂ ಪಾತು ವಿಶಂ ತ್ವಂ
ಪಾಹೀಂದ್ರಿಯೇಣೈಷ ತೇ ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ||೧೦-11||



[ಯೇ ದೇವಾಶ್ಚತ್ವಾರಿಗ್ಂಶಚ್ಚ ||]

ತ್ರಿಗ್ಂಶತ್ತ್ರಯಶ್ಚ ಗಣಿನೋ ರುಜಂತೋ ದಿವಗ್ಂ ರುದ್ರಾಃ ಪೃಥಿವೀಂ
ಚ ಸಚಂತೇ | ಏಕಾದಶಾಸೋ ಅಪ್ಸುಷದಸ್ಸುತಗ್ಂ ಸೋಮಂ ಜುಷಂ
ತಾಗ್ಂ ಸವನಾಯ ವಿಶ್ವೇ || ಉಪಯಾಮಗೃಹೀತೋಽಸ್ಯಾಗ್ರಯ
ಣೋಽಸಿ ಸ್ವಾಗ್ರಯಣೋ ಜಿನ್ವ ಯಜ್ಞಂ ಜಿನ್ವ ಯಜ್ಞಪತಿಮಭಿ ಸವನಾ

ಪಾಹಿ ವಿಷ್ಣುಸ್ತ್ವಾಂ ಪಾತು ವಿಶಂ ತ್ವಂ ಪಾಹೀಂದ್ರಿಯೇಣೈಷ ತೇ

ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೧೧-12 ॥

[ತ್ರಿಗ್ಂಶದ್ದ್ವಿಚತ್ವಾರಿಗ್ಂಶತ್ ॥]

ಉಪಯಾಮಗೃಹೀತೋಽಸೀಂದ್ರಾಯ ತ್ವಾ ಬೃಹದ್ವತೇ ವಯಸ್ವತ

ಉಕ್ಥಾಯುವೇ ಯತ್ತ ಇಂದ್ರ ಬೃಹದ್ವಯಸ್ತಸ್ಮೈ ತ್ವಾ ವಿಷ್ಣವೇ ತ್ವೈಷ

ತೇ ಯೋನಿರಿಂದ್ರಾಯ ತ್ವೋಕ್ಥಾಯುವೇ ॥ ೧೩-14 ॥

[ಉಪಯಾಮಗೃಹೀತೋ ದ್ವಾವಿಗ್ಂಶತಿಃ ॥]

ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರಮೃತಾಯ ಜಾತ

ಮಗ್ನಿಮ್ । ಕವಿಗ್ಂ ಸಮ್ರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ

ಜನಯಂತ ದೇವಾಃ॥ ಉಪಯಾಮಗೃಹೀತೋಽಸ್ಯಗ್ನಯೇ ತ್ವಾ ವೈಶ್ವಾನ

ರಾಯ ಧ್ರುವೋಽಸಿ ಧ್ರುವಕ್ಷಿತಿರ್ಧ್ರುವಾಣಾಂ ಧ್ರುವತಮೋಽಚ್ಯುತಾ

ನಾಮಚ್ಯುತಕ್ಷಿತ್ತಮ ಏಷ ತ್ತೇ ಯೋನಿರಗ್ನಯೇ ತ್ವಾ ವೈಶ್ವಾನರಾಯ

॥ ೧೩-14 ॥

[ಮೂರ್ಧಾನಂ ಪಂಚತ್ರಿಗ್ಂಶತ್ ॥]

ಮಧುಶ್ಚ ಮಾಧವಶ್ಚ ಶುಕ್ರಶ್ಚ ಶುಚಿಶ್ಚ ನಭಶ್ಚ ನಭಸ್ಯಶ್ಚೇಷಶ್ಚೋರ್ಜಶ್ಚ

ಸಹಶ್ಚ ಸಹಸ್ಯಶ್ಚ ತಪಶ್ಚ ತಪಸ್ಯಶ್ಚೋಪಯಾಮಗೃಹೀತೋಽಸಿ ಸಗ್ಂ

ಸರ್ಪೋಽಸ್ಯಗ್ಂಹಸ್ಪತ್ಯಾಯ ತ್ವಾ ॥ ೧೪-15 ॥



[ಮಧುಸ್ತ್ರಿಗ್ಂಶತ್ ॥]

ಇಂದ್ರಾಗ್ನೀ ಆ ಗತಗ್ಂ ಸುತಂ ಗೀರ್ಭಿರ್ನಭೋ ವರೇಣ್ಯಮ್ । ಅಸ್ಯ

ಪಾತಂ ಧಿಯೇಷಿತಾ ॥ ಉಪಯಾಮಗೃಹೀತೋಽಸೀಂದ್ರಾಗ್ನಿಭ್ಯಾಂ

ತ್ವೈಷ ತೇ ಯೋನಿರಿಂದ್ರಾಗ್ನಿಭ್ಯಾಂ ತ್ವಾ ॥ ೧೫-16 ॥

[ಇಂದ್ರಾಗ್ನೀ ವಿಗ್ಂಶತಿಃ ॥]

ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆಗತ । ದಾಶ್ವಾಗ್ಂಸೋ ದಾಶುಷಃ ಸುತಮ್ । ಉಪಯಾಮಗೃಹೀತೋಽಸಿ ವಿಶ್ವೇಭ್ಯಸ್ತ್ವಾ ದೇವೇಭ್ಯ ಏಷ ತೇ ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೧೭-17 ॥

[ಓಮಾಸೋ ವಿಗ್ಂಶತಿಃ।]



ಮರುತ್ವಂತಂ ವೃಷಭಂ ವಾವೃಧಾನಮಕವಾರಿಂ ದಿವ್ಯಗ್ಂ ಶಾಸಮಿಂದ್ರಮ್ । ವಿಶ್ವಾಸಾಹಮವಸೇ ನೂತನಾಯೋಗ್ರಗ್ಂ ಸಹೋದಾಮಿಹ ತಗ್ಂ ಹುವೇಮ । ಉಪಯಾಮಗೃಹೀತೋಽಸೀಂದ್ರಾಯ ತ್ವಾ ಮರುತ್ವತ ಏಷ ತೇ ಯೋನಿರಿಂದ್ರಾಯ ತ್ವಾ ಮರುತ್ವತೇ ॥ ೧೮-18 ॥

[ಮರುತ್ವಂತಗ್ಂ ಷಡ್ವಿಗ್ಂಶತಿಃ ।]

ಇಂದ್ರ ಮರುತ್ವ ಇಹ ಪಾಹಿ ಸೋಮಂ ಯಥಾ ಶಾರ್ಯಾತೇ ಅಪಿಬಃ ಸುತಸ್ಯ । ತವ ಪ್ರಣೀತೀ ತವ ಶೂರ ಶರ್ಮನ್ನಾ ವಿವಾಸಂತಿ ಕವಯಃ

सुयज्ञाः। उपयामगृहीतोऽसीन्द्राय त्वा मरुत्वत एष

ते योनिरिन्द्राय त्वा मरुत्वते ॥ १८-19 ॥

[इन्द्रैकान्नत्रिंशत् ॥]

मरुत्वाँ इन्द्र वृषभो रणाय पिबा सोममनुष्वधं

मदाय । आ सिञ्चस्व जठरे मध्व ऊर्मिं त्वं राजासि

प्रदिवस्सुतानाम् ॥ उपयामगृहीतोऽसीन्द्राय त्वा

मरुत्वत एष ते योनिरिन्द्राय त्वा मरुत्वते ॥१९-20॥



[मरुत्वानेकान्नत्रिंशत् ॥]

महाँ इन्द्रो य ओजसा पर्जन्यो वृष्टिमाँ इव।

स्तोमैर्वत्सस्य वावृधे ॥ उपयामगृहीतोऽसि महेन्

द्राय त्वैष ते योनिर्महेन्द्राय त्वा ॥ २०-21 ॥

[महानेकान्नविंशतिः ॥]

ಮಹಾಗ್ಂ 'ಇಂದ್ರೋ ನೃವದಾಚರ್ಷಣಿಪ್ರಾ ಉತ ದ್ವಿಬರ್ಹಾ
ಅಮಿನಃ ಸಹೋಭಿಃ । ಅಸ್ಮದ್ರಿಯಗ್ವಾವೃಧೇ ವೀರ್ಯಾಯೋರುಃ ಪೃಥುಸ್ಸು
ಕೃತಃ ಕರ್ತೃಭಿರ್ಭೂತ್ । ಉಪಯಾಮಗೃಹೀತೋಽಸಿ ಮಹೇಂದ್ರಾಯ
ತ್ವೈಷ ತೇ ಯೋನಿರ್ಮಹೇಂದ್ರಾಯ ತ್ವಾ ॥ ೨೧-22 ॥

[ಮಹಾನ್ನೃವತ್ಷಡ್ವಿಗ್ಂಶತಿಃ ।]



ಕದಾ ಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ। ಉಪೋಪೇನ್ನು ಮಘ
ವನ್ಭೂಯ ಇನ್ನು ತೇ ದಾನಂ ದೇವಸ್ಯ ಪೃಚ್ಯತೇ ॥ ಉಪಯಾಮಗೃ
ಹೀತೋಽಸ್ಯಾದಿತ್ಯೇಭ್ಯಸ್ತ್ವಾ । ಕದಾ ಚನ ಪ್ರಯುಚ್ಛಸ್ಯುಭೇ ನಿಪಾಸಿ
ಜನ್ಮನೀ । ತುರೀಯಾಽಽದಿತ್ಯ ಸವನಂ ತ ಇಂದ್ರಿಯಮಾತಸ್ಥಾವಮೃತಂ
ದಿವಿ ॥ ಯಜ್ಞೋ ದೇವಾನಾಂ ಪ್ರತ್ಯೇತಿ ಸುಮ್ನಮಾದಿತ್ಯಾಸೋ ಭವತಾ
ಮೃಡಯಂತಃ । ಆ ವೋಽರ್ವಾಚೀ ಸುಮತಿರ್ವವೃತ್ಯಾದಗ್ಂಹೋ
ಶ್ಚಿದ್ಯಾ ವರಿವೋವಿತ್ತರಾಸತ್ ॥ ವಿವಸ್ವ ಆದಿತ್ಯೈಷ ತೇ ಸೋಮಪೀಥ
ಸ್ತೇನ ಮಂದಸ್ವ ತೇನ ತೃಪ್ಯ ತೃಪ್ಯಾಸ್ಮ ತೇ ವಯಂ ತರ್ಪಯಿತಾರೋ

ಯಾ ದಿವ್ಯಾ ವೃಷ್ಟಿಸ್ತಯಾ ತ್ವಾ ಶ್ರೀಣಾಮಿ ॥ ೨೨-23 ॥

[ವಸ್ತ್ರಪ್ತವಿಗ್ಂಶತಿಶ್ಚ]

ವಾಮಮದ್ಯ ಸವಿತರ್ವಾಮಮು ಶ್ವೋ ದಿವೇದಿವೇ ವಾಮಮಸ್ಮಭ್ಯಗ್ಂ ಸಾವೀಃ । ವಾಮಸ್ಯ ಹಿ ಕ್ಷಯಸ್ಯ ದೇವ ಭೂರೇರಯಾ ಧಿಯಾ ವಾಮ ಭಾಜಃ ಸ್ಯಾಮ ॥ ಉಪಯಾಮಗೃಹೀತೋಽಸಿ ದೇವಾಯ ತ್ವಾ ಸವಿತ್ರೇ ॥ ೨೩-24 ॥



[ವಾಮಂ ಚತುರ್ವಿಗ್ಂಶತಿಃ ।]

ಅದಬ್ಧೇಭಿಃ ಸವಿತಃ ಪಾಯುಭಿಷ್ಟ್ವಗ್ಂ ಶಿವೇಭಿರದ್ಯ ಪರಿಪಾಹಿ ನೋ ಗಯಮ್ । ಹಿರಣ್ಯಜಿಹ್ವಸ್ಸುವಿತಾಯ ನವ್ಯಸೇ ರಕ್ಷಾ ಮಾಕಿರ್ನೋ ಅಘಶಗ್ಂಸ ಈಶತ ॥ ಉಪಯಾಮಗೃಹೀತೋಽಸಿ ದೇವಾಯ ತ್ವಾ ಸವಿತ್ರೇ ॥ ೨೪-25 ॥

[ಅದಬ್ಧೇಭಿಸ್ತ್ರಯೋವಿಗ್ಂಶತಿಃ।]

श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श್ರೀ: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री:

ಹಿರಣ್ಯಪಾಣಿಮೂತಯೇ ಸವಿತಾರಮುಪಹ್ವಯೇ । ಸ ಚೇತ್ತಾ ದೇವತಾ ಪದಮ್॥ ಉಪಯಾಮಗೃಹೀತೋಽಸಿ ದೇವಾಯ ತ್ವಾ ಸವಿತ್ರೇ ॥೨೫-26॥

[ಹಿರಣ್ಯಪಾಣಿಂ ಚತುರ್ದಶ ।]

ಸುಶರ್ಮಾಽಸಿ ಸುಪ್ರತಿಷ್ಠಾನೋ ಬೃಹದುಕ್ಷೇ ನಮ ಏಷ ತೇ ಯೋನಿ ರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೨೬-27 ॥

[ಸುಶರ್ಮಾ ದ್ವಾದಶ ।]



ಬೃಹಸ್ಪತಿಸುತಸ್ಯ ತ ಇಂದೋ ಇಂದ್ರಿಯಾವತಃ ಪತ್ನೀವಂತಂ ಗ್ರಹಂ ಗೃಹ್ಣಾಮ್ಯಗ್ನಾ3ಇ ಪತ್ನೀವಾ3ಃ ಸಜೂರ್ದೇವೇನ ತ್ವಷ್ಟ್ರಾಸೋಮಂ ಪಿಬ ಸ್ವಾಹಾ ॥೨೭-28॥

[ಬೃಹಸ್ಪತಿಸುತಸ್ಯ ಪಂಚದಶ ।]

ಹರಿರಸಿ ಹಾರಿಯೋಜನೋ ಹರ್ಯೋಃ ಸ್ಥಾತಾ ವಜ್ರಸ್ಯ ಭರ್ತಾ ಪೃಶ್ನೇಃ

ಪ್ರೇತಾ ತಸ್ಯ ತೇ ದೇವ ಸೋಮೇಷ್ಟಯಜುಷಃ ಸ್ತುತಸ್ತೋಮಸ್ಯ

ಶಸ್ತೋಕ್ಥಸ್ಯ ಹರಿವಂತಂ ಗ್ರಹಂ ಗೃಹ್ಣಾಮಿ ಹರೀಃ ಸ್ಥ ಹರ್ಯೋರ್ಧಾನಾಃ

ಸಹ ಸೋಮಾ ಇಂದ್ರಾಯ ಸ್ವಾಹಾ ॥ ೨೮-29 ॥

[ಹರಿಃ ಷಡ್ವಿಗ್‌ಂಶತಿಃ ॥]

ಅಗ್ನ ಆಯೂಗ್‌ಂಷಿ ಪವಸ ಆ ಸುವೋರ್ಜಮಿಷಂ ಚ ನಃ। ಆರೇ

ಬಾಧಸ್ವ ದುಚ್ಛುನಾಮ್ ॥ ಉಪಯಾಮಗೃಹೀತೋऽಸ್ಯಗ್ನಯೇ ತ್ವಾ

ತೇಜಸ್ವತ ಏಷ ತೇ ಯೋನಿರಗ್ನಯೇ ತ್ವಾ ತೇಜಸ್ವತೇ ॥ ೨೯-30 ॥

[ಅಗ್ನ ಆಯೂಗ್‌ಂಷಿ ತ್ರಯೋವಿಗ್‌ಂಶತಿಃ ॥]

ಉತ್ತಿಷ್ಠನ್ನೋಜಸಾ ಸಹ ಪೀತ್ವಾ ಶಿಪ್ರೇ ಅವೇಪಯಃ। ಸೋಮಮಿಂದ್ರ

ಚಮೂ ಸುತಮ್ ॥ ಉಪಯಾಮಗೃಹೀತೋऽಸೀಂದ್ರಾಯ ತ್ವೌಜಸ್ವತ

ಏಷ ತೇ ಯೋನಿರಿಂದ್ರಾಯ ತ್ವೌಜಸ್ವತೇ ॥ ೩೦-31 ॥

[ಉತ್ತಿಷ್ಠನ್ನೇಕವಿಗ್‌ಂಶತಿಃ ॥]

ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ। ವಿಶ್ವಮಾಭಾಸಿ ರೋಚನಮ್। ಉಪಯಾಮಗೃಹೀತೋಽಸಿ ಸೂರ್ಯಾಯ ತ್ವಾ ಭ್ರಾಜಸ್ವತ ಏಷ ತೇ ಯೋನಿಃ ಸೂರ್ಯಾಯ ತ್ವಾ ಭ್ರಾಜಸ್ವತೇ ॥ ೩೧-32 ॥

[ತರಣಿರ್ವಿಗ್ಂಶತಿಃ ।]



ಆ ಪ್ಯಾಯಸ್ವ ಮದಿಂತಮ ಸೋಮ ವಿಶ್ವಾಭಿರೂತಿಭಿಃ। ಭವಾ ನಃ ಸಪ್ರಥಸ್ತಮಃ ॥ ೩೨-33 ॥

[ಆಪ್ಯಾಯಸ್ವ ನವ ।]

ಈಯುಷ್ಟೇ ಯೇ ಪೂರ್ವತರಾಮಪಶ್ಯನ್ವ್ಯುಚ್ಛಂತೀಮುಷಸಂ ಮರ್ತ್ಯಾಸಃ। ಅಸ್ಮಾಭಿರೂ ನು ಪ್ರತಿಚಕ್ಷ್ಯಾಭೂದೋ ತೇ ಯಂತಿ ಯೇ ಅಪರೀಷು ಪಶ್ಯಾನ್ ॥ ೩೩-34 ॥

[ಈಯುರೇಕಾನ್ನವಿಗ್ಂಶತಿಃ]

ಜ್ಯೋತಿಷ್ಮತೀಂ ತ್ವಾ ಸಾದಯಾಮಿ ಜ್ಯೋತಿಷ್ಕೃತಂ ತ್ವಾ ಸಾದಯಾಮಿ
ಜ್ಯೋತಿರ್ವಿದಂ ತ್ವಾ ಸಾದಯಾಮಿ ಭಾಸ್ವತೀಂ ತ್ವಾ ಸಾದಯಾಮಿ ಜ್ವಲಂ
ತೀಂ ತ್ವಾ ಸಾದಯಾಮಿ ಮಲ್ಮಲಾಭವಂತೀಂ ತ್ವಾ ಸಾದಯಾಮಿ ದೀಪ್ಯ
ಮಾನಾಂ ತ್ವಾ ಸಾದಯಾಮಿ ರೋಚಮಾನಾಂ ತ್ವಾ ಸಾದಯಾಮ್ಯಜಸ್ರಾಂ
ತ್ವಾ ಸಾದಯಾಮಿ ಬೃಹಜ್ಜ್ಯೋತಿಷಂ ತ್ವಾ ಸಾದಯಾಮಿ ಬೋಧಯಂತೀಂ
ತ್ವಾ ಸಾದಯಾಮಿ ಜಾಗ್ರತೀಂ ತ್ವಾ ಸಾದಯಾಮಿ ॥ ೩೫-35 ॥

[ಜ್ಯೋತಿಷ್ಮತೀಗ್ಂ ಷಟ್ತ್ರಿಗ್ಂಶತ್ ।]



ಪ್ರಯಾಸಾಯ ಸ್ವಾಹಾಽಽಯಾಸಾಯ ಸ್ವಾಹಾ ವಿಯಾಸಾಯ ಸ್ವಾಹಾ
ಸಂಯಾಸಾಯ ಸ್ವಾಹೋದ್ಯಾಸಾಯ ಸ್ವಾಹಾಽವಯಾಸಾಯ ಸ್ವಾಹಾ
ಶುಚೇ ಸ್ವಾಹಾ ಶೋಕಾಯ ಸ್ವಾಹಾ ತಪ್ಯತ್ವೈ ಸ್ವಾಹಾ ತಪತೇ ಸ್ವಾಹಾ
ಬ್ರಹ್ಮಹತ್ಯಾಯೈ ಸ್ವಾಹಾ ಸರ್ವಸ್ಮೈ ಸ್ವಾಹಾ ॥ ೩೬-36 ॥

[ಪ್ರಯಾಸಾಯ ಚತುರ್ವಿಗ್ಂಶತಿಃ ।]

ಚಿತ್ತಗ್ಂ ಸಂತಾನೇನ ಭವಂ ಯಕ್ನಾ ರುದ್ರಂ ತನಿಮ್ನಾ ಪಶುಪತಿಗ್ಗ್ಂ ಸ್ಥೂಲಹೃದಯೇನಾಗ್ನಿಗ್ಂ ಹೃದಯೇನ ರುದ್ರಂ ಲೋಹಿತೇನ ಶರ್ವಂ ಮತಸ್ನಾಭ್ಯಾಂ ಮಹಾದೇವಮಂತಃ ಪಾರ್ಶ್ವೇನೌಷಿಷ್ಠಹನಗ್ಂ ಶಿಂಗೀನಿ ಕೋಶ್ಯಾಭ್ಯಾಮ್ ॥ ೩೬-37 ॥

[ಚಿತ್ತಮಷ್ಟಾದಶ ।]



ಆ ತಿಷ್ಠ ವೃತ್ರಹನ್ರಥಂ ಯುಕ್ತಾ ತೇ ಬ್ರಹ್ಮಣಾ ಹರೀ । ಅರ್ವಾಚೀನಗ್ಂ ಸು ತೇ ಮನೋ ಗ್ರಾವಾ ಕೃಣೋತು ವಗ್ನುನಾ ॥ ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ॥ ೩೭-38 ॥

[ಆ ತಿಷ್ಠ ಷಡ್ವಿಗ್ಂಶತಿಃ ।]

ಇಂದ್ರಮಿದ್ಧರೀ ವಹತೋಽಪ್ರತಿಧೃಷ್ಟಶವಸಮೃಷೀಣಾಂ ಚ ಸ್ತುತೀರುಪ ಯಜ್ಞಂ ಚ ಮಾನುಷಾಣಾಮ್ ॥ ಉಪಯಾಮಗೃಹೀತೋಽಸೀಂದ್ರಾಯ

ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ||೩೮-39||

[ಇಂದ್ರಮಿತ್ರಯೋವಿಗ್ಂಶತಿಃ ||]

ಅಸಾವಿ ಸೋಮ ಇಂದ್ರ ತೇ ಶವಿಷ್ಠ ಧೃಷ್ಣವಾಗಹಿ । ಆ ತ್ವಾ ಪೃಣಕ್ತ್ವಿಂದ್ರಿಯಗ್ಂ ರಜಃ ಸೂರ್ಯಂ ನ ರಶ್ಮಿಭಿಃ || ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ || ೩೯-40 ||



[ಅಸಾವಿ ಸಪ್ತವಿಗ್ಂಶತಿಃ ||]

ಸರ್ವಸ್ಯ ಪ್ರತಿಶೀವರೀ ಭೂಮಿಸ್ತ್ವೋಪಸ್ಥ ಆಽಧಿತ । ಸ್ಯೋನಾಽಸ್ಮೈ ಸುಷದಾ ಭವ ಯಚ್ಛಾಽಸ್ಮೈ ಶರ್ಮ ಸಪ್ರಥಾಃ|| ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ || ೪೦-41 ||

[ಸರ್ವಸ್ಯ ಷಡ್ವಿಗ್ಂಶತಿಃ ||]

ಮಹಾಗ್ಂ ಇಂದ್ರೋ ವಜ್ರಬಾಹುಃ ಷೋಡಶೀ ಶರ್ಮ ಯಚ್ಛತು । ಸ್ವಸ್ತಿ ನೋ ಮಘವಾ ಕರೋತು ಹಂತು ಪಾಪ್ಮಾನಂ ಯೋಽಸ್ಮಾನ್ದ್ವೇಷ್ಟಿ ॥ ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೪೧-42 ॥

[ಮಹಾನ್ಷಡ್ವಿಗ್ಂಶತಿಃ ।]

ಸಜೋಷಾ ಇಂದ್ರ ಸಗಣೋ ಮರುದ್ಭಿಸ್ಸೋಮಂ ಪಿಬ ವೃತ್ರಹಞ್ಛೂರ ವಿದ್ವಾನ್ । ಜಹಿ ಶತ್ರೂಗ್ಂರಪ ಮೃಧೋ ನುದಸ್ವಾಥಾಭಯಂ ಕೃಣುಹಿ ವಿಶ್ವತೋ ನಃ ॥ ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೪೨-43॥

[ಸಜೋಷಾಸ್ತ್ರಿಗ್ಂಶತ್।]

ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ ॥ ಚಿತ್ರಂ ದೇವಾನಾಮುದಗಾದನೀಕಂ ಚಕ್ಷು-

ಮಿತ್ರಸ್ಯ ವರುಣಸ್ಯಾಗ್ನೇಃ । ಆಽಽಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್‍ಂ

ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ॥ ಅಗ್ನೇ ನಯ ಸುಪಥಾ ರಾಯೇ

ಅಸ್ಮಾನ್, ವಿಶ್ವಾನಿ ದೇವ ವಯುನಾನಿ ವಿದ್ವಾನ್ । ಯುಯೋಧ್ಯ

ಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥

ದಿವಂ ಗಚ್ಛ ಸುವಃ ಪತ ರೂಪೇಣ [ರೂಪೇಣ (೧) ವೋ ರೂಪ]ವೋ

ರೂಪಮಭ್ಯೈಮಿ ವಯಸಾ ವಯಃ । ತುಥೋ ವೋ ವಿಶ್ವವೇದಾ ವಿ

ಭಜತು ವರ್‌ಷಿಷ್ಠೇ ಅಧಿ ನಾಕೇ । ಏತತ್ತೇ ಅಗ್ನೇ ರಾಧ ಐತಿ ಸೋಮ

ಚ್ಯುತಂ ತನ್ಮಿತ್ರಸ್ಯ ಪಥಾ ನಯರ್ತಸ್ಯ ಪಥಾ ಪ್ರೇತ ಚಂದ್ರದಕ್ಷಿಣಾ

ಯಜ್ಞಸ್ಯ ಪಥಾ ಸುವಿತಾ ನಯಂತೀರ್ಬ್ರಾಹ್ಮಣಮದ್ಯ ರಾಧ್ಯಾಸಮೃ

ಷಿಮಾರ್‌ಷೇಯಂ ಪಿತೃಮಂತಂ ಪೈತೃಮತ್ಯಗ್‍ಂ ಸುಧಾತುದಕ್ಷಿಣಂ ವಿ

ಸುವಃ ಪಶ್ಯ ವ್ಯಂತರಿಕ್ಷಂ ಯತಸ್ವ ಸದಸ್ಯೈರಸ್ಮದ್ದಾತ್ರಾ ದೇವತ್ರಾ ಗಚ್ಛತ

ಮಧುಮತೀಃ ಪ್ರದಾತಾರಮಾ ವಿಶತಾನವಹಾಯಾಸ್ಮಾನ್ದೇವಯಾನೇನ

ಪಥೇತ ಸುಕೃತಾಂ ಲೋಕೇ ಸೀದತ ತನ್ನಸ್ಸಗ್ಗ್‍ಂಸ್ಕೃತಮ್ ॥೪೩-45॥

[ರೂಪೇಣ ಸದಸ್ಯೈರಷ್ಟಾದಶ ಚ ।]

ಧಾತಾ ರಾತಿಃ ಸವಿತೇದಂ ಜುಷಂತಾಂ ಪ್ರಜಾಪತಿರ್ನಿಧಿಪತಿರ್ನೋ

ಅಗ್ನಿಃ। ತ್ವಷ್ಟಾ ವಿಷ್ಣುಃ ಪ್ರಜಯಾ ಸಗ್ಂರರಾಣೋ ಯಜಮಾನಾಯ

ದ್ರವಿಣಂ ದಧಾತು॥ ಸಮಿಂದ್ರ ಣೋ ಮನಸಾ ನೇಷಿ ಗೋಭಿಸ್ಸಗ್ಂ

ಸೂರಿಭಿರ್ಮಘವನ್ಥ್ಸಗ್ಗ್ಂ ಸ್ವಸ್ತ್ಯಾ। ಸಂ ಬ್ರಹ್ಮಣಾ ದೇವಕೃತಂ ಯದಸ್ತಿ

ಸಂ ದೇವಾನಾಗ್ಂ ಸುಮತ್ಯಾ ಯಜ್ಞಿಯಾನಾಮ್॥ ಸಂ ವರ್ಚಸಾ

ಪಯಸಾ ಸಂ ತನೂಭಿರಗನ್ಮಹಿ ಮನಸಾ ಸಗ್ಂ ಶಿವೇನ। ತ್ವಷ್ಟಾ ನೋ

ಅತ್ರ ವರಿವಃ ಕೃಣೋತ್ವ [ಕೃಣೋತು (೧) ಅನು] ನುಮಾರ್ಷ್ಟು ತನುವೋ

ಯದ್ವಿಲಿಷ್ಟಮ್ ॥ ಯದದ್ಯ ತ್ವಾ ಪ್ರಯತಿ ಯಜ್ಞೇ ಅಸ್ಮಿನ್ನಗ್ನೇ

ಹೋತಾರಮವೃಣೀಮಹೀಹ। ಋಧಗಯಾಡೃಧಗುತಾಶಮಿಷ್ಠಾಃ ಪ್ರಜಾ

ನನ್, ಯಜ್ಞಮುಪಯಾಹಿ ವಿದ್ವಾನ್॥ ಸ್ವಗಾ ವೋ ದೇವಾಃ ಸದನ

ಮಕರ್ಮ ಯ ಆಜಗ್ಮ ಸವನೇದಂ ಜುಷಾಣಾಃ ॥ ಜಕ್ಷಿವಾಗ್ಂಸಃ ಪಪಿ

ವಾಗ್ಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ॥ ಯಾನಾವಹ

ಉಶತೋ ದೇವ ದೇವಾನ್ತಾನ್ [೨] ಪ್ರೇರಯ ಸ್ವೇ ಅಗ್ನೇ ಸಧಸ್ಥೇ।

ವಹಮಾನಾ ಭರಮಾಣಾ ಹವೀಗ್ಂಷಿ ವಸುಂ ಘರ್ಮಂ ದಿವಮಾತಿಷ್ಠ

ತಾನು ॥ ಯಜ್ಞ ಯಜ್ಞಂ ಗಚ್ಛ ಯಜ್ಞಪತಿಂ ಗಚ್ಛ ಸ್ವಾಂ ಯೋನಿಂ ಗಚ್ಛ ಸ್ವಾಹೈಷ ತೇ ಯಜ್ಞೋ ಯಜ್ಞಪತೇ ಸಹಸೂಕ್ತವಾಕಃ ಸುವೀರಃ ಸ್ವಾಹಾ ದೇವಾ ಗಾತುವಿದೋ ಗಾತುಂ ವಿತ್ವಾ ಗಾತುಮಿತ ಮನಸಸ್ಪತ ಇಮಂ ನೋ ದೇವ ದೇವೇಷು ಯಜ್ಞಗ್ಂ ಸ್ವಾಹಾ ವಾಚಿ ಸ್ವಾಹಾ ವಾತೇ ಧಾಃ ॥ ೪೪-48॥

[ಕೃಣೋತು ತಾನ್ತ್ಸ್ವಾ ಚತ್ವಾರಿಗ್ಂಶಚ್ಚ ।]



ಉರುಗ್ಂ ಹಿ ರಾಜಾ ವರುಣಶ್ಚಕಾರ ಸೂರ್ಯಾಯ ಪಂಥಾಮನ್ವೇತವಾ ಉ। ಅಪದೇ ಪಾದಾ ಪ್ರತಿಧಾತವೇಽಕರುತಾಪವಕ್ತಾ ಹೃದಯಾವಿಧಶ್ಚಿತ್॥ ಶತಂ ತೇ ರಾಜನ್ಭಿಷಜಸ್ಸಹಸ್ರಮುರ್ವೀ ಗಂಭೀರಾ ಸುಮತಿಷ್ಟೇ ಅಸ್ತು। ಬಾಧಸ್ವ ದ್ವೇಷೋ ನಿರ್‌ಋತಿಂ ಪರಾಚೈಃ ಕೃತಂ ಚಿದೇನಃ ಪ್ರಮುಮುಗ್ಧ್ಯಸ್ಮತ್ ॥ ಅಭಿಷ್ಠಿತೋ ವರುಣಸ್ಯ ಪಾಶೋಽಗ್ನೇರನೀಕಮಪ ಆ ವಿವೇಶ । ಅಪಾಂ ನಪಾತ್ಪ್ರತಿರಕ್ಷನ್ನಸುರ್ಯಂ ದಮೇದಮೇ [೧] ಸಮಿಧಂ ಯಕ್ಷ್ಯಗ್ನೇ । ಪ್ರತಿ ತೇ ಜಿಹ್ವಾ ಘೃತಮುಚ್ಚರಣ್ಯೇತ್ಸಮುದ್ರೇ ತೇ

ಹೃದಯಮಪ್ಸ್ವ, ತಃ । ಸಂ ತ್ವಾ ವಿಶಂತ್ವೋಷಧೀರುತಾಽಽಪೋ ಯಜ್ಞಸ್ಯ ತ್ವಾ ಯಜ್ಞಪತೇ ಹವಿರ್ಭಿಃ॥ ಸೂಕ್ತವಾಕೇ ನಮೋವಾಕೇ ವಿಧೇಮಾವ ಭೃಥ ನಿಚಙ್ಕುಣ ನಿಚೇರುರಸಿ ನಿಚಙ್ಕುಣಾವ ದೇವೈರ್ದೇವಕೃತಮೇನೋಽ ಯಾಡವ ಮರ್ತ್ಯೈರ್ಮರ್ತ್ಯಕೃತಮುರೋರಾ ನೋ ದೇವ ರಿಷಸ್ಪಾಹಿ ಸುಮಿತ್ರಾ ನ ಆಪ ಓಷಧಯಃ [ಓಷಧಯಃ (೨) ಸಂತು ದುರ್ಮಿತ್ರಾಃ] ಸಂತು ದುರ್ಮಿತ್ರಾಸ್ತಸ್ಮೈ ಭೂಯಾಸುರ್ಯೋಽಸ್ಮಾನ್ದ್ವೇಷ್ಟಿ ಯಂ ಚ ವಯಂ ದ್ವಿಷ್ಮೋ ದೇವೀರಾಪ ಏಷ ವೋ ಗರ್ಭಸ್ತಂ ವಸ್ಸು ಪ್ರೀತಗ್ಂ ಸುಭೃತಮಕರ್ಮ ದೇವೇಷು ನಸ್ಸುಕೃತೋ ಬ್ರೂತಾತ್ಪ್ರತಿ ಯುತೋ ವರುಣಸ್ಯ ಪಾಶಃ ಪ್ರತ್ಯಸ್ತೋ ವರುಣಸ್ಯ ಪಾಶ ಏಧೋಽಸ್ಯೇ ಧಿಷೀಮಹಿ ಸಮಿದಸಿ ತೇಜೋಽಸಿ ತೇಜೋ ಮಯಿ ಧೇಹ್ಯಪೋ ಅನ್ವಚಾರಿ ಷಗ್ಂ ರಸೇನ ಸಮಸೃಕ್ಷ್ಮಹಿ। ಪಯಸ್ವಾಗ್ಂ ಅಗ್ನ ಆಗಮಂ ತಂ ಮಾ ಸಗ್ಂಸೃಜ ವರ್ಚಸಾ ॥ ೪೫-51 ॥

[ದಮೇದಮ ಓಷಧಯ ಆ ಷಟ್ಚ ।]

ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಮರ್ತ್ಯಂ ಮರ್ತ್ಯೋ
ಜೋಹವೀಮಿ। ಜಾತವೇದೋ ಯಶೋ ಅಸ್ಮಾಸು ಧೇಹಿ ಪ್ರಜಾಭಿರಗ್ನೇ
ಅಮೃತತ್ವಮಶ್ಯಾಮ್ ॥ ಯಸ್ಮೈ ತ್ವಗ್ಂ ಸುಕೃತೇ ಜಾತವೇದ ಉ
ಲೋಕಮಗ್ನೇ ಕೃಣವಃ ಸ್ಯೋನಮ್ । ಅಶ್ವಿನಗ್ಂ ಸ ಪುತ್ರಿಣಂ
ವೀರವಂತಂ ಗೋಮಂತಗ್ಂ ರಯಿಂ ನಶತೇ ಸ್ವಸ್ತಿ ॥ ತ್ವೇ ಸು
ಪುತ್ರ ಶವಸೋಽವೃತ್ರನ್ಕಾಮಕಾತಯಃ। ನ ತ್ವಾಮಿಂದ್ರಾತಿರಿಚ್ಯತೇ ॥
ಉಕ್ಥಉಕ್ಥೇ ಸೋಮ ಇಂದ್ರಂ ಮಮಾದ ನೀಥೇನೀಥೇ ಮಘವಾನಗ್ಂ
[ಮಘವಾನಮ್ (೧) ಸುತಾಸಃ] ಸುತಾಸಃ। ಯದೀಗ್ಂ ಸಬಾಧಃ ಪಿತರಂ
ನ ಪುತ್ರಾಸ್ಸಮಾನದಕ್ಷಾ ಅವಸೇ ಹವಂತೇ ॥ ಅಗ್ನೇ ರಸೇನ ತೇಜಸಾ
ಜಾತವೇದೋ ವಿರೋಚಸೇ । ರಕ್ಷೋಹಾಽಮೀವಚಾತನಃ ॥ ಅಪೋ
ಅನ್ವಚಾರಿಷಗ್ಂ ರಸೇನ ಸಮಸೃಕ್ಷ್ಮಹಿ ।ಪಯಸ್ವಾಗ್ಂ ಅಗ್ನ ಆಗಮಂ
ತಂ ಮಾ ಸಗ್ಂಸೃಜ ವರ್ಚಸಾ॥ ವಸುರ್ವಸುಪತಿರ್ ಹಿಕಮಸ್ಯಗ್ನೇ
ವಿಭಾವಸುಃ । ಸ್ಯಾಮ ತೇ ಸುಮತಾವಪಿ ॥ ತ್ವಾಮಗ್ನೇ ವಸುಪತಿಂ
ವಸೂನಾಮಭಿ ಪ್ರಮಂದೇ [೨] ಅಧ್ವರೇಷು ರಾಜನ್ನ್ । ತ್ವಯಾ ವಾಜಂ



ವಾಜಯಂತೋ ಜಯೇಮಾಭಿಷ್ಯಾಮ ಪೃತ್ಸುತೀರ್ಮರ್ತ್ಯಾನಾಮ್ ॥

ತ್ವಾಮಗ್ನೇ ವಾಜಸಾತಮಂ ವಿಪ್ರಾ ವರ್ಧಂತಿ ಸುಷ್ಟುತಮ್। ಸ ನೋ

ರಾಸ್ವ ಸುವೀರ್ಯಮ್ ॥ ಅಯಂ ನೋ ಅಗ್ನಿರ್ವರಿವಃ ಕೃಣೋತ್ವಯಂ

ಮೃಧಃ ಪುರ ಏತು ಪ್ರಭಿಂಧನ್ನ್ । ಅಯಗ್ಂ ಶತ್ರೂಞ್ಜಯತು

ಜರ್ಹೃಷಾಣೋಽಯಂ ವಾಜಂ ಜಯತು ವಾಜಸಾತೌ ॥ ಅಗ್ನಿನಾಗ್ನಿಃ

ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ಜುಹ್ವಾಸ್ಯಃ ॥ ತ್ವಗ್ಂ

ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ಸತಾ । ಸಖಾ ಸಖ್ಯಾ ಸಮಿಧ್ಯಸೇ॥

ಉದಗ್ನೇ ಶುಚಯಸ್ತವ ವಿ ಜ್ಯೋತಿಷಾ ॥ ೫೪ 54 ॥

[ಮಘವಾನಂ ಮಂದ್ರೇಹ್ಯಗ್ನೇ ಚತುರ್ದಶ ಚ ॥]

**ಆದದೇ ವಾಚಸ್ಪತಯ ಉಪಯಾಮಗೃಹೀತೋಽಸ್ಯಾ ವಾಯೋ ಅಯಂ**

**ವಾಂ ಯಾ ವಾಂ ಪ್ರಾತರ್ಯುಜಾವಯಂ ವೇನ ಸ್ತಂ ಪ್ರತ್ನಥಾ ಯೇ**

**ದೇವಾಸ್ತ್ರಿಗ್ಂಶದುಪಯಾಮಗೃಹೀತೋಽಸಿ ಮೂರ್ಧಾನಂ ಮಧು**

**ಶ್ಚೇಂದ್ರಾಗ್ನೀ ಓಮಾಸೋ ಮರುತ್ವಂತಮಿಂದ್ರ ಮರುತ್ವೋ ಮರು**

॥ ತ್ವಾನ್ಮಹಾನ್ಮಹಾನ್ನೃವತ್ಕದಾ ವಾಮಮದಬ್ಧೇಭಿರ್ ಹಿರಣ್ಯಪಾಣಿಗ್ಂ

ಸುಶರ್ಮಾ ಬೃಹಸ್ಪತಿರ್ ಹರಿರಸ್ಯಗ್ನ ಉತ್ತಿಷ್ಠನ್ತರಣಿರಾಪ್ಯಾಯಸ್ವೇಯು

ಷ್ಟೇ ಯೇ ಜ್ಯೋತಿಷ್ಮತೀಂ ಪ್ರಯಾಸಾಯ ಚಿತ್ತಮಾತಿಷ್ಠೇಂದ್ರಮಸಾವಿ

ಸರ್ವಸ್ಯ ಮಹಾನ್ತ್ಸಜೋಷಾ ಉದು ತ್ಯಂ ಧಾತೋರುಗ್ಂ ಹಿ ಯಸ್ತ್ವಾ

ಷಟ್ಚತ್ವಾರಿಗ್ಂಶತ್ ॥ ೪೬ ॥



ಆದದೇ ಯೇ ದೇವಾ ಮಹಾನುತ್ತಿಷ್ಠನ್ತ್ಸರ್ವಸ್ಯ ಸಂತು

ದುರ್ಮಿತ್ರಾಶ್ಚತುಷ್ಪಂಚಾಶತ್ ॥ ೫೪ ॥

ಆದದೇ ತವ ವಿ ಜ್ಯೋತಿಷಾ ।

ಹರಿಃ ಓಂ । ಶ್ರೀಕೃಷ್ಣಾರ್ಪಣಮಸ್ತು

ಇತಿ ಪ್ರಥಮಕಾಂಡೇ ಚತುರ್ಥಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಚತುರ್ಥಃ ಪ್ರಶ್ನಃ

ಹರಿಃ ಓಮ್ ॥

### ಆ ದದೇ

---

∴ ಶೌ ∴ ಏತಿ । ದದೇ ।

---

ಮೂರನೆಯ ಪ್ರಶ್ನೆಯಲ್ಲಿ ಪ್ರಧಾನವಾಗಿ ಅಗ್ನೀಷೋಮೀಯಪಶುಯಾಗವನ್ನು ಹೇಳಲಾಯಿತು. ಅನಂತರ ವಸತೀವರೀಗ್ರಹಣವು ಹೇಳಲ್ಪಟ್ಟಿತು. ಇಲ್ಲಿಗೆ ಸೋಮ ಪ್ರಧಾನಯಾಗದಿಂದ ಮೊದಲಿನ ದಿನಗಳ ಕರ್ಮಗಳನ್ನು ಹೇಳಲಾಯಿತು ಎನ್ನಬಹು ದಾಗಿದೆ. ಅನಂತರ ಮೂರನೆಯ ಪ್ರಶ್ನದಲ್ಲಿಯೇ ಸುತ್ಯಾದಿವಸ [ಸೋಮರಸವನ್ನು ಕುಟ್ಟಿ ತೆಗೆಯುವ ದಿವಸ]ದಲ್ಲಿ ಮೊದಲು ಮಾಡುವ ಸೋಮೋಪಾವಹರಣವನ್ನೂ ಹೇಳಲಾಯಿತು. ಈಗ ನಾಲ್ಕನೆಯ ಪ್ರಶ್ನೆಯಲ್ಲಿ ಸುತ್ಯಾದಿನದಲ್ಲಿ ಮಾಡಬೇಕಾದ ಗ್ರಹಗಳು ಪ್ರಧಾನವಾಗಿ ಹೇಳಲ್ಪಡುತ್ತವೆ.

ಈ ಮೊದಲನೆಯ ಅನುವಾಕದಲ್ಲಿ ಸೋಮರಸವನ್ನು ತೆಗೆಯುವುದಕ್ಕಾಗಿ ಸೋಮಾಭಿಷವವು[ಸೋಮಲತೆಯನ್ನು ಕುಟ್ಟಿ ರಸವನ್ನು ತೆಗೆಯುವುದು] ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
| --- | --- |
| ಆ ದದೇ । [ದೇವಸ್ಯ । ...ಹಸ್ತಾಭ್ಯಾಮ್ ॥ ಎಂಬ ಮಂತ್ರವನ್ನು ಸೇರಿಸಿಕೊಳ್ಳಬೇಕು] | ಗ್ರಾವಗ್ರಹಣವನ್ನು ಮಾಡಲು [ಅರೆಯುವ ಕಲ್ಲನ್ನು ತೆಗೆದುಕೊಳ್ಳಲು] |

---

[ಸವಿತೃದೇವನ ಅನುಮತಿಯನ್ನು ಪಡೆದು, ಅಶ್ವಿನೀದೇವತೆಗಳ ಬಾಹು ಗಳಿಂದಲೂ, ಪೂಷದೇವನ ಕೈಗಳಿಂದಲೂ] [ನಿನ್ನನ್ನು] ಆದದೇ ತೆಗೆದುಕೊಳ್ಳುತ್ತೇನೆ.

---

ಸವಿತೃದೇವನ ಅನುಮತಿಯನ್ನು ಪಡೆದು ಅಶ್ವಿನೀದೇವತೆಗಳ ಬಾಹು

## ಅನುವಾಕಾರ್ಥಸಂಗ್ರಹ

ಈ ಪ್ರಶ್ನೆಯ ಅನುವಾಕಗಳಲ್ಲಿ ಹೇಳಿರುವ ವಿಷಯಗಳು ಹೀಗಿವೆ.

ಗ್ರಹಪ್ರಶ್ನೇಽನುವಾಕಾಸ್ತು ಚತ್ವಾರಿಂಶದಿಹೋದಿತಾಃ ।
ಸೋಮಾಭಿಷವ ಏಕಸ್ಮಿನ್ ಪಂಚತ್ರಿಂಶತ್ಸು ತದ್ಗ್ರಹಾಃ ॥ ೧ ॥
ದಾಕ್ಷಿಣಾನಿ ಸಮಿಷ್ಟಾಖ್ಯಯಜೂಂಷ್ಯವಭೃಥಸ್ತಥಾ ।
ಕಾಮ್ಯಯಾಜ್ಯಾ ಇತಿ ಪ್ರೋಕ್ತಾ ಅರ್ಥಾ ಅತ್ರಾನುವಾಕಗಾಃ ॥ ೨ ॥

| ಅನುವಾಕ | ವಿಷಯ |
|---|---|
| ೧ | ಸೋಮಾಭಿಷವ |
| ೨ನೆಯ ಅನುವಾಕದಿಂದ ೩೬ನೆಯ ಅನುವಾಕ ಪೂರ್ಣ [೩೫ ಅನುವಾಕಗಳು] | ಸೋಮಗ್ರಹಣ |
| ೩೭ | ದಾಕ್ಷಿಣ |
| ೩೮ | ಸಮಿಷ್ಟಯಜುರ್ಹೋಮ. |
| ೩೯ | ಅವಭೃಥ |
| ೪೦ | ಕಾಮ್ಯಯಾಜ್ಯಾ-ಪುರೋನುವಾಕ್ಯ. |



## ಗ್ರಾವಾಸ್ಯಧ್ವರಕೃದ್ದೇವೇಭ್ಯೋ ಗಂಭೀರಮಿಮಮಧ್ವರಂ

## ಕೃಧ್ಯುತ್ತಮೇನ ಪವಿನೇಂದ್ರಾಯ ಸೋಮಗ್‍ಂ

---

ಗ್ರಾವಾ । ಅಸಿ । ಅಧ್ವರಕೃದಿತ್ಯಧ್ವರ-ಕೃತ್। ದೇವೇಭ್ಯಃ । ಗಂಭೀರಮ್ । ಇಮಮ್। ಅಧ್ವರಮ್ । ಕೃಧಿ। ಉತ್ತಮೇನೇತ್ಯುತ್-ತಮೇನ । ಪವಿನಾ । ಇಂದ್ರಾಯ । ಸೋಮಮ್।

---

| ಮಂತ್ರ | ವಿನಿಯೋಗ |
|---|---|
| ಗ್ರಾವಾಸಿ.......ವೃಷ್ಟಿವನಿಮ್ । | ಗ್ರಾವವನ್ನು ಅಭಿಮಂತ್ರಿಸಲು |

---

❖ [ಎಲೈ ಗ್ರಾವವೇ! ನೀನು] **ಅಧ್ವರಕೃತ್** = ಯಜ್ಞವನ್ನು ನೆರವೇರಿಸಿಕೊಡುವ; **ಗ್ರಾವಾ** = [ಗಟ್ಟಿಯಾದ] ಕಲ್ಲಾಗಿ; **ಅಸಿ** = ಇರುವೆ; [ನೀನು] **ಇಮಮ್ ಅಧ್ವರಮ್** = ಈ ಯಾಗವನ್ನು; **ದೇವೇಭ್ಯಃ** = ದೇವತೆಗಳಿಗಾಗಿ; **ಗಂಭೀರಮ್** = ಗಹನವಾದುದನ್ನಾಗಿ/ ಪ್ರಧಾನವಾದುದನ್ನಾಗಿ; **ಕೃಧಿ** = ಮಾಡು; **ಉತ್ತಮೇನ** = ಶ್ರೇಷ್ಠವಾದ; **ಇಂದ್ರಾಯ**/ ಇಂದ್ರಸ್ಯ; **ಪವಿನಾ** = ಇಂದ್ರವಜ್ರಸದೃಶನಾದ [ನಿನ್ನಿಂದ]; [ನಾನು] **ಸೋಮಮ್** = ಸೋಮನನ್ನು;

---

ಗಳಿಂದಲೂ, ಪೂಷದೇವನ ಕೈಗಳಿಂದಲೂ ನಿನ್ನನ್ನು [ಅರೆಯುವ ಕಲ್ಲನ್ನು] ತೆಗೆದುಕೊಳ್ಳುತ್ತೇನೆ.

ಸೋಮನನ್ನು ಅರೆಯುವ ಎಲೈ ಗ್ರಾವವೇ! ನೀನು ಯಜ್ಞವನ್ನು ನೆರವೇರಿಸಿ ಕೊಡುವ ದೃಢವಾದ ಕಲ್ಲಾಗಿರುವೆ. ಈ ಯಜ್ಞವನ್ನು ದೇವತೆಗಳಿಗಾಗಿ ಗಂಭೀರವನ್ನಾಗಿ ಮಾಡು/ ಮುಖ್ಯವನ್ನಾಗಿ ಪರಿಗಣಿಸುವಂತೆ ಮಾಡು. ಇಂದ್ರನ ಉತ್ಕೃಷ್ಟವಾದ ವಜ್ರಾಯುಧದಂತೆ ಇರುವ ನಿನ್ನಿಂದ ನಾನು ಈ ಸೋಮನನ್ನು ಚೆನ್ನಾಗಿ ಅರೆಯುತ್ತೇನೆ. ಒಳ್ಳೆಯ ರುಚಿಯುಳ್ಳದ್ದನ್ನಾಗಿಯೂ, ಹಾಲಿನಂತೆ ರಸವುಳ್ಳದ್ದನ್ನಾಗಿಯೂ/ಹಾಲುಳ್ಳದ್ದ ನ್ನಾಗಿಯೂ, ಆಹುತಿಯ ಮೂಲಕ ಸೂರ್ಯನನ್ನು ಹೊಂದಿ ಒಳ್ಳೆಯ ಮಳೆಯನ್ನು

**ಸುಷುತಂ ಮಧುಮಂತಂ ಪಯಸ್ವಂತಂ ವೃಷ್ಟಿವನಿಮಿಂದ್ರಾಯ**

**ತ್ವಾ ವೃತ್ರಘ್ನೇ ಇಂದ್ರಾಯ ತ್ವಾ ವೃತ್ರತುರ**

---

**ಸುಷುತಮಿತಿ ಸು-ಸುತಮ್ । ಮಧುಮಂತಮಿತಿ ಮಧು- ಮಂತಮ್ । ಪಯಸ್ವಂತಮ್। ವೃಷ್ಟಿವನಿಮಿತಿ ವೃಷ್ಟಿ-ವನಿಮ್ । ಇಂದ್ರಾಯ । ತ್ವಾ । ವೃತ್ರಘ್ನೇ ಇತಿ ವೃತ್ರ-ಘ್ನೇ। ಇಂದ್ರಾಯ । ತ್ವಾ । ವೃತ್ರತುರ ಇತಿ ವೃತ್ರ-ತುರೇ ।**

---

| ಮಂತ್ರ | ವಿನಿಯೋಗ |
| --- | --- |
| ಇಂದ್ರಾಯ.......ವಿಶ್ವದೇವ್ಯಾವತೇ । | ಸೋಮವನ್ನು ಐದು ಬಾರಿ ಕುಟ್ಟಲು. |

---

**ಸುಷುತಮ್** = ಚೆನ್ನಾಗಿ ಅರೆಯಲ್ಪಟ್ಟುದನ್ನಾಗಿಯೂ; **ಮಧುಮಂತಮ್** = ರುಚಿಯುಳ್ಳದ್ದನ್ನಾಗಿಯೂ; **ಪಯಸ್ವಂತಮ್** = ಹಾಲಿನಂತೆ ರಸವುಳ್ಳದ್ದನ್ನಾಗಿಯೂ; [ಹಾಲಿನಂತೆ ಕೂಡಿರುವುದನ್ನಾಗಿಯೂ] **ವೃಷ್ಟಿವನಿಮ್** = [ಆಹುತಿಯ ಮೂಲಕ ಸೂರ್ಯನನ್ನು ಹೊಂದಿ] ಮಳೆಯನ್ನು ಕೊಡುವುದನ್ನಾಗಿಯೂ; [ಮಾಡುತ್ತೇನೆ.] ✣ [ಎಲೈ ಸೋಮನೇ!] **ವೃತ್ರಘ್ನೇ** = ಮೇಘಗಳನ್ನು ಭೇದಿಸುವ; **ಇಂದ್ರಾಯ** = ಇಂದ್ರನಿಗಾಗಿ; **ತ್ವಾ** = ನಿನ್ನನ್ನು [ಮಿಮೇ = ಕುಟ್ಟುತ್ತೇನೆ] **ವೃತ್ರತುರೇ** = ವೃತ್ರಾಸುರನನ್ನು ಸಂಹರಿಸಿದ; **ಇಂದ್ರಾಯ** = ಇಂದ್ರನಿಗಾಗಿ; **ತ್ವಾ** = ನಿನ್ನನ್ನು [ಮಿಮೇ = ಕುಟ್ಟುತ್ತೇನೆ]

---

ಕೊಡುವವನನ್ನಾಗಿಯೂ ಮಾಡುತ್ತೇನೆ.* ★ ಎಲೈ! ಸೋಮನೇ! ಮೇಘಗಳನ್ನು ಭೇದಿಸುವ ಇಂದ್ರದೇವನಿಗಾಗಿ ನಿನ್ನನ್ನು ಕುಟ್ಟುತ್ತೇನೆ. ವೃತ್ರನೆಂಬ ಅಸುರನನ್ನು ನಾಶಪಡಿಸಿದ

---

***ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥ — ಮನುಸ್ಮೃತಿ 3-76**

ಅಗ್ನಿಯಲ್ಲಿ ಶಾಸ್ತ್ರವತ್ತಾಗಿ ನೀಡಿದ ಹವಿಸ್ಸಿನ ಆಹುತಿಯು ಸೂರ್ಯನನ್ನು ಸೇರುವುದು. ಸೂರ್ಯನಿಂದ ಮಳೆಯೂ, ಮಳೆಯಿಂದ ಅನ್ನವೂ, (ಸಸ್ಯಾದಿಗಳು) ಅನ್ನದಿಂದ ಪ್ರಜೆಗಳೂ ಸೃಷ್ಟಿಯಾಗುತ್ತಾರೆ.

ಇಂದ್ರಾ᳚ಯ ತ್ವಾಽಭಿಮಾತಿಘ್ನ ಇಂದ್ರಾ᳚ಯ ತ್ವಾಽಽದಿತ್ಯವ॑ತ

ಇಂದ್ರಾ᳚ಯ ತ್ವಾ ವಿಶ್ವದೇ᳚ವ್ಯಾವತೇ

---

ಇಂದ್ರಾ᳚ಯ । ತ್ವಾ । ಅಭಿಮಾತಿಘ್ನ ಇತ್ಯ॑ಭಿಮಾತಿ - ಘ್ನೇ । ಇಂದ್ರಾ᳚ಯ । ತ್ವಾ । ಆದಿತ್ಯವ॑ತ ಇತ್ಯಾ॑ದಿತ್ಯ - ವತೇ । ಇಂದ್ರಾ᳚ಯ । ತ್ವಾ । ವಿಶ್ವದೇ᳚ವ್ಯಾವತ ಇತಿ ವಿಶ್ವ ದೇ᳚ವ್ಯ-ವತೇ ।

---

**ಅಭಿಮಾತಿಘ್ನೇ** = ಪಾಪನಾಶಕನಾದ; **ಇಂದ್ರಾಯ** = ಇಂದ್ರನಿಗಾಗಿ; **ತ್ವಾ** = ನಿನ್ನನ್ನು; [ಮಿಮೇ=ಕುಟ್ಟುತ್ತೇನೆ.] **ಆದಿತ್ಯವತೇ** = [ತೃತೀಯಸವನದಲ್ಲಿ] ಆದಿತ್ಯದೇವತೆಗಳೊಡನೆ ಇರುವ; **ಇಂದ್ರಾಯ** = ಇಂದ್ರನಿಗೋಸ್ಕರ; **ತ್ವಾ** = ನಿನ್ನನ್ನು; [ಮಿಮೇ = ಕುಟ್ಟುತ್ತೇನೆ] **ವಿಶ್ವದೇವ್ಯಾವತೇ** = [ಪ್ರಾತಃಸವನದಲ್ಲಿ] ವಿಶ್ವೇದೇವದೇವತೆಗಳಿಂದೊಡಗೂಡಿದ; **ಇಂದ್ರಾಯ** = ಇಂದ್ರನಿಗಾಗಿ; **ತ್ವಾ** = ನಿನ್ನನ್ನು; [ಮಿಮೇ = ಕುಟ್ಟುತ್ತೇನೆ.]

---

ಇಂದ್ರನಿಗೋಸ್ಕರ ನಿನ್ನನ್ನು ಕುಟ್ಟುತ್ತೇನೆ. ಪಾಪಗಳನ್ನು ಹೋಗಲಾಡಿಸುವ ಇಂದ್ರದೇವನಿಗಾಗಿ ನಿನ್ನನ್ನು ಕುಟ್ಟುತ್ತೇನೆ. ತೃತೀಯಸವನದಲ್ಲಿ ಆದಿತ್ಯರಿಂದೊಡ ಗೂಡಿದ ಇಂದ್ರನಿಗಾಗಿ ನಿನ್ನನ್ನು ಕುಟ್ಟುತ್ತೇನೆ. ಪ್ರಾತಃಸವನದಲ್ಲಿ ವಿಶ್ವೇದೇವರಿಂದೊಡ ಗೂಡಿದ ಇಂದ್ರನಿಗಾಗಿ ನಿನ್ನನ್ನು ಕುಟ್ಟುತ್ತೇನೆ.

ಸೋಮಯಾಗದಲ್ಲಿ ಬೇರೆಯ ದೇವತೆಗಳಿಗೆ ಯಾಗವಿದ್ದರೂ, ಇಂದ್ರನಿಗೇ ಪ್ರಾಧಾನ್ಯವಿರುವುದರಿಂದ ಎಲ್ಲಾ ಮಂತ್ರಭಾಗದಲ್ಲಿಯೂ '**ಇಂದ್ರಾಯ**' ಎಂದು ಹೇಳಲಾಗಿದೆ.

**ಶ್ವಾತ್ರಾಃ ಸ್ಥ ವೃತ್ರತುರೋ ರಾಧೋಗೂರ್ತಾ ಅಮೃತಸ್ಯ**

**ಪತ್ನೀಸ್ತಾ ದೇವೀರ್ದೇವತ್ರೇಮಂ ಯಜ್ಞಂ ಧತ್ತೋಪಹೂತಾಃ**

**ಸೋಮಸ್ಯ ಪಿಬತೋಪಹೂತೋ**

---

ಶ್ವಾತ್ರಾಃ। ಸ್ಥ। ವೃತ್ರತುರ ಇತಿ ವೃತ್ರ-ತುರಃ। ರಾಧೋಗೂರ್ತಾ ಇತಿ ರಾಧಃ-ಗೂರ್ತಾಃ। ಅಮೃತಸ್ಯ। ಪತ್ನೀಃ॥ ತಾಃ। ದೇವೀಃ। ದೇವತ್ರೇತಿ ದೇವ-ತ್ರಾ। ಇಮಮ್। ಯಜ್ಞಮ್। ಧತ್ತ। ಉಪಹೂತಾ ಇತ್ಯುಪ-ಹೂತಾಃ। ಸೋಮಸ್ಯ। ಪಿಬತ। ಉಪಹೂತ ಇತ್ಯುಪ-ಹೂತಃ।

---

| ಮಂತ್ರ | ವಿನಿಯೋಗ |
| --- | --- |
| ಶ್ವಾತ್ರಾಃ ಸ್ಥ....ಸೋಮಃ ಪಿಬತು। | ಸೋಮನಿಗೆ ಹೋತೃಚಮಸದಲ್ಲಿರುವ ನೀರನ್ನು ಬೆರೆಸಲು |

---

❖ [ಎಲೈ! ಜಲದೇವತೆಗಳೇ! ನೀವು] **ಶ್ವಾತ್ರಾಃ** = ಶೀಘ್ರವಾಗಿ ಕಾರ್ಯವನ್ನು ಮಾಡತಕ್ಕವರು[ರಕ್ಷಿಸುವವರು/ಇಷ್ಟಾರ್ಥವನ್ನು ಹೊಂದಿಸುವವರು] **ಸ್ಥ** = ಆಗಿದ್ದೀರಿ; **ವೃತ್ರತುರಃ** = ವೃತ್ರಾಸುರನನ್ನು ಹಿಂಸಿಸಿದವರೂ; **ರಾಧೋಗೂರ್ತಾಃ** = ಅನ್ನವನ್ನು ಸಂಪಾದಿಸಲು ಉದ್ಯುಕ್ತರಾದವರೂ; **ಅಮೃತಸ್ಯ** = ನಾಶರಹಿತನಾದ [ಸೋಮನ] **ಪತ್ನೀಃ** = ರಕ್ಷಕಿಯರೂ [ಆಗಿರುತ್ತೀರಿ.] **ತಾಃ** = ಅಂತಹ ಪ್ರಸಿದ್ಧರಾದ; **ದೇವೀಃ** = ಅಬ್ದೇವಿ [ಜಲದೇವಿ]ಯರೇ! [ನೀವು] **ಇಮಂ ಯಜ್ಞಮ್** = [ನಮ್ಮ] ಈ ಸೋಮಯಾಗವನ್ನು; **ದೇವತ್ರಾ** = ದೇವತೆಗಳಲ್ಲಿ; **ಧತ್ತ** = ಇಡಿರಿ/ಸ್ಥಾಪಿಸಿರಿ; **ಉಪಹೂತಾಃ** = ಅನುಮತಿಯನ್ನು ಪಡೆದವರಾಗಿ; **ಸೋಮಸ್ಯ ಪಿಬತ** = ಸೋಮನ [ಅಂಶ(ಭಾಗ)ವನ್ನು] ಕುಡಿಯಿರಿ; **ಉಪಹೂತಃ** = ಅನುಮತಿಸಲ್ಪಟ್ಟ;

---

ಎಲೈ! ಜಲದೇವಿಯರೇ! ನೀವು ಬೇಗನೆ ಕೆಲಸ ಮಾಡತಕ್ಕವರಾಗಿದ್ದೀರಿ.

**ಯುಷ್ಮಾಕಗ್ಂ [ಯುಷ್ಮಾಕಮ್ (೧)] ಸೋಮಃ ಪಿಬತು**

**ಯತ್ತೇ ಸೋಮ ದಿವಿ ಜ್ಯೋತಿರ್ಯತ್ಪೃಥಿವ್ಯಾಂ**

**ಯದುರಾವಂತರಿಕ್ಷೇ**

---

ಯುಷ್ಮಾಕಮ್(೧) । ಸೋಮಃ । ಪಿಬತು । ಯತ್ । ತೇ । ಸೋಮ । ದಿವಿ । ಜ್ಯೋತಿಃ । ಯತ್ । ಪೃಥಿವ್ಯಾಮ್ । ಯತ್ । ಉರೌ । ಅಂತರಿಕ್ಷೇ ।

---



| ಮಂತ್ರ | ವಿನಿಯೋಗ |
|---|---|
| ಯತ್ತೇ......ವೋಚಃ । | ಸೋಮವನ್ನು ಮಿಶ್ರಮಾಡಲು –ಬೌಧಾಯನ.<br>ಸೋಮವನ್ನು ಅಭಿಮಂತ್ರಣ ಮಾಡಲು –ಆಪ. |

---

**ಸೋಮಃ** = ಸೋಮನು; **ಯುಷ್ಮಾಕಂ ಪಿಬತು** = ನಿಮ್ಮ [ಅಂಶವನ್ನು] ಕುಡಿಯಲಿ. ∵ **ಸೋಮ**=ಎಲೈ! ಸೋಮದೇವನೇ! **ದಿವಿ**=ಸ್ವರ್ಗಲೋಕದಲ್ಲಿ; **ತೇ** = ನಿನ್ನ; **ಯತ್ ಜ್ಯೋತಿಃ** [ಅಸ್ತಿ] = ಯಾವ ತೇಜಸ್ಸು ಇದೆಯೋ; **ಪೃಥಿವ್ಯಾಮ್** = ಭೂಲೋಕದಲ್ಲಿ; **ಯತ್** [ಜ್ಯೋತಿಃ ಅಸ್ತಿ] = ಯಾವ ತೇಜಸ್ಸಿದೆಯೋ; **ಉರೌ ಅಂತರಿಕ್ಷೇ** = ವಿಶಾಲವಾದ ಅಂತರಿಕ್ಷಲೋಕದಲ್ಲಿ; **ಯತ್** = [ಜ್ಯೋತಿಃ ಅಸ್ತಿ] = ಯಾವ ತೇಜಸ್ಸು ಇದೆಯೋ

---

ಹಾಗೆಯೇ ವೃತ್ರಾಸುರನ ಹಿಂಸೆಗೆ ಕಾರಣರೂಪರೂ, ಅನ್ನವನ್ನು ಸಂಪಾದಿಸಲು ಯತ್ನಿಸುವವರೂ, ಸೋಮನನ್ನು ರಕ್ಷಿಸುವವರೂ ಆಗಿದ್ದೀರಿ. ಅಂತಹ ಪ್ರಕಾಶಾದಿಗುಣ ಯುಕ್ತರಾದ ದೇವಿಯರೇ! ನೀವು ನಮ್ಮ ಈ ಯಜ್ಞವನ್ನು ದೇವತೆಗಳಲ್ಲಿ ಸ್ಥಾಪಿಸಿರಿ. ಸೋಮನಿಂದ ಅನುಜ್ಞಾತರಾಗಿ ಸೋಮಭಾಗವನ್ನು ಕುಡಿಯಿರಿ. ನಿಮ್ಮಿಂದ ಅನುಜ್ಞಾತನಾಗಿ ಸೋಮನೂ ನಿಮ್ಮನ್ನು ಕುಡಿಯಲಿ.

ಎಲೈ! ಸೋಮದೇವನೇ! ಸ್ವರ್ಗದಲ್ಲಿ, ಭೂಲೋಕದಲ್ಲಿ ಮತ್ತು ಅಂತರಿಕ್ಷಲೋಕ ದಲ್ಲಿ ಯಾವ ನಿನ್ನ ತೇಜಸ್ಸಿದೆಯೋ ಆ ತೇಜಸ್ಸಿನಿಂದ ಈ ಯಜಮಾನನಿಗೆ ಧನ

**ತೇನಾಸ್ಮೈ ಯಜಮಾನಾಯೋರು ರಾಯಾ ಕೃಧ್ಯಧಿ ದಾತ್ರೇ**

**ವೋಚೋ ಧಿಷಣೇ ವೀಡೂ ಸತೀ ವೀಡಯೇಥಾಮೂರ್ಜಂ**

**ದಧಾಥಾಮೂರ್ಜಂ ಮೇ ಧತ್ತಂ ಮಾ ವಾಗ್ಂ ಹಿಗ್ಂಸಿಷಂ**

---

ತೇನ । ಅಸ್ಮೈ । ಯಜಮಾನಾಯ । ಉರು । ರಾಯಾ । ಕೃಧಿ । ಅಧೀತಿ । ದಾತ್ರೇ।

ವೋಚಃ। ಧಿಷಣೇ ಇತಿ । ವೀಡೂ ಇತಿ । ಸತೀ ಇತಿ । ವೀಡಯೇಥಾಮ್। ಊರ್ಜಮ್।

ದಧಾಥಾಮ್ । ಊರ್ಜಮ್ । ಮೇ । ಧತ್ತಮ್ । ಮಾ । ವಾಮ್। ಹಿಗ್ಂಸಿಷಮ್।

---

| ಮಂತ್ರ | ವಿನಿಯೋಗ |
|---|---|
| ಧಿಷಣೇ.....ಹಿಗ್ಂಸಿಷ್ಮಮ್ । | ಚರ್ಮಫಲಕಗಳ ಅಭಿಮರ್ಶನ [ಸ್ಪರ್ಶ] ಮಾಡಲು |

---

**ತೇನ** = ಆ ಜ್ಯೋತಿಯಿಂದ; **ಅಸ್ಮೈ ಯಜಮಾನಾಯ** = ಈ ಯಜಮಾನನಿಗೆ; ರಾಯಾ = ಧನದಿಂದ ಸಮೃದ್ಧವಾದ; ಉರು = ವಿಸ್ತೀರ್ಣವಾದ[ಸ್ಥಾನವನ್ನು]; ಕೃಧಿ = ಮಾಡು; [ಈ ಕರ್ಮವನ್ನು ವಿಸ್ತೃತವನ್ನಾಗಿ ಮಾಡು.] **ದಾತ್ರೇ** = ಫಲದಾತನಾದ ಇಂದ್ರದೇವನಿಗೆ; **ಅಧಿ ವೋಚಃ** = [ಈ ಯಜಮಾನನು ಬೇರೆಯ ಯಜಮಾನರಿಗಿಂತಲೂ] ಅಧಿಕನೆಂದು ಹೇಳು [ಈ ಯಾಗವು ಇತರ ಯಾಗಗಳಿಗಿಂತಲೂ ಅಧಿಕವೆಂದು ಹೇಳು] ⁘ **ಧಿಷಣೇ** =[ ಎಲ್ಶೆ! ಸೋಮವನ್ನು ಧರಿಸಿರುವ ಅಥವಾ ಚರ್ಮವನ್ನು ಧರಿಸಲು ಸಮರ್ಥವಾದ] ಫಲಕಗಳೇ! **ವೀಡೂ ಸತೀ**=[ನೀವು] ದೃಢವಾಗಿ ಇದ್ದವರಾಗಿ; **ವೀಡಯೇಥಾಮ್**=[ಮತ್ತೆ ಮತ್ತೆ ಅಭಿಷವವಾದರೂ ಬೇರೆ ಬೇರೆಯಾಗದೆ]ದೃಢವಾಗಿರಿ. **ಊರ್ಜಮ್** = ಸೋಮ ರಸವನ್ನು; **ದಧಾಥಾಮ್**=ಧರಿಸಿರಿ; **ಊರ್ಜಮ್**=ಸೋಮರಸವನ್ನು [ಬಲವನ್ನು]; **ಮೇ** = ನನಗೆ; **ಧತ್ತಮ್** = ಉಂಟುಮಾಡಿರಿ. [ಕೊಡಿರಿ.] [ನಾನು] **ವಾಮ್** = ನೀವಿಬ್ಬರನ್ನು;

---

ಸಮೃದ್ಧವಾದ ವಿಸ್ತೀರ್ಣವಾದ ಸ್ಥಾನವನ್ನುಂಟುಮಾಡಿಕೊಡು. ಈ ಯಜ್ಞವೂ, ಈ ಯಜಮಾನನೂ ಅಧಿಕರೆಂದು ಫಲದಾತನಾದ ಇಂದ್ರನಿಗೆ ಹೇಳು. ★ಎಲ್ಶೆ ಚರ್ಮಫಲಕಗಳೇ!

# ಮಾ ಮಾ ಹಿಗ್ಂಸಿಷ್ಟಂ ಪ್ರಾಗಪಾಗುದಗಧರಾಕ್ತಾಸ್ತ್ವಾ
# ದಿಶ ಆ ಧಾವಂತ್ವಂಬ ನಿಷ್ವರ ।

---

ಮಾ । ಮಾ । ಹಿಗ್ಂಸಿಷ್ಟಮ್ । ಪ್ರಾಕ್ । ಅಪಾಕ್ । ಉದಕ್ । ಅಧರಾಕ್। ತಾಃ।

ತ್ವಾ । ದಿಶಃ । ಏತಿ । ಧಾವಂತು ।* ಅಂಬ । ನೀತಿ । ಸ್ವರ ॥*

---

| ಮಂತ್ರ | ವಿನಿಯೋಗ |
|---|---|
| ಪ್ರಾಗಪಾಕ್.....ನಿಷ್ವರ । | ಹೋತೃಚಮಸದಲ್ಲಿ ಅಂಶು [ಸೋಮದ ತುಂಡುಗಳು] ಗಳನ್ನು ಹಾಕಲು. 'ಅಂಬ ನಿಷ್ವರ' ಎಂಬ ಭಾಗವು ಪ್ರಿಯಳಾದ ಪತ್ನಿಯನ್ನು ಮನಸ್ಸಿನಲ್ಲಿ ಸ್ಮರಿಸಲು. –ಆಪಸ್ತಂಬ |

---

ಮಾ ಹಿಗ್ಂಸಿಷಮ್ = ಹಿಂಸಿಸುವುದಿಲ್ಲ. [ನೀವಿಬ್ಬರೂ] ಮಾ = ನನ್ನನ್ನು; ಮಾ ಹಿಗ್ಂಸಿಷ್ಟಮ್ = ಹಿಂಸಿಸಬೇಡಿ. ❖ [ಎಲೈ ಸೋಮನೇ!] ಪ್ರಾಕ್ = ಪೂರ್ವದಿಕ್ಕು; ಅಪಾಕ್ = ಪಶ್ಚಿಮದಿಕ್ಕು; ಉದಕ್ = ಉತ್ತರದಿಕ್ಕು; ಅಧರಾಕ್ = ಅಧೋದಿಕ್ಕು [ಮೊದಲಾದ ಯಾವ ಯಾವ ದಿಕ್ಕುಗಳುಂಟೋ] ತಾಃ ದಿಶಃ= ಆ ದಿಕ್ಕುಗಳು [ಆ ದಿಕ್ಕುಗಳಲ್ಲಿರುವ ಸೋಮಭಾಗಗಳು] ತ್ವಾ = ನಿನ್ನ ಸಮೀಪಕ್ಕೆ; ಆ ಧಾವಂತು = ಓಡಿಬರಲಿ. *ಅಂಬ! = ಮಾತೃಸ್ಥಾನೀಯನಾದ ಸೋಮನೇ! ನಿಷ್ವರ = [ಅಂಶುಗಳಿಂದ ರಸರೂಪನಾಗಿ] ಹೊರಕ್ಕೆ ಬಾ.

---

ನೀವಿಬ್ಬರೂ ದೃಢವಾಗಿದ್ದುಕೊಂಡು, ಮತ್ತೆ ಮತ್ತೆ ಅಭಿಷವವಾದರೂ ಬೇರೆ ಬೇರೆಯಾಗದೆ ದೃಢವಾಗಿಯೇ ಇರಿ. ಸೋಮರಸವನ್ನು ಧಾರಣೆ ಮಾಡಿಕೊಂಡಿರಿ. ನನಗೂ ಸೋಮರಸವನ್ನು ಕೊಡಿ. ಬಲವನ್ನು ಕೊಡಿ. ನಾನು ನಿಮ್ಮನ್ನು ಹಿಂಸಿಸುವುದಿಲ್ಲ. ನೀವೂ ನಮ್ಮನ್ನು ಹಿಂಸಿಸದಿರಿ. ★ ಎಲೈ! ಸೋಮನೇ! ಪೂರ್ವದಿಕ್ಕೇ ಮೊದಲಾದ

---

*ಇಲ್ಲಿ 'ಅಂಬ' ಶಬ್ದಪ್ರಯೋಗದಿಂದ ತನಗೆ ಬೇಕಾದ ಭಾರ್ಯೆಯ ಧ್ಯಾನವು ಸೂಚಿತವಾಗಿದೆ. ಸ್ತ್ರೀಯರನ್ನು 'ಅಂಬ', 'ಅಮ್ಮ', ಮೊದಲಾಗಿ ಸಂಬೋಧಿಸುವುದು ಬಳಕೆಯಲ್ಲಿದೆ.

**ಯತ್ತೇ ಸೋಮಾದಾಭ್ಯಂ ನಾಮ ಜಾಗೃವಿ ತಸ್ಮೈ ತೇ**

**ಸೋಮ ಸೋಮಾಯ ಸ್ವಾಹಾ ॥ ೧-2 ॥**

**[ಯುಷ್ಮಾಕಗ್ಂ ಸ್ವರ ಯತ್ತೇ ನವ ಚ]**

---

ಯತ್ । ತೇ । ಸೋಮ । ಅದಾಭ್ಯಮ್ । ನಾಮ । ಜಾಗೃವಿ । ತಸ್ಮೈ । ತೇ ।

ಸೋಮ । ಸೋಮಾಯ । ಸ್ವಾಹಾ ॥ ೧ ॥

---



| ಮಂತ್ರ | ವಿನಿಯೋಗ |
|---|---|
| ಯತ್ತೇ.......ಸ್ವಾಹಾ । | ಪ್ರತಿಪ್ರಸ್ಥಾತನು ಬೇರೆಯಾಗಿ ತೆಗೆದಿಟ್ಟಿದ್ದ ಆರು ಸೋಮಾಂಶುಗಳನ್ನು ತೆಗೆದುಕೊಂಡು ಎರಡೆರಡಾಗಿ ಸೋಮನಲ್ಲಿ ಹಾಕಲು. [ಮಹಾಭಿಷವದಲ್ಲಿ ಅವುಗಳ ಉಪಯೋಗ] |

---

✣ ಸೋಮ = ಸೋಮನೇ! ತೇ = ನಿನ್ನ; ಯತ್ = ಯಾವ; ಅದಾಭ್ಯಮ್ = [ವೈರಿಗಳಿಂದ] ತಿರಸ್ಕರಿಸಲಾಗದ; ನಾಮ = ಹೆಸರು; ಜಾಗೃವಿ = ಜಾಗರೂಕವಾಗಿದೆಯೋ [ಪ್ರಸಿದ್ಧವಾಗಿದೆಯೋ] ಸೋಮ = ಸೋಮನೇ! ತಸ್ಮೈ ತೇ ಸೋಮಾಯ = ಅಂತಹ ಪ್ರಸಿದ್ಧವಾದ ಸೋಮನಾಮಧಾರಿಯಾದ ನಿನಗೆ; ಸ್ವಾಹಾ = [ಈ ಅಂಶುದ್ವಯಗಳು] ಹುತವಾಗಲಿ/ ಸಮರ್ಪಿತವಾಗಲಿ.]

---

ಎಲ್ಲಾ ದಿಕ್ಕುಗಳೂ ನಿನ್ನಲ್ಲಿಗೆ ಓಡಿಬರಲಿ. ಆ ದಿಕ್ಕುಗಳಲ್ಲಿರುವ ಸೋಮನ ಅಂಶುಗಳೆಲ್ಲವೂ ಬಂದು ಒಟ್ಟಾಗಲಿ. ಮಾತೃಸ್ಥಾನೀಯನಾದ ಸೋಮನೇ! ನೀನು ಅಂಶುಗಳಿಂದ ರಸರೂಪನಾಗಿ ಹೊರಹೊಮ್ಮು.

ಎಲೈ ಸೋಮನೇ! ಸೋಮನೆಂಬ ನಿನ್ನ ಹೆಸರು ಶತ್ರುಗಳು ತಿರಸ್ಕರಿಸಲು ಸಾಧ್ಯವಿಲ್ಲವಾದುದ್ದಾಗಿ ಲೋಕದಲ್ಲಿ ಪ್ರಸಿದ್ಧವಾಗಿದೆ. ಅಂತಹ ಪ್ರಸಿದ್ಧ ಸೋಮನಾಮವನ್ನು ಹೊಂದಿರುವ ನಿನಗೆ ಈ ಅಂಶುಗಳು ಹುತವಾಗಲಿ.

## ವಿನಿಯೋಗ ಸಂಗ್ರಹ

[1]ಆ ದದೇऽಶ್ಮಾನಮಾದಾಯ [2]ಗ್ರಾವಾಸೀತ್ಯಭಿಮಂತ್ರಯೇತ್ ।
[3]ಇಂದ್ರಾ ಸೋಮಮಿತಿ ಪಂಚ ಶ್ವಾತ್ರಾ [4] ನಿಗ್ರಾಭ್ಯಸೇಚನಮ್ ॥
[5]ಯತ್ತೇ ಸೋಮಂ ಮಂತ್ರಯಿತ್ವಾ [6]ಧಿಷೇತಿ ಫಲಕೇ ಸ್ಪೃಶೇತ್ ।
ಪ್ರಾಕ್[7] ತ್ರಿಃ ಪ್ರದಕ್ಷಿಣಾಪ್ಲಾವ್ಯೋಹ್ಯಂಬ[8] ಪತ್ನೀಂ ವಿಚಿಂತಯೇತ್ ।
[9]ಯತ್ತೇ ಮಹಾಭಿಷವೇ ಹ್ಯಂಶುಯೋಗೋ ನವೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 9

## ಅನುವಾಕದ ವಿಶೇಷ ವಿಷಯಗಳು

ಅ) ಈ ಅನುವಾಕದಲ್ಲಿ ಮೀಮಾಂಸಾವಿಶೇಷವಿಲ್ಲ.

### ಆ) ಛಂದಸ್ಸು

| | | |
|---|---|---|
| ೧) | ಗ್ರಾವಾಸಿ.......ವೃಷ್ಟಿವನಿಮ್ । | ಪಂಚಪದಾ ತ್ರಿಷ್ಟುಪ್ [8 ಅಕ್ಷರಗಳ 4 ಪಾದಗಳು ಮತ್ತು 12 ಅಕ್ಷರಗಳ 1 ಪಾದ] |
| ೨) | ಯತ್ತೇ.......ವೋಚಃ । | ಚತುಷ್ಪದಾ ಸತೋಬೃಹತೀ [1-3ನೆಯ ಪಾದಗಳಲ್ಲಿ 10 ಅಕ್ಷರಗಳು] ಅಥವಾ ಸತಃ ಪಂಕ್ತಿಃ [2-4ನೆಯ ಪಾದಗಳಲ್ಲಿ 12 ಅಕ್ಷರಗಳು] |
| ೩) | ಧಿಷಣೇ.....ಹಿಗ್ಂಸಿಷ್ಟಮ್ । | ತ್ರಿಪದಾ ವಿರಾಟ್ |
| ೪) | ಯತ್ತೇ ಸೋಮಾದಾಭ್ಯಂ...ಸ್ವಾಹಾ । | ದ್ವಿಪದಾ ವಿರಾಟ್ |

ಈ ಮೇಲಿನ ಛಂದಸ್ಸುಗಳು ಭಟ್ಟಭಾಸ್ಕರಮಿಶ್ರರ ಮತದಂತೆ. ಸಾಯಣಾಚಾರ್ಯರ ಮತದಂತೆ ಈ ಅನುವಾಕದಲ್ಲಿ ಛಂದಸ್ಸಿಲ್ಲ.

---

## ॥ ದ್ವಿತೀಯೋಽನುವಾಕಃ ॥

ವಾಚಸ್ಪತಯೇ ಪವಸ್ವ ವಾಜಿನ್ವೃಷಾ ವೃಷ್ಣೋ
ಅಗ್‌ಂಶುಭ್ಯಾಂ ಗಭಸ್ತಿಪೂತೋ ದೇವೋ ದೇವಾನಾಂ ॥

---

ವಾಚಃ । ಪತಯೇ । ಪವಸ್ವ । ವಾಜಿನ್ । ವೃಷಾ । ವೃಷ್ಣಃ । ಅಗ್‌ಂಶುಭ್ಯಾಮಿತ್ಯಗ್‌ಂಶು-ಭ್ಯಾಮ್ । ಗಭಸ್ತಿಪೂತ ಇತಿ ಗಭಸ್ತಿ-ಪೂತಃ । ದೇವಃ । ದೇವಾನಾಮ್ ।

---

ಮೊದಲನೆಯ ಅನುವಾಕದಲ್ಲಿ ಸೋಮಾಭಿಷವಸನ್ನಾಹವು ಹೇಳಲ್ಪಟ್ಟಿತು. ಎರಡನೆಯ ಅನುವಾಕದಲ್ಲಿ ಉಪಾಂಶುಗ್ರಹಗ್ರಹಣವು ಹೇಳಲ್ಪಟ್ಟಿದೆ.



| ಮಂತ್ರ | ವಿನಿಯೋಗ |
|---|---|
| ವಾಚಸ್ಪತಯೇ....ತೇಭ್ಯಸ್ಸ್ವಾಹಾ | ಪ್ರತಿಪ್ರಸ್ಥಾತನು ಎರಡು ಅಂಶುಗಳನ್ನು ಒಳಗಿಟ್ಟಿದ್ದಾಗ[ಆಧ್ವರ್ಯುವು ಹಿಡಿದಿದ್ದಾಗ] ಅಧ್ವರ್ಯುವು ಉಪಾಂಶುಗ್ರಹವನ್ನು ಗ್ರಹಣ ಮಾಡಲು. – ಆಪ. |

೧) ವಾಚಸ್ಪತಯೇ.....ವಾಜಿನ್

೨) ವೃಷಾ......ಪೂತಃ ।

---

**ಹೇ ವಾಜಿನ್** = ಅನ್ನಪ್ರದನಾದ ಓ ಸೋಮನೇ! **ಪತಯೇ** = ರಕ್ಷಕನಾದ [ದೇವನಿಗೋಸ್ಕರ] **ವಾಚಃ** = ವಾಕ್ಕಿಗೆ ಸಂಬಂಧಿಸಿದ ಮಂತ್ರದಿಂದ; **ಪವಸ್ವ** = ಶುದ್ಧನಾಗು; [ವಾಚಃ ಪತಯೇ = ಪ್ರಾಣಕ್ಕೋಸ್ಕರ; ಪವಸ್ವ] **ವೃಷಾ** = [ರಸರೂಪನಾದುದರಿಂದ] ಸುರಿಸಲು ಸಮರ್ಥನಾದ; [ಇಷ್ಟಾರ್ಥಗಳನ್ನು ಸುರಿಸಲು ಸಮರ್ಥನಾದ]; [ನೀನು] **ಗಭಸ್ತಿಪೂತಃ** =[ಮೊದಲು] ಸೂರ್ಯರಶ್ಮಿಗಳಿಂದ ಕಾಡಿನಲ್ಲಿ ಪವಿತ್ರನಾದವನು; [ಈಗ] **ವೃಷ್ಣಃ**=ವರ್ಷಕನಾದ ನಿನ್ನ[ಸೋಮನ] **ಅಗ್‌ಂಶುಭ್ಯಾಮ್**=ಕೊನೆಗಳಿಂದ [ಭಾಗಗಳಿಂದ] [ಪವಸ್ವ = ಶುದ್ಧನಾಗು] [ನೀನು] **ದೇವಃ** = ದೇವನಾಗಿಯೇ; **ದೇವಾನಾಮ್** = ಸೋಮಪರಾದ

---

ಅನ್ನಪ್ರದನಾದ ಸೋಮನೇ! ನಿನ್ನನ್ನು ರಕ್ಷಕನಾದ ದೇವನಿಗೋಸ್ಕರ ವಾಕ್ಸಂಬಂಧಿಯಾದ

ಪವಿತ್ರಮಸಿ ಯೇಷಾಂ ಭಾಗೋऽಸಿ ತೇಭ್ಯಸ್ತ್ವಾ ಸ್ವಾಂಕೃತೋऽಸಿ

ಮಧುಮತೀರ್ನ ಇಷಸ್ಕೃಧಿ ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ

---

ಪವಿತ್ರಮ್ । ಅಸಿ । ಯೇಷಾಮ್ । ಭಾಗಃ । ಅಸಿ । ತೇಭ್ಯಃ । ತ್ವಾ । ಸ್ವಾಂಕೃತಃ । ಅಸಿ ।
ಮಧುಮತೀರಿತಿ ಮಧು-ಮತೀಃ । ನಃ । ಇಷಃ । ಕೃಧಿ । ವಿಶ್ವೇಭ್ಯಃ । ತ್ವಾ । ಇಂದ್ರಿಯೇಭ್ಯಃ ।

---

| ಮಂತ್ರ | ವಿನಿಯೋಗ |
|---|---|
| ೩) ದೇವೋ...ತೇಭ್ಯಸ್ತ್ವಾ । | ಹೀಗೆ 3 ಮಂತ್ರಗಳು. ವಿನಿಯೋಗ ಹಿಂದಿನಂತೆ-ಬೌ |
| ಸ್ವಾಂಕೃತೋऽಸಿ....ಪಾರ್ಥಿವೇಭ್ಯಃ । | ಅಧ್ವರ್ಯುವು ಪ್ರತಿಪ್ರಸ್ಥಾತನಿಂದ ಗ್ರಹವನ್ನು ತೆಗೆದುಕೊಳ್ಳಲು —ಆಪಸ್ತಂಬ. |
| ೧) ಸ್ವಾಂಕೃತೋऽಸಿ । | ಗ್ರಹವನ್ನು ಅಧ್ವರ್ಯುವು ಪ್ರತಿಪ್ರಸ್ಥಾತನಿಂದ ತೆಗೆದುಕೊಳ್ಳಲು. |
| ೨) ಮಧುಮತೀರ್ನ ಇಷಸ್ಕೃಧಿ । | ಗ್ರಹವನ್ನು ಈಕ್ಷಿಸಲು. |
| ೩) ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ...ಪಾರ್ಥಿವೇಭ್ಯಃ । | ಗ್ರಹದ ಉನ್ಮಾರ್ಜನೆಗಾಗಿ—ಬೌ. |

---

ದೇವತೆಗಳಿಗೆ; ಪವಿತ್ರಮ್ = ಶುದ್ಧಿಕಾರಣನಾಗಿ ಇದ್ದೀಯೆ; ಯೇಷಾಮ್ = ಯಾವ [ದೇವತೆಗಳಿಗೆ] ಭಾಗಃ = ಸಲ್ಲಬೇಕಾದ ಭಾಗವಾಗಿ; ಅಸಿ = ಇರುವೆಯೋ; ತೇಭ್ಯಃ = ಆ ದೇವತೆಗಳಿಗಾಗಿ; ತ್ವಾ = [ಗೃಹ್ಣಾಮಿ] = ನಿನ್ನನ್ನು [ಕೈಯಲ್ಲಿ ಹಿಡಿದುಕೊಳ್ಳುತ್ತೇನೆ.] ÷[ಎಲೈ ಉಪಾಂಶುಗ್ರಹವೇ!] ಸ್ವಾಂಕೃತಃ ಅಸಿ = [ಪ್ರಾಣರೂಪನಾದ ನೀನು] ನನ್ನಿಂದ ಸ್ವೀಕೃತನಾಗಿದ್ದೀಯೆ; ಮಧುಮತೀಃ = ಮಧುರವಾದ ರಸವುಳ್ಳ; ಇಷಃ = ಅನ್ನಗಳನ್ನು; ನಃ = ನಮಗಾಗಿ; ಕೃಧಿ = ಮಾಡು; [ನಮ್ಮ ಅನ್ನಗಳನ್ನು ಮಧುರವನ್ನಾಗಿ ಮಾಡು.] ದಿವ್ಯೇಭ್ಯಃ = ದೇವಜನ್ಮದಲ್ಲಿರುವ; ಪಾರ್ಥಿವೇಭ್ಯಃ = ಮನುಷ್ಯಜನ್ಮದಲ್ಲಿರುವ;

---

ಮಂತ್ರದಿಂದ ಶುದ್ಧಿಗೊಳಿಸುತ್ತೇನೆ. ನೀನು ರಸರೂಪನು. ರಸವನ್ನು ಸುರಿಸಲು ಸಮರ್ಥನು. [ಯಜಮಾನರ ಇಷ್ಟಾರ್ಥಗಳನ್ನು ಸುರಿಸಲು ಸಮರ್ಥನು] ಇಂತಹ ವರ್ಷಕನಾದ ನೀನು ನಿನ್ನ ಎರಡು ಅಂಶುಗಳಿಂದ ಶುಧ್ಧನಾಗು. ಮೊದಲು ನೀನು

## ದಿವ್ಯೇಭ್ಯಃ ಪಾರ್ಥಿವೇಭ್ಯೋ ಮನಸ್ತ್ವಾಷ್ಟೂರ್ವಂತರಿಕ್ಷ ಮನ್ವಿಹಿ ಸ್ವಾಹಾ ತ್ವಾ ಸುಭವಸ್ಸೂರ್ಯಾಯ

---

ದಿವ್ಯೇಭ್ಯಃ । ಪಾರ್ಥಿವೇಭ್ಯಃ । ಮನಃ । ತ್ವಾ । ಅಷ್ಟು । ಉರು । ಅಂತರಿಕ್ಷಮ್ । ಅನ್ವಿತಿ । ಇಹಿ । ಸ್ವಾಹಾ । ತ್ವಾ । ಸುಭವ ಇತಿ ಸು-ಭವಃ । ಸೂರ್ಯಾಯ ।

---

| ಮಂತ್ರ | ವಿನಿಯೋಗ |
| --- | --- |
| ಮನಸ್ತ್ವಾಷ್ಟು । | ಉಪಾಂಶುಗ್ರಹವನ್ನು ತೆಗೆದುಕೊಂಡು ಏಳಲು —ಬೌಧಾ. ದಕ್ಷಿಣದಲ್ಲಿ ನಿಲ್ಲಲು – ಆಪಸ್ತಂಬ |
| ಉರ್ವಂತರಿಕ್ಷಮನ್ವಿಹಿ । | ಗಮನ ಮಾಡಲು |
| ಸ್ವಾಹಾ.......ಸೂರ್ಯಾಯ । | ಹೋಮ ಮಾಡಲು |

---

ವಿಶ್ವೇಭ್ಯಃ = ಎಲ್ಲಾ; ಇಂದ್ರಿಯೇಭ್ಯಃ = ಇಂದ್ರಿಯಗಳ ಹಿತಾರ್ಥವಾಗಿ; ತ್ವಾ[ಗೃಹ್ಣಾಮಿ] = ನಿನ್ನನ್ನು [ಸ್ವೀಕರಿಸುತ್ತೇನೆ.] ✣ [ಪ್ರಾಣರೂಪವಾದ ಉಪಾಂಶುಗ್ರಹವೇ!] ಮನಃ = ಮನಸ್ಸು; ತ್ವಾ = ನಿನ್ನನ್ನು; ಅಷ್ಟು = ವ್ಯಾಪಿಸಲಿ. ✣ ಉರು = ವಿಸ್ತೀರ್ಣವಾದ; ಅಂತರಿಕ್ಷಮ್ ಅನು = ಆಕಾಶವನ್ನನುಸರಿಸಿ; ಇಹಿ = [ಆಹವನೀಯಪ್ರದೇಶಕ್ಕೆ] ಹೋಗು. ✣ ಸುಭವಃ = ಶೋಭನವಾದ ಮಧ್ಯದಲ್ಲಿ ಇರುವಿಕೆಯುಳ್ಳ [ಪ್ರಾಣವೇ!] ತ್ವಾ = ನಿನ್ನ ರೂಪವಾಗಿರುವ ಗ್ರಹವನ್ನು; ಸೂರ್ಯಾಯ = [ಬಹಿಃಪ್ರಾಣರೂಪನಾದ]

---

ಅರಣ್ಯದಲ್ಲಿ ಸೂರ್ಯಕಿರಣಗಳಿಂದ ಶುದ್ಧನಾದವನು. ಈಗ ನಿನ್ನ ಅಂಶುಗಳಿಂದ ಶುದ್ಧನು. ನೀನು ದೇವನಾಗಿ ಸೋಮಪರಾದ ದೇವತೆಗಳ ಶುದ್ಧಿಕಾರಣನಾಗಿರುವೆ. ಯಾವ ದೇವತೆಗಳಿಗೆ ನೀನು ಸಲ್ಲುವ ಭಾಗವಾಗಿರುವೆಯೋ ಆ ದೇವತೆಗಳಿಗಾಗಿ ನಿನ್ನನ್ನು ಕೈಗಳಿಂದ ಗ್ರಹಿಸುತ್ತೇನೆ.

ಎಲೈ! ಉಪಾಂಶುಗ್ರಹವೇ! ನೀನು ಪ್ರಾಣರೂಪನು. ನಿನ್ನನ್ನು ನಾನು ಸ್ವೀಕರಿಸಿದ್ದೇನೆ. ಮಧುರವಾದ ಅನ್ನಗಳನ್ನು ನಮಗಾಗಿ ಮಾಡು. ನಮ್ಮ ಅನ್ನಗಳನ್ನು ಮಧುರ ರಸಯುಕ್ತವಾಗಿ ಮಾಡು. ದೇವಜನ್ಮದಲ್ಲಿಯೂ ಮನುಷ್ಯಜನ್ಮದಲ್ಲಿಯೂ ಇರುವ ಎಲ್ಲ ಇಂದ್ರಿಯಗಳ ಹಿತಕ್ಕಾಗಿ ನಿನ್ನನ್ನು ಸ್ವೀಕರಿಸುತ್ತೇನೆ.

**ದೇವೇಭ್ಯಸ್ತ್ವಾ ಮರೀಚಿಪೇಭ್ಯ ಏಷ ತೇ ಯೋನಿಃ ಪ್ರಾಣಾಯ ತ್ವಾ ॥ ೨-3 ॥**

**[ವಾಚಸ್ಪತ್ತಚತ್ವಾರಿಗ್ಂಶತ್ ।]**

---

**ದೇವೇಭ್ಯಃ । ತ್ವಾ । ಮರೀಚಿಪೇಭ್ಯ ಇತಿ ಮರೀಚಿ-ಪೇಭ್ಯಃ । ಏಷಃ । ತೇ । ಯೋನಿಃ। *ಪ್ರಾಣಾಯೇತಿ ಪ್ರ-ಅನಾಯ । ತ್ವಾ* ॥ ೨ ॥**

---

| ಮಂತ್ರ | ವಿನಿಯೋಗ |
| --- | --- |
| ದೇವೇಭ್ಯಸ್ತ್ವಾ ಮರೀಚಿಪೇಭ್ಯಃ | ಲೇಪನಿಮಾರ್ಜನ ಮಾಡಲು |
| ಏಷ.......ತ್ವಾ । | ಖರಪ್ರದೇಶದಲ್ಲಿ ಉಪಾಂಶುಗ್ರಹವನ್ನಿಡಲು. —ಆಪಸ್ತಂಬ |
| ೧) ಏಷ ತೇ ಯೋನಿಃ । | ಆಗ್ರಯಣಸ್ಥಾಲಿಯಲ್ಲಿ ಉಪಾಂಶುಸಂಸ್ರಾವವನ್ನು ಹಾಕಲು. |
| ೨) ಪ್ರಾಣಾಯ ತ್ವಾ । | ಖರದಲ್ಲಿ ಉಪಾಂಶುಗ್ರಹವನ್ನಿಡಲು —ಬೌಧಾಯನ |

---

ಸೂರ್ಯನಿಗಾಗಿ; ಸ್ವಾಹಾ=ಹೋಮ ಮಾಡುತ್ತೇನೆ. ✣ [ಎಲೈ ಲೇಪವೇ!] ತ್ವಾ = ನಿನ್ನನ್ನು; **ಮರೀಚಿಪೇಭ್ಯಃ ದೇವೇಭ್ಯಃ** = ಸೂರ್ಯಕಿರಣಗಳನ್ನು ರಕ್ಷಿಸುವ; [ಸೂರ್ಯನ ರಶ್ಮಿರೂಪರಾದ] ದೇವತೆಗಳಿಗಾಗಿ; [ಮಧ್ಯಮಪರಿಧೌ ನಿಮಾರ್ಜ್ಮಿ = ಮಧ್ಯಮಪರಿಧಿಯಲ್ಲಿ ಕೈಯಿಂದ ಉಜ್ಜುತ್ತೇನೆ.] [ಎಲೈ! ಉಪಾಂಶುಗ್ರಹಸಂಪಾತವೇ!] **ಏಷಃ** = ಈ ಖರಪ್ರದೇಶದ ದಕ್ಷಿಣಭಾಗವು/ಈ ಆಗ್ರಯಣಸ್ಥಾಲಿಯು; **ತೇ** = ನಿನ್ನ; **ಯೋನಿಃ** = ಸ್ಥಾನವಾಗಿದೆ; ✣ **ಪ್ರಾಣಾಯ** = ಪ್ರಾಣದೇವತೆಯ ಸಂತೋಷಕ್ಕಾಗಿ; **ತ್ವಾ** = ನಿನ್ನನ್ನು; [ಸಾದಯಾಮಿ= [ಇಲ್ಲಿ] ಇಡುತ್ತೇನೆ.]

---

**'ಪ್ರಾಣೋ ವಾ ಏಷ ಯದುಪಾಗ್ಂಶುಃ'** ಎಂಬಂತೆ ಪ್ರಾಣರೂಪನಾದ ಉಪಾಂಶುಗ್ರಹವೇ! ಮನಸ್ಸು ನಿನ್ನನ್ನು ವ್ಯಾಪಿಸಲಿ.

ನೀನು ವಿಸ್ತೀರ್ಣವಾದ ಅಂತರಿಕ್ಷದಲ್ಲಿ ಆಹವನೀಯಸಮೀಪಪ್ರದೇಶಕ್ಕೆ ಹೋಗು.

ದೇಹಮಧ್ಯದಲ್ಲಿರುವ ಪ್ರಾಣರೂಪವಾದ ಉಪಾಂಶುಗ್ರಹವನ್ನು *ಬಹಿಃಪ್ರಾಣ ರೂಪನಾದ ಸೂರ್ಯನಿಗಾಗಿ ಹೋಮ ಮಾಡುತ್ತೇನೆ.

ಸೂರ್ಯನ ಕಿರಣರಕ್ಷಕರಾದ ದೇವತೆಗಳಿಗಾಗಿ/ಸೂರ್ಯಕಿರಣಗಳೆಂಬ ದೇವತೆ ಗಳಿಗಾಗಿ ಮಧ್ಯಮಪರಿಧಿಯಲ್ಲಿ ಲೇಪವನ್ನು ಕೈಯಿಂದ ಉಜ್ಜಿಹಾಕುತ್ತೇನೆ.

ಎಲೈ ಉಪಾಂಶುಗ್ರಹಸಂಪಾತವೇ! ಈ ಖರಪ್ರದೇಶದ ದಕ್ಷಿಣಭಾಗವು ಅಥವಾ ಈ ಆಗ್ರಯಣಸ್ಥಾಲಿಯು ನಿನ್ನ ಸ್ಥಾನವಾಗಿದೆ.

ಪ್ರಾಣದೇವತೆಯ ಸಂತೋಷಕ್ಕಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

## ವಿನಿಯೋಗ ಸಂಗ್ರಹ

[1]ವಾಚೋ ಹ್ಯುಪಾಂಶುಗ್ರಹಣಂ [2]ಸ್ವಾಮಾದತ್ತೇಽನ್ಯಹಸ್ತತಃ ।
[3]ಉರು ಗತ್ವಾ [4]ಮನಸ್ತ್ವೇತಿ** ವೇದೇರ್ದಕ್ಷಿಣತಃ ಸ್ಥಿತಿಃ ॥
[5]ಸ್ವಾಹಾ ಜುಹೋತಿ ದೇವೇಭ್ಯೋ [6] ಮಧ್ಯಮೇ ಪರಿಧೌ ತಥಾ ।
ಲೇಪಂ ನಿಮಾರ್ಷ್ಟ್ಯೇಷ [7] ಪಾತ್ರಂ ಸಾದಯೇತ್ ಸಪ್ತ ವರ್ಣಿತಾಃ ॥
ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಬೌಧಾಯನ - 12
ಆಪಸ್ತಂಬ - 7

ಈ ಅನುವಾಕದಲ್ಲಿ ಮೀಮಾಂಸಾ-ಛಂದಸ್ಸುಗಳ ವಿಶೇಷವಿಲ್ಲ.

---

*ಸೂರ್ಯನು ಪ್ರಾಣರೂಪನಾಗಿದ್ದಾನೆಂದು ಅಥರ್ವಶ್ರುತಿಯಿದೆ.

**ಆದಿತ್ಯೋ ಹ ವೈ ಬಾಹ್ಯಃ ಪ್ರಾಣ ಉದಯತಿ । ಏಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ ।**

**— ಪ್ರಶ್ನೋಪನಿಷತ್ 3-8.**

** ಇದು ಪಾಠಕ್ರಮದಂತೆ ಮೂರನೆಯ ಮಂತ್ರ. ಈ ಸಂಖ್ಯೆಯು ವಿನಿಯೋಗಾನುಸಾರಿಯಾದುದು.

## ॥ ತೃತೀಯೋऽನುವಾಕಃ ॥

**ಉಪಯಾಮಗೃಹೀತೋऽಸ್ಯಂತರ್ಯಚ್ಛ ಮಘವನ್ಪಾಹಿ**

**ಸೋಮಮುರುಷ್ಯ ರಾಯಃ ಸಮಿಷೋ**

**ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಅಂತಃ । ಯಚ್ಛ । ಮಘವನ್ನಿತಿ ಮಘ-ವನ್ ॥ ಪಾಹಿ । ಸೋಮಮ್ । ಉರುಷ್ಯ । ರಾಯಃ । ಸಮಿತಿ । ಇಷಃ ।**

ಎರಡನೆಯ ಅನುವಾಕದಲ್ಲಿ ಉಪಾಂಶುಗ್ರಹವು ಹೇಳಲ್ಪಟ್ಟಿತು. ಈ ಮೂರನೆಯ ಅನುವಾಕದಿಂದ ಮೂವತ್ತಾರನೆಯ ಅನುವಾಕದವರೆಗಿನ ಪ್ರಶ್ನಭಾಗದಲ್ಲಿ ಅಂತರ್ಯಾಮ ಗ್ರಹದಿಂದಾರಂಭಿಸಿ ಷೋಡಶಿಗ್ರಹವೇ ಕೊನೆಯದಾಗಿರುವ ಗ್ರಹಗಳು ಹೇಳಲ್ಪಟ್ಟಿವೆ. ಈ ಮಂತ್ರಗಳ ಪಾಠವೇ ಗ್ರಹಗಳ ಪೌರ್ವಾಪರ್ಯಕ್ಕೆ ವಿಧಾಯಕ.

| ಮಂತ್ರ | ವಿನಿಯೋಗ |
| --- | --- |
| ಉಪಯಾಮಗೃಹೀತೋऽಸಿ..ಮಾದಯಸ್ವ । | ಸೂರ್ಯೋದಯವಾದ ನಂತರ ಅಂತರ್ಯಾಮಗ್ರಹಗ್ರಹಣ ಮಾಡಲು. |

ಎಲೈ! ಸೋಮರಸವೇ! ನೀನು; **ಉಪಯಾಮಗೃಹೀತಃ ಅಸಿ**=ಭೂಮಿಯಿಂದ ಹಿಡಿಯಲ್ಪಟ್ಟವನು [ಭೂಮಿಯಲ್ಲಿ ಹುಟ್ಟಿದ ದಾರುವಿನಿಂದ ನಿರ್ಮಿತವಾದ ಅಂತರ್ಯಾಮ ಪಾತ್ರದಿಂದ ಗ್ರಹಿಸಲ್ಪಟ್ಟವನು] ಆಗಿದ್ದೀಯೆ; **ಹೇ ಮಘವನ್** = ಎಲೈ! ಇಂದ್ರನೇ! **ಅಂತಃ ಯಚ್ಛ**= [ಈ ಅಂತರ್ಯಾಮಪಾತ್ರವನ್ನು ನಮ್ಮ ಶತ್ರುಗಳಿಗೆ ಕಾಣದಂತೆ] ಮುಚ್ಚಿಟ್ಟಿರು; **ಸೋಮಮ್** = ಸೋಮನನ್ನು; **ಪಾಹಿ** = ರಕ್ಷಿಸು; **ರಾಯಃ** = [ಯಜಮಾನನ] ಧನಗಳನ್ನೂ; **ಉರುಷ್ಯ** = ರಕ್ಷಿಸು; **ಸಮ್ ಇಷಃ** = ಸಮೀಚೀನವಾದ ಅನ್ನಗಳನ್ನು;

ಎಲೈ! ಸೋಮರಸವೇ! ನೀನು ಈ ಭೂಮಿಯಲ್ಲಿ ಉತ್ಪನ್ನವಾದ ದಾರುವಿನಿಂದ

**ಯಜಸ್ವಾಂತಸ್ತೇ ದಧಾಮಿ ದ್ಯಾವಾಪೃಥಿವೀ ಅಂತರುರ್ವಂತ-**
**ರಿಕ್ಷಗ್ಂ ಸಜೋಷಾ ದೇವೈರವರೈಃ ಪರೈಶ್ಚಾಂತರ್ಯಾಮೇ**
**ಮಘವನ್ಮಾದಯಸ್ವ**

---

ಯಜಸ್ವ । ಅಂತಃ । ತೇ । ದಧಾಮಿ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಅಂತಃ । ಉರು । ಅಂತರಿಕ್ಷಮ್ । ಸಜೋಷಾ ಇತಿ ಸ-ಜೋಷಾಃ । ದೇವೈಃ । ಅವರೈಃ। ಪರೈಃ । ಚ । ಅಂತರ್ಯಾಮ ಇತ್ಯಂತಃ-ಯಾಮೇ । ಮಘವನ್ನಿತಿ ಮಘ-ವನ್ । ಮಾದಯಸ್ವ ।



---

**ಯಜಸ್ವ** = ಕೊಡು; **ದ್ಯಾವಾಪೃಥಿವೀ** = ಸ್ವರ್ಗಲೋಕ-ಭೂಲೋಕಗಳನ್ನು; **ತೇ** = ನಿನ್ನ[ಅನುಗ್ರಹದಿಂದ]; **ಅಂತಃ ದಧಾಮಿ** = ಶತ್ರುಗಳ ಕಣ್ಣಿಗೆ ಕಾಣದಂತೆ ಮಾಡುತ್ತೇನೆ. **ಉರು ಅಂತರಿಕ್ಷಮ್** = ವಿಸ್ತೀರ್ಣವಾದ ಅಂತರಿಕ್ಷವನ್ನು; **ಅಂತಃ** ದಧಾಮಿ = ಅಂತರ್ಹಿತವಾದುದನ್ನಾಗಿ ಮಾಡುತ್ತೇನೆ; [ಶತ್ರುಗಳಿಗೆ ನಮ್ಮ ಯಾಗವು ತಿಳಿಯದಂತೆ ಮಾಡುತ್ತೇನೆ.] **ಮಘವನ್** = ಎಲೈ ಇಂದ್ರನೇ!; **ಅವರೈಃ** = ಕನಿಷ್ಠರಾದ; **ಚ** = ಮತ್ತು; **ಪರೈಃ** = ಶ್ರೇಷ್ಠರಾದ; **ದೇವೈಃ** = ದೇವತೆಗಳಿಂದ; **ಸಜೋಷಾಃ** = ಜೊತೆಗೂಡಿದವನಾಗಿ; **ಅಂತರ್ಯಾಮೇ** = ಅಂತರ್ಯಾಮಗ್ರಹದಲ್ಲಿ; **ಮಾದಯಸ್ವ** = [ನೀನೂ ತೃಪ್ತನಾಗಿ ದೇವತೆಗಳನ್ನೂ] ತೃಪ್ತಿಪಡುವಂತೆ ಮಾಡು. [**ಸೋಮಮ್** = ಸೋಮರಸವನ್ನು; **ಪಾಹಿ** = ಸೂರ್ಯರೂಪದಿಂದ ಕುಡಿ; **ಅಂತಃ ಯಚ್ಛ** = ಜಠರದಲ್ಲಿರಿಸು; **ಇಷಃ** = ಪ್ರಜೆಗಳನ್ನು; **ಸಮ್ ಯಜಸ್ವ**= ಯಾಗಶೀಲರನ್ನಾಗಿ ಮಾಡು.]

---

ಮಾಡಲ್ಪಟ್ಟಿರುವ ಅಂತರ್ಯಾಮಪಾತ್ರದಲ್ಲಿ ಗೃಹೀತನಾಗಿರುವೆ. ಎಲೈ ಇಂದ್ರನೇ! [ಧನವಂತನಾದ ಇಂದ್ರನೇ!] ನೀನು ಈ ಪಾತ್ರವನ್ನು ಶತ್ರುಗಳ ಕಣ್ಣಿಗೆ ಬೀಳದಂತೆ ಮಾಡು. ಯಜ್ಞವನ್ನು ರಕ್ಷಿಸು. ಯಜಮಾನನ ಧನಗಳನ್ನೂ ರಕ್ಷಿಸು. ಒಳ್ಳೆಯ ಅನ್ನಗಳನ್ನು ಯಜಮಾನನಿಗೆ ಕೊಡು. ನಿನ್ನ ಅನುಗ್ರಹದಿಂದ ಭೂಮ್ಯಾಕಾಶಗಳನ್ನೂ

**ಸ್ವಾಂಕೃತೋಽಸಿ ಮಧುಮತೀರ್ನ ಇಷಸ್ಕೃಧಿ ವಿಶ್ವೇಭ್ಯ**

**ಸ್ತ್ವೇಂದ್ರಿಯೇಭ್ಯೋ ದಿವ್ಯೇಭ್ಯಃ ಪಾರ್ಥಿವೇಭ್ಯೋ**

---

**ಸ್ವಾಂಕೃತಃ** । ಅಸಿ । ಮಧುಮತೀರಿತಿ ಮಧು-ಮತೀಃ । ನಃ । ಇಷಃ । ಕೃಧಿ ।
ವಿಶ್ವೇಭ್ಯಃ । ತ್ವಾ । ಇಂದ್ರಿಯೇಭ್ಯಃ । ದಿವ್ಯೇಭ್ಯಃ । ಪಾರ್ಥಿವೇಭ್ಯಃ ।

---

| ಮಂತ್ರ | ವಿನಿಯೋಗ |
|---|---|
| ಸ್ವಾಂಕೃತೋಽಸಿ..ಪಾರ್ಥಿವೇಭ್ಯಃ । | ಅಧ್ವರ್ಯುವು ಪ್ರತಿಪ್ರಸ್ಥಾತನಿಂದ ಅಂತರ್ಯಾಮ ಗ್ರಹವನ್ನು ತೆಗೆದುಕೊಳ್ಳಲು–ಆಪ. |
| ೧) ಸ್ವಾಂಕೃತೋಽಸಿ । | ಅಧ್ವರ್ಯುವು ಪ್ರತಿಪ್ರಸ್ಥಾತನಿಂದ ಗ್ರಹವನ್ನು ತೆಗೆದುಕೊಳ್ಳಲು. |
| ೨) ಮಧುಮತೀಃ.....ಕೃಧಿ । | ಗ್ರಹವನ್ನು ಈಕ್ಷಿಸಲು |
| ೩) ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ..ಪಾರ್ಥಿವೇಭ್ಯಃ । | ಗ್ರಹದ ಉನ್ಮಾರ್ಜನೆಗಾಗಿ-ಬೌ. |

---

❖[ಎಲೈ! ಅಂತರ್ಯಾಮಗ್ರಹವೇ!] **ಸ್ವಾಂಕೃತಃ ಅಸಿ** = [ಅಪಾನರೂಪನಾದ ನೀನು] ನನ್ನಿಂದ ಸ್ವೀಕೃತನಾಗಿದ್ದೀಯೆ; **ಮಧುಮತೀಃ** = ಮಧುರವಾದ ರಸವುಳ್ಳ; **ಇಷಃ** = ಅನ್ನಗಳನ್ನು; **ನಃ**=ನಮಗಾಗಿ; **ಕೃಧಿ** = ಮಾಡು; [ನಮ್ಮ ಅನ್ನಗಳನ್ನು ಮಧುರವನ್ನಾಗಿ ಮಾಡು.] **ದಿವ್ಯೇಭ್ಯಃ** = ದೇವಜನ್ಮದಲ್ಲಿರುವ; **ಪಾರ್ಥಿವೇಭ್ಯಃ** = ಮನುಷ್ಯಜನ್ಮದಲ್ಲಿರುವ; **ವಿಶ್ವೇಭ್ಯಃ** = ಎಲ್ಲಾ; **ಇಂದ್ರಿಯೇಭ್ಯಃ** = ಇಂದ್ರಿಯಗಳ ಹಿತಾರ್ಥವಾಗಿ; **ತ್ವಾ** [ಗೃಹ್ಣಾಮಿ] = ನಿನ್ನನ್ನು [ಸ್ವೀಕರಿಸುತ್ತೇನೆ]. ❖ [ಅಪಾನರೂಪವಾದ ಅಂತರ್ಯಾಮಗ್ರಹವೇ!]

---

ವಿಸ್ತೀರ್ಣವಾದ ಅಂತರಿಕ್ಷವನ್ನೂ - ನಮ್ಮ ಯಾಗವು ಶತ್ರುಗಳ ಕಣ್ಣಿಗೆ ಬೀಳದಂತೆ-ಮುಚ್ಚಿಬಿಡುತ್ತೇನೆ. ಎಲೈ ಇಂದ್ರನೇ! ನೀನು ಕನಿಷ್ಠ ಮತ್ತು ಶ್ರೇಷ್ಠರಾದ ಎಲ್ಲ ದೇವತೆಗಳಿಂದಲೂ ಕೂಡಿದವನಾಗಿ ಈ ಅಂತರ್ಯಾಮಪಾತ್ರದಲ್ಲಿರುವ ಸೋಮವನ್ನು

**ಮನಸ್ತ್ವಾಷ್ಟೂರ್ವಂತರಿಕ್ಷಮನ್ವಿಹಿ ಸ್ವಾಹಾ ತ್ವಾ ಸುಭವ**

**ಸ್ಸೂರ್ಯಾಯ ದೇವೇಭ್ಯಸ್ತ್ವಾ ಮರೀಚಿಪೇಭ್ಯ**

---

**ಮನಃ। ತ್ವಾ। ಅಷ್ಟು। ಉರು। ಅಂತರಿಕ್ಷಮ್। ಅನ್ವಿತಿ। ಇಹಿ। ಸ್ವಾಹಾ । ತ್ವಾ। ಸುಭವ**

ಇತಿ ಸು-ಭವಃ। ಸೂರ್ಯಾಯ । **ದೇವೇಭ್ಯಃ । ತ್ವಾ । ಮರೀಚಿಪೇಭ್ಯ** ಇತಿ ಮರೀಚಿ-ಪೇಭ್ಯಃ।

---

| ಮಂತ್ರ | ವಿನಿಯೋಗ |
|---|---|
| ಮನಸ್ತ್ವಾಷ್ಟು । | ಅಂತರ್ಯಾಮಗ್ರಹವನ್ನು ತೆಗೆದುಕೊಂಡು ಏಳಲು –ಬೌಧಾಯನ<br>ದಕ್ಷಿಣದಲ್ಲಿ ನಿಲ್ಲಲು –ಆಪಸ್ತಂಬ |
| ಉರ್ವಂತರಿಕ್ಷಮನ್ವಿಹಿ । | ಗಮನ ಮಾಡಲು. |
| ಸ್ವಾಹಾ............ಸೂರ್ಯಾಯ । | ಹೋಮವನ್ನು ಮಾಡಲು |
| ದೇವೇಭ್ಯಸ್ತ್ವಾ ಮರೀಚಿಪೇಭ್ಯಃ । | ಲೇಪಮಾರ್ಜನವನ್ನು ಮಾಡಲು |



---

**ಮನಃ** = ಮನಸ್ಸು; **ತ್ವಾ** = ನಿನ್ನನ್ನು; **ಅಷ್ಟು** = ವ್ಯಾಪಿಸಲಿ; ✣ **ಉರು** = ವಿಸ್ತೀರ್ಣವಾದ **ಅಂತರಿಕ್ಷಮ್ ಅನು** = ಆಕಾಶವನ್ನನುಸರಿಸಿ; **ಇಹಿ** = [ಆಹವನೀಯ ಪ್ರದೇಶಕ್ಕೆ] ಹೋಗು; ✣ **ಸುಭವಃ** = ಶೋಭನವಾದ ಇರುವಿಕೆಯುಳ್ಳ ಅಪಾನವೇ! **ತ್ವಾ**= ನಿನ್ನ ರೂಪವಾಗಿರುವ ಗ್ರಹವನ್ನು; **ಸೂರ್ಯಾಯ** = ಸೂರ್ಯನಿಗಾಗಿ; **ಸ್ವಾಹಾ** = ಹೋಮ ಮಾಡುತ್ತೇನೆ; ✣ ಎಲ್ಮೆ ಲೇಪವೇ! **ತ್ವಾ** = ನಿನ್ನನ್ನು; **ಮರೀಚಿಪೇಭ್ಯಃ ದೇವೇಭ್ಯಃ** = ಸೂರ್ಯಕಿರಣಗಳನ್ನು ರಕ್ಷಿಸುವ[ಸೂರ್ಯನ ರಶ್ಮಿರೂಪರಾದ] ದೇವತೆಗಳಿಗಾಗಿ; ಮಧ್ಯಮ ಪರಿಧೌ ನಿಮಾರ್ಜ್ಮಿ = ಮಧ್ಯಮಪರಿಧಿಯಲ್ಲಿ ಕೈಯಿಂದ ಉಜ್ಜುತ್ತೇನೆ.

---

ಕುಡಿದು ತೃಪ್ತನಾಗಿ ಆ ಸರ್ವದೇವತೆಗಳೂ ಸೋಮಪಾನದಿಂದ ತೃಪ್ತರಾಗುವಂತೆ ಮಾಡು.

# ಏಷ ತೇ ಯೋನಿರಪಾನಾಯ ತ್ವಾ ॥ ೩-4 ॥

[ದೇವೇಭ್ಯಃ ಸಪ್ತ ಚ]

---

ಏಷಃ । ತೇ । ಯೋನಿಃ ।* ಅಪಾನಾಯೇತ್ಯಪ-ಅನಾಯ । ತ್ವಾ* ॥ ೩॥

---

| ಮಂತ್ರ | ವಿನಿಯೋಗ |
|---|---|
| ಏಷ.......ತ್ವಾ । | ಖರಪ್ರದೇಶದಲ್ಲಿ ಅಂತರ್ಯಾಮಗ್ರಹವನ್ನಿಡಲು –ಆಪಸ್ತಂಬ |
| ೧) ಏಷ ತೇ ಯೋನಿಃ । | ಆಗ್ರಯಣಸ್ಥಾಲಿಯಲ್ಲಿ ಅಂತರ್ಯಾಮಸಂಸ್ರಾವವನ್ನು ಹಾಕಲು |
| ೨) ಅಪಾನಾಯ ತ್ವಾ । | ಖರದಲ್ಲಿ ಅಂತರ್ಯಾಮಗ್ರಹವನ್ನಿಡಲು.–ಬೌ. |

---

❖ ಎಲೈ ಅಂತರ್ಯಾಮಗ್ರಹಸಂಪಾತವೇ! ಏಷಃ = ಈ ಆಗ್ರಯಣಸ್ಥಾಲಿಯು; ತೇ = ನಿನ್ನ; ಯೋನಿಃ = ಸ್ಥಾನವಾಗಿದೆ; ಏಷಃ = ಈ ಖರಪ್ರದೇಶದ ದಕ್ಷಿಣಭಾಗವು; ತೇ = ನಿನ್ನ; ಯೋನಿಃ = ಸ್ಥಾನವಾಗಿದೆ; ❖ ಅಪಾನಾಯ = ಅಪಾನದೇವತಾ ಸಂತೋಷಕ್ಕಾಗಿ; ತ್ವಾ = ನಿನ್ನನ್ನು; ಸಾದಯಾಮಿ = ಇಲ್ಲಿ ಇಡುತ್ತೇನೆ.

---

ಎಲೈ ಅಂತರ್ಯಾಮಗ್ರಹವೇ! ಅಪಾನರೂಪನಾದ ನೀನು ನನ್ನಿಂದ ಸ್ವೀಕರಿಸಲ್ಪಟ್ಟಿದ್ದೀಯೆ. ನಮಗಾಗಿ ಮಧುರವಾದ ರಸವುಳ್ಳ ಅನ್ನವನ್ನು ಮಾಡು. ದೇವಜನ್ಮ ಮತ್ತು ಮನುಷ್ಯಜನ್ಮದಲ್ಲಿರುವ ಎಲ್ಲ ಇಂದ್ರಿಯಗಳ ಹಿತಕ್ಕಾಗಿ ನಿನ್ನನ್ನು ಸ್ವೀಕರಿಸುತ್ತೇನೆ.

ಅಪಾನರೂಪವಾದ ಅಂತರ್ಯಾಮಗ್ರಹವೇ! ನಿನ್ನನ್ನು ಮನಸ್ಸು ವ್ಯಾಪಿಸಲಿ.

ನೀನು ವಿಶಾಲವಾದ ಅಂತರಿಕ್ಷವನ್ನನುಸರಿಸಿ ಆಹವನೀಯಪ್ರದೇಶಕ್ಕೆ ಹೋಗು.

ಎಲೈ ಅಪಾನವೇ! ನಿನ್ನ ರೂಪವಾದ ಗ್ರಹವನ್ನು ಸೂರ್ಯನಿಗಾಗಿ ಹೋಮ ಮಾಡುತ್ತೇನೆ.

ಎಲೈ ಲೇಪವೇ! ಸೂರ್ಯಕಿರಣಗಳನ್ನು ರಕ್ಷಿಸುವ ದೇವತೆಗಳಿಗಾಗಿ ಮಧ್ಯಮ ಪರಿಧಿಯಲ್ಲಿ ಉಜ್ಜುತ್ತೇನೆ.

ಎಲ್ಯೆ! ಅಂತರ್ಯಾಮಗ್ರಹಸಂಪಾತವೇ! ಈ ಆಗ್ರಯಣಸ್ಥಾಲಿಯು ನಿನ್ನ ಸ್ಥಾನವಾಗಿದೆ.

ಎಲೈ ಅಂತರ್ಯಾಮಗ್ರಹವೇ: ಅಪಾನದೇವತಾಸಂತೋಷಕ್ಕಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

## ವಿನಿಯೋಗ ಸಂಗ್ರಹ

[1]ಉಪಾಂತರ್ಯಾಮಕಸ್ತತ್ರ [2-7]ಸ್ವಾಂಕೃತ್ಯಾದಿ ತು ಪೂರ್ವವತ್ ।

ಅನುವಾಕದ ಮಂತ್ರಗಳ ಸಂಖ್ಯೆ ಬೌಧಾಯನ – 10

ಆಪಸ್ತಂಬ – 7



ಛಂದಸ್ಸು : ಅಂತರ್ಯಚ್ಛ......ಮಾದಯಸ್ವ ।

ಇದು ಷಟ್ಪದಾ ಅಷ್ಟಿ ಎಂದು ಭ.ಭಾ. ಮತ.

ಇದು ಋಕ್ ಆಗುವುದೇ ಯಜುಸ್ಸೇ ಎಂಬುದನ್ನು ಮಿಶ್ರರು ಚರ್ಚಿಸಿದ್ದಾರೆ.

---

## ॥ ಚತುರ್ಥೋಽನುವಾಕಃ ॥

**ಆ ವಾಯೋ ಭೂಷ ಶುಚಿಪಾ ಉಪ ನಸ್ಸಹಸ್ರಂ ತೇ ನಿಯುತೋ ವಿಶ್ವವಾರ ।**

---

**ಏತಿ । ವಾಯೋ ಇತಿ । ಭೂಷ । ಶುಚಿಪಾ ಇತಿ ಶುಚಿ-ಪಾಃ । ಉಪೇತಿ । ನಃ। ಸಹಸ್ರಮ್ । ತೇ । ನಿಯುತ ಇತಿ ನಿ-ಯುತಃ । ವಿಶ್ವವಾರೇತಿ ವಿಶ್ವ-ವಾರ ॥**

---

| **ಮಂತ್ರ** | **ವಿನಿಯೋಗ** |
|---|---|
| **ಆ ವಾಯೋ...ಪೂರ್ವಪೇಯಮ್ ॥** | ಐಂದ್ರವಾಯವಗ್ರಹಗ್ರಹಣವನ್ನು ಮಾಡಲು |

---

**ವಾಯೋ** = ಎಲೈ ವಾಯುದೇವನೇ!; **ಆ** [ಆಗತ್ಯ] = ಬಂದು; **ಭೂಷ** = [ಗ್ರಹಗಳನ್ನು] ಅಲಂಕರಿಸು; **ಶುಚಿಪಾಃ** = ಶುದ್ಧವಾದ ಸೋಮವನ್ನು .ಕುಡಿಯುವವನೇ! [ನೀನು] **ನಃ** = ನಮ್ಮನ್ನು; **ಉಪ** [ಆಗಚ್ಛ] = ಸಮೀಪಿಸು. [ವಾಯೋ ಶುಚಿಪಾಃ ನಃ = ನಮ್ಮ ಬಳಿಗೆ ಬಂದು ನಮ್ಮ ಯಜ್ಞವನ್ನು [ಸೋಮಪಾನದಿಂದ] [ಆಗಮನದಿಂದ] ಆ ಭೂಷ = ಎಲ್ಲಾ ಕಡೆಗಳಲ್ಲಿಯೂ [ಸುತ್ತಲೂ] ಅಲಂಕರಿಸು.] **ವಿಶ್ವವಾರ** = **ಸರ್ವವ್ಯಾಪಕನೇ!** **ತೇ** = ನಿನಗೆ; **ಸಹಸ್ರಂ ನಿಯುತಃ** = ಸಾವಿರ ಕುದುರೆಗಳು* [ಇವೆ];

---

ವಾಯುದೇವನೇ! ನೀನು ಬಂದು ಗ್ರಹಪಾತ್ರಗಳನ್ನು/ಯಜ್ಞವನ್ನು ಅಲಂಕರಿಸು. ಎಲೈ! ಶುದ್ಧವಾದ ಸೋಮರಸವನ್ನು ಕುಡಿಯುವವನೇ! ನಮ್ಮ ಸಮೀಪಕ್ಕೆ ಬಾ. ವಿಶ್ವವ್ಯಾಪಕನೇ! ನಿನಗೆ **'ನಿಯುತ್'** ಎಂಬ ಹೆಸರುಳ್ಳ ಸಾವಿರಾರು ಕುದುರೆಗಳಿವೆ. ಆ ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಬಾ. ನೀನು ಯಾವ ಸೋಮವನ್ನು

---

* ವಾಯುವಿನ ಕುದುರೆಗಳಿಗೆ 'ನಿಯುತ್' ಎಂದು ಹೆಸರು.

ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವದಧಿಷೇ ಪೂರ್ವಪೇಯಮ್ ॥ ಉಪಯಾಮಗೃಹೀತೋಽಸಿ ವಾಯವೇ ತ್ವೇಂದ್ರವಾಯೂ ಇಮೇ ಸುತಾಃ ।

---

ಉಪೋ ಇತಿ । ತೇ। ಅಂಧಃ। ಮದ್ಯಮ್। ಆಯಾಮಿ। ಯಸ್ಯ। ದೇವ। ದಧಿಷೇ। ಪೂರ್ವ ಪೇಯಮಿತಿ ಪೂರ್ವ-ಪೇಯಮ್ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ । ವಾಯವೇ । ತ್ವಾ । ಇಂದ್ರವಾಯೂ ಇತೀಂದ್ರ-ವಾಯೂ । ಇಮೇ । ಸುತಾಃ॥

---



| ಮಂತ್ರ | ವಿನಿಯೋಗ |
|---|---|
| ಉಪಯಾಮ..........ತ್ವಾ । | ಉಚ್ಚಾರಣೆ ಮಾಡಿ ಗ್ರಹಣ ಮಾಡಲು |
| ಇಂದ್ರವಾಯೂ........ಹಿ । | ಇಂದ್ರವಾಯವಗ್ರಹಗ್ರಹಣವನ್ನು ಮಾಡಲು |

---

ದೇವ=ವಾಯುದೇವನೇ! ಯಸ್ಯ = ಯಾವ ಸೋಮನ ಸಂಬಂಧಿಯಾದ ರಸದ್ರವ್ಯವನ್ನು; **ಪೂರ್ವಪೇಯಮ್** = ಮೊದಲು ಕುಡಿಯಬೇಕಾದುದು [ಎಂದು ಮನಸ್ಸನ್ನು] **ದಧಿಷೇ** =ಹೊಂದಿರುತ್ತೀಯೋ; [ಅಂತಹ] **ತೇ** = ನಿನ್ನ; **ಅಂಧಃ** = [ಸೋಮರೂಪವಾದ] ಅನ್ನವು; **ಮದ್ಯಮ್** = ಸಂತೋಷಜನಕವಾದುದು. [ಆದುದರಿಂದ] **ಉಪೋ** = ಸಮೀಪದಲ್ಲಿ; **ಆಯಾಮಿ** = [ನಿನ್ನನ್ನು] ಹೊಂದುತ್ತೇನೆ. ✣ [ಎಲೈ! ಸೋಮರಸವೇ!] **ಉಪಯಾಮ ಗೃಹೀತಃ ಅಸಿ** = ಭೂಮಿಯಲ್ಲಿ ಹುಟ್ಟಿದ ಮರದ ದಾರುವಿನ ಪಾತ್ರೆಯಿಂದ ಗೃಹೀತನಾಗಿರುವೆ. **ವಾಯವೇ** = ವಾಯುದೇವನಿಗಾಗಿ; **ತ್ವಾ** = ನಿನ್ನನ್ನು [ಪಾತ್ರದಲ್ಲಿ ಹಿಡಿಯುತ್ತೇನೆ.] ✣ **ಇಂದ್ರವಾಯೂ** = ಇಂದ್ರವಾಯುದೇವತೆಗಳೇ! **ಇಮೇ**=ಈ ಸೋಮಗಳು; **ಸುತಾಃ** = ಅಭಿಷವ ಮಾಡಲ್ಪಟ್ಟಿವೆ [ರಸ ತೆಗೆದವುಗಳಾಗಿವೆ.] [ಆದುದರಿಂದ] ನೀವಿಬ್ಬರು

---

ಮೊದಲು ಕುಡಿಯಲು ಮನಸ್ಸು ಮಾಡಿರುವೆಯೋ ಆ ಸೋಮರಸರೂಪವಾದ ನಿನ್ನ

## ಉಪ ಪ್ರಯೋಭಿರಾಗತಮಿಂದವೋ ವಾಮುಶಂತಿ ಹಿ ।

## ಉಪಯಾಮಗೃಹೀತೋऽಸೀಂದ್ರವಾಯುಭ್ಯಾಂ

---

ಉಪೇತಿ । ಪ್ರಯೋಭಿರಿತಿ ಪ್ರಯಃ-ಭಿಃ । ಏತಿ । ಗತಮ್ । ಇಂದವಃ । ವಾಮ್ । ಉಶಂತಿ । ಹಿ ॥ ಉಪಯಾಮಗೃಹೀತ ಇತ್ಯುಪಯಾಮ - ಗೃಹೀತಃ । ಅಸಿ । ಇಂದ್ರವಾಯುಭ್ಯಾಮಿತೀಂದ್ರವಾಯು-ಭ್ಯಾಮ್ ।

---



| ಮಂತ್ರ | ವಿನಿಯೋಗ |
| --- | --- |
| ಉಪಯಾಮ.............ತ್ವಾ । | ಇಂದ್ರವಾಯವಗ್ರಹಗ್ರಹಣಕ್ಕಾಗಿ |

---

**ಪ್ರಯೋಭಿಃ** = ಸೋಮರಸರೂಪವಾದ ಅನ್ನಗಳ ನಿಮಿತ್ತವಾಗಿ; [ನಮಗೆ ಕೊಡಬೇಕಾದ ಅನ್ನಗಳೊಡನೆ] ಉಪ = ಸಮೀಪಕ್ಕೆ; ಆಗತಮ್ = ಬನ್ನಿರಿ; ಹಿ = ಯಾವ ಕಾರಣದಿಂದ; **ಇಂದವಃ** = ಸೋಮರಸಗಳು; ವಾಮ್ = ನಿಮ್ಮಿಬ್ಬರನ್ನೂ; **ಉಶಂತಿ** = ಅಪೇಕ್ಷಿಸುತ್ತವೆಯೋ [ಆದುದರಿಂದ ನೀವು ಯಾಗಕ್ಕೆ ಬನ್ನಿರಿ] ❖ ಎಲೈ ಸೋಮರಸವೇ! **ಉಪಯಾಮಗೃಹೀತಃ** = ಪಾರ್ಥಿವವಿಕಾರವಾದ ದಾರುಪಾತ್ರೆಯಲ್ಲಿ ಹಿಡಿಯಲ್ಪಟ್ಟವನು; **ಅಸಿ** = ಆಗಿದ್ದೀಯೆ; **ತ್ವಾ** = ನಿನ್ನನ್ನು; **ಇಂದ್ರವಾಯುಭ್ಯಾಮ್** = ಇಂದ್ರವಾಯುದೇವತೆಗಳಿಗಾಗಿ; [ಗೃಹ್ಣಾಮಿ = ಪಾತ್ರದಲ್ಲಿ ಹಿಡಿದಿಡುತ್ತೇನೆ.]

---

ಅನ್ನವು ನಿನಗೆ ಸಂತೋಷಕರವಾಗಿದೆ. ಆದುದರಿಂದ ಆ ಸೋಮರಸದೊಡನೆ ನಿನ್ನ ಬಳಿಗೆ ಬರುತ್ತೇನೆ.

ಓ ಸೋಮರಸವೇ! ನೀನು ದಾರುಪಾತ್ರೆಯಲ್ಲಿ ಗ್ರಹಿಸಲ್ಪಟ್ಟಿರುವೆ. ನಿನ್ನನ್ನು ವಾಯುದೇವನಿಗಾಗಿ ಗ್ರಹಿಸುತ್ತೇನೆ.

ಎಲೈ ಇಂದ್ರವಾಯುದೇವತೆಗಳೇ! ಈ ಸೋಮಲತೆಗಳ ರಸವನ್ನು ತೆಗೆದಿಡ

## ತ್ವೈಷ ತೇ ಯೋನಿಸ್ಸಜೋಷಾಭ್ಯಾಂ ತ್ವಾ ॥ ೪-5 ॥

[ಆ ವಾಯೋ ತ್ರಿಚತ್ವಾರಿಗ್‌ಂಶತ್ ।]

---

ತ್ವಾ । ಏಷಃ । ತೇ । ಯೋನಿಃ । ಸಜೋಷಾಭ್ಯಾಮಿತಿ ಸ - ಜೋಷಾಭ್ಯಾಮ್ ।

ತ್ವಾ ॥ ೪ ॥

---

✣ ಎಲ್ಲೈ ಐಂದ್ರವಾಯವಪಾತ್ರವೇ! ಏಷಃ = ಈ ಖರಪ್ರದೇಶಭಾಗವು; ತೇ = ನಿನ್ನ; ಯೋನಿಃ = ಸ್ಥಾನವಾಗಿದೆ; ಸಜೋಷಾಭ್ಯಾಮ್ = ಸಮಾನಪ್ರೀತಿಯುಳ್ಳ; [ಇಂದ್ರವಾಯುಗಳಿಗಾಗಿ] ತ್ವಾ = ನಿನ್ನನ್ನು [ಇಡುತ್ತೇನೆ].



---

ಲಾಗಿದೆ. ಈ ಸೋಮರಸಗಳು ನಿಮ್ಮನ್ನು ಅಪೇಕ್ಷಿಸುತ್ತವೆ. [ನೀವು ಸೋಮರಸವನ್ನು ಕುಡಿಯಬೇಕೆಂದು ಬಯಸುತ್ತವೆ] ಆದುದರಿಂದ ಆ ಸೋಮರಸನಿಮಿತ್ತವಾಗಿ [ನೀವು ಯಜಮಾನನಿಗೆ ಅನುಗ್ರಹಿಸುವ ಅನ್ನಾದಿಗಳೊಡನೆ] ನೀವಿಬ್ಬರು ನಮ್ಮ ಬಳಿಗೆ ಬನ್ನಿರಿ.

ಎಲ್ಲೈ ಸೋಮನೇ! ನೀನು ದಾರುಪಾತ್ರೆಯಿಂದ ಗೃಹೀತನಾಗಿರುವೆ. ಇಂದ್ರವಾಯು ದೇವತೆಗಳಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲ್ಲೈ! ಐಂದ್ರವಾಯವಪಾತ್ರವೇ! ಖರಪ್ರದೇಶದ ಈ ಭಾಗವು ನಿನ್ನ ಸ್ಥಾನವಾಗಿದೆ. ನಿನ್ನನ್ನು ಸಮಾನಪ್ರೀತಿಯುಳ್ಳ ಇಂದ್ರವಾಯುದೇವತೆಗಳಿಗಾಗಿ ಇಲ್ಲಿ ಸಾದನ ಮಾಡುತ್ತೇನೆ. [ಇಡುತ್ತೇನೆ.]

**"ವಿನಿಯೋಗ ಸಂಗ್ರಹ"ವನ್ನು 36ನೆಯ ಅನುವಾಕದ ನಂತರ ಸಾಯಣಾಚಾರ್ಯರು ವಿವರಿಸಿರುತ್ತಾರೆ. ಅಂತೆಯೇ ಅಲ್ಲಿಯೇ ವಿನಿಯೋಗ ಸಂಗ್ರಹವನ್ನು ನೀಡಲಾಗುವುದು.**

## ಅ) ಮೀಮಾಂಸಾ

**1. ಐಂದ್ರವಾಯವಗ್ರಹಗ್ರಹಣವು ಯಾವಾಗ? [ಜೈ.ಸೂ. 10-5-30]**

ಸೋಮಯಾಗದಲ್ಲಿ ಉಪಾಂಶು, ಅಂತರ್ಯಾಮ, ಐಂದ್ರವಾಯವ, ಮೈತ್ರಾವರುಣ - ಈ ಕ್ರಮದಲ್ಲಿ ಗ್ರಹಗ್ರಹಣವಿದೆ. ಆದರೆ 'ಐಂದ್ರವಾಯವಾಗ್ರಾನ್ ಗೃಹ್ಣೀಯಾತ್' [ತೈ.ಸಂ. 6. 4. 7.] ಎಂಬ ವಾಕ್ಯದಿಂದ ಎಲ್ಲಕ್ಕಿಂತಲೂ ಮೊದಲು ಐಂದ್ರವಾಯವ ಗ್ರಹಗ್ರಹಣವೇ? ಅಥವಾ ಪಾಠಕ್ರಮದಂತೆ ಸ್ವಸ್ಥಾನದಲ್ಲಿಯೇ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : ಪಾಠಕ್ರಮದಂತೆಯೇ ಗ್ರಹಗ್ರಹಣವನ್ನು ಮಾಡುವುದಾದರೆ ಅಗ್ರತ್ವವು ಬರುವುದಿಲ್ಲ. ಪಾಠಕ್ರಮದಿಂದಲೇ ಅಂತರ್ಯಾಮ ಗ್ರಹಣದ ನಂತರ ಇದರ ಗ್ರಹಣವು ಸಿದ್ಧವಾಗುವುದರಿಂದ ವಿಧಿವಚನವು ವ್ಯರ್ಥವಾಗುತ್ತದೆ. ಆದುದರಿಂದ ಎಲ್ಲಕ್ಕಿಂತಲೂ ಮೊದಲು ಐಂದ್ರವಾಯವಗ್ರಹ ಗ್ರಹಣವನ್ನು ಮಾಡಬೇಕು.

ಯಾವುದರಲ್ಲಿ ಅಗ್ರತ್ವವೆಂಬ ಪ್ರಶ್ನೆಯು ಬಂದಾಗ 'ಧಾರಯಾ ಗೃಹ್ಣಾತಿ' ಎಂಬ ವಾಕ್ಯವು ಈ ಪ್ರಕರಣದಲ್ಲಿರುವುದರಿಂದ ಧಾರಾಗ್ರಹಗಳಲ್ಲಿ ಐಂದ್ರವಾಯವಗ್ರಹವು ಮೊದಲನೆಯದು ಎಂದು ಸಿದ್ಧವಾಗುತ್ತದೆ. ಉಪಾಂಶು– ಅಂತರ್ಯಾಮಗ್ರಹಗಳು ಅಧಾರಾಗ್ರಹಗಳು. ಆದುದರಿಂದ ಪಾಠಕ್ರಮದಂತೆಯೇ ಧಾರಾಗ್ರಹಗಳಲ್ಲಿ ಮೊದಲನೆಯದಾದ ಐಂದ್ರವಾಯವವನ್ನು ಸ್ವಸ್ಥಾನದಲ್ಲಿ ಗ್ರಹಿಸುವುದು ಯುಕ್ತ. ಇದು ಇಲ್ಲಿನ ಸಿದ್ಧಾಂತ.

**2. ಕಾಮ್ಯಾನುಷ್ಠಾನವಾದಲ್ಲಿ ಈ ಗ್ರಹಗ್ರಹಣ ಯಾವಾಗ? [ಜೈ.ಸೂ. 10-5.31.]**

ಈ ಜ್ಯೋತಿಷ್ಟೋಮಪ್ರಕರಣದಲ್ಲಿಯೇ

'ಐಂದ್ರವಾಯವಾಗ್ರಾನ್ಗೃಹ್ಣೀಯಾದ್ಯಃ ಕಾಮಯೇತ ಯಥಾಪೂರ್ವಂ ಪ್ರಜಾಃ ಕಲ್ಪೇರನ್ನಿತಿ' [ತೈ.ಸಂ. 7.2.7.]

ಎಂದು ಕಾಮ್ಯವಾಗಿ ಗ್ರಹಗ್ರಹಣವು ವಿಹಿತವಾಗಿದೆ. ಇಲ್ಲಿ ಅಗ್ರತ್ವವು ಪಾಠದಂತೆಯೇ? ಅಥವಾ ಸರ್ವಾದಿಯಲ್ಲಿಯೇ?

ಪುನಃ ಕಾಮ್ಯವಾಗಿ ವಿಧಾನ ಮಾಡಿರುವುದರಿಂದ ಸರ್ವಾದಿಯಲ್ಲಿಯೇ ಗ್ರಹಣವು ಯುಕ್ತ. ಇದು ಪೂರ್ವಪಕ್ಷ.

ಇಲ್ಲಿಯೂ ಧಾರಾಗ್ರಹಪ್ರಕರಣವೇ ಇರುವುದರಿಂದ ನಿತ್ಯವಾದ ಐಂದ್ರವಾಯವ ಗ್ರಹಕ್ಕೇ ಕಾಮನಾಸಂಬಂಧವನ್ನು ಹೇಳುವುದು ಸೂಕ್ತ. ಆದುದರಿಂದ ಸ್ವಸ್ಥಾನದಲ್ಲಿಯೇ ಐಂದ್ರವಾಯವಗ್ರಹಗ್ರಹಣವನ್ನು ಮಾಡಬೇಕು. ಅದನ್ನೇ ಕಾಮ್ಯಾರ್ಥವಾಗಿಯೂ ಮಾಡಬಹುದು. ಇದು ಇಲ್ಲಿನ ಸಿದ್ಧಾಂತ.

**3. ಯದಿ ರಥಂತರ...... ಎಂಬ ವಿಧಿಯು ಯಾವ ರೀತಿಯದು?**

**[ಜೈ.ಸೂ. 2.3. 1-3]**

ಜ್ಯೋತಿಷ್ಟೋಮಪ್ರಕರಣದಲ್ಲಿ 'ಯದಿ ರಥಂತರಸಾಮಾ ಸೋಮಃ ಸ್ಯಾತ್ ಐಂದ್ರವಾಯವಾಗ್ರಾನ್ ಗೃಹ್ಣೀಯಾತ್, ಯದಿ ಬೃಹತ್ಸಾಮಾ ಶುಕ್ರಾಗ್ರಾನ್, ಯದಿ ಜಗತ್ಸಾಮಾ ಆಗ್ರಯಣಾಗ್ರಾನ್' ಎಂಬ ವಾಕ್ಯವಿದೆ. [ಆಪ. ಶ್ರೌ.ಸೂ. 12.14.1] ಈ ವಿಧಿಯು ರಥಂತರಾದಿಗುಣಗಳಿಂದ ಕೂಡಿದ ಬೇರೆಯದೇ? ಅಥವಾ ಇದು ಗುಣವಿಧಿಯೇ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ: ಪ್ರಕೃತಿಯಾದ ಜ್ಯೋತಿಷ್ಟೋಮವು ಗಾಯತ್ರಾದಿಸಾಮಗಳಿಂದ ಕೂಡಿದೆ. ಗಾಯತ್ರಾದಿಸಾಮಗಳ ವ್ಯಾವೃತ್ತಿಗಾಗಿ ಐಂದ್ರವಾಯವಾಗ್ರತ್ವ ಮುಂತಾದ ಗುಣಗಳಿಂದ ಕೂಡಿದ ಬೇರೆಯ ಕರ್ಮಗಳೇ ವಿಹಿತವಾಗಿವೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಜ್ಯೋತಿಷ್ಟೋಮದ ಮಾಧ್ಯಂದಿನಸವನದಲ್ಲಿ ಪೃಷ್ಠಸ್ತೋತ್ರಗಳಲ್ಲಿ ರಥಂತರ, ಬೃಹತ್, ವೈರೂಪ, ವೈರಾಜ, ಶಾಕ್ವರ, ರೈವತಗಳೆಂಬ ಸಾಮಗಳಿವೆ. 'ಯದಿ ರಥಂತರ......' ಎಂಬ ಮೇಲಿನ ವಾಕ್ಯದಿಂದ– ರಥಂತರ ಸಾಮವಿದ್ದರೆ ಬೃಹತ್, ಜಾಗತಗಳಿಲ್ಲ. ಬೃಹತ್ಸಾಮವಾದರೆ ರಥಂತರ, ಜಾಗತಗಳಿಲ್ಲ. ಜಾಗತಸಾಮವಾದರೆ ಬೃಹತ್, ರಥಂತರಗಳಿಲ್ಲ ಎಂಬ– ಪರಸ್ಪರ ವ್ಯಾವರ್ತಕವಾದ ಗುಣವು ವಿಹಿತವಾಗಿದೆ.

ಪ್ರಕೃತಿಯಾದ ಜ್ಯೋತಿಷ್ಟೋಮದಲ್ಲಿ ಜಗತ್ಸಾಮವಿಲ್ಲದಿದ್ದರೂ ವಿಕೃತಿಯಲ್ಲಿ 'ವಿಷುವತ್' ಎಂಬ ಹೆಸರಿನ ಮುಖ್ಯವಾದ ಅಹಸ್ಸಿನಲ್ಲಿ ಆಗ್ರಯಣಾಗ್ರತ್ವಕ್ಕೆ ಅವಕಾಶವಿರುತ್ತದೆ. ಹೀಗಾಗಿ 'ಯದಿ ರಥಂತರ ಸಾಮಾ...............' ಎಂಬುದು ಗುಣವಿಧಿ ಮಾತ್ರ.

**4. ಐಂದ್ರವಾಯವಗ್ರಹಭಕ್ಷಣವು ಎಷ್ಟು ಬಾರಿ? [ಜೈ.ಸೂ. 3.5.8.]**

ಐಂದ್ರವಾಯವಗ್ರಹದಲ್ಲಿರುವ ಸಂಸ್ಕಾರ್ಯವಾದ ಸೋಮವು ಒಂದೇ

ಆದುದರಿಂದ ಐಂದ್ರವಾಯವಗ್ರಹಭಕ್ಷಣವು ಒಂದೇ ಬಾರಿ ಎಂಬುದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ ಸಿದ್ಧಾಂತವು ಹೀಗಿದೆ : 'ದ್ವಿರೈಂದ್ರವಾಯವಂ ಭಕ್ಷಯತಿ......' ಎಂಬ ವಚನವಿರುವುದರಿಂದ[ಶಾಂಖಾಯನಬ್ರಾಹ್ಮಣ 13. 6.] ಎರಡು ಬಾರಿ ಭಕ್ಷಣ ಮಾಡಬೇಕು.

## ಆ) ಛಂದಸ್ಸು

1. ಆ ವಾಯೋ.......ಪೂರ್ವಪೇಯಮ್ । ಚತುಷ್ಪದಾ ತ್ರಿಷ್ಟುಪ್

2. ಇಂದ್ರವಾಯೂ........ಹಿ । ಗಾಯತ್ರೀ



## ॥ ಪಂಚಮೋಽನುವಾಕಃ ॥

ಅಯಂ ವಾಂ ಮಿತ್ರಾವರುಣಾ ಸುತಸ್ಸೋಮ ಋತಾವೃಧಾ।

ಮಮೇದಿಹ ಶ್ರುತಗ್ಂ ಹವಮ್ ॥

---

ಅಯಮ್ । ವಾಮ್ । ಮಿತ್ರಾವರುಣೇತಿ ಮಿತ್ರಾ-ವರುಣಾ । ಸುತಃ । ಸೋಮಃ । ಋತಾವೃಧೇತ್ಯೃತ-ವೃಧಾ ॥ ಮಮ । ಇತ್ । ಇಹ । ಶ್ರುತಮ್ । ಹವಮ್ ॥

---

| ಮಂತ್ರ | ವಿನಿಯೋಗ |
|---|---|
| ಅಯಂ............ಹವಮ್ ॥ | ಮೈತ್ರಾವರುಣಗ್ರಹಗ್ರಹಣವನ್ನು ಮಾಡಲು. |

---

**ಋತಾವೃಧಾ** = ಸತ್ಯವನ್ನು [ಯಜ್ಞವನ್ನು] ವೃದ್ಧಿಗೊಳಿಸುವ; **ಮಿತ್ರಾವರುಣಾ** = ಮಿತ್ರಾವರುಣದೇವತೆಗಳೇ! **ಅಯಮ್** = ಈ; **ಸೋಮಃ** = ಸೋಮನು; **ವಾಮ್** = ನಿಮ್ಮಿಬ್ಬರಿಗಾಗಿ; **ಸುತಃ** = ರಸ ತೆಗೆಯಲ್ಪಟ್ಟವನಾಗಿದ್ದಾನೆ; **ಇತ್** = ಆದುದರಿಂದ; **ಇಹ** = ಈ ಕರ್ಮದಲ್ಲಿ [ಈಗ]; **ಮಮ** = ನನ್ನ; **ಹವಮ್** = ಆಹ್ವಾನವನ್ನು; **ಶ್ರುತಮ್** = ಕೇಳಿರಿ;

---

ಸತ್ಯವನ್ನು [ಯಜ್ಞವನ್ನು] ವೃದ್ಧಿಗೊಳಿಸುವ ಮಿತ್ರಾವರುಣದೇವತೆಗಳೇ! ಈ ಸೋಮವು ನಿಮಗಾಗಿ ರಸ ತೆಗೆದುದಾಗಿದೆ. ಆದುದರಿಂದ ನನ್ನ ಆಹ್ವಾನವನ್ನು ಕೇಳಿ. ಯಾಗಕ್ಕೆ ಬನ್ನಿರಿ.

ಉಪಯಾಮಗೃಹೀತೋಽಸಿ ಮಿತ್ರಾವರುಣಾಭ್ಯಾಂ ತ್ವೈಷ ತೇ ಯೋನಿರ್ ಋತಾಯುಭ್ಯಾಂ ತ್ವಾ॥ ೫-6 ॥

[ಅಯಂ ವಾಂ ವಿಗ್ಂಶತಿಃ ।]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಮಿತ್ರಾವರುಣಾಭ್ಯಾಮಿತಿ ಮಿತ್ರಾ-ವರುಣಾಭ್ಯಾಮ್ । ತ್ವಾ । ಏಷಃ । ತೇ । ಯೋನಿಃ । ಋತಾಯುಭ್ಯಾಮಿತ್ಯೃತಾಯು-ಭ್ಯಾಮ್ । ತ್ವಾ ॥ ೫ ॥

---



| ಮಂತ್ರ | ವಿನಿಯೋಗ |
|---|---|
| ಉಪಯಾಮ......ತ್ವಾ । ಏಷ.........ತ್ವಾ । | ಎರಡನ್ನು ಹೇಳಿ ಮೈತ್ರಾವರುಣಗ್ರಹ ಗ್ರಹಣ ಮಾಡಿ ಆಸಾದನ ಮಾಡಲು. |

---

❖ ಓ! ಸೋಮನೇ! ಉಪಯಾಮಾಗೃಹೀತಃ ಅಸಿ = ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ; ತ್ವಾ = ನಿನ್ನನ್ನು; ಮಿತ್ರಾವರುಣಾಭ್ಯಾಮ್ = ಮಿತ್ರಾವರುಣದೇವತೆಗಳಿಗಾಗಿ; ಗೃಹ್ಣಾಮಿ = [ಪಾತ್ರೆಯಲ್ಲಿ] ಗ್ರಹಿಸುತ್ತೇನೆ; ❖ ಏಷಃ = ಈ ಖರಭಾಗವು; ತೇ ಯೋನಿಃ = ನಿನ್ನ ಸ್ಥಾನವು. [ದಾರುಪಾತ್ರವೇ!] ಋತಾಯುಭ್ಯಾಮ್ = ಸತ್ಯವನ್ನು ಅಪೇಕ್ಷಿಸುವ [ಮಿತ್ರಾವರುಣರಿಗಾಗಿ] ತ್ವಾ = ನಿನ್ನನ್ನು [ಇಲ್ಲಿ ಇಡುತ್ತೇನೆ.]

---

ಸೋಮರಸವೇ! ನೀನು ದಾರುಗ್ರಹದಿಂದ ಗ್ರಹಿಸಲ್ಪಟ್ಟಿರುವೆ. ನಿನ್ನನ್ನು ಮಿತ್ರಾವರುಣದೇವತೆಗಳಿಗಾಗಿ ಗ್ರಹಿಸುತ್ತೇನೆ.

ಎಲೈ! ಸೋಮಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ. ನಿನ್ನನ್ನು ಸತ್ರವನ್ನು [ಯಜ್ಞವನ್ನು] ಅಪೇಕ್ಷಿಸುವ ಮಿತ್ರಾವರುಣದೇವತೆಗಳಿಗಾಗಿ ಇಲ್ಲಿ ಇಡುತ್ತೇನೆ.

ಛಂದಸ್ಸು

ಅಯಂ ವಾಂ...........ಹವಮ್ । ಗಾಯತ್ರೀ

---



## ॥ ಷಷ್ಠೋಽನುವಾಕಃ ॥

**ಯಾ ವಾಂ ಕಶಾ ಮಧುಮತ್ಯಶ್ವಿನಾ ಸೂನೃತಾವತೀ । ತಯಾ ಯಜ್ಞಂ ಮಿಮಿಕ್ಷತಮ್ ॥**

---

ಯಾ । ವಾಮ್ । ಕಶಾ । ಮಧುಮತೀತಿ ಮಧು-ಮತೀ । ಅಶ್ವಿನಾ । ಸೂನೃತಾವತೀತಿ ಸೂನೃತಾ-ವತೀ ॥ ತಯಾ । ಯಜ್ಞಮ್ । ಮಿಮಿಕ್ಷತಮ್ ॥

---



| ಮಂತ್ರ | ವಿನಿಯೋಗ |
|---|---|
| ಯಾ ವಾಂ.........ಮಿಮಿಕ್ಷತಮ್ । | ಬಹಿಷ್ಪವಮಾನಸ್ತೋತ್ರವಾದ ಮೇಲೆ |

---

**ಅಶ್ವಿನಾ** = ಎಲೈ! ಅಶ್ವಿನೀದೇವತೆಗಳೇ! **ಮಧುಮತೀ** = ಮಧುರಶಬ್ದಗಳಿಂದ ಕೂಡಿದ [ಮಧುರಸವುಳ್ಳ]; **ಸೂನೃತಾವತೀ** = ಪ್ರಿಯವಚನಗಳುಳ್ಳ; **ಯಾ ವಾಮ್ ಕಶಾ** = ಯಾವ ನಿಮ್ಮ ಮಾತು ಇದೆಯೋ [ನಿಮ್ಮ ವಿಷಯವಾದ ನಮ್ಮ ಮಾತು ಇದೆಯೋ] **ತಯಾ** = ಆ ಮಾತಿನಿಂದ; **ಯಜ್ಞಮ್** = [ಈ ನಮ್ಮ] ಯಾಗವನ್ನು; **ಮಿಮಿಕ್ಷತಮ್** = ನೆರವೇರಿಸಿಕೊಡಲು ಇಚ್ಛಿಸಿರಿ.

---

ಅಶ್ವಿನೀದೇವತೆಗಳೇ! ನಿಮ್ಮ ಮಾತು [ನಿಮ್ಮನ್ನು ಕುರಿತ ನಮ್ಮ ಮಾತು] ಮಧುರಶಬ್ದಗಳಿಂದ ಕೂಡಿದೆ. ಪ್ರಿಯವಚನಗಳಿಂದಲೂ ಕೂಡಿದೆ. ಇಂತಹ ಮಾತಿನ ಕಾರಣದಿಂದ ನಮ್ಮ ಯಾಗಕ್ಕೆ ಬಂದು ಯಾಗವನ್ನು ನೆರವೇರಿಸಿಕೊಡಿರಿ.

ಉಪಯಾಮಗೃಹೀತೋಽಸ್ಯಶ್ವಿಭ್ಯಾಂ ತ್ವೈಷ ತೇ ಯೋನಿ

ರ್ಮಾಧ್ವೀಭ್ಯಾಂ ತ್ವಾ ॥ ೬-7 ॥

[ಯಾ ವಾಮಷ್ಟಾದಶ ।]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಅಶ್ವಿಭ್ಯಾಮಿತ್ಯಶ್ವಿ-ಭ್ಯಾಮ್।

ತ್ವಾ । ಏಷಃ । ತೇ । ಯೋನಿಃ । ಮಾಧ್ವೀಭ್ಯಾಮ್ । ತ್ವಾ ॥ ೬ ॥

---



| ಮಂತ್ರ | ವಿನಿಯೋಗ |
|---|---|
| ಉಪಯಾಮ..........ತ್ವಾ । | ಆಶ್ವಿನಗ್ರಹಗ್ರಹಣ ಮತ್ತು ಆಸಾದನವನ್ನು |
| ಏಷ............ತ್ವಾ । | ಮಾಡಲು. |

---

✣ [ಎಲೈ! ಸೋಮರಸವೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರೆಯಲ್ಲಿ ಗ್ರಹಿಸಲ್ಪಟ್ಟಿರುವೆ; ಅಶ್ವಿಭ್ಯಾಮ್ = ಅಶ್ವಿನೀದೇವತೆಗಳಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ] ✣ ಎಲೈ! ಆಶ್ವಿನಪಾತ್ರವೇ! ಏಷಃ = ಈ ಖರಪ್ರದೇಶವು; ತೇ = ನಿನ್ನ; ಯೋನಿಃ = ಸ್ಥಾನವಾಗಿದೆ; ಮಾಧ್ವೀಭ್ಯಾಮ್ = ಮಧು [ಜೇನು] ರಸಭರಿತವಾದ ಚರ್ಮದ ಚೀಲದಂತಿರುವ [ಅಶ್ವಿನೀದೇವತೆಗಳಿಗಾಗಿ] ತ್ವಾ=ನಿನ್ನನ್ನು[ಇಲ್ಲಿ ಇಡುತ್ತೇನೆ.]

---

ಸೋಮರಸವೇ! ನೀನು ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ. ನಿನ್ನನ್ನು ಅಶ್ವಿನೀದೇವತೆಗಳಿಗಾಗಿ ಗ್ರಹಿಸುತ್ತೇನೆ. ★ ಎಲೈ! ಆಶ್ವಿನಪಾತ್ರವೇ! ಈ ಖರಪ್ರದೇಶದ ಭಾಗವು ನಿನ್ನ ಸ್ಥಾನವಾಗಿದೆ. ಜೇನಿನ ಚೀಲದಂತಿರುವ[ಮಧುರಸ್ವಭಾವದ] ಅಶ್ವಿನೀದೇವತೆಗಳಿಗಾಗಿ ನಿನ್ನನ್ನು ಇಲ್ಲಿ ಸಾದನ ಮಾಡುತ್ತೇನೆ.

ಛಂದಸ್ಸು

| | |
|---|---|
| ಯಾ ವಾಂ ಕಶಾ.............। | ಗಾಯತ್ರೀ |

---

## ॥ ಸಪ್ತಮೋಽನುವಾಕಃ ॥

ಪ್ರಾತರ್ಯುಜೌ ವಿಮುಚ್ಯೇಥಾಮಶ್ವಿನಾವೇಹ ಗಚ್ಛತಮ್ ।
ಅಸ್ಯ ಸೋಮಸ್ಯ ಪೀತಯೇ ।

---

ಪ್ರಾತರ್ಯುಜಾವಿತಿ ಪ್ರಾತಃ-ಯುಜೌ । ವೀತಿ । ಮುಚ್ಯೇಥಾಮ್ । ಅಶ್ವಿನೌ । ಏತಿ । ಇಹ । ಗಚ್ಛತಮ್ ॥ ಅಸ್ಯ । ಸೋಮಸ್ಯ । ಪೀತಯೇ ॥

---

| ಮಂತ್ರ | ವಿನಿಯೋಗ |
|---|---|
| ಪ್ರಾತರ್ಯುಜೌ.......ಪೀತಯೇ । | ಅಶ್ವಿನಗ್ರಹಗ್ರಹಣ ಮಾಡಲು |
| ಉಪಯಾಮ........ತ್ವಾ । | ಮತ್ತು ಆಸಾದನ ಮಾಡಲು. [ವಿಕಲ್ಪ |
| ಏಷ..........ತ್ವಾ । | ವಾಗಿ ಹೇಳಲ್ಪಟ್ಟಿದೆ.] |

---

**ಅಶ್ವಿನೌ** = ಎಲೈ! ಅಶ್ವಿನೀದೇವತೆಗಳೇ! **ಪ್ರಾತರ್ಯುಜೌ** = ಪ್ರಾತಃಕಾಲದಲ್ಲಿಯೇ ಯಜಮಾನನೊಡನೆ ಸೇರಿದವರಾಗಿ; **ವಿಮುಚ್ಯೇಥಾಮ್** =[ಬೇರೆಯ ಯಜಮಾನನಿಂದ] ವಿಮುಕ್ತರಾಗಿರಿ: **ಅಸ್ಯ ಸೋಮಸ್ಯ** = ಈ ಸೋಮರಸದ; **ಪೀತಯೇ** = ಪಾನಕ್ಕಾಗಿ; **ಇಹ** = ಈ ಯಜ್ಞಕರ್ಮದಲ್ಲಿ; **ಆ ಗಚ್ಛತಮ್**= ಆಗಮಿಸಿರಿ.

---

ಎಲೈ! ಅಶ್ವಿನೀದೇವತೆಗಳೇ! ನೀವಿಬ್ಬರೂ ಪ್ರಾತಃಕಾಲದಲ್ಲಿಯೇ ಬಂದು ಯಜಮಾನನೊಡನೆ ಕೂಡಿಕೊಳ್ಳಿರಿ. ಬೇರೆಯ ಯಜಮಾನರನ್ನು ಬಿಟ್ಟು ಬನ್ನಿ. ಈ ಯಾಗದಲ್ಲಿ ಸೋಮಪಾನಕ್ಕಾಗಿ ಆಗಮಿಸಿರಿ.

## ಉಪಯಾಮಗೃಹೀತೋಽಸ್ಯಶ್ವಿಭ್ಯಾಂ ತ್ವೈಷ ತೇ

## ಯೋನಿರಶ್ವಿಭ್ಯಾಂ ತ್ವಾ ॥ ೭-8 ॥

[ಪ್ರಾತರ್ಯುಜಾವೇಕಾನ್ನವಿಗ್ಂಶತಿಃ ।]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ। ಅಶ್ವಿಭ್ಯಾಮಿತ್ಯಶ್ವಿ-ಭ್ಯಾಮ್।

ತ್ವಾ । ಏಷಃ । ತೇ । ಯೋನಿಃ । ಅಶ್ವಿಭ್ಯಾಮಿತ್ಯಶ್ವಿ-ಭ್ಯಾಮ್ । ತ್ವಾ ॥ ೭ ॥



---

❖ ಎಲೈ! ಸೋಮರಸವೇ; ಉಪಯಾಮಗೃಹೀತಃ ಅಸಿ = ಮರದ ಪಾತ್ರೆಯಲ್ಲಿ ಹಿಡಿಯಲ್ಪಟ್ಟಿರುವೆ; ಅಶ್ವಿಭ್ಯಾಮ್ = ಅಶ್ವಿನೀದೇವತೆಗಳಿಗಾಗಿ [ನಿನ್ನನ್ನು ಗ್ರಹಿಸುತ್ತೇನೆ];
❖ ಎಲೈ! ಆಶ್ವಿನಪಾತ್ರವೇ! ಏಷಃ = ಈ ವಿರಪ್ರದೇಶವು; ತೇ = ನಿನ್ನ; ಯೋನಿಃ = ಸ್ಥಾನವಾಗಿದೆ; ಅಶ್ವಿಭ್ಯಾಮ್= ಅಶ್ವಿನೀದೇವತೆಗಳಿಗಾಗಿ; ತ್ವಾ = ನಿನ್ನನ್ನು [ಇಲ್ಲಿ ಇಡುತ್ತೇನೆ.]

---

ಎಲೈ! ಸೋಮರಸವೇ! ನೀನು ಮರದಪಾತ್ರೆಯಲ್ಲಿ ಇಡಲ್ಪಟ್ಟಿರುವೆ. ನಿನ್ನನ್ನು ಅಶ್ವಿನೀದೇವತೆಗಳಿಗಾಗಿ ಗ್ರಹಿಸುತ್ತೇನೆ.

ಎಲೈ! ಆಶ್ವಿನಪಾತ್ರವೇ! ಈ ವಿರಪ್ರದೇಶವು ನಿನ್ನ ಸ್ಥಾನ. ಅಶ್ವಿನೀ ದೇವತೆಗಳಿಗಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

1. ಆಶ್ವಿನಗ್ರಹಗ್ರಹಣವು ಎಷ್ಟನೆಯದು? [ಜೈ.ಸೂ. 5.4. 1-2]

ಜ್ಯೋತಿಷ್ಟೋಮದಲ್ಲಿ ಆಶ್ವಿನಗ್ರಹವು ಮೂರನೆಯದಾಗಿದೆ.

**'ಆಶ್ವಿನೋ ದಶಮೋ ಗೃಹ್ಯತೇ'** [ಮೈತ್ರಾಯಣೀಯಸಂಹಿತಾ 4.6.1.] ಎಂಬ ವಾಕ್ಯವಿದೆ. ಹೀಗಿರುವಾಗ ಗ್ರಹಗ್ರಹಣವನ್ನು ಎಲ್ಲಿ ಮಾಡಬೇಕು? ಇದು **ಸಂಶಯ.**

ಇಲ್ಲಿಯ **ಪೂರ್ವಪಕ್ಷ** ಹೀಗಿದೆ. ಪಾಠ ಮಾಡಿರುವ ಕ್ರಮದಂತೆ ಮೂರನೆಯ ಸ್ಥಾನವಿದೆ. ಶ್ರುತಿಯಲ್ಲಿ 'ದಶಮಃ' ಎಂದು ಹೇಳಿರುವುದರಿಂದ ಹತ್ತನೆಯ ಸ್ಥಾನವಿದೆ. ಪಾಠಕ್ರಮವೂ ಶ್ರುತಿಯೂ ಸಮಬಲವಾದುದರಿಂದ ಐಚ್ಛಿಕವಾಗಿ ಮಾಡಬಹುದು.

ಇಲ್ಲಿಯ ಸಿದ್ಧಾಂತವು ಹೀಗಿದೆ; ಶ್ರುತ್ಯಾದಿಗಳಿಂದ ಕ್ರಮವು ಸಿದ್ಧವಾಗಿರದಿದ್ದರೆ ಪಾಠಕ್ರಮದಿಂದ ಕ್ರಮಕಲ್ಪನೆಯನ್ನು ಮಾಡಬೇಕು. ಇಲ್ಲಿ ಶ್ರುತಿಯಿಂದಲೇ ಹತ್ತನೆಯ ಸ್ಥಾನವು ಸಿದ್ಧವಾಗಿದೆ. ಹಾಗೆಯೇ **'ಅಗ್ನಿಹೋತ್ರಂ ಜುಹೋತಿ, ಯವಾಗೂಂ ಪಚತಿ'** ಎಂಬಲ್ಲಿ ವಸ್ತುಸಾಮರ್ಥ್ಯರೂಪವಾದ ಅರ್ಥದಿಂದ [ದ್ರವ್ಯವಿಲ್ಲದೇ ಹೋಮವು ಅಸಂಭವವಾದುದರಿಂದ] ಪ್ರಯೋಜನವನ್ನನುಸರಿಸಿ ಪಾಠಕ್ರಮವನ್ನು ಬಾಧಿಸಿ, ಮೊದಲು ಯವಾಗೂಪಾಕ, ಅನಂತರ ಹೋಮ ಎಂಬ ಅರ್ಥಕ್ರಮವನ್ನನುಸರಿಸಬೇಕು. ಆದುದರಿಂದ ಶ್ರುತಿಯಂತೆ ಆಶ್ವಿನಗ್ರಹಗ್ರಹಣವು ಹತ್ತನೆಯದು.



### ಆ) ಛಂದಸ್ಸು

ಪ್ರಾತರ್ಯುಜಾ...........। ಗಾಯತ್ರೀ

---

## ॥ ಅಷ್ಟಮೋಽನುವಾಕಃ ॥

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ

ಜ್ಯೋತಿರ್ಜರಾಯೂ ರಜಸೋ ವಿಮಾನೇ ।

---



ಅಯಮ್ । ವೇನಃ । ಚೋದಯತ್ । ಪೃಶ್ನಿಗರ್ಭಾ ಇತಿ ಪೃಶ್ನಿ-ಗರ್ಭಾಃ । ಜ್ಯೋತಿರ್ಜರಾಯುರಿತಿ ಜ್ಯೋತಿಃ-ಜರಾಯುಃ । ರಜಸಃ । ವಿಮಾನ ಇತಿ ವಿ-ಮಾನೇ ॥

---

ಮಂತ್ರ ವಿನಿಯೋಗ

ಅಯಂ ವೇನಶ್ಚೋದಯತ್.....ರಿಹಂತಿ । ಶುಕ್ರಗ್ರಹಗ್ರಹಣ ಮಾಡಲು

---

ವೇನಃ = ಲೋಕಕ್ಕೆ ಇಷ್ಟನಾದ; ಜ್ಯೋತಿರ್ಜರಾಯುಃ = ಜರಾಯು [ಗರ್ಭವೇಷ್ಟನ] ವಿನಂತಿರುವ ಮಿಂಚೆಂಬ ತೇಜಸ್ಸಿನಿಂದ ವೇಷ್ಟಿತನಾಗಿರುವ; ಅಯಮ್ = ಈ ಇಂದ್ರನು; ರಜಸಃ = ಧೂಳಿನ; ವಿಮಾನೇ = ವಿಶೇಷವಾಗಿ ನಿರ್ಮಾಣಪ್ರದೇಶವಾಗಿರುವ ಒಣಗಿದ ಭೂಪ್ರದೇಶದಲ್ಲಿ; ಪೃಶ್ನಿಗರ್ಭಾಃ = ಕಿರಣಗಳ ಮೂಲಕವಾಗಿ ಸೂರ್ಯನಲ್ಲಿ ಸೇರಿ ಮೋಡಗಳಾಗಿ ಪರಿಣಮಿಸಿರುವ ನೀರನ್ನು; ಚೋದಯತ್ = ಪ್ರೇರಿಸುತ್ತಾನೆ. ಮಳೆಯಾಗಿ ಸುರಿಸುತ್ತಾನೆ. ವಿಪ್ರಾಃ = ಬ್ರಾಹ್ಮಣರು; ಸೂರ್ಯಸ್ಯ = ಸೂರ್ಯನ; ಚ = ಮತ್ತು; ಅಪಾಮ್ = ನೀರುಗಳ; ಸಂಗಮೇ = ಸೇರುವಿಕೆಯ ನಿಮಿತ್ತವಾಗಿ;

---

ಗರ್ಭವು ಜರಾಯುವಿನಿಂದ ಆವೃತವಾಗಿರುವಂತೆ ತೇಜೋವಿಶೇಷಗಳಿಂದ ಆವೃತನಾದ, ಸರ್ವರಿಗೂ ಇಷ್ಟನಾದ ಇಂದ್ರನು ಭೂಮಿಯ ಮೇಲೆ ಸೂರ್ಯಗರ್ಭರೂಪವಾದ ಮಳೆಯ ನೀರನ್ನು ಸುರಿಸುತ್ತಾನೆ. ಋತ್ವಿಜರು ಇಂದ್ರನನ್ನು ಮಗುವಿನಂತೆ

ಇಮಮಪಾಗ್ಂ ಸಂಗಮೇ ಸೂರ್ಯಸ್ಯ ಶಿಶುಂ ನ ವಿಪ್ರಾ ಮತಿಭೀ ರಿಹಂತಿ ॥ ಉಪಯಾಮಗೃಹೀತೋಽಸಿ ಶಂಡಾಯ ತ್ವೈಷ ತೇ ಯೋನಿರ್ವೀರತಾಂ ಪಾಹಿ ॥ ೮ - 9 ॥

[ಆಯುಂ ವೇನಃ ಪಂಚವಿಗ್ಂಶತಿಃ ॥]

---

ಇಮಮ್। ಅಪಾಮ್। ಸಂಗಮ ಇತಿ ಸಮ್-ಗಮೇ । ಸೂರ್ಯಸ್ಯ । ಶಿಶುಮ್। ನ। ವಿಪ್ರಾಃ । ಮತಿಭಿರಿತಿ ಮತಿ-ಭಿಃ । ರಿಹಂತಿ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ। ಶಂಡಾಯ। ತ್ವಾ। ಏಷಃ। ತೇ । ಯೋನಿಃ । ವೀರತಾಮ್। ಪಾಹಿ ॥೮॥

---



| ಮಂತ್ರ | ವಿನಿಯೋಗ |
| --- | --- |
| ಉಪಯಾಮ........ತ್ವಾ । | ಶುಕ್ರಗ್ರಹಗ್ರಹಣ ಮತ್ತು |
| ಏಷ..........ಪಾಹಿ । | ಆಸ್ಸಾದನ ಮಾಡಲು |

---

ಇಮಮ್ = ಈ ಇಂದ್ರನನ್ನು; ಶಿಶುಂ ನ = ಮಗುವಿನಂತೆ [ಮುದ್ದಿಸುತ್ತಾ] ಮತಿಭಿಃ = ಮಂತ್ರಸಹಿತವಾದ ಆಹುತಿಗಳಿಂದ; ರಿಹಂತಿ = ಯಾಗ ಮಾಡುತ್ತಾರೆ. [ಬುದ್ಧಿಯಿಂದ ಹೊಗಳುತ್ತಾರೆ. ರಜಸಃ ವಿಮಾನೇ = ಉದಕನಿರ್ಮಾಣಸ್ಥಾನವಾದ ಅಂತರಿಕ್ಷದಲ್ಲಿ;] ✣ [ಶುಕ್ರಪಾತ್ರೆಯಲ್ಲಿರುವ ಎಲೈ! ಸೋಮರಸವೇ! ನೀನು] ಉಪಯಾಮಗೃಹೀತಃ ಅಸಿ = ದಾರುಪಾತ್ರೆಯಿಂದ ಗ್ರಹಿಸಲ್ಪಟ್ಟಿರುತ್ತೀಯೆ; ಶಂಡಾಯ = ಶುಕ್ರಪುತ್ರನಾದ ಶಂಡನಿಗಾಗಿ; ತ್ವಾ = ನಿನ್ನನ್ನು [ಹಿಡಿದಿಟ್ಟಿರುತ್ತೇನೆ.] ✣ ಎಲೈ ಪಾತ್ರವೇ! ಏಷಃ = ಈ ಖರಪ್ರದೇಶವು; ತೇ ಯೋನಿಃ = ನಿನ್ನ ಸ್ಥಾನವು; ವೀರತಾಂ ಪಾಹಿ = [ಯಜಮಾನನ] ಯಾಗಶೂರತ್ವವನ್ನು ರಕ್ಷಿಸು; [ಇದಕ್ಕಾಗಿ ನಿನ್ನನ್ನಿಲ್ಲಿಡುತ್ತೇನೆ.]

---

ಮುದ್ದಿಸುತ್ತಾ, ಯಾಗದ ಮೂಲಕ ಸೂರ್ಯನಿಗೂ ನೀರುಗಳಿಗೂ ಸಂಗಮವಾಗಿ ವರ್ಷಪ್ರದವಾದ ಮೇಘವುಂಟಾಗುವಂತೆ ಮಾಡಲು ಮಂತ್ರಸಹಿತವಾದ ಆಹುತಿಗಳನ್ನಿತ್ತು ಪೂಜಿಸುತ್ತಾರೆ.

ಎಲೈ! ಸೋಮವೇ! ನೀನು ದಾರುಪಾತ್ರೆಯಿಂದ ಹಿಡಿಯಲ್ಪಟ್ಟವನಾಗಿರುವೆ. ನಿನ್ನನ್ನು ಶುಕ್ರಪುತ್ರನಾದ ಶಂಡನಿಗಾಗಿ ಗ್ರಹಣ ಮಾಡುತ್ತೇನೆ.

ಎಲೈ! ಪಾತ್ರವೇ! ಖರವು ನಿನ್ನ ಸ್ಥಾನ. ಯಜಮಾನನಿಗೆ ಯಾಗಶೂರತ್ವವನ್ನು ಕೊಟ್ಟು ರಕ್ಷಿಸು. ಅದಕ್ಕಾಗಿ ನಿನ್ನನ್ನು ಈ ಪ್ರದೇಶದಲ್ಲಿ ಸಾದನ ಮಾಡುತ್ತೇನೆ.

[ಕಾಲದಲ್ಲಿ ಗರ್ಭಸ್ಥವಾದ ಶಿಶುವು ದೇವಪ್ರೇರಣೆಯಿಂದ ಹೊರಬರುವಂತೆ ಸೂರ್ಯನ ಮತ್ತು ನೀರಿನ ಸಂಯೋಗದಿಂದುಂಟಾದ ಮೇಘವೆಂಬ ಗರ್ಭದಿಂದ ವರ್ಷಾಕಾಲದಲ್ಲಿ ಮಳೆಯ ರೂಪವಾದ ಮಗುವು ಹೊರಬರುತ್ತದೆ. ಇದು ಇಂದ್ರನ ಅನುಗ್ರಹ. ಋತ್ವಿಜರು ಇದಕ್ಕಾಗಿ ಇಂದ್ರನನ್ನು ಆಹುತಿಗಳಿಂದ ಆರಾಧಿಸುತ್ತಾರೆ.]

## ಛಂದಸ್ಸು

ಅಯಂ ವೇನಃ..........ರಿಹಂತಿ ತ್ರಿಷ್ಟುಪ್.



## ॥ ನವಮೋಽನುವಾಕಃ ॥

**ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ ಜ್ಯೇಷ್ಠತಾತಿಂ**

**ಬರ್‌ಹಿಷದಗ್‌ಂ ಸುವರ್ವಿದಂ ಪ್ರತೀಚೀನಂ ವೃಜನಂ**

---

ತಮ್। ಪ್ರತ್ನಥಾ। ಪೂರ್ವಥಾ। ವಿಶ್ವಥಾ। ಇಮಥಾ। ಜ್ಯೇಷ್ಠತಾತಿಮಿತಿ ಜ್ಯೇಷ್ಠ-ತಾತಿಮ್। ಬರ್‌ಹಿಷದಮಿತಿ ಬರ್‌ಹಿ-ಸದಮ್। ಸುವರ್ವಿದಮಿತಿ ಸುವಃ-ವಿದಮ್ । ಪ್ರತೀಚೀನಮ್ । ವೃಜನಮ್ ।



---

| ಮಂತ್ರ | ವಿನಿಯೋಗ |
| --- | --- |
| ತಂ ಪ್ರತ್ನಥಾ.........ವರ್ಧಸೇ ॥ | ಮಂಥಿಗ್ರಹಗ್ರಹಣ ಮಾಡಲು |

---

[ಯಃ = ಯಾವ ಇಂದ್ರನಾದ ನೀನು] **ಪ್ರತೀಚೀನಮ್** = [ನಮಗೆ ಪ್ರತಿಕೂಲಕಾರಿಯಾದ] **ವೃಜನಮ್** = ಆಲಸ್ಯ, ಅಶ್ರದ್ಧಾದಿಗಳನ್ನು; **ಗಿರಾ** = ಮಾತಿನಿಂದ [ಮಂತ್ರಗಳಿಂದ] [ಸ್ತುತಿಯಿಂದ ಪ್ರೀತನಾಗಿ] **ದೋಹಸೇ** = ಹೋಗಲಾಡಿಸುತ್ತೀಯೋ; **ಯಾಸು** = ಯಾವ ಯಜ್ಞರೂಪಕ್ರಿಯೆಗಳಲ್ಲಿ; **ಆಶುಮ್** = ಶೀಘ್ರಕಾರಿಯಾದ; **ಜಯಂತಮ್** = [ಬೇರೆಯ ಯಜಮಾನರನ್ನು] ಮೀರಿಸಿರುವ ಈ ಯಜಮಾನನನ್ನು; **ಅನು** = ಅನುಸರಿಸಿ; **ವರ್ಧಸೇ** = [ಸೋಮಪಾನದಿಂದಲೂ ಸ್ತುತಿಯಿಂದಲೂ] ವೃದ್ಧಿ ಹೊಂದುತ್ತೀಯೋ; [ಅಂತಹ] **ಜ್ಯೇಷ್ಠತಾತಿಮ್**=ಪ್ರಶಂಸಿಸಲು ಅತ್ಯಂತ ಯೋಗ್ಯನಾದ; **ಬರ್‌ಹಿಷದಮ್**=ಯಾಗದಲ್ಲಿ

---

ಎಲೈ! ಇಂದ್ರನೇ! ನೀನು ಪ್ರಶಂಸಿಸಲು ಅತ್ಯಂತವಾಗಿ ಯೋಗ್ಯನು. ನಮ್ಮ ಆಹ್ವಾನ ಮನ್ನಿಸಿ ಯಾಗಕ್ಕೆ ಬಂದಿರುವವನು. ಯಜಮಾನನಿಗೆ ಸ್ವರ್ಗಾದಿ ಫಲಗಳನ್ನು

**ದೋಹಸೇ ಗಿರಾಽಽಶುಂ ಜಯಂತಮನು ಯಾಸು ವರ್ಧಸೇ।**

**ಉಪಯಾಮಗೃಹೀತೋಽಸಿ ಮರ್ಕಾಯ**

---

ದೋಹಸೇ । ಗಿರಾ । ಆಶುಮ್ । ಜಯಂತಮ್ । ಅನ್ವಿತಿ । ಯಾಸು । ವರ್ಧಸೇ॥

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಮರ್ಕಾಯ ।

---



| ಮಂತ್ರ | ವಿನಿಯೋಗ |
|---|---|
| ಉಪಯಾಮ........ತ್ವಾ । | ಮಂಥಿಗ್ರಹಗ್ರಹಣ ಮತ್ತು |

---

ಸನ್ನಿಹಿತನಾಗಿರುವ; ಸುವರ್ವಿದಮ್ = ಯಜಮಾನರಿಗೆ ಸ್ವರ್ಗವನ್ನು ಕೊಡಬೇಕೆಂದು ತಿಳಿದಿರುವ; ತಮ್ = ಶುಕ್ರಪುತ್ರನಾದ ನಿನ್ನನ್ನು; ಪ್ರತ್ನಥಾ = ಪ್ರಾಚೀನರಾದ ಭೃಗ್ವಾದಿ ಮುನಿಗಳಂತೆ; ಪೂರ್ವಥಾ = [illegible]ಗಳಂತೆ; ವಿಶ್ವಥಾ = ಹಿಂದಿನ ಎಲ್ಲಾ ಯಜಮಾನರಂತೆ; ಇಮಥಾ = ಇಂದಿನ ಯಜಮಾನರಂತೆ; [ಸ್ತುಮಃ = ಸ್ತೋತ್ರಮಾಡುತ್ತೇವೆ.] ❖ [ಎಲೈ! ಮಂಥಿಪಾತ್ರಸ್ಥ ಸೋಮರಸವೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಹಿಡಿಯಲ್ಪಟ್ಟಿರುವೆ; ಮರ್ಕಾಯ = ಶುಕ್ರಪುತ್ರನಾದ ಮರ್ಕನಿಗಾಗಿ;

---

ಕೊಡಬೇಕೆಂದು ತಿಳಿದಿರುವವನು. ನೀನು ನಮಗೆ ಪ್ರತಿಕೂಲವಾಗಿರುವ ಆಲಸ್ಯ, ಅಶ್ರದ್ಧೆ ಮೊದಲಾದ ನಮ್ಮ ದೋಷಗಳನ್ನು ನಾವು ಮಾಡುವ ಸ್ತೋತ್ರಗಳಿಂದ ಪ್ರೀತನಾಗಿ ಹೋಗಲಾಡಿಸುತ್ತೀಯೆ/ಶೀಘ್ರಗಾಮಿಯಾದ ಗುಡುಗಿನ ಧ್ವನಿಯಿಂದ ಜನರನ್ನು ಬೆದರಿಸುತ್ತಿರುವ, ಪ್ರತ್ಯಙ್ಮುಖವಾಗಿರುವ ಮೇಘವನ್ನೂ ಮಳೆ ಸುರಿಸುವಂತೆ ಮಾಡುವವನಾಗಿದ್ದೀಯೆ. ಬೇರೆಯ ಯಜಮಾನರಿಗಿಂತಲೂ ಮೇಲಾಗಿ ಯಾಗಗಳನ್ನು ಮಾಡುವ ಈ ಯಜಮಾನನನ್ನು ಅನುಸರಿಸಿ, ಆಹುತಿಗಳಿಂದಲೂ ಸ್ತುತಿಗಳಿಂದಲೂ

## ತ್ವೈಷ ತೇ ಯೋನಿಃ ಪ್ರಜಾಃ ಪಾಹಿ ॥ ೯-10 ॥

[ತಗ್ಂ ಷಡ್ವಿಗ್ಂಶತಿಃ । ]

---

ತ್ವಾ । ಏಷಃ । ತೇ । ಯೋನಿಃ । ಪ್ರಜಾ ಇತಿ ಪ್ರ-ಜಾಃ । ಪಾಹಿ ॥ ೯ ॥

---

| ಮಂತ್ರ | ವಿನಿಯೋಗ |
|---|---|
| ಏಷ..........ಪಾಹಿ । | ಆಸಾದನ ಮಾಡಲು |



---

**ತ್ವಾ** = ನಿನ್ನನ್ನು [ಗ್ರಹಿಸುತ್ತೇನೆ;] **ಏಷಃ ತೇ ಯೋನಿಃ** = ಇದು ನಿನ್ನ ಸ್ಥಾನ; **ಪ್ರಜಾಃ ಪಾಹಿ** = [ಯಜಮಾನನ] ಸಂತತಿಯನ್ನು/ಪ್ರಜೆಗಳನ್ನು ರಕ್ಷಿಸು. [ನಿನ್ನನ್ನು ಇಲ್ಲಿ ಇಡುತ್ತೇನೆ.]

---

ನೀನು ವೃದ್ಧಿ ಹೊಂದುತ್ತೀಯೆ. ಇಂತಹ ನಿನ್ನನ್ನು ಪ್ರಾಚೀನರಾದ ಭೃಗುವೇ ಮೊದಲಾದ ಮುನಿಗಳಂತೆ, ನಮ್ಮ ಪೂರ್ವಜರಾದ ಪಿತೃಗಳಂತೆ, ಹಿಂದಿನ ಎಲ್ಲಾ ಯಜಮಾನರಂತೆ ಮತ್ತು ಇಂದಿನ ಯಜಮಾನರಂತೆ ನಿನ್ನನ್ನು ಸ್ತೋತ್ರ ಮಾಡುತ್ತೇವೆ.

ಎಲೈ! ಮಂಥಿಗ್ರಹದಲ್ಲಿರುವ ಸೋಮವೇ! ನೀನು ದಾರುಪಾತ್ರದಲ್ಲಿ ಸಂಗ್ರಹಿಸಲ್ಪಟ್ಟಿರುವೆ. ಶುಕ್ರಪುತ್ರನಾದ ಮರ್ಕನಿಗಾಗಿ ನಿನ್ನನ್ನು ಹಿಡಿದಿಡುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ನೀನು ಯಜಮಾನನ ಪುತ್ರ-ಪೌತ್ರಾದಿ ಪ್ರಜೆಗಳನ್ನು ರಕ್ಷಿಸು. ಆದಕ್ಕಾಗಿ ನಿನ್ನನ್ನು ಇಲ್ಲಿ ಸಾದನ ಮಾಡುತ್ತೇನೆ.

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**1. ಶುಕ್ರ-ಮಂಥಿ ಗ್ರಹಗ್ರಹಣದ ಸ್ಥಾನ ಯಾವುದು? [ಜೈ.ಸೂ. 10.5.32]**

ಜ್ಯೋತಿಷ್ಟೋಮಪ್ರಕರಣದಲ್ಲಿ 'ಶುಕ್ರಾಗ್ರಾನ್ ಗೃಹ್ಣೀಯಾತ್ ಅಭಿಚರತಃ, ಮಂಥ್ಯಗ್ರಾನ್ ಗೃಹ್ಣೀಯಾದಭಿಚರ್ಯಮಾಣಃ' ಎಂದಿದೆ. ಈ ಗ್ರಹಣಗಳು ಯಾವಾಗ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ; ಐಂದ್ರವಾಯವಗ್ರಹದ ಅಗ್ರತ್ವದ ವಿಷಯದಲ್ಲಿ ಹೇಳಿದಂತೆ ಈ ಗ್ರಹಗಳನ್ನು ಇವುಗಳ ಸ್ವಸ್ಥಾನದಲ್ಲಿಯೇ ಪಾಠಕ್ರಮದಂತೆ ಗ್ರಹಣ ಮಾಡುವುದು ಯುಕ್ತ.

ಐಂದ್ರವಾಯವಗ್ರಹವು ಪಾಠಕ್ರಮದಲ್ಲಿ ಧಾರಾಗ್ರಹಗಳಲ್ಲಿ ಮೊದಲಲ್ಲಿ ಇರುವುದರಿಂದ ಸ್ವಸ್ಥಾನದಲ್ಲಿಯೇ ಗ್ರಹಣವು ಯುಕ್ತ. ಶುಕ್ರ-ಮಂಥಿಗ್ರಹಗಳು ಮಧ್ಯದಲ್ಲಿರುವುದರಿಂದ ಪಾಠಕ್ರಮವನ್ನು ಬಾಧಿಸಿ, ಐಂದ್ರವಾಯವಗ್ರಹಕ್ಕಿಂತಲೂ ಮೊದಲು ಗ್ರಹಣ ಮಾಡಬೇಕೆಂಬುದು ಇಲ್ಲಿನ ಸಿದ್ಧಾಂತ.

**2. ಶುಕ್ರ-ಮಂಥಿಗ್ರಹಣಗಳು ಸರ್ವಾದಿಯಲ್ಲಿಯೇ? [ಜೈ.ಸೂ. 10.5.33]**

ಈ ಶುಕ್ರ-ಮಂಥಿಗ್ರಹಗಳನ್ನು ಎಲ್ಲಾ ಗ್ರಹಗ್ರಹಣಕ್ಕಿಂತಲೂ ಮೊದಲು ಮಾಡಬೇಕೇ? ಅಥವಾ ಧಾರಾಗ್ರಹಗಳಿಗೆ ಮೊದಲು ಮಾಡಬೇಕೆ ಎಂಬುದು ಸಂಶಯ.

ವಿಶೇಷವೇನನ್ನೂ ಹೇಳದಿರುವುದರಿಂದ ಎಲ್ಲಕ್ಕಿಂತಲೂ ಮೊದಲು ಗ್ರಹಿಸುವುದು ಯುಕ್ತವೆಂದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತ :- "ಧಾರಯೇಯುಸ್ತಂ ಯಂ ಕಾಮಾಯ ಗೃಹ್ಣೀಯುಃ, ಐಂದ್ರವಾಯವಂ ಗೃಹೀತ್ವಾ ಸಾದಯೇತ್" [ಮೈತ್ರಾವರುಣ ಸಂಹಿತಾ - 4.8.9.] ಎಂಬ ವಚನವಿದೆ. ಕಾಮ್ಯಗ್ರಹಗ್ರಹಣವನ್ನು ಮಾಡಿ ಐಂದ್ರವಾಯವಗ್ರಹವನ್ನು ಗ್ರಹಿಸಬೇಕು ಎಂದು ಅದರ ಅರ್ಥ. ಧಾರಾಗ್ರಹಗಳಿಗೆ ಮಾತ್ರ ಕಾಮನಾಸಂಬಂಧವಿದೆ. ಆದುದರಿಂದ ಧಾರಾಗ್ರಹಣಗಳಲ್ಲಿ ಮೊದಲನೆಯದಾಗಿ ಇಂತಹ ಕಾಮ್ಯ ಗ್ರಹಗ್ರಹಣವನ್ನು ಮಾಡಬೇಕು. ಹೀಗಾಗಿ ಶುಕ್ರ-ಮಂಥಿಗ್ರಹಣವನ್ನು ಕಾಮ್ಯವಾದಾಗ ಧಾರಾಗ್ರಹಣಕ್ಕೆ ಮೊದಲು ಗ್ರಹಿಸಬೇಕು.

3. ಗ್ರಹಣಾಪಕರ್ಷದಿಂದ ಸಾದನಾಪಕರ್ಷವಿದೆಯೇ? [ಜೈ.ಸೂ. 10.5-34]

ಕಾಮ್ಯಗ್ರಹಗಳಿಗೆ ಅಪಕರ್ಷವನ್ನು ಹೇಳಿರುವುದರಿಂದ ಅವುಗಳನ್ನು ಸಾದನ ಮಾಡುವುದಕ್ಕೂ ಅಪಕರ್ಷವಿದೆಯೇ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ : 'ಶುಕ್ರಾಗ್ರಾನ್' ಎಂಬಲ್ಲಿ ಅಗ್ರಶಬ್ದವಿರುವುದರಿಂದ ಗ್ರಹಣಕ್ಕೆ ಅಪಕರ್ಷವು ಶಬ್ದದಿಂದಲೇ ತಿಳಿದು ಬರುತ್ತದೆ. ಹೀಗೆ ಸಾದನಕ್ಕೆ ಅಪಕರ್ಷವನ್ನು ಪ್ರತಿಪಾದಿಸುವ ಯಾವ ಶಬ್ದವೂ ಇಲ್ಲ. ಆದುದರಿಂದ ಗ್ರಹಣಕ್ಕೆ ಮಾತ್ರ ಅಪಕರ್ಷವೇ ಹೊರತು ಸಾದನಕ್ಕೆ ಅಪಕರ್ಷವಿಲ್ಲವೆಂಬುದು ಯುಕ್ತ.

ಇಲ್ಲಿಯ ಸಿದ್ಧಾಂತವು ಹೀಗಿದೆ : ಒಂದು ಗ್ರಹವನ್ನು ಗ್ರಹಣ ಮಾಡಿ ಅದನ್ನು ಸಾದನ ಮಾಡದೆ ಇನ್ನೊಂದು ಗ್ರಹಗ್ರಹಣವು ಅಸಾಧ್ಯ. ಹೀಗಾಗಿ ಸಾದನವು ಗ್ರಹಣಕ್ಕೆ ಅಂಗವಾಗಿದೆ. ಆದುದರಿಂದ ಗ್ರಹಗ್ರಹಣಕ್ಕೆ ಅಪಕರ್ಷವನ್ನು ತಿಳಿಸಿರುವುದರಿಂದ ಸಾದನಕ್ಕೂ ಅಪಕರ್ಷವನ್ನು ತಿಳಿಸಿದಂತಾಯಿತು. ಸಾದನಕ್ಕೂ ಅಪಕರ್ಷವಿದೆ.

ಆ) ಛಂದಸ್ಸು

ತಂ ಪ್ರತ್ನಥಾ.......ವರ್ಧಸೇ । ಜಗತೀ



## ॥ ದಶಮೋಽನುವಾಕಃ ॥

**ಯೇ ದೇವಾ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶ**

**ಸ್ಥಾಪ್ಸುಷದೋ ಮಹಿನ್ನೈಕಾದಶ ಸ್ಥ ತೇ ದೇವಾ ಯಜ್ಞಮಿಮಂ**

---

ಯೇ । ದೇವಾಃ । ದಿವಿ । ಏಕಾದಶ । ಸ್ಥ । ಪೃಥಿವ್ಯಾಮ್ । ಅಧೀತಿ । ಏಕಾದಶ । ಸ್ಥ । ಅಪ್ಸುಷದ ಇತ್ಯಪ್ಸು-ಸದಃ । ಮಹಿನಾ । ಏಕಾದಶ । ಸ್ಥ । ತೇ । ದೇವಾಃ । ಯಜ್ಞಮ್ । ಇಮಮ್ ।

---

| ಮಂತ್ರ | ವಿನಿಯೋಗ |
| --- | --- |
| ಯೇ ದೇವಾ.....ಜುಷಧ್ವಮ್ । | ಆಗ್ರಯಣಗ್ರಹಗ್ರಹಣ ಮಾಡಲು –ಬೌಧಾ. ಆಗ್ರಯಣಗ್ರಹಗ್ರಹಣಕ್ಕೆ ಈ ಮಂತ್ರವನ್ನಾಗಲೀ ಮುಂದಿನ ಮಂತ್ರವನ್ನಾಗಲೀ ವಿನಿಯೋಗಿಸಬಹುದು. –ಆಪಸ್ತಂಬ. |

---

ದೇವಾಃ = ದೇವತೆಗಳೇ! [ವಿಶ್ವೇದೇವದೇವತೆಗಳೇ!]; ಯೇ = ಯಾವ ನೀವು; ದಿವಿ = ಸ್ವರ್ಗಲೋಕದಲ್ಲಿ; ಏಕಾದಶ ಸ್ಥ = ಹನ್ನೊಂದು ಮಂದಿ ಇದ್ದೀರೋ; ಪೃಥಿವ್ಯಾಮ್ ಅಧಿ = ಭೂಮಿಯ ಮೇಲೆ; ಏಕಾದಶ ಸ್ಥ = ಹನ್ನೊಂದು ಮಂದಿಯಿದ್ದೀರೋ; ಮಹಿನಾ = ತಮ್ಮ ಮಹಿಮೆಯಿಂದ; ಅಪ್ಸುಷದಃ = ಅಂತರಿಕ್ಷದಲ್ಲಿರುವ [ನೀವು]; ಏಕಾದಶ ಸ್ಥ = ಹನ್ನೊಂದು ಮಂದಿ ಇದ್ದೀರೋ; ತೇ = ಅಂತಹ ಪ್ರಸಿದ್ಧರಾದ; ದೇವಾಃ = ಮೂವತ್ತುಮೂರು ವಿಶ್ವೇ ದೇವರುಗಳೇ! ಇಮಮ್ ಯಜ್ಞಮ್ = ಈ ಯಜ್ಞವನ್ನು;

---

ಯಾವ ವಿಶ್ವೇದೇವರು ಸ್ವರ್ಗಲೋಕದಲ್ಲಿ ಹನ್ನೊಂದು ಮಂದಿಯೂ, ಭೂಲೋಕದ ಮೇಲೆ ಹನ್ನೊಂದು ಮಂದಿಯೂ ಇದ್ದಾರೆಯೋ, ತಮ್ಮ ಮಹಿಮೆಯಿಂದ ನೀರಿಗೆ (ಮೋಡಕ್ಕೆ) ಆಧಾರವಾದ ಅಂತರಿಕ್ಷದಲ್ಲಿಯೂ ಹನ್ನೊಂದು ಮಂದಿ ಇದ್ದಾರೆಯೋ

ಜುಷಧ್ವಮುಪಯಾಮಗೃಹೀತೋಽಸ್ಯಾಗ್ರಯಣೋಽಸಿ ಸ್ವಾಗ್ರಯಣೋ ಜಿನ್ವ ಯಜ್ಞಂ ಜಿನ್ವ ಯಜ್ಞಪತಿಮಭಿ ಸವನಾ ಪಾಹಿ

---

ಜುಷಧ್ವಮ್ । ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಆಗ್ರಯಣಃ। ಅಸಿ । ಸ್ವಾಗ್ರಯಣ ಇತಿ ಸು-ಆಗ್ರಯಣಃ । ಜಿನ್ವ । ಯಜ್ಞಮ್ । ಜಿನ್ವ । ಯಜ್ಞಪತಿಮಿತಿ ಯಜ್ಞ-ಪತಿಮ್ । ಅಭೀತಿ । ಸವನಾ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| ಉಪಯಾಮಗೃಹೀತೋಽಸಿ । | ಆಗ್ರಯಣಗ್ರಹಗ್ರಹಣ ಮಾಡಲು |
| ಆಗ್ರಯಣೋಽಸಿ....ಪಾಹೀಂದ್ರಿಯೇಣ। | ಅಧಿವದನಕ್ಕಾಗಿ [ಹೇಳಲು] –ಬೌಧಾ. ಆಗ್ರಯಣಗ್ರಹಗ್ರಹಣಕ್ಕೆ ಈ ಮಂತ್ರವನ್ನಾಗಲೀ ಹಿಂದಿನ ಮಂತ್ರವನ್ನಾಗಲೀ ವಿನಿಯೋಗಿಸಬಹುದು. –ಆಪ. |



---

ಜುಷಧ್ವಮ್ = ಸೇವಿಸಿರಿ. ✣ [ಎಲೈ! ಸೋಮರಸವೇ!] ಉಪಯಾಮಗೃಹೀತಃ ಅಸಿ = ಆಗ್ರಯಣಸ್ಥಾಲಿಯಿಂದ ಗೃಹೀತನಾಗಿರುವೆ. [ನಿನ್ನನ್ನು ವಿಶ್ವೇದೇವದೇವತೆಗಳಿಗಾಗಿ ಗ್ರಹಿಸುತ್ತೇನೆ.] ✣ ಆಗ್ರಯಣಃ ಅಸಿ = ಆಗ್ರಯಣವೆಂಬ ಹೆಸರುಳ್ಳವನಾಗಿರುವೆ; ಸ್ವಾಗ್ರಯಣಃ=ಒಳ್ಳೆಯ ಶ್ರೇಷ್ಠತೆಯನ್ನು[ಅಗ್ರತ್ವವನ್ನು] ಹೊಂದಿಸಿಕೊಡುವ ನೀನು; ಯಜ್ಞಮ್ = ಯಜ್ಞವನ್ನು; ಜಿನ್ವ = ಸಂತೋಷಪಡಿಸು [ಚೆನ್ನಾಗಿ ನೆರವೇರಿಸಿ ಕೊಡು]; ಯಜ್ಞಪತಿಮ್ = ಯಜಮಾನನನ್ನು; ಜಿನ್ವ = ಸಂತೋಷಪಡಿಸು; ಸವನಾ= ಸವನಗಳನ್ನು; ಅಭಿ = ಅಭಿಮುಖವಾಗಿ; ಪಾಹಿ = ರಕ್ಷಿಸು;

---

ಅಂತಹ ಪ್ರಸಿದ್ಧರಾದ ವಿಶ್ವೇದೇವರಾದ ನೀವು ಈ ಯಜ್ಞವನ್ನು ಸೇವಿಸಿರಿ./ ಯಜ್ಞ ಭಾಗವನ್ನು ಸ್ವೀಕರಿಸಿರಿ. ✿ಎಲೈ! ಆಗ್ರಯಣಸ್ಥಾಲಿಯಲ್ಲಿರುವ ಸೋಮರಸವೇ! ನೀನು ದಾರುಸ್ಥಾಲಿಯಲ್ಲಿ ಗೃಹೀತನಾಗಿರುವೆ. ನಿನ್ನನ್ನು ವಿಶ್ವೇದೇವರಿಗಾಗಿ ಗ್ರಹಿಸುತ್ತೇನೆ.

ಆಗ್ರಯಣವೆಂಬ ಹೆಸರುಳ್ಳವನು ನೀನು. ಅಗ್ರತ್ವ [ಶ್ರೇಷ್ಠತ್ವ]ವನ್ನು ಉಂಟು

ವಿಷ್ಣುಸ್ತ್ವಾಂ ಪಾತು ವಿಶಂ ತ್ವಂ ಪಾಹೀಂದ್ರಿಯೇಣೈಷ ತೇ

ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೧೦-11 ॥

[ಯೇ ದೇವಾಸ್ತ್ರಿಚತ್ವಾರಿಗ್‍ಂಶತ್ ।]

---

ವಿಷ್ಣುಃ । ತ್ವಾಮ್ । ಪಾತು । ವಿಶಮ್ । ತ್ವಮ್ । ಪಾಹಿ । ಇಂದ್ರಿಯೇಣ । ಏಷಃ।

ತೇ । ಯೋನಿಃ । ವಿಶ್ವೇಭ್ಯಃ । ತ್ವಾ । ದೇವೇಭ್ಯಃ ॥ ೧೦ ॥

---



| ಮಂತ್ರ | ವಿನಿಯೋಗ |
| --- | --- |
| ಏಷ..........ದೇವೇಭ್ಯಃ ॥ | ಆಗ್ರಯಣಗ್ರಹದ ಆಸಾದನ ಮಾಡಲು |

---

ವಿಷ್ಣುಃ = ಯಜ್ಞದೇವನಾದ ವಿಷ್ಣುವು; ತ್ವಾಮ್ = ನಿನ್ನನ್ನು; ಪಾತು = ರಕ್ಷಿಸಲಿ; ತ್ವಮ್ = ನೀನು; ಇಂದ್ರಿಯೇಣ = ಇಂದ್ರಿಯಸಾಮರ್ಥ್ಯವನ್ನು ಕೊಡುವುದರಿಂದ; ವಿಶಮ್ = [ಯಜಮಾನನ] ಪ್ರಜೆಗಳನ್ನು; ಪಾಹಿ = ರಕ್ಷಿಸು. ✿ [ಎಲೈ! ಆಗ್ರಯಣ ಸ್ಥಾಲಿಯಲ್ಲಿರುವ ಸೋಮವೇ!] ಏಷಃ = ಈ ಖರಪ್ರದೇಶವು; ತೇ = ನಿನ್ನ; ಯೋನಿಃ = ಸ್ಥಾನವಾಗಿದೆ; ವಿಶ್ವೇಭ್ಯಃ ದೇವೇಭ್ಯಃ = ವಿಶ್ವೇದೇವದೇವತೆಗಳಿಗಾಗಿ; ತ್ವಾ = ನಿನ್ನನ್ನು; [ಸಾದಯಾಮಿ = ಇಲ್ಲಿ ಇಡುತ್ತೇನೆ.]

---

ಮಾಡಿಕೊಡುವುದರಿಂದ ಸ್ವಾಗ್ರಯಣನೂ ಆಗಿರುತ್ತೀಯೆ. ನೀನು ಯಜ್ಞವನ್ನು ಸಂತೋಷಪಡಿಸು. ಯಜಮಾನನನ್ನೂ ಸಂತೋಷಪಡಿಸು. ಯಜ್ಞದ ಸವನಗಳನ್ನು ರಕ್ಷಿಸು. ವಿಷ್ಣುವು ನಿನ್ನನ್ನು ರಕ್ಷಿಸಲಿ. ಯಜಮಾನನ ಪ್ರಜೆಗಳನ್ನು ಇಂದ್ರಿಯ-ಸಾಮರ್ಥ್ಯವನ್ನು ಕೊಟ್ಟು, ನೀನು ರಕ್ಷಿಸು. ✿ ಈ ಖರಪ್ರದೇಶವು ನಿನ್ನ ಸ್ಥಾನ. ನಿನ್ನನ್ನು ವಿಶ್ವೇದೇವರುಗಳಿಗಾಗಿ ಇಲ್ಲಿಡುತ್ತೇನೆ.

ಛಂದಸ್ಸು

ಯೇ ದೇವಾ.....ಜುಷಧ್ವಮ್ । ಚತುಷ್ಪದಾ ಪಂಕ್ತಿಃ [ಭ.ಭಾ.] ತ್ರಿಷ್ಟುಪ್[ಸಾಯಣ]

---

## ॥ ಏಕಾದಶೋಽನುವಾಕಃ ॥

ತ್ರಿಗ್ಂಶತ್ತ್ರಯಶ್ಚ ಗಣಿನೋ ರುಜಂತೋ ದಿವಗ್ಂ ರುದ್ರಾಃ
ಪೃಥಿವೀಂ ಚ ಸಚಂತೇ । ಏಕಾದಶಾಸೋ ಅಪ್ಸುಷದಸ್ಸುತಗ್ಂ

---

ತ್ರಿಗ್ಂಶತ್। ತ್ರಯಃ । ಚ । ಗಣಿನಃ । ರುಜಂತಃ । ದಿವಮ್ । ರುದ್ರಾಃ । ಪೃಥಿವೀಮ್।
ಚ । ಸಚಂತೇ ॥ ಏಕಾದಶಾಸಃ । ಅಪ್ಸುಷದ ಇತ್ಯಪ್ಸು-ಸದಃ । ಸುತಮ್ ।

---

| ಮಂತ್ರ | ವಿನಿಯೋಗ |
|---|---|
| ತ್ರಿಗ್ಂಶತ್ತ್ರಯಶ್ಚ......ಧಿಶ್ವೇ ॥ | ಶತ್ರುಪರಿಹಾರಕ್ಕಾಗಿ ಆಗ್ರಯಣಗ್ರಹಣ ಮಾಡಿದರೆ ಹಿಂದಿನ 'ಯೇ ದೇವಾಃ' ಎಂಬ ಮಂತ್ರದ ಸ್ಥಾನದಲ್ಲಿ ಹೇಳಲು. |

---

**ಗಣಿನಃ** = ಮೂರು ಗಣಗಳಾಗಿರುವ; **ತ್ರಿಗ್ಂಶತ್**=ಮೂವತ್ತು; **ಚ** = ಮತ್ತು; **ತ್ರಯಃ** = ಮೂವರು [ಹೀಗೆ ಮೂವತ್ತು ಮೂರು ಮಂದಿ ವಿಶ್ವೇದೇವರಿದ್ದಾರೆ. ಅವರು] **ರುಜಂತಃ** = ಶತ್ರುನಾಶ ಮಾಡುತ್ತಾ; **ರುದ್ರಾಃ** = [ಶತ್ರುಸ್ತ್ರೀಯರನ್ನು ಅಳುವಂತೆ ಮಾಡುತ್ತಾ; [ಹನ್ನೊಂದು ಮಂದಿ] **ದಿವಮ್** = ಸ್ವರ್ಗಲೋಕವನ್ನೂ; **ಚ** = ಮತ್ತು; [ಹನ್ನೊಂದು ಮಂದಿ] **ಪೃಥಿವೀಮ್** = ಭೂಮಿಯನ್ನೂ; **ಸಚಂತೇ** = ಸೇವಿಸುತ್ತಾರೆ; **ಏಕಾದಶಾಸಃ** = [ಮತ್ತೆ] ಹನ್ನೊಂದು ಮಂದಿ; **ಅಪ್ಸುಷದಃ** = ಅಂತರಿಕ್ಷವಾಸಿಗಳು [ಅಂತರಿಕ್ಷದ ಮೋಡಗಳ ನೀರಿನಲ್ಲಿರುವವರಾಗಿದ್ದಾರೆ] **ವಿಶ್ವೇ** = ಅವರೆಲ್ಲರೂ; [ಮೂವತ್ತುಮೂರು ದೇವತೆಗಳೂ] **ಸುತಮ್** = ಅಭಿಷವ ಮಾಡಿರುವ;

---

ಮೂವತ್ತುಮೂರು ವಿಶ್ವೇದೇವರು ಮೂರು ಗುಂಪಾಗಿರುತ್ತಾರೆ. ಶತ್ರುಗಳನ್ನು ನಾಶಪಡಿಸುತ್ತಲೂ, ಶತ್ರುಸ್ತ್ರೀಯರನ್ನು ಅಳುವಂತೆ ಮಾಡುತ್ತಲೂ ಇರುತ್ತಾರೆ.

**ಸೋಮಂ ಜುಷಂತಾಗ್ಂ ಸವನಾಯ ವಿಶ್ವೇ ॥ ಉಪಯಾಮ**

**ಗೃಹೀತೋಽಸ್ಯಾಗ್ರಯಣೋಽಸಿ ಸ್ವಾಗ್ರಯಣೋ ಜಿನ್ವ**

**ಯಜ್ಞಂ ಜಿನ್ವ ಯಜ್ಞಪತಿಮಭಿ ಸವನಾ ಪಾಹಿ**

---

ಸೋಮಮ್। ಜುಷಂತಾಮ್। ಸವನಾಯ। ವಿಶ್ವೇ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ । ಆಗ್ರಯಣಃ । ಅಸಿ । ಸ್ವಾಗ್ರಯಣ ಇತಿ ಸು-ಆಗ್ರಯಣಃ। ಜಿನ್ವ। ಯಜ್ಞಮ್ । ಜಿನ್ವ । ಯಜ್ಞಪತಿಮಿತಿ ಯಜ್ಞ-ಪತಿಮ್ । ಅಭೀತಿ । ಸವನಾ । ಪಾಹಿ।

---



| ಮಂತ್ರ | ವಿನಿಯೋಗ |
|---|---|
| ಉಪಯಾಮಗೃಹೀತೋಽಸಿ... | ಆಗ್ರಯಣಗ್ರಹಗ್ರಹಣಮಾಡಲು |
| ಆಗ್ರಯಣೋಽಸಿ...ಪಾಹೀಂದ್ರಿಯೇಣ । | ಅಧಿವಪ್ತವ್ಯಕ್ಕಾಗಿ —ಬೌಧಾಯನ. |

---

**ಸೋಮಮ್**=ಸೋಮನನ್ನು; **ಸವನಾಯ** = ತೃತೀಯಸವನದಲ್ಲಿ; **ಜುಷಂತಾಮ್** = ಸೇವಿಸಲಿ. ❖ [ಸೋಮನೇ!] **ಉಪಯಾಮಗೃಹೀತಃ ಅಸಿ** = ಆಗ್ರಯಣಸ್ಥಾಲಿಯಿಂದ ಗೃಹೀತನಾಗಿದ್ದೀಯೆ; [ನಿನ್ನನ್ನು ವಿಶ್ವೇದೇವರಿಗಾಗಿ ಗ್ರಹಿಸುತ್ತೇನೆ] ❖ [ಎಲೈ ಸ್ಥಾಲಿಯೇ] **ಆಗ್ರಯಣಃ ಅಸಿ** = ಆಗ್ರಯಣನೆಂಬ ಹೆಸರುಳ್ಳವನಾಗಿರುವೆ; **ಸ್ವಾಗ್ರಯಣಃ** = ಒಳ್ಳೆಯ ಶ್ರೇಷ್ಠತೆಯನ್ನು (ಅಗ್ರತ್ವವನ್ನು) ಹೊಂದಿಸಿಕೊಡುವ[ನೀನು] **ಯಜ್ಞಮ್** = ಯಜ್ಞವನ್ನು; **ಜಿನ್ವ** = ಸಂತೋಷಪಡಿಸು [ಚೆನ್ನಾಗಿ ನೆರವೇರಿಸಿಕೊಡು.]; **ಯಜ್ಞಪತಿಮ್** = ಯಜಮಾನನನ್ನು; **ಜಿನ್ವ** = ಸಂತೋಷಪಡಿಸು; **ಸವನಾ** = ಸವನಗಳನ್ನು; **ಅಭಿ** = ಅಭಿಮುಖವಾಗಿ; **ಪಾಹಿ** = ರಕ್ಷಿಸು;

---

ಇವರಲ್ಲಿ ಹನ್ನೊಂದು ಮಂದಿ ಸ್ವರ್ಗವನ್ನೂ ಮತ್ತೆ ಹನ್ನೊಂದು ಮಂದಿ ಭೂಲೋಕವನ್ನೂ ಸೇವಿಸುತ್ತಾರೆ. ಮತ್ತೆ ಹನ್ನೊಂದು ಮಂದಿ ಅಂತರಿಕ್ಷವಾಸಿಗಳು. ಇವರೆಲ್ಲರೂ ರಸ ತೆಗೆದು ಗ್ರಹಿಸಿರುವ ಸೋಮನನ್ನು ತೃತೀಯಸವನದಲ್ಲಿ ಸೇವಿಸಲಿ.

ವಿಷ್ಣುಸ್ತ್ವಾಂ ಪಾತು ವಿಶಂ ತ್ವಂ ಪಾಹೀಂದ್ರಿಯೇಣೈಷ ತೇ

ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೧೧-12 ॥

[ತ್ರಿಗ್ಂಶದ್ದ್ವಿಚತ್ವಾರಿಗ್ಂಶತ್ ॥]

---

ವಿಷ್ಣುಃ । ತ್ವಾಮ್ । ಪಾತು । ವಿಶಮ್ । ತ್ವಮ್ । ಪಾಹಿ । ಇಂದ್ರಿಯೇಣ । ಏಷಃ ।

ತೇ । ಯೋನಿಃ । ವಿಶ್ವೇಭ್ಯಃ । ತ್ವಾ । ದೇವೇಭ್ಯಃ ॥ ೧೧ ॥

---

| ಮಂತ್ರ | ವಿನಿಯೋಗ |
|---|---|
| ಏಷ.........ದೇವೇಭ್ಯಃ । | ಆಗ್ರಯಣಗ್ರಹಾಸಾದನ ಮಾಡಲು |

---

ವಿಷ್ಣುಃ=ಯಜ್ಞದೇವನಾದ ವಿಷ್ಣುವು; ತ್ವಾಮ್ = ನಿನ್ನನ್ನು; ಪಾತು = ರಕ್ಷಿಸಲಿ; ವಿಶಮ್ = [ಯಜಮಾನನ] ಪ್ರಜೆಗಳನ್ನು; ಇಂದ್ರಿಯೇಣ = ಇಂದ್ರಿಯಸಾಮರ್ಥ್ಯವನ್ನು ಕೊಡುವುದರಿಂದ; ತ್ವಮ್ = ನೀನು; ಪಾಹಿ = ರಕ್ಷಿಸು; ☆ [ಎಲೈ! ಆಗ್ರಯಣಸ್ಥಾಲಿಯಲ್ಲಿರುವ ಸೋಮವೇ!] ಏಷಃ = ಈ ಖರಪ್ರದೇಶವು; ತೇ ಯೋನಿಃ = ನಿನ್ನ ಸ್ಥಾನವು; ವಿಶ್ವೇಭ್ಯಃ ದೇವೇಭ್ಯಃ = ವಿಶ್ವೇ ದೇವತೆಗಳಿಗಾಗಿ; ತ್ವಾ = ನಿನ್ನನ್ನು [ಸಾದಯಾಮಿ = ಇಲ್ಲಿಡುತ್ತೇನೆ.]

---

ಎಲೈ! ಸೋಮನೇ! ನೀನು ಆಗ್ರಯಣಸ್ಥಾಲಿಯಿಂದ ಗೃಹೀತನಾಗಿರುವೆ. ನಿನ್ನನ್ನು ವಿಶ್ವೇದೇವರಿಗಾಗಿ ಗ್ರಹಿಸುತ್ತೇನೆ. ★ ಎಲೈ! ಸ್ಥಾಲಿಯೇ! ನೀನು ಆಗ್ರಯಣನಾಮಕನು. ಒಳ್ಳೆಯ ಶ್ರೇಷ್ಠತೆಯನ್ನು ಹೊಂದಿಸುವವನು. ಯಜ್ಞವನ್ನೂ, ಯಜಮಾನನನ್ನೂ ಸಂತೋಷಪಡಿಸು. ಅಭಿಮುಖನಾಗಿ ಸವನಗಳನ್ನೂ ರಕ್ಷಿಸು. ವಿಷ್ಣುವು ನಿನ್ನನ್ನು ರಕ್ಷಿಸಲಿ. ನೀನು ಇಂದ್ರಿಯಸಾಮರ್ಥ್ಯವನ್ನು ಕೊಟ್ಟು ಯಜಮಾನನ ಪ್ರಜೆಗಳನ್ನು ರಕ್ಷಿಸು. ಈ ಖರವು ನಿನ್ನ ಸ್ಥಾನ. ನಿನ್ನನ್ನು ವಿಶ್ವೇದೇವರಿಗಾಗಿ ಇಲ್ಲಿ ಸಾದನ ಮಾಡುತ್ತೇನೆ.

ಛಂದಸ್ಸು

ತ್ರಿಗ್ಂಶತ್ತ್ರಯಶ್ಚ..........ವಿಶ್ವೇ । ತ್ರಿಷ್ಟುಪ್.

## ॥ ದ್ವಾದಶೋಽನುವಾಕಃ ॥

ಉಪಯಾಮಗೃಹೀತೋಽಸೀಂದ್ರಾಯ ತ್ವಾ ಬೃಹದ್ವತೇ

ವಯಸ್ವತ ಉಕ್ಥಾಯುವೇ ಯತ್ತ ಇಂದ್ರ ಬೃಹದ್ವಯಸ್ತಸ್ಮೈ ॥

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಇಂದ್ರಾಯ । ತ್ವಾ । ಬೃಹದ್ವತ ಇತಿ ಬೃಹತ್-ವತೇ । ವಯಸ್ವತೇ । ಉಕ್ಥಾಯುವ ಇತ್ಯುಕ್ಥ-ಯುವೇ । ಯತ್ । ತೇ । ಇಂದ್ರ । ಬೃಹತ್ । ವಯಃ । ತಸ್ಮೈ ।



| ಮಂತ್ರ | ವಿನಿಯೋಗ |
| --- | --- |
| ಉಪಯಾಮ.....ವಿಷ್ಣವೇ ತ್ವಾ । | ಉಕ್ಥಸ್ಥಾಲಿಯಿಂದ ಸೋಮಗ್ರಹಣಕ್ಕಾಗಿ |

---

[ಎಲೈ! ಸೋಮನೇ!] **ಉಪಯಾಮಗೃಹೀತಃ ಅಸಿ** = ದಾರುಮಯವಾದ ಉಕ್ಥಸ್ಥಾಲಿಯಿಂದ ಗೃಹೀತನಾಗಿರುವೆ; **ತ್ವಾ** = ನಿನ್ನನ್ನು; **ಬೃಹದ್ವತೇ** = ಪೃಷ್ಠಸ್ತೋತ್ರದಲ್ಲಿ ಬೃಹತ್ಸಾಮದಿಂದ ಸ್ತುತಿಸಲ್ಪಡುವ; **ವಯಸ್ವತೇ** = ಸೋಮರಸರೂಪವಾದ ಅನ್ನವುಳ್ಳ; **ಉಕ್ಥಾಯುವೇ** = ಉಕ್ಥಶಸ್ತ್ರಗಳನ್ನು* ಅಪೇಕ್ಷಿಸುವವನಾದ; **ಇಂದ್ರಾಯ** = ಇಂದ್ರದೇವನಿಗಾಗಿ; [ಗ್ರಹಿಸುತ್ತೇನೆ.] **ಇಂದ್ರ** = ಇಂದ್ರದೇವನೇ! **ತೇ** = ನಿನ್ನ; **ಬೃಹತ್** = ದೊಡ್ಡದಾದ; **ವಯಃ** = [ಸೋಮರಸರೂಪವಾದ] ಅನ್ನವು; **ಯತ್** = ಯಾವುದು; **ಅಸ್ತಿ** = ಇದೆಯೋ; **ತಸ್ಮೈ** = ಆ ರಸಕ್ಕಾಗಿ; [ಸೋಮರಸಪಾನಕ್ಕಾಗಿ]

---

ಎಲೈ! ಸೋಮರಸವೇ! ನೀನು ದಾರುಮಯನಾದ ಉಕ್ಥಸ್ಥಾಲಿಯಿಂದ ಗೃಹೀತನಾಗಿರುವೆ. ನಿನ್ನನ್ನು–ಪೃಷ್ಠಸ್ತೋತ್ರದಲ್ಲಿ ಬೃಹತ್ಸಾಮದಿಂದ ಸ್ತುತಿಸಲ್ಪಡುವವನೂ,

---

* ಶಸ್ತ್ರ = ಹೊಗಳುವ ಋಙ್ಮಂತ್ರ.

ತ್ವಾ ವಿಷ್ಣವೇ ತ್ವೈಷ ತೇ ಯೋನಿರಿಂದ್ರಾಯ

ತ್ವೋಕ್ಥಾಯುವೇ ॥ ೧೩-14 ॥

[ಉಪಯಾಮಗೃಹೀತೋ ದ್ವಾವಿಗ್ಂಶತಿಃ ।]

---

ತ್ವಾ । ವಿಷ್ಣವೇ । ತ್ವಾ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಉಕ್ಥಾಯುವ

ಇತ್ಯುಕ್ಥ-ಯುವೇ ॥ ೧೩ ॥

---

| ಮಂತ್ರ | ವಿನಿಯೋಗ |
|---|---|
| ಏಷ......ತ್ವೋಕ್ಥಾಯುವೇ । | ಉಕ್ಥ್ಯಸ್ಥಾಲಿಯ ಸಾದನಮಾಡಲು |

---

**ತ್ವಾ** = ನಿನ್ನನ್ನು [ಪ್ರಾರ್ಥಿಸುತ್ತೇನೆ.] [ಸೋಮರಸವೇ!] **ವಿಷ್ಣವೇ** = ವಿಷ್ಣುದೇವನಿಗಾಗಿ; **ತ್ವಾ** = ನಿನ್ನನ್ನು [ಗ್ರಹಿಸುತ್ತೇನೆ.] ∵ **ಏಷಃ** = ಈ ಖರಪ್ರದೇಶವು; **ತೇ ಯೋನಿಃ** = ನಿನ್ನ ಸ್ಥಾನ; **ಉಕ್ಥಾಯುವೇ**= ಉಕ್ಥಶಸ್ತ್ರಗಳನ್ನು ಅಪೇಕ್ಷಿಸುವ; **ಇಂದ್ರಾಯ** = ಇಂದ್ರನಿಗಾಗಿ; **ತ್ವಾ** = ನಿನ್ನನ್ನು [ಸಾದನ ಮಾಡುತ್ತೇನೆ.]

---

ಸೋಮರಸರೂಪವಾದ ಅನ್ನವನ್ನು ಸ್ವೀಕರಿಸುವವನೂ, ಋಗ್ವೇದದ ಉಕ್ಥ-ಶಸ್ತ್ರಗಳನ್ನು ಅಪೇಕ್ಷಿಸುವವನೂ ಆಗಿರುವ ಇಂದ್ರನಿಗಾಗಿ–ಗ್ರಹಿಸುತ್ತೇನೆ. ಇಂದ್ರನೇ! ಮಹತ್ತಾದ ಸೋಮರಸರೂಪವಾದ ಅನ್ನದ ಸ್ವೀಕಾರಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತೇನೆ.

ಯಜ್ಞದೇವನಾದ ವಿಷ್ಣುವಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಈ ಖರಪ್ರದೇಶವು ನಿನ್ನ ಸ್ಥಾನ. ಉಕ್ಥ–ಶಸ್ತ್ರಗಳನ್ನು ಅಪೇಕ್ಷಿಸುವ ಇಂದ್ರನಿಗಾಗಿ ಈ ಖರಪ್ರದೇಶದಲ್ಲಿ ನಿನ್ನನ್ನು ಸಾದನ ಮಾಡುತ್ತೇನೆ.

**ಛಂದಸ್ಸು**

ಉಪಯಾಮ......ತ್ವೋಕ್ಥಾಯುವೇ । ಯಜುರಾದಿ ಅನುಷ್ಟುಪ್ [ಭ.ಭಾ.]

## ॥ ತ್ರಯೋದಶೋಽನುವಾಕಃ ॥

ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರ

ಮೃತಾಯ ಜಾತಮಗ್ನಿಮ್ । ಕವಿಗ್ಂ ಸಮ್ರಾಜಮತಿಥಿಂ

ಮೂರ್ಧಾನಮ್ । ದಿವಃ । ಅರತಿಮ್ । ಪೃಥಿವ್ಯಾಃ । ವೈಶ್ವಾನರಮ್ । ಋತಾಯ।

ಜಾತಮ್ । ಅಗ್ನಿಮ್ ॥ ಕವಿಮ್ । ಸಮ್ರಾಜಮಿತಿ ಸಮ್-ರಾಜಮ್ । ಅತಿಥಿಮ್।



| ಮಂತ್ರ | ವಿನಿಯೋಗ |
|---|---|
| ಮೂರ್ಧಾನಂ.......ದೇವಾಃ। | ಸ್ಥಾಲಿಯಿಂದ ಧ್ರುವಗ್ರಹಣವನ್ನು ಮಾಡಲು |

ದಿವಃ = ದೇವಲೋಕಕ್ಕೆ; ಮೂರ್ಧಾನಮ್ = ತಲೆಯಂತಿರುವ [ಸೂರ್ಯನಾಗಿರುವ] ಪೃಥಿವ್ಯಾಃ = ಭೂಮಿಯ [ಮೇಲೆ]; ಅರತಿಮ್ = ಆರಿಹೋಗದೆ ಯಾವಾಗಲೂ ಇರುವ; ಋತಾಯ = ಯಜ್ಞಕ್ಕಾಗಿ; ಜಾತಮ್ = ಆಹವನೀಯಾದಿಭೇದದಿಂದ ಹುಟ್ಟಿರುವ; ವೈಶ್ವಾನರಮ್ = ಎಲ್ಲರಿಗೂ ಸಂಬಂಧಿಸಿರುವ [ಭೂಲೋಕದಲ್ಲಿ] ವೈಶ್ವಾನರನೆಂಬ ಹೆಸರುಳ್ಳ; ಕವಿಮ್ = [ಭಕ್ತರನ್ನು ಅನುಗ್ರಹಿಸಲು ತಿಳಿದಿರುವ] ಮೇಧಾವಿಯಾದ; ಸಮ್ರಾಜಮ್ = ಹೆಚ್ಚಾಗಿ ಪ್ರಕಾಶಿಸುವ; ಜನಾನಾಮ್ = ಯಜಮಾನರಿಗೆ; ಅತಿಥಿಮ್ = ಅತಿಥಿಯಂತೆ ಪೂಜ್ಯನಾದ [ಅತಿಥಿಯಂತೆ ಯಜಮಾನರ ಮನೆಗೆ ಬರುತ್ತಿರುವ] ಅಗ್ನಿಮ್ = ಅಗ್ನಿದೇವನನ್ನು;

ಓ! ವೈಶ್ವಾನರಾಗ್ನಿಯೇ! ನೀನು ದ್ಯುಲೋಕಕ್ಕೆ ಶಿರಸ್ಸಿನಂತೆ ಸೂರ್ಯರೂಪದಿಂದ ಪ್ರಕಾಶಿಸುತ್ತಿರುವೆ. ಭೂಮಿಯಲ್ಲಿ ನೀನು ಸದಾ ಇರುವೆ. ನೀನು ಆರಿಹೋದ ಕಾಲವು ಇಲ್ಲವೇ ಇಲ್ಲ. ಪ್ರಜೆಗಳ ರಕ್ಷಣೆಗಾಗಿ ಭೂಮಿಯಲ್ಲಿಯೂ ಇರುವೆ. ವೈಶ್ವಾನರನೆಂಬ

ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ ॥

ಉಪಯಾಮಗೃಹೀತೋಽಸ್ಯಗ್ನಯೇ ತ್ವಾ ವೈಶ್ವಾನರಾಯ

ಧ್ರುವೋಽಸಿ ಧ್ರುವಕ್ಷಿತಿರ್ಧ್ರುವಾಣಾಂ

---

ಜನಾನಾಮ್ । ಆಸನ್ । ಏತಿ । ಪಾತ್ರಮ್ । ಜನಯಂತ। ದೇವಾಃ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಅಗ್ನಯೇ । ತ್ವಾ । ವೈಶ್ವಾನರಾಯ । ಧ್ರುವಃ । ಅಸಿ । ಧ್ರುವಕ್ಷಿತಿರಿತಿ ಧ್ರುವ-ಕ್ಷಿತಿಃ । ಧ್ರುವಾಣಾಮ್ ।

---



| ಮಂತ್ರ | ವಿನಿಯೋಗ |
|---|---|
| ೧) ಉಪಯಾಮ....ವೈಶ್ವಾನರಾಯ । | ಸ್ಥಾಲಿಯಿಂದ ಧ್ರುವವನ್ನು ಗ್ರಹಿಸಲು |
| ೨) ಧ್ರುವೋಽಸಿ....ವೈಶ್ವಾನರಾಯ । | ಅಭಿವದನವನ್ನು ಮಾಡಲು —ಬೌಧಾ. |

---

ವಯಂ ಸ್ತುಮಃ = ನಾವು ಸ್ತುತಿಸುತ್ತೇವೆ; ಆಸನ್ = [ಇಂತಹ ಅಗ್ನಿಯ] ಮುಖದಲ್ಲಿ [ಹೋಮಮಾಡುವುದಕ್ಕಾಗಿ] ದೇವಾಃ=ದೇವತೆಗಳು; ಪಾತ್ರಮ್=[ಸೋಮಗ್ರಹ ಚಮಸ ರೂಪವಾದ] ಪಾತ್ರವನ್ನು; ಆ ಜನಯಂತ = ಎಲ್ಲೆಡೆ [ಐಂದ್ರವಾಯವಾದಿಸ್ಥಾನಗಳಲ್ಲಿ] ಉಂಟುಮಾಡಿದರು. [ದೇವತೆಗಳು ಅಗ್ನಿಯನ್ನೇ ಹವಿಸ್ಸನ್ನು ಗ್ರಹಿಸುವ ಪಾತ್ರರೂಪ ವಾದ ಮುಖವನ್ನಾಗಿ ಮಾಡಿಕೊಂಡರು] ❖ [ಸೋಮರಸವೇ!] ಉಪಯಾಮಗೃಹೀತಃ ಅಸಿ=[ನೀನು] ಧ್ರುವಸ್ಥಾಲಿಯಿಂದ ಗೃಹೀತನಾಗಿರುವೆ. ಅಗ್ನಯೇ ವೈಶ್ವಾನರಾಯ= ವೈಶ್ವಾನರನೆಂಬ ಹೆಸರುಳ್ಳ ಅಗ್ನಿಗಾಗಿ; ತ್ವಾ = ನಿನ್ನನ್ನು[ಗ್ರಹಿಸುತ್ತೇನೆ] ❖ [ಎಲೈ! ಗ್ರಹವೇ!] ಧ್ರುವಃ ಅಸಿ = [ನೀನು] ಧ್ರುವನೆಂಬ ಹೆಸರುಳ್ಳವನಾಗಿದ್ದೀಯೆ; ಧ್ರುವಕ್ಷಿತಿಃ = ಸ್ಥಿರವಾದ ನಿವಾಸವುಳ್ಳವನಾಗಿದ್ದೀಯೆ. ಧ್ರುವಾಣಾಮ್ = ಆದಿತ್ಯಸ್ಥಾಲ್ಯಾದಿಗಳ

---

ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧನಾಗಿರುವೆ. ಯಜ್ಞನಿಷ್ಪತ್ತಿಗಾಗಿ ಆಹವನೀಯಾದಿ ಭೇದಗಳಿಂದ ಹುಟ್ಟಿದವನಾಗಿರುವೆ. ಭಕ್ತರನ್ನು ಅನುಗ್ರಹಿಸಲು ತಿಳಿದಿರುವ ಮೇಧಾವಿ

ಧ್ರುವತಮೋಽಚ್ಯುತಾನಾಮಚ್ಯುತಕ್ಷಿತ್ತಮ ಏಷ ತೇ
ಯೋನಿರಗ್ನಯೇ ತ್ವಾ ವೈಶ್ವಾನರಾಯ ॥ ೧೩-14 ॥

[ಮೂರ್ಧಾನಂ ಪಂಚತ್ರಿಗ್‌ಂಶತ್ ॥]

---

ಧ್ರುವತಮ ಇತಿ ಧ್ರುವ-ತಮಃ । ಅಚ್ಯುತಾನಾಮ್ । ಅಚ್ಯುತಕ್ಷಿತ್ತಮ ಇತ್ಯಚ್ಯುತಕ್ಷಿತ್-ತಮಃ । ಏಷಃ । ತೇ । ಯೋನಿಃ । ಅಗ್ನಯೇ । ತ್ವಾ। ವೈಶ್ವಾನರಾಯ ॥ ೧೩ ॥

---



| ಮಂತ್ರ | ವಿನಿಯೋಗ |
|---|---|
| ಉಪಯಾಮ..ಏಷ..ವೈಶ್ವಾನರಾಯ । | ಸ್ಥಾಲಿಯಿಂದ ಧ್ರುವಗ್ರಹಣ ಮಾಡಲು —ಆಪಸ್ತಂಬ. |

---

ಮಧ್ಯದಲ್ಲಿ; ಧ್ರುವತಮಃ = ಅತ್ಯಂತ ಸ್ಥಿರನಾಗಿರುವ; ಅಚ್ಯುತಾನಾಮ್ = ನಾಶರಹಿತಸ್ಥಾನಗಳಲ್ಲಿ; ಅಚ್ಯುತಕ್ಷಿತ್ತಮಃ = ಅತ್ಯಂತವಾಗಿ ನಾಶರಹಿತವಾದ ಸ್ಥಾನದಲ್ಲಿ ಇರುವವನಾಗಿದ್ದೀಯೆ. ❖ ಏಷಃ = ಈ ಸಾರಿಸದೇ ಇರುವ ಪ್ರದೇಶವು; ತೇ ಯೋನಿಃ = ನಿನ್ನ ಸ್ಥಾನವು; ಅಗ್ನಯೇ ವೈಶ್ವಾನರಾಯ = ವೈಶ್ವಾನರಸಂಜ್ಞಕನಾದ ಅಗ್ನಿಗಾಗಿ; ತ್ವಾ = ನಿನ್ನನ್ನು [ಇಡುತ್ತೇನೆ.]

---

ನೀನು. ಪ್ರಕಾಶಮಾನನು ನೀನು. ಅತಿಥಿಯಂತೆ ಹವಿಸ್ಸನ್ನು ಸ್ವೀಕರಿಸಲು ಯಜಮಾನರ ಮನೆಗಳಿಗೆ ಬರುತ್ತಿರುವೆ. [ಯಜಮಾನರಿಗೆ ಅತಿಥಿಯಂತೆ ಮಾನ್ಯ ನಾಗಿರುವೆ] ಇಂತಹ ಅಗ್ನಿಯನ್ನು ಸ್ತುತಿಸುತ್ತೇವೆ. ಈ ಅಗ್ನಿಯನ್ನು ದೇವತೆಗಳು ಸೋಮರಸವನ್ನು ಕುಡಿಯಲು ಪಾತ್ರೆಯಂತಿರುವ ಮುಖವನ್ನಾಗಿ ಮಾಡಿಕೊಂಡರು.

ಎಲೈ ಸೋಮನೇ! ನೀನು ಧ್ರುವಸ್ಥಾಲಿಯಿಂದ ಗ್ರಹಿಸಲ್ಪಟ್ಟಿರುವೆ. ನಿನ್ನನ್ನು ವೈಶ್ವಾನರಾಗ್ನಿಗಾಗಿ ಗ್ರಹಿಸುತ್ತೇನೆ.

ಎಲೈ! ಸೋಮಪಾತ್ರವೇ! ನೀನು ಧ್ರುವನೆಂಬ ಹೆಸರುಳ್ಳವನು. ಸ್ಥಿರವಾದ

ನಿವಾಸವುಳ್ಳವನು. ಸ್ಥಿರರಲ್ಲಿ ಅತಿಸ್ಥಿರನು. ನಾಶರಹಿತರಲ್ಲಿ ಅತ್ಯಂತವಾಗಿ ನಾಶರಹಿತವಾದ ಸ್ಥಾನದಲ್ಲಿ ಇರುವವನು.

ಈ ಸಾರಿಸದಿರುವ ಪ್ರದೇಶವು ನಿನ್ನ ಸ್ಥಾನ. ವೈಶ್ವಾನರಸಂಜ್ಞಕನಾದ ಅಗ್ನಿಗಾಗಿ ನಿನ್ನನ್ನು ಇಲ್ಲಿ ಸಾದನ ಮಾಡುತ್ತೇನೆ.

### ಛಂದಸ್ಸು

ಮೂರ್ಧಾನಂ.......ದೇವಾಃ । ತ್ರಿಷ್ಟುಪ್



## ॥ ಚತುರ್ದಶೋऽನುವಾಕಃ ॥

**ಮಧುಶ್ಚ ಮಾಧವಶ್ಚ ಶುಕ್ರಶ್ಚ ಶುಚಿಶ್ಚ ನಭಶ್ಚ**

**ನಭಸ್ಯಶ್ಚೇಷಶ್ಚೋರ್ಜಶ್ಚ ಸಹಶ್ಚ ಸಹಸ್ಯಶ್ಚ ತಪಶ್ಚ**

---

**ಮಧುಃ । ಚ । ಮಾಧವಃ । ಚ । ಶುಕ್ರಃ । ಚ । ಶುಚಿಃ । ಚ । ನಭಃ । ಚ । ನಭಸ್ಯಃ । ಚ । ಇಷಃ । ಚ । ಊರ್ಜಃ । ಚ । ಸಹಃ । ಚ । ಸಹಸ್ಯಃ । ಚ । ತಪಃ । ಚ ।**

---

| ಮಂತ್ರ | ವಿನಿಯೋಗ |
|---|---|

ಮಧುಶ್ಚ......ತ್ವಾ । ದ್ರೋಣಕಲಶದ ದೆಸೆಯಿಂದ ಋತುಗ್ರಹಗ್ರಹಣ ಮಾಡಲು. [ಉಪಯಾಮಗೃಹೀತೋऽಸಿ ಎಂಬುದನ್ನು 'ತಪಸ್ಯಶ್ಚ' ಎಂಬಲ್ಲಿಯವರೆಗೆ ಒಂದೊಂದರಲ್ಲಿಯೂ ಅನುಷಂಗ ಮಾಡಿದಾಗ 12 ಮಂತ್ರಗಳಾಗುತ್ತವೆ. ಸಗ್ಂಸರ್ಪೋಽಸಿ....ತ್ವಾ। ಎಂಬುದು 13ನೆಯ ಮಂತ್ರವೆಂದು ಒಂದು ಮತ. ಆಪಸ್ತಂಬರು 'ಸಗ್ಂಸರ್ಪೋಽಸಿ' 'ಅಗ್ಂಹಸ್ಪತ್ಯಾಯ ತ್ವಾ' ಎಂಬುದು13-14ನೆಯ ಮಂತ್ರವೆಂದು ಹೇಳಿರುತ್ತಾರೆ.]

---

[ಸೋಮನೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರೆಯಿಂದ ಗೃಹೀತನಾಗಿದ್ದೀಯೆ. **ಮಧುಃ ಚ** = ಚೈತ್ರನೂ [ಚೈತ್ರನಿಗಾಗಿಯೂ] [ಆಗಿದ್ದೀಯೆ] **ಮಾಧವಃ ಚ** = ವೈಶಾಖನೂ [ವೈಶಾಖನಿಗಾಗಿಯೂ] [ಆಗಿರುವೆ]. **ಶುಕ್ರಃ ಚ** = ಜ್ಯೇಷ್ಠಮಾಸನೂ [ಜ್ಯೇಷ್ಠಮಾಸಕ್ಕಾಗಿಯೂ] ಆಗಿರುತ್ತೀಯೆ; **ಶುಚಿಃ ಚ** = ಆಷಾಢನೂ ನೀನು. [ನೀನು ಆಷಾಢಕ್ಕಾಗಿ] **ನಭಃ ಚ** = ಶ್ರಾವಣನೂ ನೀನೇ. [ನೀನು ಶ್ರಾವಣಕ್ಕಾಗಿ] **ನಭಸ್ಯಃ ಚ** = ಭಾದ್ರಪದವೂ ನೀನೇ. [ನೀನು ಭಾದ್ರಪದಕ್ಕಾಗಿ] **ಇಷಃ ಚ**=ಆಶ್ವಯುಜವೂ ನೀನೇ.[ನೀನು ಆಶ್ವಯುಜಕ್ಕಾಗಿ] **ಊರ್ಜಃ ಚ** = ಕಾರ್ತಿಕವೂ ನೀನೇ. [ನೀನು ಕಾರ್ತಿಕಕ್ಕಾಗಿ] **ಸಹಃ ಚ** = ಮಾರ್ಗಶೀರ್ಷವೂ ನೀನೇ. [ನೀನು ಮಾರ್ಗಶೀರ್ಷಕ್ಕಾಗಿ] **ಸಹಸ್ಯಃ ಚ** = ಪುಷ್ಯವೂ ನೀನೇ. [ನೀನು ಪುಷ್ಯಕ್ಕಾಗಿ] **ತಪಃ ಚ** = ಮಾಘವೂ ನೀನೇ. [ನೀನು ಮಾಘಕ್ಕಾಗಿ]

---

ಎಲೈ! ಸೋಮರಸವೇ! ನೀನು ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ. ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗ-

## ತಪಸ್ಯಶ್ಚೋಪಯಾಮಗೃಹೀತೋಽಸಿ

## ಸಗ್ಂಸರ್ಪೋಽಸ್ಯಗ್ಂಹಸ್ಪತ್ಯಾಯ ತ್ವಾ॥ ೧೪-15 ॥

[ಮಧುಸ್ತ್ರಿಗ್ಂಶತ್]

---

ತಪಸ್ಯಃ । ಚ । ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಸಗ್ಂಸರ್ಪ ಇತಿ ಸಮ್-ಸರ್ಪಃ । ಅಸಿ । ಅಗ್ಂಹಸ್ಪತ್ಯಾಯೇತ್ಯಗ್ಂಹಃ-ಪತ್ಯಾಯ । ತ್ವಾ ॥೧೪॥

---

**ತಪಸ್ಯಃ ಚ** = ಫಾಲ್ಗುನವೂ ನೀನೇ. [ನೀನು ಫಾಲ್ಗುನಕ್ಕಾಗಿ] **ಉಪಯಾಮಗೃಹೀತಃ ಅಸಿ** = ದಾರುಪಾತ್ರದಿಂದ ಗೃಹೀತನಾಗಿರುತ್ತೀಯೆ. **ಸಗ್ಂಸರ್ಪಃ * ಅಸಿ** = ಅಧಿಕಮಾಸನೂ ಆಗಿದ್ದೀಯೆ; **ಅಗ್ಂಹಸ್ಪತ್ಯಾಯ*** = ಹದಿಮೂರನೆಯ ಮಾಸಕ್ಕಾಗಿ [ಕ್ಷಯಮಾಸಕ್ಕಾಗಿ] [ಸೂರ್ಯಪುತ್ರರಾದ ಮಾಸಗಳಿಗಾಗಿ] **ತ್ವಾ** = ನಿನ್ನನ್ನು [ಗ್ರಹಿಸುತ್ತೇನೆ.]

---

**ಶೀರ್ಷ, ಪುಷ್ಯ, ಮಾಘ, ಫಾಲ್ಗುಣ ಈ ಹನ್ನೆರಡು ಮಾಸಸ್ವರೂಪನೂ ಆಗಿರುತ್ತೀಯೆ. ಈ ದ್ವಾದಶ ಮಾಸದೇವತೆಗಳಿಗಾಗಿ ನಿನ್ನನ್ನು ಗ್ರಹಣ ಮಾಡುತ್ತೇನೆ. ಹಾಗೆಯೇ ನೀನು ಸಂಸರ್ಪನೂ, ಅಂಹಸ್ಪತ್ಯನೂ [ಅಧಿಕ-ಕ್ಷಯಮಾಸರೂಪನೂ] ಆಗಿರುವೆ. ನೀನು ದಾರುಪಾತ್ರಗೃಹೀತನಾಗಿರುವೆ. ಆ ಅಧಿಕ–ಕ್ಷಯಮಾಸದೇವತೆಗಳಿಗಾಗಿ ನಿನ್ನನ್ನು ಗ್ರಹಣ ಮಾಡುತ್ತೇನೆ.***

---

*ಅಸಂಕ್ರಾಂತಾವೇಕವರ್ಷೇ ದ್ವೌ ಚೇತ್ಸಂಸರ್ಪ ಆದಿಮಃ ।
ಕ್ಷಯಮಾಸೋ ದ್ವಿಸಂಕ್ರಾಂತಃ ಸ ಚಾಂಹಸ್ಪತಿಸಂಜ್ಞಕಃ ॥—**ಕಾಲಮಾಧವ - ೧೭**

*ಸಂಹಿತೆಯಲ್ಲಿ 'ಅಸ್ತಿ ತ್ರಯೋದಶೋ ಮಾಸ ಇತ್ಯಾಹುಸ್ತಮೇವ ತತ್ಪ್ರೀಣಾತಿ' ಎಂದು ಅಧಿಕಮಾಸಕ್ಕಾಗಿ ಗ್ರಹಣ ಮಾಡುವುದನ್ನು ಹೇಳಿದೆ.

*ಹದಿನಾಲ್ಕನೆಯ ಗ್ರಹಣವು ಶಾಖಾಂತರದಲ್ಲಿ ಇರಬಹುದು.

## ॥ ಪಂಚದಶೋಽನುವಾಕಃ ॥

ಇಂದ್ರಾಗ್ನೀ ಆ ಗತಗ್ಂ ಸುತಂ ಗೀರ್ಭಿರ್ನಭೋ

ವರೇಣ್ಯಮ್ । ಅಸ್ಯ ಪಾತಂ ಧಿಯೇಷಿತಾ ॥

---

ಇಂದ್ರಾಗ್ನೀ ಇತೀಂದ್ರ-ಅಗ್ನೀ । ಆ । ಗತಮ್ । ಸುತಮ್ । ಗೀರ್ಭಿಃ । ನಭಃ । ವರೇಣ್ಯಮ್ ॥ ಅಸ್ಯ । ಪಾತಮ್ । ಧಿಯಾ । ಇಷಿತಾ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನೀ..........ಧಿಯೇಷಿತಾ । ಋತುಪಾತ್ರದಿಂದ ಗ್ರಹಣಮಾಡಲು | ಐಂದ್ರಾಗ್ನಗ್ರಹ |

---

ಇಂದ್ರಾಗ್ನೀ = ಎಲೈ! ಇಂದ್ರಾಗ್ನಿದೇವತೆಗಳೇ! ಗೀರ್ಭಿಃ = ಸ್ತುತಿಗಳಿಂದ ಯುಕ್ತನಾದ; ನಭಃ= ನಭಸ್ಸಿನಲ್ಲಿ [ಸ್ವರ್ಗದಲ್ಲಿ] ಇರುವ ದೇವತೆಗಳಿಂದ; ವರೇಣ್ಯಮ್ =ಪ್ರಾರ್ಥಿಸಲು ಯೋಗ್ಯನಾದ;/[ಸ್ತುತಿಸತಕ್ಕವನಾದ] **ಸುತಮ್** = ಅಭಿಷವ ಮಾಡಿರುವ ಸೋಮನನ್ನು [ಕುರಿತು]; **ಆ ಗತಮ್** = [ನೀವಿಬ್ಬರೂ] ಬನ್ನಿರಿ; **ಧಿಯಾ** = ಬುದ್ಧಿಯಿಂದ; **ಇಷಿತಾ** = ಪ್ರಾರ್ಥಿತರಾದ ನೀವಿಬ್ಬರೂ; **ಅಸ್ಯ** = ಈ ಸೋಮರಸದ [ಭಾಗವನ್ನು]; **ಪಾತಮ್** = ಕುಡಿಯಿರಿ.

---

ಎಲೈ! ಇಂದ್ರಾಗ್ನಿದೇವತೆಗಳೇ! ಸ್ವರ್ಗವಾಸಿ ದೇವತೆಗಳು ಅಪೇಕ್ಷಿಸುವ, ಸ್ತೋತ್ರಗಳಿಂದ ಸ್ತುತಿಸಲ್ಪಡುವ, ನಾವು ಅಭಿಷವ ಮಾಡಿರುವ ಈ ಸೋಮರಸವನ್ನು ಕುರಿತು ಬನ್ನಿರಿ. ನಮ್ಮ ಬುದ್ಧಿಯಿಂದ ಪ್ರಾರ್ಥಿಸಲ್ಪಟ್ಟವರಾಗಿ ಈ ಸೋಮರಸದ ಅಂಶವನ್ನು ಪಾನ ಮಾಡಿರಿ.

# ಉಪಯಾಮಗೃಹೀತೋಽಸೀಂದ್ರಾಗ್ನಿಭ್ಯಾಂ ತ್ವೈಷ ತೇ ಯೋನಿರಿಂದ್ರಾಗ್ನಿಭ್ಯಾಂ ತ್ವಾ ॥ ೧೫-16 ॥

[ಇಂದ್ರಾಗ್ನೀ ವಿಗ್ಂಶತಿಃ ।]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಇಂದ್ರಾಗ್ನಿಭ್ಯಾಮಿತೀಂದ್ರಾಗ್ನಿ-ಭ್ಯಾಮ್ । ತ್ವಾ । ಏಷಃ । ತೇ । ಯೋನಿಃ । ಇಂದ್ರಾಗ್ನಿಭ್ಯಾಮಿತೀಂದ್ರಾಗ್ನಿ-ಭ್ಯಾಮ್। ತ್ವಾ ॥ ೧೫ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮಗೃಹೀತೋಽಸಿ...ತ್ವಾ । | ಐಂದ್ರಾಗ್ನಗ್ರಹಗ್ರಹಣ/ಆಸಾದನ ಮಾಡಲು |

---

✣ [ಸೋಮನೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಗೃಹೀತನಾಗಿರುತ್ತೀಯೆ. ಇಂದ್ರಾಗ್ನಿಭ್ಯಾಮ್ = ಇಂದ್ರಾಗ್ನಿ ದೇವತೆಗಳಿಗಾಗಿ; ತ್ವಾ= ನಿನ್ನನ್ನು [ಗ್ರಹಿಸುತ್ತೇನೆ.] ✣ ಏಷಃ = ಈ ಖರಪ್ರದೇಶವು; ತೇ ಯೋನಿಃ = ನಿನ್ನ ಸ್ಥಾನವಾಗಿದೆ; ಇಂದ್ರಾಗ್ನಿಭ್ಯಾಮ್ = ಇಂದ್ರಾಗ್ನಿ ದೇವತೆಗಳಿಗಾಗಿ; ತ್ವಾ = ನಿನ್ನನ್ನು [ಇಲ್ಲಿಡುತ್ತೇನೆ.]

---

ಸೋಮನೇ! ನೀನು ದಾರುಪಾತ್ರೆಯಿಂದ ಗೃಹೀತನಾಗಿದ್ದೀಯೆ. ನಿನ್ನನ್ನು ಇಂದ್ರಾಗ್ನಿ ದೇವತೆಗಳಿಗಾಗಿ ಗ್ರಹಣ ಮಾಡುತ್ತೇನೆ.

ಎಲೈ! ಸೋಮಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಇಂದ್ರಾಗ್ನಿ ದೇವತೆಗಳಿಗಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

## ಛಂದಸ್ಸು

ಇಂದ್ರಾಗ್ನೀ..................ಧಿಯೇಷಿತಾ । ಗಾಯತ್ರೀ

---

## ॥ ಷೋಡಶೋಽನುವಾಕಃ ॥

ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆಗತ । ದಾಶ್ವಾಗ್ಂಸೋ ದಾಶುಷಃ ಸುತಮ್ । ಉಪಯಾಮಗೃಹೀತೋಽಸಿ

ಓಮಾಸಃ । ಚರ್ಷಣೀಧೃತ ಇತಿ ಚರ್ಷಣಿ - ಧೃತಃ । ವಿಶ್ವೇ । ದೇವಾಸಃ । ಏತಿ । ಗತ ॥ ದಾಶ್ವಾಗ್ಂಸಃ । ದಾಶುಷಃ । ಸುತಮ್ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ ।



| ಮಂತ್ರ | ವಿನಿಯೋಗ |
| --- | --- |
| ಓಮಾಸಶ್ಚರ್ಷಣೀಧೃತೋ... ಸುತಮ್ । | ಶುಕ್ರಪಾತ್ರದಿಂದ ವೈಶ್ವದೇವಗ್ರಹಣ ಮಾಡಲು |

**ಓಮಾಸಃ**=ಪ್ರಜಾರಕ್ಷಕರಾದ; **ಚರ್ಷಣೀಧೃತಃ** = ಪ್ರಜಾಪೋಷಕರಾದ*; **ದಾಶ್ವಾಗ್ಂಸಃ** = [ಯಜಮಾನರಿಗೆ] ಧನಾದಿಗಳನ್ನು ಕೊಡುತ್ತಿರುವ; **ವಿಶ್ವೇ ದೇವಾಸಃ** = ಎಲೈ! ವಿಶ್ವೇ ದೇವತೆಗಳೇ! **ದಾಶುಷಃ**=[ದೇವತೆಗಳಿಗೆ] ಹವ್ಯವನ್ನು ಸಮರ್ಪಿಸುವ;[ಈ ಯಜಮಾನನ;] **ಸುತಮ್** = ಅಭಿಷವ ಮಾಡಿರುವ ಸೋಮನನ್ನು ಕುರಿತು; **ಆ ಗತ** = ಬನ್ನಿರಿ; ∵ ಎಲೈ! ಸೋಮನೇ! **ಉಪಯಾಮಗೃಹೀತಃ ಅಸಿ**= ದಾರುಪಾತ್ರದಿಂದ ಗೃಹೀತನಾಗಿರುವೆ;

ಎಲೈ! ವಿಶ್ವೇದೇವರೇ! ನೀವು ಪ್ರಜೆಗಳಿಗೆ ಅನಿಷ್ಟಪರಿಹಾರರೂಪದ ರಕ್ಷಣೆಯನ್ನು ಮಾಡತಕ್ಕವರು. ಇಷ್ಟಪ್ರಾಪಣರೂಪವಾದ ಪೋಷಣೆಯನ್ನು ಕೊಡಬಲ್ಲವರು. ಯಜಮಾನರಿಗೆ ಧನಾದಿಗಳನ್ನು ನೀಡಬಲ್ಲವರು. ನೀವು ದೇವತೆಗಳಿಗೆ ಸೋಮಾದಿರೂಪವಾದ ಹವಿಸ್ಸನ್ನು ಕೊಡುವ ಯಜಮಾನನ ಸಂಬಂಧಿಯಾದ ಅಭಿಷವ ಮಾಡಿರುವ

*ಅನಿಷ್ಟನಿವಾರಣಮ್ ರಕ್ಷಣಮ್, ಇಷ್ಟಪ್ರಾಪಣಂ ಪೋಷಣಮ್ ।

ವಿಶ್ವೇಭ್ಯಸ್ತ್ವಾ ದೇವೇಭ್ಯ ಏಷ ತೇ ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೧೬-17 ॥

ವಿಶ್ವೇಭ್ಯಃ । ತ್ವಾ । ದೇವೇಭ್ಯಃ । ಏಷಃ । ತೇ । ಯೋನಿಃ । ವಿಶ್ವೇಭ್ಯಃ । ತ್ವಾ । ದೇವೇಭ್ಯಃ ॥ ೧೬ ॥

| ಮಂತ್ರ | ವಿನಿಯೋಗ |
|---|---|
| ಉಪಯಾಮ............ದೇವೇಭ್ಯಃ । | ವೈಶ್ವದೇವಗ್ರಹಣ ಮಾಡಿ |
| ಏಷ ತೇ.................ದೇವೇಭ್ಯಃ । | ಆಸಾದನ ಮಾಡಲು. |

ವಿಶ್ವೇಭ್ಯಃ ದೇವೇಭ್ಯಃ = ವಿಶ್ವೇದೇವತೆಗಳಿಗಾಗಿ; ತ್ವಾ = ನಿನ್ನನ್ನು [ಗ್ರಹಣ ಮಾಡುತ್ತೇನೆ.] ❖ ಎಲೈ! ಪಾತ್ರವೇ! ಏಷಃ = ಈ ಖರಪ್ರದೇಶವು; ತೇ ಯೋನಿಃ = ನಿನ್ನ ಸ್ಥಾನವು; ವಿಶ್ವೇಭ್ಯಃ ದೇವೇಭ್ಯಃ = ವಿಶ್ವೇದೇವತೆಗಳಿಗಾಗಿ; ತ್ವಾ = ನಿನ್ನನ್ನು [ಸಾದನ ಮಾಡುತ್ತೇನೆ]

ಈ ಸೋಮನನ್ನು ಪಾನಮಾಡಲು ಬನ್ನಿರಿ. ಸೋಮವನ್ನು ಕೊಡುವ ಯಜಮಾನನಿಗೆ ಧನಾದಿಗಳನ್ನು ಕೊಡುವವರಾಗಿ ಬನ್ನಿರಿ.

ಎಲೈ! ಸೋಮನೇ! ನೀನು ದಾರುಪಾತ್ರದಿಂದ ಗೃಹೀತನಾಗಿರುವೆ. ವಿಶ್ವೇ ದೇವರಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಈ ಖರಪ್ರದೇಶವು ನಿನ್ನ ಸ್ಥಾನ. ವಿಶ್ವೇದೇವರುಗಳಿಗಾಗಿ ನಿನ್ನನ್ನು ಇಲ್ಲಿಡುತ್ತೇನೆ.

ಛಂದಸ್ಸು

ಓಮಾಸಶ್ಚರ್ಷಣೀಧೃತೋ.......ಸುತಮ್ । ಗಾಯತ್ರೀ

## ॥ ಸಪ್ತದಶೋಽನುವಾಕಃ ॥

ಮರುತ್ವಂತಂ ವೃಷಭಂ ವಾವೃಧಾನಮಕವಾರಿಂ ದಿವ್ಯಗ್ಂ

ಶಾಸಮಿಂದ್ರಮ್ । ವಿಶ್ವಾಸಾಹಮವಸೇ ನೂತನಾಯೋಗ್ರಗ್ಂ

---

ಮರುತ್ವಂತಮ್ । ವೃಷಭಮ್ । ವಾವೃಧಾನಮ್ । ಅಕವಾರಿಮಿತ್ಯಕವಾ-ಅರಿಮ್ ।

ದಿವ್ಯಮ್ । ಶಾಸಮ್ । ಇಂದ್ರಮ್ ॥ ವಿಶ್ವಾಸಾಹಮಿತಿ ವಿಶ್ವ-ಸಾಹಮ್ । ಅವಸೇ।

ನೂತನಾಯ । ಉಗ್ರಮ್ ॥



---

| ಮಂತ್ರ | ವಿನಿಯೋಗ |
|---|---|
| ಮರುತ್ವಂತಮ್.....ಹುವೇಮ ॥ | ಮಾಧ್ಯಂದಿನಸವನದಲ್ಲಿ ಋತುಪಾತ್ರದಿಂದ ಮರುತ್ವತೀಯಗ್ರಹಣ ಮಾಡಲು |

---

**ಮರುತ್ವಂತಮ್** = ಮರುದ್ಗಣಗಳಿಂದ ಕೂಡಿರುವ; **ವೃಷಭಮ್** = ಮಳೆಯನ್ನು ಸುರಿಸುವ; **ವಾವೃಧಾನಮ್** = ಇಷ್ಟಾರ್ಥಗಳನ್ನು ವೃದ್ಧಿಗೊಳಿಸುವ; **ಅಕವಾರಿಮ್** = ಪ್ರಬಲವಾದ ವೃತ್ರಾದಿಶತ್ರುಗಳುಳ್ಳ/ಪ್ರಬಲಶತ್ರುಗಳನ್ನು ನಿಗ್ರಹಿಸಿರುವ; **ದಿವ್ಯಮ್** = ದೇವಲೋಕದಲ್ಲಿರುವ; **ಶಾಸಮ್** = ದುಷ್ಟರನ್ನು ಶಿಕ್ಷಿಸುವ; **ವಿಶ್ವಾಸಾಹಮ್** = ವಿಶ್ವವನ್ನು ಪಾಲಿಸುವುದಕ್ಕೆ ತಕ್ಕ ಸಹನೆಯುಳ್ಳ/ಉತ್ಸಾಹವುಳ್ಳ/ಎಲ್ಲಾ ಶತ್ರುಗಳನ್ನೂ ಸೋಲಿಸಿರುವ; **ಉಗ್ರಮ್** = ತನ್ನನ್ನು ಆಶ್ರಯಿಸಿದವರ ಶತ್ರುಗಳಿಗೆ ಭಯಂಕರನಾದ;

---

ಇಂದ್ರನು ಮರುದ್ಗಣಗಳಿಂದ ಕೂಡಿದವನು. ಮಳೆಯನ್ನು ಸುರಿಸುವವನು. ಇಷ್ಟಾರ್ಥಗಳನ್ನು ವೃದ್ಧಿಪಡಿಸುವವನು. ಐಶ್ವರ್ಯವನ್ನು ವೃದ್ಧಿಗೊಳಿಸುವವನು. ವೃತ್ರನೇ ಮೊದಲಾದ ಮಹಾಶತ್ರುಗಳುಳ್ಳವನು. ಅಂತಹ ಬಲಿಷ್ಠ ಶತ್ರುಗಳನ್ನೂ

**ಸಹೋದಾಮಿಹ ತಗ್ಂ ಹುವೇಮ ॥ ಉಪಯಾಮಗೃಹೀ-**

**ತೋಽಸೀಂದ್ರಾಯ ತ್ವಾ ಮರುತ್ವತ ಏಷ ತೇ**

**ಯೋನಿರಿಂದ್ರಾಯ ತ್ವಾ ಮರುತ್ವತೇ ॥ ೧೭-18 ॥**

**[ಮರುತ್ವಂತಗ್ಂ ಷಡ್ವಿಗ್ಂಶತಿಃ ।]**

---

ಸಹೋದಾಮಿತಿ ಸಹಃ-ದಾಮ್ । ಇಹ । ತಮ್ । ಹುವೇಮ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಇಂದ್ರಾಯ । ತ್ವಾ । ಮರುತ್ವತೇ । ಏಷಃ । ತೇ। ಯೋನಿಃ । ಇಂದ್ರಾಯ । ತ್ವಾ । ಮರುತ್ವತೇ ॥ ೧೭ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ..........ಮರುತ್ವತೇ । | ಮರುತ್ವತೀಯಗ್ರಹಣ ಮತ್ತು |
| ಏಷ ತೇ...............ಮರುತ್ವತೇ । | ಆಸಾದನ ಮಾಡಲು |

---

**ಸಹೋದಾಮ್**=ಬಲವನ್ನು ಕೊಡುವ; **ತಮ್** = ಆ ಪ್ರಸಿದ್ಧನಾದ; **ಇಂದ್ರಮ್** = ಇಂದ್ರನನ್ನು; **ಇಹ**=ಈ ಯಜ್ಞದಲ್ಲಿ; **ನೂತನಾಯ** = ಹೊಸದಾದ; **ಅವಸೇ** = ರಕ್ಷಣೆ ಗಾಗಿ; **ಹುವೇಮ** = ಆಹ್ವಾನಿಸೋಣ. ❖ ಎಲೈ! ಸೋಮರಸವೇ! **ಉಪಯಾಮಗೃಹೀತಃ ಅಸಿ**=ದಾರುಪಾತ್ರದಿಂದ ಗೃಹೀತನಾಗಿದ್ದೀಯೆ; **ಮರುತ್ವತೇ** = ಮರುದ್ಗಣಗಳಿಂದ ಕೂಡಿದ; **ಇಂದ್ರಾಯ**=ಇಂದ್ರನಿಗೋಸ್ಕರ; **ತ್ವಾ** = ನಿನ್ನನ್ನು[ಗ್ರಹಿಸುತ್ತೇನೆ.] ❖ ಎಲೈ! ಪಾತ್ರವೇ! **ಏಷಃ ತೇ ಯೋನಿಃ**=ಈ ಖರಪ್ರದೇಶವು ನಿನ್ನ ಸ್ಥಾನ. **ಇಂದ್ರಾಯ ಮರುತ್ವತೇ** = ಮರುತ್ವಂತನಾದ ಇಂದ್ರನಿಗೋಸ್ಕರ; **ತ್ವಾ** = ನಿನ್ನನ್ನು [ಇಲ್ಲಿ ಸಾದನ ಮಾಡುತ್ತೇನೆ.]

---

ನಿಗ್ರಹಿಸಿದವನು. ದೇವಲೋಕಾಧಿಪನು. ದುಷ್ಟರನ್ನು ಅಡಗಿಸುವವನು. ಎಲ್ಲಾ ಶತ್ರುಗಳನ್ನೂ ಸೋಲಿಸಬಲ್ಲನು. ಶತ್ರುಗಳಿಗೆ ಭಯಂಕರನು. ಬಲವನ್ನು ಕೊಡತಕ್ಕವನು. ಇಂತಹ ಇಂದ್ರದೇವನನ್ನು ಈ ಯಾಗದಲ್ಲಿ ಆಹ್ವಾನಿಸೋಣ.

ಎಲೈ! ಸೋಮನೇ! ನೀನು ಉಪಯಾಮಗೃಹೀತನಾಗಿದ್ದೀಯೆ. ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು ಇಲ್ಲಿ ಸಾದನ ಮಾಡುತ್ತೇನೆ.

### ಛಂದಸ್ಸು

ಮರುತ್ವಂತಮ್.........ಹುವೇಮ ॥ ತ್ರಿಷ್ಟುಪ್



## ॥ ಅಷ್ಟಾದಶೋಽನುವಾಕಃ ॥

ಇಂದ್ರ ಮರುತ್ವ ಇಹ ಪಾಹಿ ಸೋಮಂ ಯಥಾ ಶಾರ್ಯಾತೇ

ಅಪಿಬಃ ಸುತಸ್ಯ । ತವ ಪ್ರಣೀತೀ ತವ ಶೂರ ಶರ್ಮನ್ನಾ

---

ಇಂದ್ರ । ಮರುತ್ವಃ । ಇಹ । ಪಾಹಿ । ಸೋಮಮ್ । ಯಥಾ । ಶಾರ್ಯಾತೇ । ಅಪಿಬಃ।

ಸುತಸ್ಯ ॥ ತವ । ಪ್ರಣೀತೀತಿ ಪ್ರ - ನೀತೀ । ತವ । ಶೂರ । ಶರ್ಮನ್ನ್ । ಐತಿ ।

---

| ಮಂತ್ರ | ವಿನಿಯೋಗ |
| --- | --- |
| ಇಂದ್ರ............ಸುಯಜ್ಞಾಃ । | ಎರಡನೆಯ ಮರುತ್ವತೀಯಗ್ರಹಣಕ್ಕಾಗಿ |

---

**ಮರುತ್ವಃ** = ಮರುದ್ಗಣಗಳಿಂದ ಕೂಡಿದವನೇ! **ಇಂದ್ರ** = ಇಂದ್ರದೇವನೇ! [ನೀನು] **ಶಾರ್ಯಾತೇ** = ಶರ್ಯಾತಿಮಹಾರಾಜನ [ಯಜ್ಞದಲ್ಲಿ]; **ಯಥಾ** = ಹೇಗೆ; **ಸುತಸ್ಯ** = ಅಭಿಷವ ಮಾಡಿದ ಸೋಮದ [ಅಂಶವನ್ನು]; **ಅಪಿಬಃ** = ಕುಡಿದೆಯೋ; [ತಥಾ = ಹಾಗೆಯೇ] **ಇಹ** = ಈ ಯಜಮಾನನ ಯಜ್ಞದಲ್ಲಿ; **ಸೋಮಮ್** = ಸೋಮನನ್ನು; **ಪಾಹಿ** = ಕುಡಿ; **ಶೂರ** = ಶೂರನಾದ ಇಂದ್ರನೇ! **ತವ** = ನಿನ್ನ; **ಪ್ರಣೀತೀ**= ಅನುಜ್ಞೆಯಿಂದ; **ತವ** = ನಿನ್ನ; **ಶರ್ಮನ್** = ಸುಖದ ನಿಮಿತ್ತವಾಗಿ/ಶರಣಭಾವನಿಮಿತ್ತವಾಗಿ;

---

ಮರುದ್ಗಣಯುಕ್ತನಾದ ಇಂದ್ರನೇ! ಹಿಂದೆ ಶರ್ಯಾತಿರಾಜನ ಯಜ್ಞದಲ್ಲಿ ಸೋಮವನ್ನು ನೀನು ಹೇಗೆ ಕುಡಿದೆಯೋ, ಹಾಗೆ ಈ ಯಜಮಾನನ ಈ ಯಜ್ಞದಲ್ಲಿಯೂ ಸೋಮರಸವನ್ನು ಪಾನ ಮಾಡು. ಶೂರನಾದ ಇಂದ್ರನೇ! ನಿನ್ನ ಅನುಜ್ಞೆಯಿಂದ ನಿನ್ನ ಸುಖಕ್ಕಾಗಿ, ನಿನ್ನನ್ನು ಶರಣು ಹೊಂದುವುದಕ್ಕಾಗಿ ಹಿಂದಿನ ಮೇಧಾವಿಗಳಾದ ಯಜಮಾನರು ಒಳ್ಳೆಯ ಯಜ್ಞಗಳನ್ನು ಮಾಡುತ್ತಾ ನಿನ್ನ ಪರಿಚರ್ಯೆ ಮಾಡುತ್ತಿದ್ದರು. ಅದರಂತೆ ಈ ಯಜಮಾನನೂ ಮಾಡುತ್ತಾನೆ. ನೀನು ಬಂದು ಸೋಮರಸವನ್ನು ಪಾನಮಾಡು.

**ವಿವಾಸಂತಿ ಕವಯಃ ಸುಯಜ್ಞಾಃ । ಉಪಯಾಮಗೃಹೀತೋಽಸೀಂದ್ರಾಯ ತ್ವಾ ಮರುತ್ವತ ಏಷ ತೇ ಯೋನಿರಿಂದ್ರಾಯ ತ್ವಾ ಮರುತ್ವತೇ ॥ ೧೮-19 ॥**

**[ಇಂದ್ರೈಕಾನ್ನತ್ರಿಗ್ಂಶತ್ ।]**

---

ವಿವಾಸಂತಿ । ಕವಯಃ । ಸುಯಜ್ಞಾ ಇತಿ ಸು-ಯಜ್ಞಾಃ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ । ಇಂದ್ರಾಯ । ತ್ವಾ । ಮರುತ್ವತೇ । ಏಷಃ । ತೇ । ಯೋನಿಃ। ಇಂದ್ರಾಯ । ತ್ವಾ । ಮರುತ್ವತೇ ॥ ೧೮ ॥

---



| ಮಂತ್ರ | ವಿನಿಯೋಗ |
|---|---|
| ಉಪಯಾಮ........[illegible] ತ್ವಾ । | [illegible] ಎರಡನ್ನೂ ಮರುತ್ವತೀಯಗ್ರಹಣ |
| ಏಷ..............ಮರುತ್ವತೇ ॥ | [illegible] ಮತ್ತು ಆಸಾದನ ಮಾಡಲು |

---

ಸುಯಜ್ಞಾಃ=ಒಳ್ಳೆಯ ಯಜ್ಞಗಳುಳ್ಳವರಾಗಿ; ಕವಯಃ = ಹಿಂದಿನ ಮೇಧಾವಿಗಳಾದ ಯಜಮಾನರು; ಆ ವಿವಾಸಂತಿ = ಅಭಿಮುಖವಾಗಿ ಪರಿಚರಿಸುತ್ತಾರೆ; [ಹಾಗೆಯೇ ಈ ಯಜಮಾನನೂ ಸಹ ಪರಿಚರಿಸುತ್ತಾನೆ]; ✣ [ಎಲೈ! ಸೋಮನೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರೆಯಿಂದ ಹಿಡಿಯಲ್ಪಟ್ಟವನಾಗಿದ್ದೀಯೆ; ಮರುತ್ವತೇ ಇಂದ್ರಾಯ = ಮರುತ್ವಂತನಾದ ಇಂದ್ರನಿಗಾಗಿ; ತ್ವಾ = ನಿನ್ನನ್ನು [ಗ್ರಹಣ ಮಾಡುತ್ತೇನೆ] ✣ [ಎಲೈ! ಪಾತ್ರವೇ!] ಏಷಃ = ಈ ಖರಪ್ರದೇಶವು; ತೇ ಯೋನಿಃ = ನಿನ್ನ ಸ್ಥಾನವಾಗಿದೆ. ಮರುತ್ವತೇ ಇಂದ್ರಾಯ = ಮರುದ್ಗಣಯುಕ್ತನಾದ ಇಂದ್ರನಿಗಾಗಿ; ತ್ವಾ = ನಿನ್ನನ್ನು [ಇಲ್ಲಿ ಸಾದನ ಮಾಡುತ್ತೇನೆ.]

---

ಎಲೈ! ಸೋಮನೇ! ನೀನು ಮರದ ಪಾತ್ರೆಯಿಂದ ಗೃಹೀತನಾಗಿರುವೆ.

ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು ಇಲ್ಲಿಡುತ್ತೇನೆ.

## ಛಂದಸ್ಸು

ಇಂದ್ರ ಮರುತ್ವ ಇಹ.........ಸುಯಜ್ಞಾಃ । ತ್ರಿಷ್ಟುಪ್.

---



## ॥ ಏಕೋನವಿಂಶೋಽನುವಾಕಃ ॥

ಮರುತ್ವಾಗ್ಂ ಇಂದ್ರ ವೃಷಭೋ ರಣಾಯ ಪಿಬಾ

ಸೋಮಮನುಷ್ವಧಂ ಮದಾಯ । ಆ ಸಿಂಚಸ್ವ ಜಠರೇ ಮಧ್ವ

ಮರುತ್ವಾನ್ । ಇಂದ್ರ । ವೃಷಭಃ । ರಣಾಯ । ಪಿಬ । ಸೋಮಮ್ । ಅನುಷ್ವಧ ಮಿತ್ಯನು-ಸ್ವಧಮ್ । ಮದಾಯ ॥ ಏತಿ । ಸಿಂಚಸ್ವ । ಜಠರೇ । ಮಧ್ವಃ ।

| ಮಂತ್ರ | ವಿನಿಯೋಗ |
|---|---|
| ಮರುತ್ವಾಗ್ಂ ಇಂದ್ರ.... ಸುತಾನಾಮ್ । | ಮೂರನೆಯ ಮರುತ್ವತೀಯಗ್ರಹಣ ಮಾಡಲು. |

ಇಂದ್ರ = ಇಂದ್ರದೇವನೇ! ಮರುತ್ವಾನ್ = ಮರುದ್ಗಣಗಳಿಂದ ಕೂಡಿದ; ವೃಷಭಃ = ಮಳೆಯನ್ನು ಸುರಿಸುವ, [ನೀನು] ಅನುಷ್ವಧಮ್ = ಪುರೋಡಾಶಾದಿರೂಪವಾದ ಅನ್ನವನ್ನು ಅನುಸರಿಸಿ; ರಣಾಯ = ಕ್ರೀಡೆಗಾಗಿ/ಯುದ್ಧಕ್ಕಾಗಿ; ಮದಾಯ = ಮದವನ್ನು [ಸಂತೋಷವನ್ನು] ಉಂಟುಮಾಡುವುದಕ್ಕಾಗಿ; ಸೋಮಮ್ ಪಿಬ = ಸೋಮರಸವನ್ನು ಕುಡಿ; [ಮದಾಯ ರಣಾಯ ಎಂದು ಅನ್ವಯ ಮಾಡಿದಾಗ ಮದಾಯ = ಜಯಕರಾಯ = ಜಯವನ್ನು ಉಂಟುಮಾಡುವ; ರಣಾಯ = ಸಂಗ್ರಾಮಕ್ಕಾಗಿ] ಮದಾಯ = ಸಂತೋಷಕ್ಕಾಗಿ; ಜಠರೇ = ಹೊಟ್ಟೆಯಲ್ಲಿ; ಮಧ್ವಃ = ಮಧುರವಾದ ಸೋಮರಸದ;

ಎಲೈ! ಇಂದ್ರನೇ! ನೀನು ಮರುದ್ಗಣಯುಕ್ತನಾಗಿರುವೆ. ಮಳೆಗಳನ್ನೂ ಭಕ್ತರ ಇಷ್ಟಾರ್ಥವನ್ನೂ ಸುರಿಸುವವನಾಗಿರುತ್ತೀಯೆ. ಈ ಯಜ್ಞದಲ್ಲಿ ನೀನು ಪುರೋಡಾಶಾದಿ ಹವಿಸ್ಸುಗಳನ್ನು ಸ್ವೀಕರಿಸಿದ ನಂತರ ಕ್ರೀಡೆಗಾಗಿ *[ಯುದ್ಧಕ್ಕಾಗಿ]* ಸೋಮರಸಪಾನ ಮಾಡು. [ಮದಾಯ ರಣಾಯ = ಸಂತೋಷವನ್ನುಂಟುಮಾಡುವ ಯುದ್ಧಕ್ಕಾಗಿ]

*ಕಾವ್ಯಗಳಲ್ಲಿ ರಾಜರು ಯುದ್ಧಕ್ಕೆ ಹೋಗುವಾಗ ವೀರಪಾನವನ್ನು ಮಾಡುತ್ತಿದ್ದರು ಎಂಬ ವರ್ಣನೆಗಳಿವೆ. ಇಲ್ಲಿ ಆ ಸೂಚನೆಯು ಕಾಣುತ್ತದೆ.

ಊರ್ಮಿಂ ತ್ವಗ್ಂ ರಾಜಾಽಸಿ ಪ್ರದಿವಸ್ಸುತಾನಾಮ್ ॥

ಉಪಯಾಮಗೃಹೀತೋಽಸೀಂದ್ರಾಯ ತ್ವಾ ಮರುತ್ವತ ಏಷ

ತೇ ಯೋನಿರಿಂದ್ರಾಯ ತ್ವಾ ಮರುತ್ವತೇ ॥ ೧೯-20 ॥

[ಮರುತ್ವಾನೇಕಾನ್ನತ್ರಿಗ್ಂಶತ್ ॥]

---

ಊರ್ಮಿಮ್ । ತ್ವಮ್ । ರಾಜಾ । ಅಸಿ । ಪ್ರದಿವ ಇತಿ ಪ್ರ-ದಿವಃ । ಸುತಾನಾಮ್॥

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಇಂದ್ರಾಯ । ತ್ವಾ । ಮರುತ್ವತೇ।

ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಮರುತ್ವತೇ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ.......ಮರುತ್ವತೇ । | ಮೂರನೆಯ ಮರುತ್ವತೀಯಗ್ರಹಣ |
| ಏಷ ತೇ............ಮರುತ್ವತೇ। | ಮತ್ತು ಆಸಾದನ ಮಾಡಲು. |

---

**ಊರ್ಮಿಮ್** = ಸಾರವನ್ನು/ಅಲೆಗಳನ್ನು; ಆ ಸಿಂಚಸ್ವ = ತುಂಬಿಸು; **ತ್ವಮ್** = ನೀನು; **ಪ್ರದಿವಃ** = ಪ್ರಾಪ್ಯಮಾನವಾದ ಸ್ವರ್ಗದ ಮತ್ತು **ಸುತಾನಾಮ್** = ಅಭಿಷವ ಮಾಡಿದ ಸೋಮಗಳ; **ರಾಜಾ ಅಸಿ**=ರಾಜನೂ ಆಗಿದ್ದೀಯೆ; [ಪ್ರದಿವಃ ರಾಜಾ ಅಸಿ = ಹಿಂದಿನ ಕಾಲದವನಾದ ರಾಜನೂ ಆಗಿದ್ದೀಯೆ.] ❖ [ಎಲೈ! ಸೋಮನೇ] **ಉಪಯಾಮಗೃಹೀತಃ ಅಸಿ**=ಮರದ ಪಾತ್ರೆಯಲ್ಲಿ ಹಿಡಿದಿಡಲ್ಪಟ್ಟಿರುವೆ. **ಮರುತ್ವತೇ ಇಂದ್ರಾಯ ತ್ವಾ** = ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು [ಗ್ರಹಣ ಮಾಡುತ್ತೇನೆ] ❖ [ಎಲೈ! ಸೋಮ ಪಾತ್ರವೇ!] **ಏಷಃ ತೇ ಯೋನಿಃ** = ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ; **ಮರುತ್ವತೇ ಇಂದ್ರಾಯ ತ್ವಾ** = ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು [ಇಲ್ಲಿ ಇಡುತ್ತೇನೆ.]

---

ಮಧುರವಾದ ಸೋಮರಸದ ಸಾರವನ್ನು/ಅಲೆಯನ್ನು ಹೊಟ್ಟೆಯಲ್ಲಿ ತುಂಬಿಸು. ನೀನು

ಪ್ರಾಪ್ಯವಾದ ಸ್ವರ್ಗಕ್ಕೂ ಯಾಗಗಳಲ್ಲಿ ಅಭಿಷುತವಾಗುವ ಸೋಮಕ್ಕೂ ರಾಜನಾಗಿದ್ದೀಯೆ. ಹಿಂದಿನ ರಾಜನೂ ಇಂದಿನ ರಾಜನೂ ಆಗಿದ್ದೀಯೆ.

ಹೇ! ಸೋಮರಸವೇ! ದಾರುಪಾತ್ರದಲ್ಲಿ ಗೃಹೀತನಾಗಿರುವೆ. ಮರುತ್ವಂತನಾದ ಇಂದ್ರನಿಗಾಗಿ ನಿನ್ನನ್ನು ಗ್ರಹಣ ಮಾಡುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಮರುತ್ವಂತನಾದ ಇಂದ್ರನಿಗಾಗಿ ಇಲ್ಲಿ ನಿನ್ನನ್ನು ಆಸಾದನ ಮಾಡುತ್ತೇನೆ.

## ಛಂದಸ್ಸು

ಮರುತ್ವಾಗ್ಂ ಇಂದ್ರ.......ಸುತಾನಾಮ್ । ತ್ರಿಷ್ಟುಪ್



## ॥ ವಿಂಶೋಽನುವಾಕಃ ॥

ಮಹಾಗ್ಂ ಇಂದ್ರೋ ಯ ಓಜಸಾ ಪರ್ಜನ್ಯೋ
ವೃಷ್ಟಿಮಾಗ್ಂ ಇವ । ಸ್ತೋಮೈರ್ವತ್ಸಸ್ಯ ವಾವೃಧೇ ॥

---

ಮಹಾನ್ । ಇಂದ್ರಃ । ಯಃ । ಓಜಸಾ । ಪರ್ಜನ್ಯಃ । ವೃಷ್ಟಿಮಾನಿತಿ ವೃಷ್ಟಿ-ಮಾನ್।
ಇವ ॥ ಸ್ತೋಮೈಃ । ವತ್ಸಸ್ಯ । ವಾವೃಧೇ ॥

---

| ಮಂತ್ರ | ವಿನಿಯೋಗ |
|---|---|
| ಮಹಾಗ್ಂ ಇಂದ್ರೋ......ವಾವೃಧೇ ॥ | ಶುಕ್ರಪಾತ್ರದಿಂದ ಮಾಹೇಂದ್ರಗ್ರಹ ಗ್ರಹಣ ಮಾಡಲು |

---

**ಯಃ ಇಂದ್ರಃ** = ಯಾವ ಇಂದ್ರನು; **ವೃಷ್ಟಿಮಾನ್** = ಮಳೆಯನ್ನು ಸುರಿಸುವ; **ಪರ್ಜನ್ಯಃ ಇವ** = ಮೇಘದಂತೆ/ಪರ್ಜನ್ಯದೇವನಂತೆ; **ಓಜಸಾ** = ಬಲದಿಂದ; **ಮಹಾನ್** = ಅಧಿಕನಾಗಿದ್ದಾನೆಯೋ; **ಸಃ** = ಆ ಇಂದ್ರನು; **ವತ್ಸಸ್ಯ** = ಪುತ್ರಸದೃಶನಾದ ಯಜಮಾನನ; [ವತ್ಸನೆಂಬ ಋಷಿಯ] **ಸ್ತೋಮೈಃ** = ಸ್ತೋತ್ರಗಳಿಂದ; **ವಾವೃಧೇ** = ವೃದ್ಧಿಹೊಂದಲಿ.

---

ಎಲೈ! ಇಂದ್ರನೇ! ಮಳೆಗಾಲದಲ್ಲಿ ಮಳೆ ಸುರಿಸುವ ಮೋಡವು ವೃದ್ಧಿ ಹೊಂದುವಂತೆ ನೀನು ಬಲದಿಂದ ವೃದ್ಧಿ ಹೊಂದಿ ಮಹೇಂದ್ರನಾಗಿದ್ದೀಯೆ. ನೀನು ಯಜಮಾನನ/ವತ್ಸನೆಂಬ ಋಷಿಯ ಸ್ತೋತ್ರಗಳಿಂದ ವೃದ್ಧಿ ಹೊಂದು. ಪ್ರೀತನಾಗಿ ಇಷ್ಟಾರ್ಥಗಳನ್ನು ಕೊಡು.

**ಉಪಯಾಮಗೃಹೀತೋऽಸಿ ಮಹೇಂದ್ರಾಯ ತ್ವೈಷ ತೇ**

**ಯೋನಿರ್ಮಹೇಂದ್ರಾಯ ತ್ವಾ ॥ ೨೦-21 ॥**

**[ಮಹಾನೇಕಾನ್ನವಿಗ್ಂಶತಿಃ ।]**

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಮಹೇಂದ್ರಾಯೇತಿ ಮಹಾ-ಇಂದ್ರಾಯ । ತ್ವಾ । ಏಷಃ । ತೇ । ಯೋನಿಃ । ಮಹೇಂದ್ರಾಯೇತಿ ಮಹಾ-ಇಂದ್ರಾಯ। ತ್ವಾ ॥ ೨೦ ॥

---

| ಮಂತ್ರ | ವಿನಿಯೋಗ |
| --- | --- |
| ಉಪಯಾಮ...ತ್ವಾ । | ಶುಕ್ರಪಾತ್ರದಿಂದ ಮಾಹೇಂದ್ರಗ್ರಹಗ್ರಹಣ ಮಾಡಲು. |
| ಏಷ..........ತ್ವಾ । | ಮಾಹೇಂದ್ರಗ್ರಹವನ್ನು ಆಸಾದನ ಮಾಡಲು |

---

❖ ಎಲೈ! ಸೋಮನೇ! ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಹಿಡಿದಿಡಲ್ಪಟ್ಟಿರುವೆ; ಮಹೇಂದ್ರಾಯ = ಮಹೇಂದ್ರನಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ] ❖ [ಎಲೈ! ಪಾತ್ರವೇ!] ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನ. ಮಹೇಂದ್ರಾಯ = ಮಹೇಂದ್ರದೇವತೆಗಾಗಿ; ತ್ವಾ = ನಿನ್ನನ್ನು [ಇಲ್ಲಿ ಇಡುತ್ತೇನೆ.]

---

ಎಲೈ! ಸೋಮನೇ! ನೀನು ದಾರುಪಾತ್ರೆಯಿಂದ ಗೃಹೀತನಾಗಿರುವೆ. ನಿನ್ನನ್ನು ಮಹೇಂದ್ರನಿಗಾಗಿ ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ನಿನ್ನನ್ನು ಮಹೇಂದ್ರದೇವನಿಗಾಗಿ ಇಲ್ಲಿ ಸಾದನ ಮಾಡುತ್ತೇನೆ.

**ಛಂದಸ್ಸು**

ಮಹಾಗ್ಂ ಇಂದ್ರೋ..........ವಾವೃಧೇ । ಗಾಯತ್ರೀ

---

## ॥ ಏಕವಿಂಶೋಽನುವಾಕಃ ॥

ಮಹಾಗ್ಂ ಇಂದ್ರೋ ನೃವದಾ ಚರ್‌ಷಣಿಪ್ರಾ ಉತ ದ್ವಿಬರ್-
ಹಾ ಅಮಿನಃ ಸಹೋಭಿಃ । ಅಸ್ಮದ್ರಿಯಗ್ವಾವೃಧೇ ವೀರ್ಯಾ-

---

ಮಹಾನ್ । ಇಂದ್ರಃ । ನೃವದಿತಿ ನೃ-ವತ್ । ಏತಿ । ಚರ್‌ಷಣಿಪ್ರಾ ಇತಿ ಚರ್‌ಷಣಿ-ಪ್ರಾಃ। ಉತ। ದ್ವಿಬರ್‌ಹಾ ಇತಿ ದ್ವಿ - ಬರ್‌ಹಾಃ। ಅಮಿನಃ। ಸಹೋಭಿರಿತಿ ಸಹಃ-ಭಿಃ ॥ ಅಸ್ಮದ್ರಿಯಗಿತ್ಯಸ್ಮ-ದ್ರಿಯಕ್ । ವಾವೃಧೇ । ವೀರ್ಯಾಯ ।

---

| ಮಂತ್ರ | ವಿನಿಯೋಗ |
|---|---|
| ಮಹಾಗ್ಂ ಇಂದ್ರೋ ನೃವತ್...ಭೂತ್ । | ಬೃಹತ್ಸಾಮಪಕ್ಷದಲ್ಲಿ ಮಾಹೇಂದ್ರ ಗ್ರಹಗ್ರಹಣ ಮಾಡಲು |

---

**ಮಹಾನ್ ಇಂದ್ರಃ** = ಮಹೇಂದ್ರನು; **ನೃವತ್** = [ರಾಜನೇ ಮೊದಲಾದ] ಮಾನವರಂತೆ; **ಆಚರ್‌ಷಣಿಪ್ರಾಃ**= ಮನುಷ್ಯರಿಗೆ [ಅವರು ಅಪೇಕ್ಷಿಸಿದ ಎಲ್ಲಾ ಫಲಗಳನ್ನು] ಕೊಟ್ಟು[ಸಂತೋಷಪಡಿಸುವವನಾಗಿದ್ದಾನೆ] **ಉತ** = ಮತ್ತು; **ದ್ವಿಬರ್‌ಹಾಃ** = ಪ್ರಕೃತಿ-ವಿಕೃತಿರೂಪಯಾಗಗಳಲ್ಲಿ ವೃದ್ಧಿಯುಳ್ಳವನು; **ಸಹೋಭಿಃ** = ಬಲಗಳಿಂದ; **ಅಮಿನಃ** = ಹೋಲಿಕೆಯಿಲ್ಲದವನು; [ಈತನು] **ಅಸ್ಮದ್ರಿಯಕ್** = ನಮ್ಮಂತೆಯೇ; **ವಾವೃಧೇ** = ವೃದ್ಧಿಯನ್ನು ಹೊಂದಿದನು; **ವೀರ್ಯಾಯ** = ಸಾಮರ್ಥ್ಯಸಿದ್ಧಿಗಾಗಿ;

---

ಈ ಮಹೇಂದ್ರನು ರಾಜಾದಿಮಾನವರಂತೆಯೇ ತನ್ನನ್ನು ಆರಾಧಿಸುವ ಮನುಷ್ಯರ ಎಲ್ಲಾ ಇಷ್ಟಾರ್ಥಗಳನ್ನೂ ಪೂರಣಗೊಳಿಸುತ್ತಾನೆ. ಪ್ರಕೃತಿ-ವಿಕೃತಿಗಳೆಂಬ ಉಭಯ ವಿಧವಾದ ಸೋಮಯಾಗಗಳಿಂದ ವೃದ್ಧಿಯನ್ನು ಹೊಂದತಕ್ಕವನು. ಎರಡು ಲೋಕಗಳಲ್ಲಿಯೂ ಬಲದಿಂದ ವೃದ್ಧಿ ಹೊಂದಿದವನು. ಬಲದಿಂದ ಹೋಲಿಕೆ ಇಲ್ಲದವನು. ಆತನ ಅನುಗ್ರಹದಿಂದ ನಾವು ವೃದ್ಧಿ ಹೊಂದುವಂತೆ ನಾವು ಸಮರ್ಪಿಸುವ

**ಯೋರುಃ ಪೃಥುಸ್ಸುಕೃತಃ ಕರ್ತೃಭಿರ್ಭೂತ್ । ಉಪಯಾಮ ಗೃಹೀತೋಽಸಿ ಮಹೇಂದ್ರಾಯ ತ್ವೈಷ ತೇ ಯೋನಿರ್ಮಹೇಂದ್ರಾಯ ತ್ವಾ ॥ ೨೧-22 ॥**

**[ಮಹಾನ್ನೃವತ್ಷಡ್ವಿಗ್ಂಶತಿಃ ।]**

---

ಉರುಃ। ಪೃಥುಃ । ಸುಕೃತ ಇತಿ ಸು-ಕೃತಃ । ಕರ್ತೃಭಿರಿತಿ ಕರ್ತೃ-ಭಿಃ । ಭೂತ್॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ। ಮಹೇಂದ್ರಾಯೇತಿ ಮಹಾ-ಇಂದ್ರಾಯ। ತ್ವಾ। ಏಷಃ । ತೇ । ಯೋನಿಃ। ಮಹೇಂದ್ರಾಯೇತಿ ಮಹಾ-ಇಂದ್ರಾಯ । ತ್ವಾ ॥೨೧॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ.......ತ್ವಾ। | [illegible] ಮಾಹೇಂದ್ರಗ್ರಹಗ್ರಹಣ ಮಾಡಲು. |
| ಏಷ.................ತ್ವಾ। | ಮಾಹೇಂದ್ರಗ್ರಹಸಾದನ ಮಾಡಲು. |

---

**ಕರ್ತೃಭಿಃ** = ಯಾಗಕರ್ತರಾದ ಯಜಮಾನರಿಂದ; **ಉರುಃ** = ವಿಪುಲವಾದ [ಯಶಸ್ಸುಳ್ಳವನೂ] **ಪೃಥುಃ**= ವಿಸ್ತೃತವಾದ [ಬಲವುಳ್ಳವನೂ ಆಗಿ] **ಸುಕೃತಃ ಭೂತ್** = ಚೆನ್ನಾಗಿ ವೃದ್ಧಿಹೊಂದಿಸಲ್ಪಟ್ಟನು. ✣ ಎಲೈ! ಸೋಮನೇ! **ಉಪಯಾಮಗೃಹೀತಃ ಅಸಿ** = ಮರದ ಪಾತ್ರೆಯಿಂದ ಸಂಗೃಹೀತನಾಗಿದ್ದೀಯೆ; **ಮಹೇಂದ್ರಾಯ** = ಮಹೇಂದ್ರನಿಗಾಗಿ; **ತ್ವಾ** = ನಿನ್ನನ್ನು [ಗ್ರಹಿಸುತ್ತೇನೆ.] ✣ [ಎಲೈ! ಪಾತ್ರವೇ!] **ಏಷಃ ತೇ ಯೋನಿಃ** = ಈ ಖರಪ್ರದೇಶವು ನಿನ್ನ ಸ್ಥಾನ; **ಮಹೇಂದ್ರಾಯ ತ್ವಾ** = ಮಹೇಂದ್ರನಿಗಾಗಿ ನಿನ್ನನ್ನು [ಈ ಪ್ರದೇಶದಲ್ಲಿ ಇಡುತ್ತೇನೆ.]

---

ಸೋಮಾದಿಹವಿಸ್ಸುಗಳಿಂದ ಈ ಮಹೇಂದ್ರನು ವೃದ್ಧಿಹೊಂದಲಿ. ಹೆಚ್ಚಿನ

ಸಾಮರ್ಥ್ಯಕ್ಕಾಗಿ ಯಾಗಕರ್ತರು ಮಾಡಿದ ಯಾಗಗಳಿಂದ ಇಂದ್ರನು ವಿಪುಲವಾದ ಕೀರ್ತಿಯುಳ್ಳವನೂ, ಮಹಾಬಲವುಳ್ಳವನೂ ಆದನು. ಇಂತಹ ವೃದ್ಧಿಹೊಂದಿದ ಮಹೇಂದ್ರನ ಅನುಗ್ರಹದಿಂದ ಯಜಮಾನನೂ ವೃದ್ಧಿಯನ್ನು ಹೊಂದಲಿ.

ಎಲೈ! ಸೋಮನೇ! ನೀನು ದಾರುಪಾತ್ರೆಯಿಂದ ಗೃಹೀತನಾಗಿರುವೆ. ನಿನ್ನನ್ನು ಮಹೇಂದ್ರನಿಗಾಗಿ ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಮಹೇಂದ್ರನಿಗಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

## ಛಂದಸ್ಸು

ಮಹಾಗ್ಂ ಇಂದ್ರೋ...........ಭೂತ್ । ತ್ರಿಷ್ಟುಪ್



## ॥ ದ್ವಾವಿಂಶೋಽನುವಾಕಃ ॥

ಕದಾ ಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ। ಉಪೋಪೇನ್ನು
ಮಘವನ್ಭೂಯ ಇನ್ನು ತೇ ದಾನಂ ದೇವಸ್ಯ ಪೃಚ್ಯತೇ ॥

---

ಕದಾ । ಚನ । ಸ್ತರೀಃ । ಅಸಿ । ನ । ಇಂದ್ರ । ಸಶ್ಚಸಿ । ದಾಶುಷೇ ॥ ಉಪೋಪೇತ್ಯುಪ-ಉಪ। ಇತ್। ನು । ಮಘವನ್ನಿತಿ ಮಘ-ವನ್ । ಭೂಯಃ । ಇತ್ । ನು । ತೇ । ದಾನಮ್। ದೇವಸ್ಯ । ಪೃಚ್ಯತೇ ॥

---

| ಮಂತ್ರ | ವಿನಿಯೋಗ |
|---|---|
| ಕದಾ ಚನ...ಆದಿತ್ಯೇಭ್ಯಸ್ತ್ವಾ । | ಆದಿತ್ಯಪಾತ್ರದಿಂದ ಸೋಮರಸಗ್ರಹಣಮಾಡಲು. |

---

**ಇಂದ್ರ** = ಎಲೈ! ಇಂದ್ರನೇ! [ನೀನು] **ಕದಾ ಚನ**=ಯಾವಾಗಲೂ; **ಸ್ತರೀಃ ನ ಅಸಿ**= ಹಿಂಸೆ ಮಾಡುವವನಾಗಿಲ್ಲ; [ಹಣವನ್ನು ಮುಚ್ಚಿಡುವವನಾಗಿಲ್ಲ.] **ದಾಶುಷೇ** = [ಹವಿಸ್ಸನ್ನು ಕೊಟ್ಟ ಯಜಮಾನನಿಗೆ ಫಲವನ್ನು] ಕೊಡುವುದಕ್ಕಾಗಿ; **ಸಶ್ಚಸಿ**= ಹೋಗುತ್ತೀಯೆ; **ಹೇ ಮಘವನ್** = ಎಲೈ! ಇಂದ್ರನೇ! **ಉಪೋಪ ಇತ್ ನು ಸಶ್ಚಸಿ** = [ಯಜಮಾನನ] ಅತ್ಯಂತ ಸಮೀಪಕ್ಕೆ ಹೋಗುತ್ತೀಯೆ; **ದೇವಸ್ಯ ತೇ** = ದೇವತೆಯಾದ ನಿನಗೆ; **ಭೂಯಃ ನು ಇತ್** = ಮತ್ತೆ ಮತ್ತೆ; **ದಾನಮ್** =[ಯಜಮಾನನು ಕೊಡುವ ಹವಿಸ್ಸಿನ] ದಾನವು; **ಪೃಚ್ಯತೇ** = ಸಂಬಂಧಿಸಿರುತ್ತದೆ. [ದೇವಸ್ಯ ತೇ ದಾನಮ್ = ದೇವನಾದ ನೀನು ಕೊಡುವ ಧನಾದಿಗಳು ಮತ್ತೆ ಮತ್ತೆ ಯಜಮಾನನಿಂದ ಸ್ವೀಕರಿಸಲ್ಪಡುತ್ತವೆ.]

---

ಇಂದ್ರದೇವನೇ! ನೀನು ಯಾವಾಗಲೂ ಹಿಂಸಕನಲ್ಲ. ಧನಾದಿಗಳನ್ನು ಮುಚ್ಚಿಡುವವನೂ ಅಲ್ಲ. ಹವಿಸ್ಸನ್ನು ಕೊಡುವ ಯಜಮಾನನ ಬಳಿಗೆ ಧನಾದಿಫಲಗಳನ್ನು ಕೊಡಲು ನೀನೇ ಹೋಗುತ್ತೀಯೆ. ಹೇ ಮಘವನ್! ದಾನಾದಿಗುಣವಿಶಿಷ್ಟನಾದ

**ಉಪಯಾಮಗೃಹೀತೋಽಸ್ಯಾದಿತ್ಯೇಭ್ಯಸ್ತ್ವಾ । ಕದಾ ಚನ ಪ್ರಯುಚ್ಛಸ್ಯುಭೇ ನಿಪಾಸಿ ಜನ್ಮನೀ । ತುರೀಯಾಽಽದಿತ್ಯ ಸವನಂ ತ ಇಂದ್ರಿಯಮಾತಸ್ಥಾವಮೃತಂ ದಿವಿ ॥**

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಆದಿತ್ಯೇಭ್ಯಃ । ತ್ವಾ । ಕದಾ। ಚನ । ಪ್ರೇತಿ। ಯುಚ್ಛಸಿ । ಉಭೇ ಇತಿ । ನೀತಿ । ಪಾಸಿ । ಜನ್ಮನೀ ಇತಿ ॥ ತುರೀಯ। ಆದಿತ್ಯ । ಸವನಮ್ । ತೇ । ಇಂದ್ರಿಯಮ್। ಏತಿ । ತಸ್ಥೌ । ಅಮೃತಮ್ । ದಿವಿ॥

---

| ಮಂತ್ರ | ವಿನಿಯೋಗ |
|---|---|
| ಕದಾ ಚನ.................ದಿವಿ ॥ | ದಧಿಶ್ರಯಣ ಮಾಡಲು |

---

ಎಲೈ! ಸೋಮರಸವೇ! **ಉಪಯಾಮಗೃಹೀತೋಽಸಿ** = ದಾರುಪಾತ್ರದಿಂದ ಗೃಹೀತನಾಗಿರುತ್ತೀಯೆ. **ಆದಿತ್ಯೇಭ್ಯಃ** = ಆದಿತ್ಯದೇವತೆಗಳಿಗಾಗಿ; **ತ್ವಾ** = ನಿನ್ನನ್ನು [ಗ್ರಹಿಸುತ್ತೇನೆ.] ❖ [ಎಲೈ! ಇಂದ್ರನೇ! ನೀನು] **ಕದಾ ಚನ** = ಯಾವಾಗಲೂ; **ಪ್ರ ಯುಚ್ಛಸಿ** = ಪ್ರಮಾದ ಮಾಡುವುದಿಲ್ಲ/ಎಚ್ಚರ ತಪ್ಪುವುದಿಲ್ಲ; **ಉಭೇ ಜನ್ಮನೀ** = [ಯಜಮಾನನ] ಈಗಿನ ಮತ್ತು ಮುಂದಿನ ಜನ್ಮಗಳೆರಡನ್ನೂ; **ನಿಪಾಸಿ** = ಚೆನ್ನಾಗಿ ರಕ್ಷಿಸುತ್ತೀಯೆ; **ಆದಿತ್ಯ** = ಎಲೈ! ಸೂರ್ಯನೇ! ***ತುರೀಯ ಸವನಮ್** = ಮೂರನೆಯ ಸವನವು; **ತೇ** = ನಿನ್ನದಾಗಿದೆ: [ಆ ಸವನದಲ್ಲಿ] **ಇಂದ್ರಿಯಮ್** = ಇಂದ್ರಿಯ ಸಾಮರ್ಥ್ಯಕಾರಣವಾದ; **ಅಮೃತಮ್** = ಅಮೃತಸಮಾನವಾದ ಮೊಸರು; **ದಿವಿ** = ಸ್ವರ್ಗಸಮಾನವಾದ ಹವಿರ್ಧಾನದಲ್ಲಿ; **ಆ ತಸ್ಥೌ** = ಎದುರಿನಲ್ಲಿಯೇ ಇದೆ.

---

ನಿನಗೆ ಯಜಮಾನರು ಮತ್ತೆ ಮತ್ತೆ ಹವಿಸ್ಸುಗಳನ್ನು ಕೊಡುತ್ತಾರೆ. ದೇವನಾದ ನೀನೂ

---

*ಶ್ರುತಿಯಲ್ಲಿ 'ತುರೀಯ' ಎಂಬ ಶಬ್ದವಿದೆ. ತೃತೀಯ ಎಂಬುದೇ ವರ್ಣವ್ಯತ್ಯಾಸದಿಂದ 'ತುರೀಯ' ಎಂದಾಗಿದೆ ಎಂಬುದು ಸಾಯಣಾಚಾರ್ಯರ ಮತ.

# ಯಜ್ಞೋ ದೇವಾನಾಂ ಪ್ರತ್ಯೇತಿ ಸುಮ್ನಮಾದಿತ್ಯಾಸೋ

---

ಯಜ್ಞಃ । ದೇವಾನಾಮ್ । ಪ್ರತೀತಿ । ಏತಿ । ಸುಮ್ನಮ್ । ಆದಿತ್ಯಾಸಃ ।

---

| ಮಂತ್ರ | ವಿನಿಯೋಗ |
| --- | --- |
| ಯಜ್ಞೋ ದೇವಾನಾಂ..........ಏತ್ರಾಸತ್ । | ಪುನಃ ಸೋಮವನ್ನು ಗ್ರಹಿಸಲು. |

---

❖ ಯಜ್ಞಃ = ಯಜ್ಞಪುರುಷನು; ದೇವಾನಾಮ್ = ದೇವತೆಗಳಿಗೆ; ಸುಮ್ನಮ್ = ಸುಖವನ್ನು; ಪ್ರತಿ ಏತಿ = ತಿಳಿದಿಯತ್ತಾನೆ./ಹವಿರ್ಭಾಗಗಳಿಂದ ಉಂಟುಮಾಡುತ್ತಾನೆ. [ದೇವಾನಾಂ ಯಜ್ಞಃ ಅಸ್ಮಾಕಂ ಸುಖಂ ಪ್ರತ್ಯೇತು = ದೇವತೆಗಳಿಗೆ ಸಂಬಂಧಿಸಿದ ಯಜ್ಞವು ನಮಗೆ ಸುಖವನ್ನು ಉಂಟುಮಾಡಲಿ] ಆದಿತ್ಯಾಸಃ = ಎಲೈ! ಆದಿತ್ಯರೇ!

---

ಯಜಮಾನರಿಗೆ ಮತ್ತೆ ಮತ್ತೆ ಇಷ್ಟಾರ್ಥಗಳನ್ನು ಕೊಡುತ್ತೀಯೆ. ಇಂತಹ ದಾನಶೀಲನಾದ ನೀನು ನಮ್ಮ ಕಾಮನೆಗಳನ್ನು ಪೂರ್ಣಗೊಳಿಸು.

ಎಲೈ! ಸೋಮರಸವೇ! ನೀನು ದಾರುಪಾತ್ರದಿಂದ ಗೃಹೀತನಾಗಿರುತ್ತೀಯೆ. ಆದಿತ್ಯದೇವತೆಗಳಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಇಂದ್ರನೇ! ನೀನು ಯಾವಾಗಲೂ ಪ್ರಮಾದ ಮಾಡುವುದಿಲ್ಲ. ಸರ್ವದಾ ಜಾಗರೂಕನಾಗಿರುತ್ತೀಯೆ. ಯಜಮಾನನನ್ನು ಈ ಜನ್ಮದಲ್ಲಿಯೂ ಮುಂದಿನ ಜನ್ಮದಲ್ಲಿಯೂ ರಕ್ಷಿಸುತ್ತೀಯೆ. ಆದಿತ್ಯನೇ! ತೃತೀಯಸವನವು ನಿನಗೆ ಸಂಬಂಧಿಸಿದುದು. ಆ ಸವನದಲ್ಲಿ ಅಮೃತಸಮಾನವಾದ ಇಂದ್ರಿಯಸಾಮರ್ಥ್ಯವೃದ್ಧಿಪ್ರದವಾದ ಮೊಸರು ಹವಿರ್ಧಾನಮಂಟಪದಲ್ಲಿ ಇದೆ. [ಅದರಿಂದ ಸೋಮರಸವನ್ನು ಮಿಶ್ರಣ ಮಾಡುತ್ತೇನೆ.]

ಭವತಾ ಮೃಡಯಂತಃ । ಆ ವೋಽರ್ವಾಚೀ ಸುಮತಿ

ರ್ವವೃತ್ಯಾದಗ್ಂಹೋಶ್ಚಿದ್ಯಾ ವರಿವೋವಿತ್ತರಾಸತ್ ॥

---

ಭವತ । ಮೃಡಯಂತಃ ॥ ಏತಿ । ವಃ । ಅರ್ವಾಚೀ । ಸುಮತಿರಿತಿ ಸು-ಮತಿಃ । ವವೃ ತ್ಯಾತ್ । ಅಗ್ಂಹೋಃ । ಚಿತ್ । ಯಾ । ವರಿವೋವಿತ್ತರೇತಿ ವರಿವೋವಿತ್-ತರಾ । ಅಸತ್ ॥

---

**ಮೃಡಯಂತಃ** = [ನಮ್ಮನ್ನು] ಸುಖಪಡಿಸುವವರಾಗಿ; **ಭವತ** = ಆಗಿರಿ; **ವಃ** = ನಿಮ್ಮ; **ಸುಮತಿಃ** = ಒಳ್ಳೆಯ ಅನುಗ್ರಹಬುದ್ಧಿಯು; **ಅರ್ವಾಚೀ** = ಇತ್ತೀಚಿನವರಾದ ನಮ್ಮಲ್ಲಿ ಪ್ರವೃತ್ತವಾಗಿ; **ಆ ವವೃತ್ಯಾತ್** = ಸುತ್ತಲೂ ಇರಲಿ. **ಯಾ** = ಯಾವ; **ಸುಮತಿಃ** = ಒಳ್ಳೆಯ ಬುದ್ಧಿಯು; **ಅಗ್ಂಹೋಃ ಚಿತ್** = ಪಾಪದಿಂದ ಪರಾಙ್ಮುಖವಾಗಿ ಇದೆಯೋ/ಪಾಪನಾಶಕವಾಗಿದೆಯೋ; **ಸಾ** = ಆ ಸುಮತಿಯು; **ವರಿವೋವಿತ್ತರಾ** = ಅತಿಶಯವಾಗಿ ದೇವಪರಿಚರ್ಯೆಯನ್ನು ತಿಳಿದುದಾಗಿ; **ಅಸತ್** = ಇರಲಿ.

---

[ಭ.ಭಾ. - ಎಲೈ! ಆದಿತ್ಯಗ್ರಹವೇ! ನೀನು ಪ್ರಮಾದ ಮಾಡುವುದಿಲ್ಲ. ಯಾಗನಿಷ್ಪತ್ತಿ ರೂಪವಾದ ಕಾರ್ಯದಲ್ಲಿ ಜಾಗರೂಕನಾಗಿರುತ್ತೀಯೆ. ಯಜಮಾನನನ್ನು ಎರಡು ಜನ್ಮ ಗಳಲ್ಲಿಯೂ ಪಾಲಿಸುತ್ತೀಯೆ. ಅಮೃತಸಮಾನವಾದ ಇಂದ್ರಿಯವೃದ್ಧಿಕಾರಣವಾದ ಮೊಸರು ಹವಿರ್ಧಾನದಲ್ಲಿ ಇದೆ. [ಮೊಸರನ್ನು ಸೋಮರಸದೊಡನೆ ಸೇರಿಸಬೇಕು.* ಆದುದರಿಂದ ಆದಿತ್ಯಗ್ರಹಗ್ರಹಣವು **ನಾಲ್ಕನೆಯ ಸವನದಂತೆ.]

'**ಚತ್ವಾರ ಆದಿತ್ಯಾ ಅಜಾಯಂತ**' ಎಂದು ಶ್ರುತಿಯೂ ಇದೆ.]

---

*** 'ಉಪಯಾಮಗೃಹೀತೋಽಸ್ಯಾದಿತ್ಯೇಭ್ಯಸ್ತ್ವಾ ಜುಷ್ಟಂ ಗೃಹ್ಣಾಮಿ' ಎಂದು ದಧಿಮಿಶ್ರಣ ಮಾಡಬೇಕು.**

**** ಶ್ರುತಿಯಲ್ಲಿರುವ 'ತುರೀಯ' ಎಂಬ ಶಬ್ದಕ್ಕೆ ನಾಲ್ಕನೆಯದು ಎಂದೇ ಅರ್ಥ.**

ವಿವಸ್ವ ಆದಿತ್ಯೈಷ ತೇ ಸೋಮಪೀಥಸ್ತೇನ ಮಂದಸ್ವ ತೇನ

ತೃಪ್ಯ ತೃಪ್ಯಾಸ್ಮ ತೇ ವಯಂ ತರ್ಪಯಿತಾರೋ

---

ವಿವಸ್ವಃ । ಆದಿತ್ಯ । ಏಷಃ । ತೇ । ಸೋಮಪೀಥ ಇತಿ ಸೋಮ-ಪೀಥಃ । ತೇನ । ಮಂದಸ್ವ । ತೇನ । ತೃಪ್ಯ । ತೃಪ್ಯಾಸ್ಮ । ತೇ । ವಯಮ್ । ತರ್ಪಯಿತಾರಃ ।

---

| ಮಂತ್ರ | ವಿನಿಯೋಗ |
|---|---|
| ವಿವಸ್ವ..........ತರ್ಪಯಿತಾರಃ । | ಉಪಾಂಶುಸವನವೆಂಬ ಕಲ್ಲಿನಿಂದ ಸೋಮವನ್ನು ಕೊಡಿಸಲು. |



---

❖ ವಿವಸ್ವಃ ಆದಿತ್ಯ = ವಿಶಿಷ್ಟನಿವಾಸಸ್ಥಾನವುಳ್ಳ ವಿವಸ್ವಂತನೆಂಬ ಹೆಸರುಳ್ಳ ಅದಿತಿಪುತ್ರನಾದ ಆದಿತ್ಯನೇ! ಏಷಃ = ಈ ಸೋಮವು; ತೇ ಸೋಮಪೀಥಃ = ನಿನಗೆ ಮೂರನೆಯದಾಗಿ ಕುಡಿಯಬೇಕಾದ್ದು ಸ್ತೋತ್ರವಾಗಿದೆ; ತೇನ = ಈ ಸೋಮದಿಂದ/ ಸೋಮದರ್ಶನದಿಂದ; ಮಂದಸ್ವ = ಸಂತುಷ್ಟನಾಗು; ತೇನ = ಆ ಸೋಮಪಾನದಿಂದ; ತೃಪ್ಯ = ತೃಪ್ತಿಯನ್ನು ಹೊಂದು; ತೇ ತರ್ಪಯಿತಾರಃ = ನಿನ್ನನ್ನು ತೃಪ್ತಿಪಡಿಸುವವರಾದ; ವಯಮ್ = ನಾವು; ತೃಪ್ಯಾಸ್ಮ = ತೃಪ್ತರಾಗೋಣ.

---

ಈ ಯಜ್ಞಪುರುಷನು ಹವಿರ್ಭಾಗವನ್ನು ದೇವತೆಗಳಿಗೆ ಒದಗಿಸುವ ಮೂಲಕ ದೇವತೆಗಳಿಗೆ ಸುಖವನ್ನು ಉಂಟುಮಾಡಲಿ./ಈ ದೇವತೆಗಳ ತೃಪ್ತಿಗಾಗಿ ಮಾಡುವ ಯಜ್ಞವು ಯಜಮಾನನಿಗೆ ಸುಖವನ್ನು ಒದಗಿಸಲಿ.

ಆದಿತ್ಯದೇವತೆಗಳೇ! ನಮಗೆ ಸುಖವನ್ನುಂಟುಮಾಡುವವರಾಗಿ ಆಗಿರಿ. ಇತ್ತೀಚಿನವರಾದ ನಮ್ಮ ಮೇಲೆ ಪ್ರವೃತ್ತವಾದ ನಿಮ್ಮ ಒಳ್ಳೆಯ ಬುದ್ಧಿಯು ನಮ್ಮನ್ನು ಯಾವಾಗಲೂ ಆವರಿಸಿ ಇರಲಿ. ಆ ನಿಮ್ಮ ಸುಮತಿಯು ನಮ್ಮನ್ನು ಪಾಪದಿಂದ ದೂರವಿರಿಸಲಿ. ನಮ್ಮ ಪಾಪವನ್ನು ಹೋಗಲಾಡಿಸಲಿ. ಆ ಸುಮತಿಯೇ ನಮಗೆ ನಿಮ್ಮನ್ನು ಹೀಗೆ ಚೆನ್ನಾಗಿ ಪರಿಚರ್ಯೆ ಮಾಡಬೇಕೆಂಬುದನ್ನು ತಿಳಿಸುತ್ತಿರಲಿ. ಹೀಗೆ ನೀವು

ಯಾ ದಿವ್ಯಾ ವೃಷ್ಟಿಸ್ತಯಾ ತ್ವಾ ಶ್ರೀಣಾಮಿ ॥ ೨೨-23 ॥

[ವಸ್ಸಪ್ತವಿಗ್‌ಂಶತಿಶ್ಚ।]

---

ಯಾ । ದಿವ್ಯಾ । ವೃಷ್ಟಿಃ । ತಯಾ । ತ್ವಾ । ಶ್ರೀಣಾಮಿ ॥ ೨೨ ॥

---

| ಮಂತ್ರ | ವಿನಿಯೋಗ |
|---|---|
| ಯಾ.............ಶ್ರೀಣಾಮಿ । | ಯಜಮಾನನು ವೃಷ್ಟಿಕಾಮನಾದರೆ ಹಾಲು ಅಥವಾ ಮೊಸರನ್ನು ಸೋಮರಸದೊಡನೆ ಸೇರಿಸಲು. |

---

❖ ಯಾ ದಿವ್ಯಾ ವೃಷ್ಟಿಃ = ಯಾವ ದಿವ್ಯವಾದ ಮಳೆಯುಂಟೋ/ಮಳೆಗೆ ಕಾರಣವಾದ ಹಾಲು ಅಥವಾ ಮೊಸರುಂಟೋ/ಉಪಾಂಶುಸವನವುಂಟೋ, ತಯಾ = ಆ ಹಾಲಿನಿಂದ ಅಥವಾ ಮೊಸರಿನಿಂದ/ಉಪಾಂಶುಸವನದಿಂದ, ತ್ವಾ ಶ್ರೀಣಾಮಿ = ನಿನ್ನನ್ನು ಕೂಡಿಸುತ್ತೇನೆ.

---

ಅನುಗ್ರಹ ಮಾಡಿರಿ.

ಭ.ಭಾ. 'ಉಪಯಾಮಗೃಹೀತೋಽಸ್ಯಾದಿತ್ಯೇಭ್ಯಸ್ತ್ವಾ' ಎಂದು ಸೋಮಗ್ರಹಣ ವನ್ನು ಮಾಡಬೇಕು.

ಎಲೈ! ಅದಿತಿಪುತ್ರರಲ್ಲಿ ಪ್ರಧಾನನಾದ ವಿವಸ್ವಂತನೆಂಬ ಹೆಸರುಳ್ಳ ಆದಿತ್ಯನೇ! ಈ ಸೋಮವು ನೀನು ಮೂರನೆಯದಾಗಿ ಕುಡಿಯಬೇಕಾದ ಸೋಮಭಾಗವಾಗಿದೆ. ಈ ಸೋಮವನ್ನು ನೋಡಿ ಸಂತೋಷವನ್ನು ಹೊಂದು. ಕುಡಿದು ತೃಪ್ತಿಯನ್ನು ಹೊಂದು. ನಿನಗೆ ತೃಪ್ತಿಯನ್ನುಂಟುಮಾಡಿದ ನಾವೂ ಫಲಪ್ರಾಪ್ತಿಯಿಂದ ತೃಪ್ತರಾಗುವಂತಾಗಲಿ. ಹೀಗೆ ಅನುಗ್ರಹಿಸು.

ಎಲೈ! ಸೋಮವೇ! ದಿವ್ಯವಾದ ಮಳೆಗೆ ಕಾರಣವಾದ ಹಾಲಿನಿಂದ ಅಥವಾ ಮೊಸರಿನಿಂದ ನಿನ್ನನ್ನು ಕೂಡಿಸುತ್ತೇನೆ.

## ಛಂದಸ್ಸು

| | |
|---|---|
| ಕದಾ ಚನ..........ಪೃಚ್ಯತೇ । | ಪಂಚಪದಾ ಪಥ್ಯಾ ಅಥವಾ ಬೃಹತೀ |
| ಕದಾ ಚನ..............ದಿವಿ । | ಪಂಚಪದಾ ಪಥ್ಯಾ |
| ಯಜ್ಞೋ.......ವಿತ್ತರಾಸತ್ । | ತ್ರಿಷ್ಟುಪ್. |



## ॥ ತ್ರಯೋವಿಂಶೋಽನುವಾಕಃ ॥

ವಾಮಮದ್ಯ ಸವಿತರ್ವಾಮಮು ಶ್ವೋ ದಿವೇದಿವೇ ವಾಮ

ಮಸ್ಮಭ್ಯಗ್ಂ ಸಾವೀಃ । ವಾಮಸ್ಯ ಹಿ ಕ್ಷಯಸ್ಯ ದೇವ

---

ವಾಮಮ್। ಅದ್ಯ । ಸವಿತಃ । ವಾಮಮ್ । ಉ । ಶ್ವಃ । ದಿವೇದಿವ ಇತಿ ದಿವೇ-ದಿವೇ।

ವಾಮಮ್। ಅಸ್ಮಭ್ಯಮಿತ್ಯಸ್ಮ-ಭ್ಯಮ್। ಸಾವೀಃ ॥ ವಾಮಸ್ಯ । ಹಿ । ಕ್ಷಯಸ್ಯ। ದೇವ।

---

| ಮಂತ್ರ | ವಿನಿಯೋಗ |
|---|---|
| ವಾಮಮದ್ಯ.....ಸ್ಯಾಮ । | ಅಂತರ್ಯಾಮಪಾತ್ರದಿಂದ ಸಾವಿತ್ರವನ್ನು ಆಗ್ರಯಣದಿಂದ ತೆಗೆದುಕೊಳ್ಳಲು. |

---

**ಸವಿತಃ** = ಸವಿತೃದೇವನೇ! **ಅದ್ಯ** = ಈಗ; **ವಾಮಮ್** = ನಾವು ಹೊಂದಬೇಕಾದ ಕರ್ಮಫಲವನ್ನು; **ಅಸ್ಮಭ್ಯಮ್** = ನಮಗೆ; **ಸಾವೀಃ** = ಪ್ರೇರಿಸು/ಕೊಡು; **ಶ್ವಃ ಉ** = ನಾಳೆಯೂ; **ವಾಮಮ್** = ಆ ಕರ್ಮಫಲವನ್ನು; [ಕೊಡು.] **ದಿವೇದಿವೇ** = ಪ್ರತಿನಿತ್ಯದಲ್ಲಿಯೂ; **ವಾಮಮ್** = ಮಂಗಳಕರವಾದ ಕರ್ಮಫಲವನ್ನು; **ಸಾವೀಃ** = ಕೊಡು; **ದೇವ** = ಸವಿತೃದೇವನೇ!

---

ಸವಿತೃದೇವನೇ! ಈಗ ನಮಗೆ ಲಭಿಸಬೇಕಾಗಿರುವ ಮಂಗಲಕರ್ಮಫಲವನ್ನು, ಕೊಡು ಮತ್ತು ನಾಳೆ(ಮುಂದೆ) ಲಭಿಸಬೇಕಾದ ಫಲವನ್ನೂ ಕೊಡು. ಪ್ರತಿದಿನದಲ್ಲಿಯೂ ನಮಗೆ ಮಂಗಲಕರ್ಮಫಲವನ್ನು ಕೊಡು. ಕ್ಷಯರಹಿತವಾದ ಸ್ವರ್ಗವೆಂಬ ಮಂಗಲ ಸ್ಥಾನಪ್ರಾಪ್ತಿಗಾಗಿ ಶ್ರದ್ಧೆಯಿಂದ ಕೂಡಿದ ಬುದ್ಧಿಯಿಂದ ಕರ್ಮಾನುಷ್ಠಾನ ಮಾಡುವವ

**ಭೂರೇರಯಾ ಧಿಯಾ ವಾಮಭಾಜಃ ಸ್ಯಾಮ ॥ ಉಪಯಾಮ**

**ಗೃಹೀತೋಽಸಿ ದೇವಾಯ ತ್ವಾ ಸವಿತ್ರೇ ॥ ೨೩-24 ॥**

**[ವಾಮಂ ಚತುರ್ವಿಗ್ಂಶತಿಃ । ]**

---

ಭೂರೇಃ । ಅಯಾ । ಧಿಯಾ । ವಾಮಭಾಜ ಇತಿ ವಾಮ - ಭಾಜಃ । ಸ್ಯಾಮ ॥

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ। ದೇವಾಯ। ತ್ವಾ । ಸವಿತ್ರೇ।।೨೩।।

---

| ಮಂತ್ರ | ವಿನಿಯೋಗ |
|---|---|
| ಉಪಯಾಮ............ಸವಿತ್ರೇ । | ಸಾವಿತ್ರವನ್ನು ತೆಗೆದುಕೊಳ್ಳಲು |

---

ವಾಮಸ್ಯ = ಹೊಂದಬೇಕಾದ; ಭೂರೇಃ = ಹೆಚ್ಚಾದ; ಕ್ಷಯಸ್ಯ = ಸ್ವರ್ಗರೂಪನಿವಾಸದ [ಇಚ್ಛೆಯಿಂದ]; ಅಯಾ ಧಿಯಾ = ಈ ಶ್ರದ್ಧಾಯುಕ್ತವಾದ ಬುದ್ಧಿಯಿಂದ; ವಾಮಭಾಜಃ = ಮಾಡಬೇಕಾದ ಕರ್ಮಗಳನ್ನು ಮಾಡುವವರಾಗಿ, ಸ್ಯಾಮ ಹಿ = ಆಗೋಣ/ ಸರ್ವಸಂಪತ್ಸಮೃದ್ಧಿಯಿಂದ ಕೂಡಿದವರಾಗೋಣ. [ಸೋಮರಸವೇ!] ಉಪಯಾಮ ಗೃಹೀತಃ ಅಸಿ = ದಾರುಪಾತ್ರದಲ್ಲಿ ಗ್ರಹಿಸಲ್ಪಟ್ಟಿರುವೆ; ದೇವಾಯ ಸವಿತ್ರೇ = ಸವಿತೃದೇವನಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ.]

---

ರಾಗೋಣ. ಧನ-ಧಾನ್ಯ ಪಶುಪುತ್ರಾದಿ ಸಮೃದ್ಧಿಯುಳ್ಳ ಮಹಾಭಾಗ್ಯವಂತರಾಗೋಣ.

ಎಲೈ! ಸೋಮರಸವೇ! ದಾರುಪಾತ್ರದಲ್ಲಿ ಗೃಹೀತನಾಗಿರುವೆ. ಸವಿತೃದೇವನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

**ಛಂದಸ್ಸು**

ವಾಮಮದ್ಯ................ಸ್ಯಾಮ ।     ತ್ರಿಷ್ಟುಪ್

---

## ॥ ಚತುರ್ವಿಂಶೋಽನುವಾಕಃ ॥

**ಆದಬ್ಧೇಭಿಃ ಸವಿತಃ ಪಾಯುಭಿಷ್ಟ್ವಗ್ಂ ಶಿವೇಭಿರದ್ಯ**

**ಪರಿಪಾಹಿ ನೋ ಗಯಮ್ । ಹಿರಣ್ಯಜಿಹ್ವಸ್ಸುವಿತಾಯ**

---

ಆದಬ್ಧೇಭಿಃ । ಸವಿತಃ । ಪಾಯುಭಿರಿತಿ ಪಾಯು-ಭಿಃ । ತ್ವಮ್। ಶಿವೇಭಿಃ । ಅದ್ಯ । ಪರೀತಿ । ಪಾಹಿ । ನಃ । ಗಯಮ್ ॥ ಹಿರಣ್ಯಜಿಹ್ವ ಇತಿ ಹಿರಣ್ಯ-ಜಿಹ್ವಃ । ಸುವಿತಾಯ।

---

| ಮಂತ್ರ | ವಿನಿಯೋಗ |
| --- | --- |
| ಆದಬ್ಧೇಭಿಃ....ಈಶತ ॥ | ಸಾವಿತ್ರಗ್ರಹಣಕ್ಕಾಗಿ ವೈಕಲ್ಪಿಕವಾಗಿರುವ ಮಂತ್ರ/ ವಿಕೃತಿಯಾಗಗಳಲ್ಲಿ ಸಾವಿತ್ರಗ್ರಹಣಕ್ಕಾಗಿ |



---

**ಸವಿತಃ** = ಎಲೈ! ಸವಿತೃದೇವನೇ! **ತ್ವಮ್** = ನೀನು; **ಆದಬ್ಧೇಭಿಃ** = ಹಿಂಸಿಸಲಾಗದ/ಎಲ್ಲಿಯೂ ತಡೆಯಿಲ್ಲದ; **ಪಾಯುಭಿಃ** = ರಕ್ಷಕರಾದ: **ಶಿವೇಭಿಃ** = ಮಂಗಲಕರವಾದ ನಿನ್ನ ಅನುಗ್ರಹವಿಶೇಷಗಳಿಂದ; **ನಃ** = ನಮ್ಮ; **ಗಯಮ್** = ಮನೆಯನ್ನು; **ಅದ್ಯ** = ಈಗ; **ಪರಿಪಾಹಿ** = ಎಲ್ಲಾ ಕಡೆಗಳಿಂದಲೂ ರಕ್ಷಿಸು; **ಹಿರಣ್ಯಜಿಹ್ವಃ** = ಹಿತವಾಗಿಯೂ ರಮಣೀಯವಾಗಿಯೂ ಇರುವ ನಾಲಿಗೆಯುಳ್ಳ/ಹಿತಪ್ರಿಯವಾದಿಯಾದ;/ರಸವನ್ನು ಸ್ವೀಕರಿಸುವ ಕಿರಣಗಳುಳ್ಳ; [ನೀನು] **ನವ್ಯಸೇ** = ನೂತನವಾದ; **ಸುವಿತಾಯ** = ಸ್ವರ್ಗಪ್ರಾಪ್ತಿಗಾಗಿ ಮಾಡುವ ಈ ಕರ್ಮವನ್ನು

---

ಎಲೈ! ಸವಿತೃದೇವನೇ! ನಿನ್ನ ಅನುಗ್ರಹವಿಶೇಷಗಳು ತಡೆಯಲಾರದವುಗಳು. ರಕ್ಷಕವಾದವುಗಳು. ಮಂಗಲವಾದವುಗಳು. ಅಂತಹ ಅನುಗ್ರಹದಿಂದ ನಮ್ಮ ಮನೆಯನ್ನು ರಕ್ಷಿಸು. ನೀನು ಹಿತವಾಗಿಯೂ, ರಮಣೀಯವಾಗಿಯೂ ಇರುವ ನಾಲಿಗೆಯುಳ್ಳವನು. ಜಲರಸವನ್ನು ಹರಣ ಮಾಡುವ ಕಿರಣಗಳುಳ್ಳವನು. ಚಿನ್ನದಂತಹ ಕಿರಣ

ನವ್ಯಸೇ ರಕ್ಷಾ ಮಾಕಿರ್ನೋ ಅಘಶಗ್‌ಂಸ ಈಶತ ॥ ಉಪಯಾ

ಮಗೃಹೀತೋಽಸಿ ದೇವಾಯ ತ್ವಾ ಸವಿತ್ರೇ ॥ ೨೪-25 ॥

[ಅದಬ್ಧೇಭಿಸ್ತ್ರಯೋವಿಗ್‌ಂಶತಿಃ॥]

---

ನವ್ಯಸೇ ರಕ್ಷ । ಮಾಕಿಃ । ನಃ । ಅಘಶಗ್‌ಂಸ ಇತ್ಯಘ-ಶಗ್‌ಂಸಃ । ಈಶತ॥ ಉಪಯಾಮ

ಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ದೇವಾಯ । ತ್ವಾ । ಸವಿತ್ರೇ ॥ ೨೪ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ..........ಸವಿತ್ರೇ । | ಸಾವಿತ್ರಗ್ರಹಣಕ್ಕಾಗಿ. |

---

ರಕ್ಷ = ರಕ್ಷಿಸು; ನಃ = ನಮಗೆ; ಅಘಶಗ್‌ಂಸಃ = ಕೇಡನ್ನು ಹಾರೈಸುವವನು; ಮಾಕಿಃ ಈಶತ = ಹಾಗೆ ನಿಂದಿಸಲು ಸಮರ್ಥನಾಗದಿರಲಿ; ✤ [ಹೇ ಸೋಮನೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಹಿಡಿಯಲ್ಪಟ್ಟಿರುವೆ; ಸವಿತ್ರೇ ದೇವಾಯ = ದೇವನಾದ ಸವಿತೃವಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ.]

---

ಗಳುಳ್ಳವನು. ನೀನು ಪುಣ್ಯಕರ್ಮಗಳಿಂದ ನಾವು ಹೊಂದುವ ನೂತನವಾದ ಸ್ವರ್ಗವನ್ನೂ ರಕ್ಷಿಸು. ಸ್ವರ್ಗಪ್ರಾಪ್ತಿಗಾಗಿ ಶ್ರದ್ಧೆಯುಳ್ಳ ಬುದ್ಧಿಯಿಂದ ಮಾಡುವ ಈ ಯಜ್ಞವನ್ನು ರಕ್ಷಿಸು. ನಮಗೆ ಕೇಡನ್ನು ಹಾರೈಸುವವನು ತನ್ನ ಕಾರ್ಯವನ್ನು ಮಾಡಲು ಸಮರ್ಥನಾಗದಿರಲಿ.

ಎಲೈ! ಸೋಮರಸವೇ! ನೀನು ದಾರುಪಾತ್ರಗೃಹೀತನಾಗಿರುವೆ. ನಿನ್ನನ್ನು ಸವಿತೃದೇವನಿಗಾಗಿ ಗ್ರಹಿಸುತ್ತೇನೆ.

ಛಂದಸ್ಸು

ಅದಬ್ಧೇಭಿಃ..........ಈಶತ । ತ್ರಿಷ್ಟುಪ್

---

## ॥ ಪಂಚವಿಂಶೋಽನುವಾಕಃ ॥

**ಹಿರಣ್ಯಪಾಣಿಮೂತಯೇ ಸವಿತಾರಮುಪಹ್ವಯೇ ।**

**ಸ ಚೇತ್ತಾ ದೇವತಾ ಪದಮ್ ॥**

---

**ಹಿರಣ್ಯಪಾಣಿಮಿತಿ ಹಿರಣ್ಯ-ಪಾಣಿಮ್ । ಊತಯೇ । ಸವಿತಾರಮ್ । ಉಪೇತಿ । ಹ್ವಯೇ॥**

**ಸಃ । ಚೇತ್ತಾ । ದೇವತಾ । ಪದಮ್ ॥**

---

| ಮಂತ್ರ | ವಿನಿಯೋಗ |
|---|---|
| ಹಿರಣ್ಯಪಾಣಿಮೂತಯೇ.....ಪದಮ್ । | ಸಾವಿತ್ರಗ್ರಹಣಕ್ಕಾಗಿ ವೈಕಲ್ಪಿಕವಾಗಿ ಧ್ಯಾನಮಂತ್ರ. [ವಿಕೃತಿಯಾಗಗಳಲ್ಲಿ |

---

**ಹಿರಣ್ಯಪಾಣಿಮ್** = [ನಮಗೆ ಕೊಡಲು] ಕೈಯಲ್ಲಿ ಚಿನ್ನವನ್ನು ಇಟ್ಟುಕೊಂಡಿರುವ; [ಕಟಕ, ಕೇಯೂರ, ಅಂಗುಲೀಯಕಾದಿ ಸ್ವರ್ಣಾಭರಣಭೂಷಿತವಾದ ಕೈಗಳುಳ್ಳ] **ಸವಿತಾರಮ್** = ಸವಿತೃದೇವನನ್ನು; **ಊತಯೇ** = ರಕ್ಷಣೆಗಾಗಿ; **ಉಪ ಹ್ವಯೇ** = ಸಮೀಪಿಸಿ ಕರೆಯುತ್ತೇನೆ; **ಸಃ ದೇವತಾ** = ಆ ಸವಿತೃದೇವನು; **ಪದಮ್ ಚೇತ್ತಾ** = [ನಮಗೆ ಯೋಗ್ಯವಾದ] ಸ್ಥಾನವನ್ನು ತಿಳಿದವನು ಆಗಿದ್ದಾನೆ./ಅವನು ನಮ್ಮ ದೇವತೆಯೂ ಆಗಿದ್ದಾನೆ.

---

ಆರಾಧಿಸುವವರಿಗೆ ಚಿನ್ನವನ್ನು/ಧನವನ್ನು ಕೊಡಲು ಕೈಯಲ್ಲಿ ಇಟ್ಟುಕೊಂಡಿರುವ, ಚಿನ್ನದ ಆಭರಣಗಳಿಂದ ಭೂಷಿತವಾದ ಕೈಗಳುಳ್ಳ ಸವಿತೃದೇವನನ್ನು ರಕ್ಷಣೆಗೋಸ್ಕರ ಸಮೀಪಿಸಿ ಆಹ್ವಾನಿಸುತ್ತೇನೆ. ಆತನು ನಮಗೆ ತಕ್ಕದಾದ ಸ್ಥಾನವನ್ನು ತಿಳಿದವನು. ನಮ್ಮ ದೇವತೆಯೂ ಆಗಿದ್ದಾನೆ.

## ಉಪಯಾಮಗೃಹೀತೋಽಸಿ ದೇವಾಯ ತ್ವಾ ಸವಿತ್ರೇ ॥ ೨೫-26 ॥

[ಹಿರಣ್ಯಪಾಣಿಂ ಚತುರ್ದಶ ॥]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ದೇವಾಯ । ತ್ವಾ । ಸವಿತ್ರೇ ॥ ೨೫ ॥

---

ಮಂತ್ರ ವಿನಿಯೋಗ

ಉಪಯಾಮ..........ಸವಿತ್ರೇ [ಸಾವಿತ್ರಗ್ರಹಣಕ್ಕಾಗಿ]

---

❖ [ಎಲೈ! ಸೋಮರಸವೇ! ನೀನು] ಉಪಯಾಮಗೃಹೀತೋಽಸಿ = ಮರದ ಪಾತ್ರೆಯಲ್ಲಿ ಹಿಡಿಯಲ್ಪಟ್ಟಿರುತ್ತೀಯೆ. ದೇವಾಯ ಸವಿತ್ರೇ = ಸವಿತೃದೇವನಿಗಾಗಿ; ತ್ವಾ = ನಿನ್ನನ್ನು [ಗ್ರಹಣ ಮಾಡುತ್ತೇನೆ.]

---

ಎಲೈ! ಸೋಮನೇ! ನೀನು ಉಪಯಾಮದಿಂದ ಗ್ರಹಿಸಲ್ಪಟ್ಟಿರುವೆ. ಸವಿತೃದೇವನಿಗಾಗಿ ನಿನ್ನನ್ನು ಪಾತ್ರದಲ್ಲಿ ಗ್ರಹಿಸುತ್ತೇನೆ.

### ಛಂದಸ್ಸು

ಹಿರಣ್ಯಪಾಣಿಮೂತಯೇ........ಪದಮ್ । ಗಾಯತ್ರೀ

---

## ॥ ಷಡ್ತ್ರಿಂಶೋಽನುವಾಕಃ ॥

ಸುಶರ್ಮಾಽಸಿ ಸುಪ್ರತಿಷ್ಠಾನೋ ಬೃಹದುಕ್ಷೇ ನಮ ಏಷ

ತೇ ಯೋನಿರ್ವಿಶ್ವೇಭ್ಯಸ್ತ್ವಾ ದೇವೇಭ್ಯಃ ॥ ೨೬-27 ॥

[ಸುಶರ್ಮಾ ದ್ವಾದಶ ।]

---

ಸುಶರ್ಮೇತಿ ಸು-ಶರ್ಮಾ । ಅಸಿ । ಸುಪ್ರತಿಷ್ಠಾನ ಇತಿ ಸು-ಪ್ರತಿಷ್ಠಾನಃ । ಬೃಹತ್ । ಉಕ್ಷೇ । ನಮಃ । ಏಷಃ । ತೇ । ಯೋನಿಃ । ವಿಶ್ವೇಭ್ಯಃ । ತ್ವಾ । ದೇವೇಭ್ಯಃ ॥೨೬॥

---

| ಮಂತ್ರ | ವಿನಿಯೋಗ |
|---|---|
| ಸುಶರ್ಮಾ.........ದೇವೇಭ್ಯಃ । | ಸವಿತೃಪಾತ್ರದಿಂದ ವೈಶ್ವದೇವಗ್ರಹಗ್ರಹಣ ಮಾಡಲು [ಸೋಮರಸವು ದ್ರೋಣಕಲಶದಲ್ಲಿರುತ್ತದೆ.] |

---

[ಎಲೈ! ವೈಶ್ವದೇವಗ್ರಹವೇ! ನೀನು] **ಸುಶರ್ಮಾ** = ಒಳ್ಳೆಯ ಸುಖವುಳ್ಳವನೂ; **ಸುಪ್ರತಿಷ್ಠಾನಃ** = ಪಾತ್ರವೆಂಬ ಒಳ್ಳೆಯ ಸ್ಥಾನವುಳ್ಳವನೂ/ಯಜ್ಞವೆಂಬ ಒಳ್ಳೆಯ ಸ್ಥಾನವುಳ್ಳವನೂ; **ಅಸಿ** = ಆಗಿದ್ದೀಯೆ. **ಉಕ್ಷೇ** = ಋಗ್ವೇದದ ಶಸ್ತ್ರಗಳಲ್ಲಿ ಹೊಗಳಲ್ಪಡುವ/ಮಳೆಯನ್ನು ಸುರಿಸುವ [ಯಾಗದ ಮೂಲಕವಾಗಿ]; [ನಿನಗೆ] **ಬೃಹತ್ ನಮಃ** = ದೊಡ್ಡ ನಮಸ್ಕಾರವು. [ಬೃಹತ್ ನಮಃ – ಸೋಮರೂಪವಾದ ಮಹತ್ತಾದ ಅನ್ನ. ಎಲೈ! ಸೋಮನೇ! ವಿಶ್ವೇದೇವರಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.] ∵ ಎಲೈ! ಪಾತ್ರವೇ! **ಏಷಃ** = ಈ ಖರಪ್ರದೇಶವು; **ತೇ ಯೋನಿಃ** = ನಿನ್ನ ಸ್ಥಾನವಾಗಿದೆ; **ವಿಶ್ವೇಭ್ಯಃ ದೇವೇಭ್ಯಃ** = ವಿಶ್ವೇದೇವರುಗಳಿಗಾಗಿ; **ತ್ವಾ** = ನಿನ್ನನ್ನು ಇಲ್ಲಿ [ಇಡುತ್ತೇನೆ.]

---

ಎಲೈ! ವೈಶ್ವದೇವಗ್ರಹವೇ! ನೀನು ಒಳ್ಳೆಯ ಸುಖವುಳ್ಳವನು./ಯಜಮಾನರಿಗೆ

ಸುಖವನ್ನು ಕೊಡತಕ್ಕವನು. ಪಾತ್ರವೆಂಬ ಒಳ್ಳೆಯ ಸ್ಥಾನವುಳ್ಳವನು./ಯಜ್ಞದಲ್ಲಿ ಸ್ಥಾನವನ್ನು ಪಡೆದವನು. ಶಸ್ತ್ರಮಂತ್ರಗಳಿಂದ ಸ್ತುತನಾದ, ಯಾಗನಿಷ್ಪತ್ತಿಯ ಮೂಲಕ ಮಳೆಗೆ ಕಾರಣನಾದ ಇಂತಹ ನಿನಗೆ ದೊಡ್ಡ ನಮಸ್ಕಾರವು./ಮಹತ್ತಾದ ಅನ್ನರೂಪವಾದ ಸೋಮರಸವನ್ನು ವಿಶ್ವೇದೇವರಿಗಾಗಿ ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ವಿಶ್ವೇದೇವರುಗಳಿಗಾಗಿ ನಿನ್ನನ್ನು ಇಲ್ಲಿ ಸಾದನಮಾಡುತ್ತೇನೆ.

---



## ॥ ಸಪ್ತವಿಂಶೋಽನುವಾಕಃ ॥

**ಬೃಹಸ್ಪತಿಸುತಸ್ಯ ತ ಇಂದೋ ಇಂದ್ರಿಯಾವತಃ ಪತ್ನೀವಂತಂ**

**ಗ್ರಹಂ ಗೃಹ್ಣಾಮ್ಯಗ್ನಾ3ಇ ಪತ್ನೀವಾ3ಃ**

---

**ಬೃಹಸ್ಪತಿಸುತಸ್ಯೇತಿ ಬೃಹಸ್ಪತಿ-ಸುತಸ್ಯ । ಇಂದೋ ಇತಿ । ಇಂದ್ರಿಯಾವತ ಇತೀಂದ್ರಿಯ-ವತಃ । ಪತ್ನೀವಂತಮಿತಿ ಪತ್ನೀ-ವಂತಮ್ । ಗ್ರಹಮ್ । ಗೃಹ್ಣಾಮಿ । ಅಗ್ನಾ3ಇ । ಪತ್ನೀವಾ3 ಇತಿ ಪತ್ನೀ-ವಾ3ಃ ।**



---

**ಮಂತ್ರ ವಿನಿಯೋಗ**

**ಬೃಹಸ್ಪತಿಸುತಸ್ಯ.......ಸ್ವಾಹಾ । ಪಾತ್ನೀವತಗ್ರಹಗ್ರಹಣ-ಹೋಮಮಾಡಲು.**

---

**ಇಂದೋ** = ಎಲೈ! ಸೋಮನೇ! **ಇಂದ್ರಿಯಾವತಃ** = ವೀರ್ಯವಂತನಾದ; **ಬೃಹಸ್ಪತಿ ಸುತಸ್ಯ** = ಯಜಮಾನನಿಂದ ಅಭಿಷುತನಾದ / ಬ್ರಹ್ಮನಿಂದ ಅಭಿಷುತನಾದ; **ತೇ** = ನಿನಗಾಗಿ/ನಿನ್ನದಾದ; **ಪತ್ನೀವಂತಮ್** = ಪತ್ನೀವದ್ದೇವತಾಕವಾದ; **ಗ್ರಹಮ್** = ಗ್ರಹವನ್ನು; **ಗೃಹ್ಣಾಮಿ** = ಹಿಡಿದಿಡುತ್ತೇನೆ. **ಅಗ್ನಾ3ಇ ಪತ್ನೀವಾ3ಃ** = ಪತ್ನೀವಂತನಾದ ಅಗ್ನಿಯೇ!

---

ಎಲೈ! ಸೋಮನೇ! ನೀನು ವೀರ್ಯವಂತನಾಗಿದ್ದೀಯೆ. ಯಜಮಾನ [ಬ್ರಹ್ಮನಿಂದ]ನಿಂದ ಅಭಿಷುತನಾಗಿದ್ದೀಯೆ. ನಿನ್ನ ಅಂಶದಿಂದ ಪತ್ನೀವದ್ದೇವತಾಕವಾದ ಗ್ರಹವನ್ನು ಗ್ರಹಣ ಮಾಡುತ್ತೇನೆ. ಪತ್ನೀವಂತನಾದ ಓ ಅಗ್ನಿಯೇ! ತೃಪ್ತ...

**ಸಜೂರ್ದೇವೇನ ತ್ವಷ್ಟ್ರಾಸೋಮಂ ಪಿಬ ಸ್ವಾಹಾ ॥೨೭-28॥**

**[ಬೃಹಸ್ಪತಿಸುತಸ್ಯ ಪಂಚದಶ ।]**

---

ಸಜೂರಿತಿ ಸ-ಜೂಃ । ದೇವೇನ । ತ್ವಷ್ಟ್ರಾ । ಸೋಮಮ್ । ಪಿಬ । ಸ್ವಾಹಾ ॥ ೨೭॥

---

**ದೇವೇನ ತ್ವಷ್ಟ್ರಾ** = ತ್ವಷ್ಟೃದೇವನಿಂದ; **ಸಜೂಃ** = ಸಮಾನಪ್ರೀತಿಯುಳ್ಳವನಾಗಿ; **ಸೋಮಮ್ ಪಿಬ**= ಸೋಮರಸವನ್ನು ಕುಡಿ; **ಸ್ವಾಹಾ** = ಇದು ನಿನಗೆ ಹುತವಾಗಲಿ.

---

ನೊಡನೆ ಸಮಾನಪ್ರೀತಿಯುಳ್ಳವನಾಗಿ ಸೋಮವನ್ನು ಪಾನಮಾಡು. ಇದು ನಿನಗೆ ಹುತವಾಗಲಿ.



### ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) ಪಾತ್ನೀವತಭಕ್ಷಣದಲ್ಲಿ ಇಂದ್ರವಾಯುಗಳನ್ನು ಲಕ್ಷಿಸಬೇಕೇ?**

**[ಜೈ.ಸೂ. 3-2-31,33]**

ಐಂದ್ರವಾಯವಾದಿಗ್ರಹಗಳು ದ್ವಿದೇವತ್ಯಗಳು. ಅವುಗಳ ಶೇಷವನ್ನು ಆದಿತ್ಯ ಪಾತ್ರೆಯಲ್ಲಿ ಇಡಬೇಕು. ಆದಿತ್ಯಪಾತ್ರದಿಂದ ಆಗ್ರಯಣಪಾತ್ರೆಗೆ ಆ ಶೇಷವು ಬರುತ್ತದೆ. ಆಗ್ರಯಣಸ್ಥಾಲಿಯಿಂದ ಪಾತ್ನೀವತಗ್ರಹಣವಾಗುತ್ತದೆ. ಪಾತ್ನೀವತಭಕ್ಷಣ ದಲ್ಲಿ ಐಂದ್ರವಾಯವಾದಿಗ್ರಹದೇವತೆಗಳಾದ ಇಂದ್ರವಾಯ್ವಾದಿಗಳನ್ನೂ 'ಇಂದ್ರ ವಾಯುಪೀತಸ್ಯ' ಮೊದಲಾಗಿ ಲಕ್ಷಿಸಬೇಕೇ? ಇಲ್ಲವೇ? ಇದು ಇಲ್ಲಿನ ಸಂಶಯ.

ಪೂರ್ವಾಧಿಕರಣದಲ್ಲಿ ಮಿತ್ರಾವರುಣಾದಿದೇವತೆಗಳೊಡನೆ 'ಇಂದ್ರಪೀತಸ್ಯ' ಎಂದು ಲಕ್ಷಿಸಬೇಕೆಂದು ಹೇಳಿರುವಂತೆ ಇಲ್ಲಿಯೂ ಸಹ ಇಂದ್ರವಾಯ್ವಾದಿಗಳನ್ನು ಲಕ್ಷಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : 'ಉಪಾಂಶುಪಾತ್ರೇಣ ಪಾತ್ನೀವತಮಾಗ್ರ ಯಣಾದ್ಗೃಹ್ಣಾತಿ' ಎಂಬ ವಚನದಂತೆ ಆಗ್ರಯಣಪಾತ್ರದ ದೆಸೆಯಿಂದ ಹೊರಗೆ ತೆಗೆದ

ಸೋಮರಸಕ್ಕೆ ಪತ್ನೀವದ್ದೇವತಾಮಾತ್ರಸಂಬಂಧವಿರುವುದರಿಂದ ಇಂದ್ರವಾಯ್ವಾದಿ ಲಕ್ಷಣವನ್ನು ಭಕ್ಷಣಮಂತ್ರದಲ್ಲಿ ಮಾಡಬೇಕಾಗಿಲ್ಲ.

**೨) ಪಾತ್ನೀವತಮಂತ್ರದಲ್ಲಿ 'ತ್ವಷ್ಟೃಪೀತಸ್ಯ' ಎಂಬುದನ್ನು ಹೇಳಬೇಕೆ?**

**[ಜೈ.ಸೂ. 3.2.34.35]**

ಈ ಪಾತ್ನೀವತಮಂತ್ರದಲ್ಲಿ **'ತ್ವಷ್ಟ್ರಾ ಸೋಮಂ ಪಿಬ ಸ್ವಾಹಾ'** ಎಂದಿದೆ. ಇಲ್ಲಿ **" ತ್ವಷ್ಟೃಪೀತಸ್ಯ"** ಎಂದು ಹೇಳಬೇಕೆ? ಎಂಬುದು ಸಂಶಯ.

'ಹೇ ಅಗ್ನಿಯೇ! ತ್ವಷ್ಟನೊಡನೆ ಸೋಮವನ್ನು ಕುಡಿ' ಎಂದಿರುವುದರಿಂದ ತ್ವಷ್ಟನನ್ನೂ ಲಕ್ಷಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ತ್ವಷ್ಟೃದೇವನಿಗೆ ಜೊತೆಯಲ್ಲಿ ಇರುವಿಕೆಯು ಮಾತ್ರವೇ ಮಂತ್ರದಲ್ಲಿ ಹೇಳಲ್ಪಟ್ಟಿದೆ. ಪಾನಮಾಡುವುದರಲ್ಲಿ ಸಾಹಿತ್ಯವು ಹೇಳಲ್ಪಟ್ಟಿಲ್ಲ. ಬೇರೆ ವಿಧಿವಾಕ್ಯವಲ್ಲಿಯೂ ತ್ವಷ್ಟನನ್ನು ದೇವತೆಯೆಂದು ಹೇಳಿಲ್ಲ. ಆದುದರಿಂದ **'ಸಹೈವ ದಶಭಿಃ ಪುತ್ರೈಃ ಭಾರಂ ವಹತಿಗರ್ದಭೀ'** ಮುಂತಾದ ಕಡೆಗಳಲ್ಲಿ ಗರ್ದಭಿಗೆ ಮಾತ್ರ ಭಾರವಹನ. ಕತ್ತೆಮರಿಗಳಿಗೆ ಜೊತೆಯಲ್ಲಿರುವುದು ಮಾತ್ರ ಎಂದು ಮುಂತಾಗಿ ಅರ್ಥಮಾಡಿರುವಂತೆ ಇಲ್ಲಿಯೂ ತ್ವಷ್ಟನಿಗೆ ಪಾನವಿಲ್ಲ. ಆದುದರಿಂದ ಮಂತ್ರದಲ್ಲಿ ಸೇರಿಸಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.



**೩) ಪಾತ್ನೀವತಯಾಜ್ಯಾಯಲ್ಲಿ 'ವಿಶ್ವೇದೇವಪೀತಸ್ಯ' ಎಂದು ಹೇಳಬೇಕೆ?**

**[ಜೈ.ಸೂ. 3.2.36/37]**

ಪಾತ್ನೀವತಯಾಜ್ಯಾಮಂತ್ರದಲ್ಲಿ 'ಪತ್ನೀವತ............ಮಾದಯಸ್ವ' ಎಂದಿದೆ. ಇಲ್ಲಿ ಭಕ್ಷಣಮಂತ್ರದಲ್ಲಿ 'ವಿಶ್ವೇದೇವಪೀತಸ್ಯ' ಎಂದು ಹೇಳಬೇಕೆ? ಇಲ್ಲವೇ? ಎಂಬುದು ಸಂಶಯ.

**'ತ್ರಯಸ್ತ್ರಿಂಶತಂ ದೇವಾನ್ ಮಾದಯಸ್ವ'** ಎಂದು ಸ್ಪಷ್ಟವಾಗಿರುವುದರಿಂದ ಅವರನ್ನು ಲಕ್ಷಿಸಬೇಕು. ಇದು ಇಲ್ಲಿನ ಪೂರ್ವಪಕ್ಷ.

ಯಜಮಾನನು ದೇವತೆಯಾದ ಅಗ್ನಿಯನ್ನು ಸೋಮರಸದಿಂದ ತೃಪ್ತಿಪಡಿಸುತ್ತಾನೆ. ಅಗ್ನಿಯು ಮೂವತ್ತುಮೂರು ದೇವತೆಗಳನ್ನು ತಾನೇ ಸಂತೋಷಪಡಿಸುತ್ತಾನೆ.

---

ಏಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।

ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾವಹ ಮಾದಯಸ್ವ । **ಋ.ಸಂ.** 3.6.9

ಆದುದರಿಂದ ಬೇರೆಯವರು ಭಕ್ಷಣಮಂತ್ರದಲ್ಲಿ 'ವಿಶ್ವೇದೇವಪೀತಸ್ಯ' ಎಂದು ಹೇಳಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.

೪) ಭಕ್ಷಣಮಂತ್ರದಲ್ಲಿ ಅನುವಷಟ್ಕಾರದೇವತೆಯನ್ನು ಹೇಳಬೇಕೆ?

[ಜೈ.ಸೂ. 3.2.38/39]

'ಸೋಮಸ್ಯಾಗ್ನೇ ವೀಹೀತ್ಯನುಯಜತಿ' ಎಂಬಲ್ಲಿ ಅನುವಷಟ್ಕಾರದೇವತೆಯಾದ ಅಗ್ನಿಯನ್ನೂ ಭಕ್ಷಣಮಂತ್ರದಲ್ಲಿ ಹೇಳಬೇಕೆ ಇಲ್ಲವೇ? ಎಂಬುದು ಸಂಶಯ.

ಸ್ಪಷ್ಟವಾಗಿ ಅಗ್ನಿಗೆ ದೇವತಾತ್ವವಿರುವುದರಿಂದ 'ಅಗ್ನಿಪೀತಸ್ಯ' ಎಂದು ಹೇಳಬೇಕು. ಇದು ಪೂರ್ವಪಕ್ಷ.

ಇದು ವಿಕೃತಿಯಲ್ಲಿದೆ. ಪ್ರಕೃತಿಯಲ್ಲಿ ಐಂದ್ರಚಮಸದ ಭಕ್ಷಣದಲ್ಲಿ ವಷಟ್ಕಾರದೇವತೆಯಾದ ಇಂದ್ರನನ್ನು ಮಾತ್ರವೇ ಲಕ್ಷಿಸಿದೆ. ಆದುದರಿಂದ ಇಲ್ಲಿಯೂ ಪ್ರಧಾನದೇವತೆಗೇ ಮಂತ್ರದಲ್ಲಿ ಕೀರ್ತನವುಂಟು. ಅನುವಷಟ್ಕಾರದೇವತೆಯಾದ ಅಗ್ನಿಗೆ ಅಲ್ಲ. ಇದು ಇಲ್ಲಿನ ಸಿದ್ಧಾಂತ.



## ಆ) ಛಂದಸ್ಸು

೧) ಬೃಹಸ್ಪತಿಸುತಸ್ಯ......ಗೃಹ್ಣಾಮಿ | ತ್ರಿಪದಾ ಗಾಯತ್ರೀ [ಭ.ಭಾ.]

೨) ಅಗ್ನಾ3ಇ..........ಪಿಬ | ಷೋಡಶಾಕ್ಷರಾ ತ್ರಿಪದಾ ಗಾಯತ್ರೀ [ಭ.ಭಾ.]

೩) ಸ್ವಾಹಾ | ಯಜುಸ್ಸು.

## || ಅಷ್ಟಾವಿಂಶೋಽನುವಾಕಃ ||

ಹರಿರಸಿ ಹಾರಿಯೋಜನೋ ಹರ್ಯೋಃ ಸ್ಥಾತಾ ವಜ್ರಸ್ಯ ಭರ್ತಾ ಪೃಶ್ನೇಃ ಪ್ರೇತಾ ತಸ್ಯ ತೇ ದೇವ ಸೋಮೇಷ್ಟ-

ಹರಿಃ । ಅಸಿ । ಹಾರಿಯೋಜನ ಇತಿ ಹಾರಿ-ಯೋಜನಃ । ಹರ್ಯೋಃ । ಸ್ಥಾತಾ । ವಜ್ರಸ್ಯ । ಭರ್ತಾ । ಪೃಶ್ನೇಃ । ಪ್ರೇತಾ । ತಸ್ಯ । ತೇ । ದೇವ । ಸೋಮ ।



| ಮಂತ್ರ | ವಿನಿಯೋಗ |
| --- | --- |
| ಹರಿರಸಿ..........ಸ್ಥಾತಾ || | ಹಾರಿಯೋಜನಗ್ರಹಗ್ರಹಣ-ಸೋಮಗಳಿಗಾಗಿ. |

[ಎಲೈ ಸೋಮನೇ! ನೀನು] ಹರಿಃ ಅಸಿ = ಹಸಿರು ಬಣ್ಣದವನಾಗಿದ್ದೀಯೆ; ಹಾರಿಯೋಜನಃ = ಹಸಿರುಬಣ್ಣದ ಕುದುರೆಗಳುಳ್ಳ ಇಂದ್ರನನ್ನು ದೇವತೆಯಾಗಿ ಹೊಂದಿರುವವನಾಗಿದ್ದೀಯೆ; ಹರ್ಯೋಃ= ಹಸಿರುಬಣ್ಣದ ಎರಡು ಕುದುರೆಗಳಲ್ಲಿ/ಕುದುರೆಗಳನ್ನು ಕಟ್ಟಿದ ರಥದಲ್ಲಿ; ಸ್ಥಾತಾ = ಇರುವವನಾಗಿದ್ದೀಯೆ; ವಜ್ರಸ್ಯ ಭರ್ತಾ = ವಜ್ರಾಯುಧವನ್ನು ಧರಿಸಿದವನೂ; ಪೃಶ್ನೇಃ ಪ್ರೇತಾ = [ಯಾಗನಿಷ್ಪತ್ತಿಯ ಮೂಲಕವಾಗಿ] ಅನ್ನವನ್ನು ಉಂಟುಮಾಡುವವನಾಗಿದ್ದೀಯೆ; ದೇವ ಸೋಮ = ಸೋಮದೇವನೇ!

ಈ ಮಂತ್ರದಲ್ಲಿ ಹಾರಿಯೋಜನಗ್ರಹಸೋಮವನ್ನು ಇಂದ್ರನಂತ ವರ್ಣಿಸಲಾಗಿದೆ. ಎಲೈ! ಸೋಮನೇ! ನೀನು ಹಸಿರುಬಣ್ಣದವನಾಗಿರುವೆ. ಹಸಿರುಬಣ್ಣದ ಕುದುರೆಗಳನ್ನು ಕಟ್ಟಿದ ರಥದಲ್ಲಿರುವ ಇಂದ್ರನೇ ನಿನ್ನ ದೇವತೆಯಾದುದರಿಂದ ಹಾರಿಯೋಜನನೂ ಆಗಿರುವೆ. ಹಸಿರುಬಣ್ಣದ ಎರಡು ಕುದುರೆಗಳನ್ನು ಕಟ್ಟಿದ ರಥದಲ್ಲಿ

ಯಜುಷಃ ಸ್ತುತಸ್ತೋಮಸ್ಯ ಶಸ್ತೋಕ್ಥಸ್ಯ ಹರಿವಂತಂ ಗ್ರಹಂ ಗೃಹ್ಣಾಮಿ ಹರೀಃ ಸ್ಥ ಹರ್ಯೋರ್ಧಾನಾಃ ಸಹ ಸೋಮಾ ಇಂದ್ರಾಯ ಸ್ವಾಹಾ ॥ ೨೮-29 ॥

[ಹರಿಃ ಷಡ್ವಿಂಗ್ಂಶತಿಃ ।]

---

ಇಷ್ಟಯಜುಷ ಇತೀಷ್ಟ-ಯಜುಷಃ । ಸ್ತುತ ಸ್ತೋಮಸ್ಯೇತಿ ಸ್ತುತ-ಸ್ತೋಮಸ್ಯ । ಶಸ್ತೋಕ್ಥಸ್ಯೇತಿ ಶಸ್ತ-ಉಕ್ಥಸ್ಯ । ಹರಿವಂತಮಿತಿ ಹರಿ-ವಂತಮ್। ಗ್ರಹಮ್। ಗೃಹ್ಣಾಮಿ । ಹರೀಃ। ಸ್ಥ। ಹರ್ಯೋಃ । ಧಾನಾಃ । ಸಹಸೋಮಾ ಇತಿ ಸಹ - ಸೋಮಾಃ । ಇಂದ್ರಾಯ । ಸ್ವಾಹಾ ॥ ೨೮ ॥



---

ಇಷ್ಟಯಜುಷಃ=ಯಜ್ಞಸಾಧನವಾದ [...] ಗೃಹ್ಣಾಮಿ ಮೊದಲಾದಿ ಯಜುರ್ಮಂತ್ರಗಳುಳ್ಳ; ಸ್ತುತಸ್ತೋಮಸ್ಯ = [ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶಸ್ತೋಮ ರೂಪವಾದ ನಾನಾ ಸಂಬಂಧಿ] ಸ್ತೋತ್ರಗಳಿಂದ ಸ್ತುತನಾಗಿರುವ; ಶಸ್ತೋಕ್ಥಸ್ಯ = [ಪ್ರಉಗ, ಆಜ್ಯ, ನಿಷ್ಕೇವಲ್ಯ, ಮರುತ್ವತೀಯ, ವೈಶ್ವದೇವ, ಆಗ್ನಿಮಾರುತಶಸ್ತ್ರಗಳೆಂಬ] ಋಙ್ಮಂತ್ರಗಳಿಂದ ಶಂಸಿತನಾಗಿರುವ; ತಸ್ಯ ತೇ = ಅಂತಹ ಪ್ರಸಿದ್ಧನಾದ ನಿನ್ನ ಅಂಶದಿಂದ; ಹರಿವಂತಮ್ = ಇಂದ್ರದೇವತಾಕವಾದ; ಗ್ರಹಮ್ = ಹಾರಿಯೋಜನ ಗ್ರಹವನ್ನು; ಗೃಹ್ಣಾಮಿ = ಗ್ರಹಿಸುತ್ತೇನೆ. ಧಾನಾಃ = ಹುರಿದ ತಂಡುಲ(ಯವ)ಗಳೇ! ಹರ್ಯೋಃ ಹರೀಃ ಸ್ಥ = ಹಸಿರು ಬಣ್ಣದ ಇಂದ್ರನ ಕುದುರೆಗಳ ಸಂಬಂಧದಿಂದ ಹರಿಯೆಂಬ ಹೆಸರುಳ್ಳವರಾಗಿದ್ದೀರಿ; ಸಹಸೋಮಾಃ = *ಸೋಮರಸದೊಡನೆ ಸೇರಿದವರೂ ಆಗಿದ್ದೀರಿ; [ಇಂತಹ ಹವಿಸ್ಸು] ಇಂದ್ರಾಯ ಸ್ವಾಹಾ = ಇಂದ್ರದೇವನಿಗೆ ಹುತವಾಗಲಿ.

---

ಕುಳಿತಿರುವೆ. ವಜ್ರಾಯುಧವನ್ನು ಧರಿಸಿರುವೆ. ಪೋಷಿಸಿರುವೆ. ಯಾಗನಿಷ್ಪತ್ತಿಗೆ ಕಾರಣ

---

* 'ಧಾನಾಭಿಃ ಶ್ರೀಣೀಯಾತ್' ಎಂಬ ವಚನದಿಂದ.

ನಾಗಿ ವೃಷ್ಟಿರೂಪದಿಂದ ಅನ್ನವನ್ನೂ ಕೊಡುವೆ. ನೀನು ಸೋಮಯಾಗದಲ್ಲಿ ಯಜುರ್ಮಂತ್ರಗಳಿಂದ ಸಂಸ್ಕಾರ್ಯನಾಗಿರುವೆ. ತ್ರಿವೃತ್ ಮುಂತಾದ ಸಾಮಗಾನದ ಸ್ತೋಮಗಳಿಂದ ಸ್ತುತಿಸಲ್ಪಟ್ಟಿರುವೆ. ಪ್ರ ಉಗವೇ ಮುಂತಾದ ಋಗ್ವೇದದ ಶಸ್ತ್ರಗಳಿಂದ ಶಂಸಿತನಾಗಿದ್ದೀಯೆ. ಇಂತಹ ನಿನ್ನ ಸಂಬಂಧಿಯೂ, ಇಂದ್ರದೇವತಾಕವೂ ಆದ ಹಾರಿಯೋಜನಗ್ರಹವನ್ನು ಗ್ರಹಿಸುತ್ತೇನೆ.

ಎಲೈ! ಹುರಿದ ತಂಡುಲಗಳೇ! ಹಸಿರು ಬಣ್ಣದ ಕುದುರೆಗಳ ಸಂಬಂಧದಿಂದ ನೀವೂ 'ಹರಿ' ಎಂಬ ಹೆಸರನ್ನು ಪಡೆದಿದ್ದೀರಿ. ಸೋಮಸಹಿತವಾದ ಈ ಧಾರೆಗಳು ಇಂದ್ರನಿಗಾಗಿ ಹುತವಾಗಲಿ.

## ಮೀಮಾಂಸಾ



೧) ಹಾರಿಯೋಜನಭಕ್ಷಣದಲ್ಲಿ ಗ್ರಾವಸ್ತುತನಿಗೆ ಭಕ್ಷಣವಿದೆಯೇ?

[ಜೈ.ಸೂ. 3.5.14/15]

ಹಾರಿಯೋಜನಭಕ್ಷಣದಲ್ಲಿ ಗ್ರಾವಸ್ತುತನಿಗೆ ಭಕ್ಷಣವಿದೆಯೇ? ಇದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ : 'ಋತ್ವಾಚಮಸಮನ್ಯಾಂಶ್ಚಮಸಾಂಶ್ಚಮಸಿನೋ ಭಕ್ಷಯಂತಿ' 'ಅಥೈತಸ್ಯ ಹಾರಿಯೋಜನಸ್ಯ ಸರ್ವಂ ಲಿಪ್ಸಂತೇ' ಎಂಬ ವಚನಗಳಿವೆ. ಪೂರ್ವವಾಕ್ಯದಲ್ಲಿ 'ಚಮಸಿನಃ' ಎಂದಿರುವುದರಿಂದ ಹತ್ತು ಜನ ಚಮಸಿಗಳಾದ ಋತ್ವಿಜರಿಗೆ ಮಾತ್ರ ಭಕ್ಷಣ, ಗ್ರಾವಸ್ತುತನಿಗಿಲ್ಲ.

ಇಲ್ಲಿಯ 'ಸಿದ್ಧಾಂತ'ವು ಹೀಗಿದೆ : 'ಅಥೈತಸ್ಯ' ಎಂಬ ಅಥಶಬ್ದವೂ, 'ಸರ್ವ ಏವ' ಎಂಬಲ್ಲಿ ಏವಕಾರವೂ ಇರುವುದರಿಂದ 'ಸರ್ವೇ' ಎಂಬ ಶಬ್ದಕ್ಕೆ ಋತ್ವಿಜರೆಲ್ಲರೂ ಎಂಬ ಅರ್ಥವನ್ನು ಹೇಳುವುದು ಯುಕ್ತ. ಆದುದರಿಂದ ಋತ್ವಿಜನಾದ ಗ್ರಾವಸ್ತುತನಿಗೂ ಭಕ್ಷಣ ಇದೆ.

---

## ॥ ಏಕೋನತ್ರಿಂಶೋಽನುವಾಕಃ ॥

ಅಗ್ನ ಆಯೂಗ್ಂಷಿ ಪವಸ ಆ ಸುವೋರ್ಜಮಿಷಂ ಚ ನಃ।

ಆರೇ ಬಾಧಸ್ವ ದುಚ್ಛುನಾಮ್ ॥

---

ಅಗ್ನೇ । ಆಯೂಗ್ಂಷಿ । ಪವಸೇ । ಇತಿ । ಸುವ । ಊರ್ಜಮ್ । ಇಷಮ್। ಚ ।

ನಃ ॥ ಆರೇ । ಬಾಧಸ್ವ । ದುಚ್ಛುನಾಮ್ ॥

---



ಮಂತ್ರ ... ವಿನಿಯೋಗ

ಅಗ್ನ............ದುಚ್ಛುನಾಮ್ ॥ ಅತಿಗ್ರಾಹ್ಯಗಳಲ್ಲಿ ಮೊದಲನೆಯದಾದ

---

**ಅಗ್ನೇ** = ಎಲೈ ! ಅಗ್ನಿದೇವನೇ! **ಆಯೂಗ್ಂಷಿ** = [ನಿನ್ನನ್ನು ಆರಾಧಿಸುವವರ] ಆಯುಸ್ಸನ್ನು; **ಪವಸೇ**= ಶೋಧಿಸುತ್ತೀಯೆ/ವೃದ್ಧಿಗೊಳಿಸುತ್ತೀಯೆ; **ನಃ** = ನಮಗೆ; **ಇಷಮ್** = ಅನ್ನವನ್ನೂ; **ಚ** = ಮತ್ತು; **ಊರ್ಜಮ್** = ಬಲವನ್ನೂ; **ಆ ಸುವ** = ಕೊಡು; **ದುಚ್ಛುನಾಮ್** = ಶತ್ರುಸೇನೆಯನ್ನು; **ಆರೇ** = ದೂರದಲ್ಲಿಯೇ; **ಬಾಧಸ್ವ** = ನಮ್ಮ ಸಮೀಪಕ್ಕೆ ಬರದಂತೆ ಪೀಡಿಸು.;

---

ಎಲೈ! ಅಗ್ನಿದೇವನೇ! ನೀನು ಭಕ್ತರ ಆಯುಸ್ಸನ್ನು ವೃದ್ಧಿಗೊಳಿಸತಕ್ಕವನು. ನಮಗೆ ಅನ್ನವನ್ನೂ, ಬಲವನ್ನೂ ಕೊಡು. ಶತ್ರುಗಳನ್ನು ಸಮೀಪಕ್ಕೆ ಬಾರದಂತೆ ದೂರದಲ್ಲಿಯೇ ನಿಗ್ರಹಿಸು.

ಉಪಯಾಮಗೃಹೀತೋಽಸ್ಯಗ್ನಯೇ ತ್ವಾ ತೇಜಸ್ವತ ಏಷ ತೇ ಯೋನಿರಗ್ನಯೇ ತ್ವಾ ತೇಜಸ್ವತೇ ॥ ೨೯-30 ॥

[ಅಗ್ನ ಆಯುರ್ಗ್ಂಷಿ ತ್ರಯೋವಿಗ್ಂಶತಿಃ ।]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಅಗ್ನಯೇ । ತ್ವಾ । ತೇಜಸ್ವತೇ । ಏಷಃ । ತೇ । ಯೋನಿಃ । ಅಗ್ನಯೇ । ತ್ವಾ । ತೇಜಸ್ವತೇ ॥ ೨೯ ॥

---



| ಮಂತ್ರ | ವಿನಿಯೋಗ |
|---|---|
| ಉಪಯಾಮ.............ತೇಜಸ್ವತೇ | ಆಗ್ನೇಯದ ಗ್ರಹಣ–ಆಸಾದನ. |

---

❖ ಎಲೈ! ಸೋಮರಸವೇ, ನೀನು, ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ; ತ್ವಾ = ನಿನ್ನನ್ನು ತೇಜಸ್ವತೇ ಅಗ್ನಯೇ = ತೇಜಸ್ವಂತನಾದ ಅಗ್ನಿಗಾಗಿ [ಗ್ರಹಿಸುತ್ತೇನೆ.] ಎಲೈ! ಅತಿಗ್ರಾಹ್ಯಗ್ರಹವೇ! ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ; ತ್ವಾ = ನಿನ್ನನ್ನು ತೇಜಸ್ವತೇ ಅಗ್ನಯೇ= ತೇಜಸ್ವಂತನಾದ ಅಗ್ನಿಗಾಗಿ [ಇಲ್ಲಿ ಸಾದನ ಮಾಡುತ್ತೇನೆ.]

---

ಎಲೈ! ಸೋಮರಸವೇ! ನೀನು ದಾರುಪಾತ್ರದಲ್ಲಿ ಗೃಹೀತನಾಗಿರುವೆ. ನಿನ್ನನ್ನು ತೇಜಸ್ವಂತನಾದ ಅಗ್ನಿಗಾಗಿ ಗ್ರಹಿಸುತ್ತೇನೆ.

ಎಲೈ! ಅತಿಗ್ರಾಹ್ಯಗ್ರಹವೇ! ಈ ಖರಪ್ರದೇಶವು ನಿನ್ನ ಸ್ಥಾನ. ತೇಜಸ್ವಂತನಾದ ಅಗ್ನಿಗಾಗಿ ನಿನ್ನನ್ನು ಇಲ್ಲಿಡುತ್ತೇನೆ.

ಛಂದಸ್ಸು

| | |
|---|---|
| ಅಗ್ನ..........ದುಚ್ಛುನಾಮ್ ॥ | ಗಾಯತ್ರೀ |

---

## ॥ ತ್ರಿಂಶೋಽನುವಾಕಃ ॥

ಉತ್ತಿಷ್ಠನ್ನೋಜಸಾ ಸಹ ಪೀತ್ವಾ ಶಿಪ್ರೇ ಅವೇಪಯಃ ।

ಸೋಮಮಿಂದ್ರ ಚಮೂ ಸುತಮ್ ॥ ಉಪಯಾಮಗೃಹೀ-

---

ಉತ್ತಿಷ್ಠನ್ನಿತ್ಯುತ್-ತಿಷ್ಠನ್ । ಓಜಸಾ । ಸಹ । ಪೀತ್ವಾ । ಶಿಪ್ರೇ ಇತಿ । ಅವೇಪಯಃ॥

ಸೋಮಮ್। ಇಂದ್ರ। ಚಮೂ ಇತಿ ಸುತಮ್ ॥ ಉಪಯಾಮಗೃಹೀತ ಇತ್ಯುಪಯಾಮ-

ಗೃಹೀತಃ ।

---



| ಮಂತ್ರ | ವಿನಿಯೋಗ |
|---|---|
| ಉತ್ತಿಷ್ಠನ್.........ಸುತಮ್ ॥ | ಎರಡನೆಯ ಅತಿಗ್ರಾಹ್ಯಗ್ರಹಣ |
| ಉಪಯಾಮ...........ತ್ವಾಜಸ್ವತೇ ॥ | ಮಾಡಲು |

---

ಇಂದ್ರ = ಎಲೈ! ಇಂದ್ರದೇವನೇ! ಸುತಮ್ = ಅಭಿಷುತವಾದ; ಸೋಮಮ್ = ಸೋಮರಸವನ್ನು; ಪೀತ್ವಾ = ಕುಡಿದು; ಓಜಸಾ ಸಹ = ಬಲದೊಡನೆ; ಉತ್ತಿಷ್ಠನ್ = ಎದ್ದು ನಿಲ್ಲುತ್ತಾ; ಚಮೂ = ಭಕ್ಷಿಸುವ; ಶಿಪ್ರೇ = ದವಡೆಗಳನ್ನು; ಅವೇಪಯಃ = ಕದಲಿಸು. ✣ [ಎಲೈ! ಸೋಮರಸವೇ! ನೀನು] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಗೃಹೀತನಾಗಿರುವೆ.

---

ಎಲೈ! ಇಂದ್ರದೇವನೇ! ಯಜ್ಞದಲ್ಲಿ ಅಭಿಷವ ಹೊಂದಿರುವ ಸೋಮರಸವನ್ನು ನೀನು ಕುಡಿದು ಬಲವನ್ನು ಪಡೆದು ಮೇಲೆ ಏಳುತ್ತಾ, ಸೋಮರಸವನ್ನು ಸವಿದ ತುಟಿಗಳನ್ನು ಚಾಲನೆ ಮಾಡಿ ನಿನ್ನ ತೃಪ್ತಿಯನ್ನು ನಮಗೆ ತೋರಿಸು.

ತೋऽಸೀಂದ್ರಾಯ ತ್ವೌಜಸ್ವತ ಏಷ ತೇ ಯೋನಿರಿಂದ್ರಾಯ ತ್ವೌಜಸ್ವತೇ ॥ ೩೦-31 ॥

[ಉತ್ತಿಷ್ಠನ್ನೇಕವಿಂಶತಿಃ ।]

---

ಅಸಿ । ಇಂದ್ರಾಯ । ತ್ವಾ । ಓಜಸ್ವತೇ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಓಜಸ್ವತೇ ॥ ೩೦ ॥

---

ತ್ವಾ = ನಿನ್ನನ್ನು; ಓಜಸ್ವತೇ ಇಂದ್ರಾಯ = ಓಜಸ್ವಂತನಾದ ಇಂದ್ರನಿಗಾಗಿ: [ಗ್ರಹಿಸುತ್ತೇನೆ.] [ಎಲೈ! ಅತಿಗ್ರಾಹ್ಯಪಾತ್ರವೇ!] ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನ; ತ್ವಾ = ನಿನ್ನನ್ನು; ಓಜಸ್ವತೇ ಇಂದ್ರಾಯ = ಓಜಸ್ವಂತನಾದ ಇಂದ್ರನಿಗಾಗಿ [ಇಲ್ಲಿ ಇಡುತ್ತೇನೆ.]

---

ಎಲೈ! ಸೋಮರಸವೇ! ನಿನ್ನನ್ನು ದಾರುಪಾತ್ರೆಯಲ್ಲಿ ಹಿಡಿದಿಡಲಾಗಿದೆ. ಓಜಸ್ವಂತನಾದ ಇಂದ್ರನಿಗಾಗಿ ನಿನ್ನನ್ನು ಗ್ರಹಣ ಮಾಡುತ್ತೇನೆ. ಎಲೈ! ಅತಿಗ್ರಾಹ್ಯಗ್ರಹವೇ! ಓಜಸ್ವಂತನಾದ ಇಂದ್ರನಿಗಾಗಿ ನಿನ್ನನ್ನು ನಿನ್ನ ಸ್ಥಾನವಾದ ಖರಪ್ರದೇಶದಲ್ಲಿ ಇಡುತ್ತೇನೆ.

ಛಂದಸ್ಸು

ಉತ್ತಿಷ್ಠನ್‌........ಸುತಮ್ ॥ ಗಾಯತ್ರೀ

---

## ॥ ಏಕತ್ರಿಂಶೋಽನುವಾಕಃ ॥

ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ ।
ವಿಶ್ವಮಾಭಾಸಿ ರೋಚನಮ್ ॥

---

ತರಣಿಃ । ವಿಶ್ವದರ್ಶತ ಇತಿ ವಿಶ್ವ - ದರ್ಶತಃ । ಜ್ಯೋತಿಷ್ಕೃದಿತಿ ಜ್ಯೋತಿಃ-ಕೃತ್।
ಅಸಿ । ಸೂರ್ಯ ॥ ವಿಶ್ವಮ್ । ಆ । ಭಾಸಿ । ರೋಚನಮ್ ॥

---

| ಮಂತ್ರ | ವಿನಿಯೋಗ |
|---|---|
| ತರಣಿಃ.........ರೋಚನಮ್ ॥ | ಮೂರನೆಯ ಅತಿಗ್ರಾಹ್ಯವನ್ನು |

---

**ಸೂರ್ಯ** = ಎಲೈ! ಸೂರ್ಯದೇವನೇ! [ನೀನು] **ತರಣಿಃ** = ಕತ್ತಲೆಯನ್ನು [ಹೋಗಲಾಡಿಸತಕ್ಕವನು] ದಾಟಿಸತಕ್ಕವನು. [ಶೀಘ್ರಗಾಮಿಯಾದವನು. ಪಾಪಗಳನ್ನು ಕಳೆಯುವವನು]. **ವಿಶ್ವದರ್ಶತಃ** = ಎಲ್ಲ ಪ್ರಾಣಿಗಳಿಂದಲೂ ನೋಡಲ್ಪಡಬೇಕಾದವನು./ಎಲ್ಲವನ್ನೂ ತೋರಿಸತಕ್ಕವನು; **ಜ್ಯೋತಿಷ್ಕೃತ್** =[ಎಲ್ಲ ಲೋಕಗಳಲ್ಲಿಯೂ] ಬೆಳಕನ್ನು ಉಂಟುಮಾಡುವವನು; **ಅಸಿ** = ಆಗಿದ್ದೀಯೆ; [ನೀನು] **ವಿಶ್ವಮ್**= ಪ್ರಪಂಚವೆಲ್ಲವನ್ನೂ; **ರೋಚನಮ್** = ದೀಪ್ಯಮಾನವಾಗುವಂತೆ ಮಾಡುತ್ತಾ; **ಆ ಭಾಸಿ** = ಎಲ್ಲೆಡೆಗಳಲ್ಲಿಯೂ ಪ್ರಕಾಶಿಸುತ್ತೀಯೆ.

---

ಎಲೈ! ಸೂರ್ಯನೇ! ನೀನು ಕತ್ತಲನ್ನು ಹೋಗಲಾಡಿಸತಕ್ಕವನು. ಪಾಪಗಳನ್ನು ಕಳೆಯುವವನೂ, ಶೀಘ್ರಕಾರಿಯೂ ಆಗಿರುತ್ತೀಯೆ. ವಿಶ್ವವನ್ನು ಕಾಣುವಂತೆ ಮಾಡುತ್ತೀಯೆ. ಬೆಳಕನ್ನು ಕೊಡುವವನು ನೀನು. ಗ್ರಹನಕ್ಷತ್ರಾದಿಗಳಿಗೆ ನಿನ್ನ 'ಸುಷುಮ್ನಾ' ಎಂಬ ಕಾಂತಿಯನ್ನು ನೀಡಿ ಆ ಗ್ರಹನಕ್ಷತ್ರಾದಿಗಳು ಬೆಳಗುವಂತೆ ಮಾಡುವವನೂ ಆಗಿದ್ದೀಯೆ. ಜಗತ್ತೆಲ್ಲವನ್ನೂ ಪ್ರಕಾಶಮಾನವನ್ನಾಗಿ ಮಾಡಿ ನೀನು ಪ್ರಕಾಶಿಸುತ್ತಿರುವೆ.

ಉಪಯಾಮಗೃಹೀತೋಽಸಿ ಸೂರ್ಯಾಯ ತ್ವಾ ಭ್ರಾಜಸ್ವತ

ಏಷ ತೇ ಯೋನಿಃ ಸೂರ್ಯಾಯ ತ್ವಾ ಭ್ರಾಜಸ್ವತೇ ||೩೧-32||

[ತರಣಿರ್ವಿಗ್ಂಶತಿಃ |]

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ| ಅಸಿ| ಸೂರ್ಯಾಯ | ತ್ವಾ | ಭ್ರಾಜಸ್ವತೇ | ಏಷಃ | ತೇ | ಯೋನಿಃ | ಸೂರ್ಯಾಯ | ತ್ವಾ | ಭ್ರಾಜಸ್ವತೇ || ೩೧ ||



---

| ಮಂತ್ರ | ವಿನಿಯೋಗ |
|---|---|
| ಉಪಯಾಮ.....ಭ್ರಾಜಸ್ವತೇ || | ಗ್ರಹಣ ಮಾಡಲು |

---

[ಎಲೈ! ಅತಿಗ್ರಾಹ್ಯಸ್ಥ ಸೋಮವೇ!] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಗ್ರಹಿಸಲ್ಪಟ್ಟವನಾಗಿರುತ್ತೀಯೆ; ಭ್ರಾಜಸ್ವತೇ ಸೂರ್ಯಾಯ = ಭ್ರಾಜಸ್ವಂತನಾದ ಸೂರ್ಯನಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ.] [ಎಲೈ! ಅತಿಗ್ರಾಹ್ಯಪಾತ್ರವೇ!] ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ; ಭ್ರಾಜಸ್ವತೇ ಸೂರ್ಯಾಯ = ಭ್ರಾಜಸ್ವಂತನಾದ ಸೂರ್ಯನಿಗಾಗಿ; ತ್ವಾ = ನಿನ್ನನ್ನು [ಇಲ್ಲಿ ಇಡುತ್ತೇನೆ.]

---

ಎಲೈ! ಸೋಮರಸವೇ! ದಾರುಪಾತ್ರೆಯಲ್ಲಿ ಸಂಗ್ರಹಿಸಲ್ಪಟ್ಟಿರುವೆ. ಭ್ರಾಜಸ್ವಂತನಾದ ಸೂರ್ಯನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಅತಿಗ್ರಾಹ್ಯಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಭ್ರಾಜಸ್ವಂತನಾದ ಸೂರ್ಯನಿಗಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

ಛಂದಸ್ಸು

| | |
|---|---|
| ತರಣಿಃ........ರೋಚನಮ್ || | ಗಾಯತ್ರೀ |

---

## ॥ ದ್ವಾತ್ರಿಂಶೋಽನುವಾಕಃ ॥

**ಆ ಪ್ಯಾಯಸ್ವ ಮದಿಂತಮ ಸೋಮ ವಿಶ್ವಾಭಿರೂತಿಭಿಃ । ಭವಾ ನಃ ಸಪ್ರಥಸ್ತಮಃ ॥ ೩೨-33 ॥**

**[ಆಪ್ಯಾಯಸ್ವ ನವ ।]**

---

**ಏತಿ । ಪ್ಯಾಯಸ್ವ । ಮದಿಂತಮ । ಸೋಮ । ವಿಶ್ವಾಭಿಃ । ಊತಿಭಿರಿತ್ಯೂತಿ-ಭಿಃ ॥**

**ಭವ । ನಃ । ಸಪ್ರಥಸ್ತಮ ಇತಿ ಸಪ್ರಥಃ-ತಮಃ ॥ ೩೨ ॥**



---

| **ಮಂತ್ರ** | **ವಿನಿಯೋಗ** |
|---|---|
| **ಆಪ್ಯಾಯಸ್ವ.....ಸಪ್ರಥಸ್ತಮಃ ॥** | ಚಮಸ... ಕಟ್ಟಿದರೆ ಪ್ರಾಯಶ್ಚಿತ್ತಕ್ಕಾಗಿ/ ...ದಲ್ಲಿ ಜಲಸೇಚನಕ್ಕಾಗಿ [ಪ್ರೇತಕಾರ್ಯ]. ಈ ವಿನಿಯೋಗವು **ಆರಣ್ಯಕದಲ್ಲಿ.** |

---

**ಸೋಮ** = ಎಲೈ! ಸೋಮದೇವನೇ! **ಮದಿಂತಮ** = ಅತ್ಯಂತ ಹರ್ಷಯುಕ್ತನೇ! [ಅತಿ ಮದವನ್ನು ಉಂಟುಮಾಡುವವನೇ!] [ಆತ್ಮಾನಂದಮಯನೇ!] **ವಿಶ್ವಾಭಿಃ** = ಸಮಸ್ತವಾದ; **ಊತಿಭಿಃ** = ನಮ್ಮ ರಕ್ಷಣೆಗಳಿಂದ; **ಆ ಪ್ಯಾಯಸ್ವ** = ವೃದ್ಧಿಹೊಂದು; **ನಃ** = ನಮಗೆ; **ಸಪ್ರಥಸ್ತಮಃ** = ಹೆಚ್ಚಾಗಿ ಪ್ರಸಿದ್ಧಿಯನ್ನುಂಟುಮಾಡುವವನಾಗಿ; **ಭವ** = ಆಗು;

---

ಮದ [ಹರ್ಷ]ವನ್ನು ಹೆಚ್ಚಾಗಿ ಉಂಟುಮಾಡುವ ಸೋಮನೇ! ನಾವು ನಿನ್ನನ್ನು

ಎಲ್ಲೆಡೆಗಳಿಂದಲೂ ರಕ್ಷಿಸುತ್ತೇವೆ. ನಮ್ಮ ರಕ್ಷಣೆಯಿಂದ ವೃದ್ಧಿಹೊಂದು. ನಮ್ಮನ್ನು ರಕ್ಷಿಸಿ ಪ್ರಸಿದ್ಧಿಯನ್ನು ಪಡೆ. ನಮ್ಮೊಡನೆ ನೀನೂ ವೃದ್ಧಿಹೊಂದು.

## ಛಂದಸ್ಸು

| | |
|---|---|
| ಆ ಪ್ಯಾಯಸ್ವ.............। | ಗಾಯತ್ರೀ |

---



# ॥ ತ್ರಯಸ್ತ್ರಿಂಶೋಽನುವಾಕಃ ॥

ಈಯುಷ್ಟೇ ಯೇ ಪೂರ್ವತರಾಮಪಶ್ಯನ್ವ್ಯುಚ್ಛಂತೀಮುಷಸಂ ಮರ್ತ್ಯಾಸಃ । ಅಸ್ಮಾಭಿರೂ ನು ಪ್ರತಿಚಕ್ಷ್ಯಾಭೂದೋ

---

ಈಯುಃ । ತೇ । ಯೇ । ಪೂರ್ವತರಾಮಿತಿ ಪೂರ್ವ-ತರಾಮ್ । ಅಪಶ್ಯನ್ । ವ್ಯುಚ್ಛಂತೀಮಿತಿ ವಿ-ಉಚ್ಛಂತೀಮ್। ಉಷಸಮ್ । ಮರ್ತ್ಯಾಸಃ ॥ ಅಸ್ಮಾಭಿಃ । ಉ । ನು । ಪ್ರತಿ ಚಕ್ಷ್ಯೇತಿ ಪ್ರತಿ-ಚಕ್ಷ್ಯಾ । ಅಭೂತ್ । ಓ ಇತಿ

---

| ಮಂತ್ರ | ವಿನಿಯೋಗ |
|---|---|
| ಈಯುಷ್ಟೇ........ಅಪಶ್ಯನ್ । | ವ್ಯುಷ್ಟಿಯೆಂಬ ಇಷ್ಟಕೆಗಳಲ್ಲಿ ಹದಿನಾರನೆಯದಾಗಿ ವಿನಿಯುಕ್ತ. ಅವಗಾಹನೆಗಾಗಿ [ಆರಣ್ಯಕದಲ್ಲಿ] |

---

**ಯೇ ಮರ್ತ್ಯಾಸಃ** = ಯಾವ ಮನುಷ್ಯರು; **ವ್ಯುಚ್ಛಂತೀಮ್** = ಪ್ರಭಾತಕಾಲವನ್ನುಂಟು ಮಾಡುತ್ತಿರುವ; **ಉಷಸಮ್** = ಉಷಃಕಾಲದ ದೇವತೆಯನ್ನು; **ಪೂರ್ವತರಾಮ್** = [ಬೇರೆಯ ದೇವತೆಗಳಿಗಿಂತ] ಮೊದಲು ಬರುವವಳನ್ನಾಗಿಯೇ; **ಅಪಶ್ಯನ್** = ನೋಡುತ್ತಾರೆಯೋ; **ತೇ** = ಆ ಮಾನವರು; **ಈಯುಃ**= [ಆ ದೇವತೆಯನ್ನೇ] ಹೊಂದುತ್ತಾರೆ. **ಅಸ್ಮಾಭಿಃ ಉ** = ನಮ್ಮಿಂದಲೂ; **ನು** = ಬೇಗನೆ; **ಪ್ರತಿಚಕ್ಷ್ಯಾ ಅಭೂತ್** = ಪ್ರತ್ಯಕ್ಷವಾಗಿ

---

ಯಾವ ಮಾನವರು ಬೆಳಗಿನ ಜಾವದ ಮುಂಬೆಳಕನ್ನು ಉಂಟುಮಾಡುವ ಉಷೋದೇವತೆಯನ್ನು ಬೇರೆಯ ದೇವತೆಗಳಿಗಿಂತಲೂ ಮೊದಲಿನವಳನ್ನಾಗಿ ಕಂಡರೋ ಅವರು ಉಷೋದೇವತೆಯನ್ನೇ ಹೊಂದುತ್ತಾರೆ. ಆ ಉಷೋದೇವತೆಯೂ ನಮ್ಮಿಂದಲೂ ಕ್ಷಿಪ್ರವಾಗಿ ನೋಡಬೇಕಾದವಳೇ ಆಗಿದ್ದಾಳೆ. ಯಾರು ರಾತ್ರಿಯ ಅರ್ಧರಾತ್ರಾನಂತರದ

## ತೇ ಯಂತಿ ಯೇ ಅಪರೀಷು ಪಶ್ಯಾನ್ ॥ ೩೩-34 ॥

[ಈಯುರೇಕಾನ್ನವಿಗ್ಂಶತಿಃ]

ತೇ । ಯಂತಿ । ಯೇ । ಅಪರೀಷು । ಪಶ್ಯಾನ್ ॥ ೩೩ ॥

ನೋಡಬೇಕಾದವಳು ಆಗಿದ್ದಾಳೆ. ಯೇ = ಯಾರು; ಅಪರೀಷು = ಉಷಃಕಾಲಕ್ಕೆ ಮೊದಲಿನ ರಾತ್ರಿಯ ಭಾಗದಲ್ಲಿ; ಪಶ್ಯಾನ್ = ನೋಡುತ್ತಾರೆಯೋ; ತೇ ಓ ಯಂತಿ = ಅವರೂ ಆ ಉಷೋದೇವತೆಯನ್ನೇ ಸರ್ವಪ್ರಕಾರಗಳಿಂದಲೂ ಹೊಂದುತ್ತಾರೆ.

ಕಾಲದಲ್ಲಿ ಆ ಉಷೋದೇವತೆಯನ್ನು ನೋಡುತ್ತಾರೆಯೋ, ಅವರೂ ಕೂಡ ಆ ದೇವತೆಯನ್ನು ಹೊಂದುವರು. [ಹಿಂದಿನ ಉಷಃಕಾಲಗಳಲ್ಲಿ ಉಷೋದೇವತೆಯನ್ನು ನೋಡಿದವರೂ, ಈಗ ನೋಡುತ್ತಿರುವ ನಾವೂ, ಮುಂದಿನ ರಾತ್ರಿಗಳ ಅಂತ್ಯಭಾಗಗಳಲ್ಲಿ ನೋಡುವವರೂ ಆ ದೇವತೆಯನ್ನೇ ಹೊಂದುತ್ತೇವೆ. ಹೀಗೆ ಸ್ವಪ್ರಕಾಶಳಾಗಿ ಉಷೋದೇವತೆಯಿದ್ದಾಳೆ. ಇದು ತ್ರಿಕಾಲದಲ್ಲಿಯೂ ಇರುವ ಆಕೆಯ ಮಹಿಮೆಯಾಗಿದೆ.]

### ಛಂದಸ್ಸು

ಈಯುಷ್ಟೇ..........ಪಶ್ಯಾನ್ । ತ್ರಿಷ್ಟುಪ್

## ॥ ಚತುಸ್ತ್ರಿಂಶೋಽನುವಾಕಃ ॥

ಜ್ಯೋತಿಷ್ಮತೀಂ ತ್ವಾ ಸಾದಯಾಮಿ ಜ್ಯೋತಿ̱ಷ್ಕೃ̱ತಂ ತ್ವಾ ಸಾದ
ಯಾಮಿ ಜ್ಯೋತಿ̱ರ್ವಿದಂ ತ್ವಾ ಸಾದಯಾ̱ಮಿ ಭಾಸ್ವತೀಂ
ತ್ವಾ ಸಾದಯಾ̱ಮಿ ಜ್ವಲಂತೀಂ ತ್ವಾ ಸಾದಯಾಮಿ

---

ಜ್ಯೋತಿಷ್ಮತೀಮ್ । ತ್ವಾ । ಸಾದಯಾಮಿ । ಜ್ಯೋತಿಷ್ಕೃತಮಿತಿ ಜ್ಯೋತಿಃ-ಕೃತಮ್।
ತ್ವಾ। ಸಾದಯಾಮಿ । ಜ್ಯೋತಿರ್ವಿದಮಿತಿ ಜ್ಯೋತಿಃ-ವಿದಮ್ । ತ್ವಾ । ಸಾದಯಾಮಿ।
ಭಾಸ್ವತೀಮ್ । ತ್ವಾ। ಸಾದಯಾಮಿ । ಜ್ವಲಂತೀಮ್ । ತ್ವಾ । ಸಾದಯಾಮಿ ।



---

| ಮಂತ್ರ | ವಿನಿಯೋಗ |
|---|---|
| ೧) ಜ್ಯೋತಿಷ್ಮತೀಂ..ಸಾದಯಾಮಿ। | 1) ಸಾದಯಾಮಿ ಎಂಬ ಪದದಿಂದ ಅಂತ್ಯ ಆಗುವ ೧೨ ಯಜುಸ್ಸುಗಳಿಂದ ೧೨ ಜ್ಯೋತಿಷ್ಮತೀಷ್ಟಕೆಗಳ ಉಪಧಾನ ಮಾಡಲು. |
| ೧೨) ಜಾಗ್ರತೀಂ ತ್ವಾ ಸಾದಯಾಮಿ। | |

---

*[ಎಲೈ! ಸಮಿತ್ತೇ! ನಿನ್ನನ್ನು ಪ್ರೇತಶರೀರದ ಮೇಲೆ ಹಾಕುತ್ತೇನೆ] ಃಜ್ಯೋತಿಷ್ಮತೀಮ್ ತ್ವಾ ಸಾದಯಾಮಿ = ಅತ್ಯಲ್ಪ ಪ್ರಕಾಶವುಳ್ಳ ನಿನ್ನನ್ನು [ಪ್ರೇತಶರೀರದ ಮೇಲೆ] ಹಾಕುತ್ತೇನೆ. ಜ್ಯೋತಿಷ್ಕೃತಮ್ ತ್ವಾ ಸಾದಯಾಮಿ = ಅದಕ್ಕಿಂತಲೂ ಅಧಿಕವಾದ ಪ್ರಕಾಶವುಳ್ಳ ನಿನ್ನನ್ನು ಹಾಕುತ್ತೇನೆ. ಜ್ಯೋತಿರ್ವಿದಮ್ ತ್ವಾ ಸಾದಯಾಮಿ = ಪ್ರಕಾಶವನ್ನು ಕೊಡುತ್ತಿರುವ ನಿನ್ನನ್ನು ಹಾಕುತ್ತೇನೆ; ಭಾಸ್ವತೀಮ್ ತ್ವಾ ಸಾದಯಾಮಿ=ಬಹು ಪ್ರಕಾಶವುಳ್ಳ ನಿನ್ನನ್ನು ಹಾಕುತ್ತೇನೆ; ಜ್ವಲಂತೀಮ್ ತ್ವಾ ಸಾದಯಾಮಿ = ಉರಿಯುತ್ತಿರುವ

---

ಎಲೈ! ಸಮಿತ್ತೇ! [ಕಟ್ಟಿಗೆಯೇ!] ಪ್ರೇತಶರೀರದ ಮೇಲೆ ನಿನ್ನನ್ನು ಹಾಕುತ್ತೇನೆ.

---

* ಎರಡನೆಯ ವಿನಿಯೋಗದಂತೆ ಮಂತ್ರಾರ್ಥ.

ಮಲ್ಮಲಾಭವಂತೀಂ ತ್ವಾ ಸಾದಯಾಮಿ ದೀಪ್ಯಮಾನಾಂ ತ್ವಾ ಸಾದಯಾಮಿ ರೋಚಮಾನಾಂ ತ್ವಾ ಸಾದಯಾಮ್ಯಜಸ್ರಾಂ ತ್ವಾ ಸಾದಯಾಮಿ ಬೃಹಜ್ಜ್ಯೋತಿಷಂ ತ್ವಾ ಸಾದಯಾಮಿ ಬೋಧಯಂತೀಂ ತ್ವಾ ಸಾದಯಾಮಿ

---

ಮಲ್ಮಲಾ ಭವಂತೀಮಿತಿ ಮಲ್ಮಲಾ-ಭವಂತೀಮ್ । ತ್ವಾ । ಸಾದಯಾಮಿ । ದೀಪ್ಯಮಾನಾಮ್ । ತ್ವಾ । ಸಾದಯಾಮಿ । ರೋಚಮಾನಾಮ್ । ತ್ವಾ । ಸಾದಯಾಮಿ । ಅಜಸ್ರಾಮ್ । ತ್ವಾ । ಸಾದಯಾಮಿ । ಬೃಹಜ್ಜ್ಯೋತಿಷಮಿತಿ ಬೃಹತ್-ಜ್ಯೋತಿಷಮ್ । ತ್ವಾ । ಸಾದಯಾಮಿ । ಬೋಧಯಂತೀಮ್ । ತ್ವಾ । ಸಾದಯಾಮಿ ।



---

ಮಂತ್ರ ... ವಿನಿಯೋಗ

ಹಿಂದಿನಂತೆಯೇ ... 2) ಪ್ರೇತನ ಮೇಲೆ ಸಮಿತ್ತನ್ನು ಹಾಕಲು.

---

ನಿನ್ನನ್ನು ಹಾಕುತ್ತೇನೆ; ಮಲ್ಮಲಾಭವಂತೀಮ್ ತ್ವಾ ಸಾದಯಾಮಿ = 'ಮಲ್ಮಲ' ಎಂದು ಶಬ್ದಮಾಡುವ ನಿನ್ನನ್ನು ಹಾಕುತ್ತೇನೆ; ದೀಪ್ಯಮಾನಾಮ್ ತ್ವಾ ಸಾದಯಾಮಿ = ಪ್ರಜ್ವಲಿಸುತ್ತಿರುವ ನಿನ್ನನ್ನು ಹಾಕುತ್ತೇನೆ; ರೋಚಮಾನಾಮ್ ತ್ವಾ ಸಾದಯಾಮಿ = ಬೇರೆಯ ವಸ್ತುಗಳನ್ನು ಬೆಳಗಿಸುವ ನಿನ್ನನ್ನು ಹಾಕುತ್ತೇನೆ; ಅಜಸ್ರಾಮ್ = ಶಾಶ್ವತ ಜ್ಯೋತಿಯುಳ್ಳ; ತ್ವಾ ಸಾದಯಾಮಿ= ನಿನ್ನನ್ನು ಹಾಕುತ್ತೇನೆ; ಬೃಹಜ್ಜ್ಯೋತಿಷಮ್ = ಮಹಾಜ್ವಾಲೆಯುಳ್ಳ; ತ್ವಾ=ನಿನ್ನನ್ನು; ಸಾದಯಾಮಿ=ಹಾಕುತ್ತೇನೆ; ಬೋಧಯಂತೀಮ್ = ದೂರಕ್ಕೂ ತಿಳಿಯುವಂತಿರುವ; ತ್ವಾ ಸಾದಯಾಮಿ = ನಿನ್ನನ್ನು ಹಾಕುತ್ತೇನೆ.

---

ಅಗ್ನಿಯಲ್ಲಿ ಹಾಕಿದಾಗ ಮೊದಲು ಅಲ್ಪಜ್ಯೋತಿಯುಳ್ಳವನಾಗುವೆ. ಅನಂತರ ಸಂಪೂರ್ಣವಾಗಿ ಜ್ವಲಿಸುವವರೆಗೆ ಒಟ್ಟು ಹನ್ನೆರಡು ಸ್ಥಿತಿಗಳನ್ನು ಹೊಂದುವೆ. ಇಂತಹ

## ಜಾಗ್ರತೀಂ ತ್ವಾ ಸಾದಯಾಮಿ ॥ ೩೪-35 ॥

[ಜ್ಯೋತಿಷ್ಮತೀಲ್ಗ್ಂ ಷಟ್ತ್ರಿಗ್ಂಶತ್ ॥]

---

**ಜಾಗ್ರತೀಮ್ । ತ್ವಾ । ಸಾದಯಾಮಿ ॥ ೩೪ ॥**

---

**ಜಾಗ್ರತೀಮ್ ತ್ವಾ ಸಾದಯಾಮಿ** = ಜಾಗರೂಕಗೊಳಿಸುವ/ಎಚ್ಚರಗೊಳಿಸುವ ನಿನ್ನನ್ನು [ಪ್ರೇತಶರೀರದ ಮೇಲೆ] ಹಾಕುತ್ತೇನೆ.

*೧) ಜ್ಯೋತಿಷ್ಮತೀಮ್ = ಪ್ರಶಸ್ತಜ್ಯೋತಿಯುಳ್ಳ; ತ್ವಾ = ನಿನ್ನನ್ನು [ಇಷ್ಟಕೆಯನ್ನು] ಸಾದಯಾಮಿ= ಇಡುತ್ತೇನೆ; ೨) ಬೇರೆಯ ಜ್ಯೋತಿಯನ್ನು ಉಂಟುಮಾಡುವ ೩) ಜ್ಯೋತಿಸ್ಸನ್ನು ಹೊಂದಿಸಿಕೊಡುವ ೪) ಬಹುಪ್ರಕಾಶವುಳ್ಳ ೫) ಅವಿಚ್ಛಿನ್ನಪ್ರಕಾಶವುಳ್ಳ ೬) ಮಹಾಘೋಷವುಳ್ಳ ೭) ಹೃದಯದಲ್ಲಿ ದೀಪ್ಯಮಾನವಾದ ೮) ಆಕಾಶದಲ್ಲಿ ಉಂಟಾಗುವ ೯) ಯಾರಿಂದಲೂ ಹಿಂಸಿಸಲ್ಪಡತಕ್ಕಾಗದ ೧೦) ವ್ಯಾಪಕ ಜ್ಯೋತಿಯಾದ ೧೧) ಇತರ ವಸ್ತುಗಳನ್ನು ಪ್ರಕಾಶಗೊಳಿಸುವ ೧೨) ಸ್ವಯಂ ಪ್ರಕಾಶವತಿಯಾದ; ತ್ವಾ = ನಿನ್ನನ್ನು [ಇಷ್ಟಕೆಯನ್ನು], ಸಾದಯಾಮಿ = ಇಡುತ್ತೇನೆ.

---

ನಿನ್ನನ್ನು ಪ್ರೇತಶರೀರದ ಮೇಲೆ ಹಾಕುತ್ತೇನೆ.

ಆತ್ಮಜ್ಯೋತಿಯ ವೃತ್ತಿಭೇದಗಳು ಹನ್ನೆರಡಾಗಿವೆ. ಎಲೈ! ಇಷ್ಟಕವೇ! ಆ ದ್ವಾದಶವೃತ್ತಿಪ್ರತೀಕಗಳಾದ ಜ್ಯೋತಿಷ್ಮತೀಷ್ಟಕೆಗಳಲ್ಲಿ ಒಂದಾದ ನಿನ್ನನ್ನು ಈ ಚಯನದಲ್ಲಿ ಇಡುತ್ತೇನೆ. [ಹೀಗೆ ಹನ್ನೆರಡು ಮಂತ್ರಗಳಿಂದ ಹನ್ನೆರಡು ಇಟ್ಟಿಗೆಗಳನ್ನು ಇಡಬೇಕು.]

---

*ಒಂದನೆಯ ವಿನಿಯೋಗದಂತೆ ಮಂತ್ರಾರ್ಥ. 'ಜ್ಯೋತಿಷ್ಮತೀಮ್' ಮುಂತಾದ ೧೨ ಮಂತ್ರಗಳನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು. ಇವು ಆತ್ಮಜ್ಯೋತಿಸ್ಸಿನ ಹನ್ನೆರಡು ವೃತ್ತಿಭೇದಗಳೆಂದು ಮಿತ್ರರು ತಿಳಿಸಿರುತ್ತಾರೆ.

## ॥ ಪಂಚತ್ರಿಂಶೋಽನುವಾಕಃ ॥

ಪ್ರಯಾಸಾಯ ಸ್ವಾಹಾಽಽಯಾಸಾಯ ಸ್ವಾಹಾ ವಿಯಾಸಾಯ ಸ್ವಾಹಾ ಸಂಯಾಸಾಯ ಸ್ವಾಹೋದ್ಯಾಸಾಯ ಸ್ವಾಹಾಽವ

---

ಪ್ರಯಾಸಾಯೇತಿ ಪ್ರ-ಯಾಸಾಯ । ಸ್ವಾಹಾ । ಆಯಾಸಾಯೇತ್ಯಾ-ಯಾಸಾಯ । ಸ್ವಾಹಾ। ವಿಯಾಸಾಯೇತಿ ವಿ-ಯಾಸಾಯ । ಸ್ವಾಹಾ । ಸಂಯಾಸಾಯೇತಿ ಸಮ್-ಯಾಸಾಯ । ಸ್ವಾಹಾ । ಉದ್ಯಾಸಾಯೇತ್ಯುತ್-ಯಾಸಾಯ । ಸ್ವಾಹಾ ।



---

| ಮಂತ್ರ | ವಿನಿಯೋಗ |
| --- | --- |
| ೧) ಪ್ರಯಾಸಾಯ ಸ್ವಾಹಾ... | ೧) ಹೋಮಾಗ್ನಿಯಲ್ಲಿ ಮಾಡುವ ಸ್ರುವಾಹುತಿಗಳನ್ನು ಮಾಡಲು |
| ......೧೨) ಸರ್ವಸ್ಮೈ ಸ್ವಾಹಾ ॥ | ೨) ಅಶ್ವಮೇಧದಲ್ಲಿ ರಾತ್ರಿಹೋಮಗಳಿಗಾಗಿ |

---

ಪ್ರಯಾಸಾಯ* = ಪ್ರಯಾಸಪಡಿಸುವ ದೇವನಿಗೆ; ಸ್ವಾಹಾ = ಹುತವಾಗಲಿ; ✣ ಆಯಾಸಾಯ = ಆಯಾಸದೇವನಿಗೆ; ಸ್ವಾಹಾ = ಹುತವಾಗಲಿ; ✣ ವಿಯಾಸಾಯ ಸ್ವಾಹಾ = ವಿಯಾಸದೇವನಿಗೆ ಹುತವಾಗಲಿ; ✣ ಸಂಯಾಸಾಯ = ಸಂಯಾಸದೇವನಿಗೆ; ಸ್ವಾಹಾ=ಹುತವಾಗಲಿ, ✣ ಉದ್ಯಾಸಾಯ=ಉದ್ಯಾಸದೇವನಿಗೆ; ಸ್ವಾಹಾ = ಹುತವಾಗಲಿ.

---

ಯಮಲೋಕದಲ್ಲಿ ಪ್ರೇತನಿಗೆ ಪ್ರಯಾಸ, ಆಯಾಸ, ವಿಯಾಸ, ಸಂಯಾಸ, ಉದ್ಯಾಸ, ಅವಯಾಸ, ಶುಕ್, ಶೋಕ, ತಪ್ಯತು, ತಪತ್, ಬ್ರಹ್ಮಹತ್ಯಾ ಇವರೂ ಇಲ್ಲಿ

*ಮೊದಲನೆಯ ವಿನಿಯೋಗದಂತೆ ಮಂತ್ರಾರ್ಥ.

-ಯಾಸಾಯ ಸ್ವಾಹಾ ಶುಚೇ ಸ್ವಾಹಾ ಶೋಕಾಯ ಸ್ವಾಹಾ

ತಪ್ಯತ್ವೈ ಸ್ವಾಹಾ ತಪತೇ ಸ್ವಾಹಾ ಬ್ರಹ್ಮಹತ್ಯಾಯೈ ಸ್ವಾಹಾ

ಸರ್ವಸ್ಮೈ ಸ್ವಾಹಾ ॥ ೩೬-36 ॥

[ಪ್ರಯಾಸಾಯ ಚತುರ್ವಿಗ್ಂಶತಿಃ ।]

---

ಅವಯಾಸಾಯೇತ್ಯವ-ಯಾಸಾಯ । ಸ್ವಾಹಾ । ಶುಚೇ । ಸ್ವಾಹಾ । ಶೋಕಾಯ । ಸ್ವಾಹಾ । ತಪ್ಯತ್ವೈ । ಸ್ವಾಹಾ । ತಪತೇ । ಸ್ವಾಹಾ । ಬ್ರಹ್ಮಹತ್ಯಾಯಾ ಇತಿ ಬ್ರಹ್ಮ-ಹತ್ಯಾಯೈ। ಸ್ವಾಹಾ । ಸರ್ವಸ್ಮೈ । ಸ್ವಾಹಾ । ೩೬ ।



---

✣ ಅವಯಾಸಾಯ = ಅವಯಾಸದೇವತೆಗೆ; ಸ್ವಾಹಾ = ಹುತವಾಗಲಿ ✣ ಶುಚೇ = ಶುಗಭಿಮಾನಿದೇವನಿಗೆ; ಸ್ವಾಹಾ = ಹುತವಾಗಲಿ; ✣ ಶೋಕಾಯ = ಶೋಕಾಭಿಮಾನಿ ದೇವನಿಗೆ; ಸ್ವಾಹಾ = ಹುತವಾಗಲಿ; ✣ ತಪ್ಯತ್ವೈ = ತಪ್ಯತುದೇವನಿಗೆ; ಸ್ವಾಹಾ = ಹುತವಾಗಲಿ; ✣ ತಪತೇ = ತಪತ್ತಿನ ದೇವನಿಗೆ; ಸ್ವಾಹಾ = ಹುತವಾಗಲಿ; ✣ ಬ್ರಹ್ಮಹತ್ಯಾಯೈ = ಬ್ರಹ್ಮಹತ್ಯಾದಿಮಹಾಪಾತಕದೇವತೆಗಳಿಗೆ; ಸ್ವಾಹಾ = ಹುತವಾಗಲಿ; ✣ ಸರ್ವಸ್ಮೈ = [ಉಳಿದ] ಎಲ್ಲ ದೇವತೆಗಳಿಗೂ; ಸ್ವಾಹಾ = ಹುತವಾಗಲಿ.

ಪರಮಾತ್ಮನಿಗೆ ಸಂಬಂಧಿಸಿದ ಚಲನೆಯ ಭೇದಗಳು ಪ್ರಯಾಸ * = ಶ್ರೇಷ್ಠವಾದ

---

ಹೇಳದಿರುವ ಇತರರೂ ಹಿಂಸೆಯನ್ನು ಕೊಡುತ್ತಾರೆ. ಅವರ ಪ್ರೀತ್ಯರ್ಥವಾಗಿ ಈ ಸ್ರುವಾಹುತಿಗಳು ಹುತವಾಗಲಿ.

---

*ಎರಡನೆಯ ವಿನಿಯೋಗದಂತೆ ಮಂತ್ರಾರ್ಥ.

ಯಾಗಾದಿಕ್ರಿಯೆಗಳು; **ಆಯಾಸ** = ಶಾಸ್ತ್ರಾನುಗುಣವಾದ ಅರ್ಥಾರ್ಜನಾದಿ ಕ್ರಿಯೆಗಳು; **ವಿಯಾಸ** = ನಗುವುದು, ತುರಿಸುವುದು ಇತ್ಯಾದಿ ವಿವಿಧ ಕ್ರಿಯೆಗಳು; **ಸಂಯಾಸ**= ಪರೋಪಕಾರಾದಿಕ್ರಿಯೆ; **ಉದ್ಯಾಸ** = ಮಹಾಭೂತವಿಕಾರದಿಂದ ಉಂಟಾಗುವ ಭೂಕಂಪಾದಿಕ್ರಿಯೆ; **ಅವಯಾಸ** = ನಿಕೃಷ್ಟಕರ್ಮ ಪಾಪಾದಿಗಳು; **ಶುಕ್** = ದುಃಖಕಾರಣವಾದ ಕರ್ಮ; **ಶೋಕ** = ಆತ್ಮನು ಅನುಭವಿಸುವ ದುಃಖ; **ತಪ್ಯತು** = ತಾಪಹೇತುವಾದ ಅನಿಷ್ಟಾಚರಣ; **ತಪತ್** = ದೇಹಶೋಷಕವಾದ ಕೃಚ್ಛ್ರಾದ್ಯಾಚರಣ; **ಬ್ರಹ್ಮಹತ್ಯಾ** = ಬ್ರಹ್ಮಹತ್ಯಾದಿಮಹಾಪಾತಕಗಳು; **ಸರ್ವ** = ಉಳಿದ ಕ್ರಿಯೆಗಳು, ಇವೆಲ್ಲಕ್ಕೂ ಹುತವಾಗಲಿ.

---

ಅಶ್ವಮೇಧದ ರಾತ್ರಿಹೋಮಗಳಲ್ಲಿ ಪರಮಾತ್ಮನ ಚಲನಕ್ರಿಯೆಯ ಭೇದಗಳಾದ ಪ್ರಯಾಸಾದಿಗಳಿಗೆ ಹೋಮವನ್ನು ಹೇಳಲಾಗಿದೆ. ಆ ಪ್ರಯಾಸಾದ್ಯಭಿಮಾನಿ ದೇವತೆಗಳಿಗೆ ಈ ಆಜ್ಯದ್ರವ್ಯವು ಹುತವಾಗಲಿ.



## ॥ ಷಟ್ತ್ರಿಂಶೋಽನುವಾಕಃ ॥

ಚಿತ್ತಗ್ಂ ಸಂತಾನೇನ ಭವಂ ಯಕ್ನಾ ರುದ್ರಂ ತನಿಮ್ನಾ

ಪಶುಪತಿಗ್ಗ್ಂ ಸ್ಥೂಲಹೃದಯೇನಾಗ್ನಿಗ್ಂ ಹೃದಯೇನ

---

ಚಿತ್ತಮ್। ಸಂತಾನೇನೇತಿ ಸಮ್ - ತಾನೇನ । ಭವಮ್ । ಯಕ್ನಾ । ರುದ್ರಮ್ ।

ತನಿಮ್ನಾ। ಪಶುಪತಿಮಿತಿ ಪಶು-ಪತಿಮ್ । ಸ್ಥೂಲಹೃದಯೇನೇತಿ ಸ್ಥೂಲ-ಹೃದಯೇನ।

ಅಗ್ನಿಮ್ । ಹೃದಯೇನ।



---

| ಮಂತ್ರ | ವಿನಿಯೋಗ |
|---|---|
| ೧) ಚಿತ್ತಂ.....। ೨) ಭವಂ.....। ೩) ರುದ್ರಂ....। ೪) ಪಶುಪತಿಂ...। ೫) ಅಗ್ನಿಂ........। | ೧) ಬ್ರಹ್ಮಮೇಧದಲ್ಲಿ ರಾಜಗವೀಹೋಮ ಮಾಡಲು<br>೨) ಬ್ರಹ್ಮಮೇಧದಲ್ಲಿ ಪ್ರೇತನ ಅವಯವಗಳನ್ನು ತಮ್ಮ ಕಾರಣಗಳಲ್ಲಿ ಉಪಸಂಹಾರ ಮಾಡುವಾಗ ಶರೀರಹೋಮವನ್ನು ಮಾಡಲು. |

---

**ಸಂತಾನೇನ*** = ಸಂತಾನವೆಂಬ ಮಾಂಸದಿಂದ; **ಚಿತ್ತಮ್** = ಚಿತ್ತನೆಂಬ ದೇವನನ್ನು [ಹೋಮಮೂಲಕವಾಗಿ ಸಂತೋಷಪಡಿಸುತ್ತೇವೆ]; **ಯಕ್ನಾ** = ಹೊಟ್ಟೆಯ ಬಲಗಡೆ ಇರುವ ಕಪ್ಪಾದ ಮಾಂಸದಿಂದ; **ಭವಮ್** = ಭವದೇವನನ್ನೂ; **ತನಿಮ್ನಾ** = ಚಿಕ್ಕದಾಗಿರುವ ಮಾಂಸವಿಶೇಷದಿಂದ; **ರುದ್ರಮ್** = ರುದ್ರನನ್ನೂ; **ಸ್ಥೂಲಹೃದಯೇನ** = ಹೃದಯದಲ್ಲಿರುವ ಸ್ಥೂಲಮಾಂಸದಿಂದ; **ಪಶುಪತಿಮ್** = ಪಶುಪತಿಯನ್ನೂ; **ಹೃದಯೇನ** = ಎದೆಯ ಮಾಂಸದಿಂದ; **ಅಗ್ನಿಮ್** = ಅಗ್ನಿಯನ್ನೂ;

---

ರಾಜಗವಿಯ ಸಂತಾನವೆಂಬ ಮಾಂಸದಿಂದ ಚಿತ್ತದೇವನನ್ನೂ, ಯಕೃತ್ ಎಂಬ

---

*ಒಂದನೆಯ ವಿನಿಯೋಗದಂತೆ ಮಂತ್ರಾರ್ಥ.

ರುದ್ರಂ ಲೋಹಿತೇನ ಶರ್ವಂ ಮತಸ್ನಾಭ್ಯಾಂ ಮಹಾದೇವ

ಮಂತಃ ಪಾರ್ಶ್ವೇನೌಷಿಷ್ಠಹನಗ್‌ಂ ಶಿಂಗೀನಿಕೋಶ್ಯಾಭ್ಯಾಮ್।

॥ ೩೭-37 ॥

[ಚಿತ್ತಮಷ್ಟಾದಶ ।]

---

ರುದ್ರಮ್ । ಲೋಹಿತೇನ । ಶರ್ವಮ್ । ಮತಸ್ನಾಭ್ಯಾಮ್ । ಮಹಾದೇವಮಿತಿ ಮಹಾ-ದೇವಮ್। ಅಂತಃಪಾರ್ಶ್ವೇನೇತ್ಯಂತಃ-ಪಾರ್ಶ್ವೇನ । ಓಷಿಷ್ಠಹನಮಿತ್ಯೋಷಿಷ್ಠ-ಹನಮ್। ಶಿಂಗೀನಿಕೋಶ್ಯಾಭ್ಯಾಮಿತಿ ಶಿಂಗೀ-ನಿಕೋಶ್ಯಾಭ್ಯಾಮ್ ॥ ೩೭ ॥

---

| ಮಂತ್ರ | ವಿನಿಯೋಗ |
| --- | --- |
| ೧) ರುದ್ರಂ.......। ೨) ಶರ್ವಂ.......। | ಹಿಂದಿನಂತೆಯೇ. |
| ೩) ಮಹಾದೇವಂ....। ಓಷಿಷ್ಠಹನಮ್.....ಕೋಶ್ಯಾಭ್ಯಾಮ್ ॥ | |

---

ಲೋಹಿತೇನ = ರಕ್ತದಿಂದ; ರುದ್ರಮ್ = ರುದ್ರನನ್ನೂ; ಮತಸ್ನಾಭ್ಯಾಮ್ = ದೀರ್ಘವಾದ ನಾಡೀವಿಶೇಷಗಳಿಂದ; ಶರ್ವಮ್ = ಶರ್ವನನ್ನೂ; ಅಂತಃಪಾರ್ಶ್ವೇನ = ಪಕ್ಕೆಗಳ ಒಳಗಡೆ ಇರುವ ಮಾಂಸವಿಶೇಷದಿಂದ; ಮಹಾದೇವಮ್ = ಮಹಾದೇವನನ್ನೂ; ಶಿಂಗೀನಿಕೋಶ್ಯಾಭ್ಯಾಮ್ = ಶಬ್ದಸ್ಥಾನ-ಕೋಶಸ್ಥಾನಗಳಲ್ಲಿರುವ ಮಾಂಸವಿಶೇಷಗಳಿಂದ; ಓಷಿಷ್ಠಹನಮ್ = ಓಷಿಷ್ಠಹನನೆಂಬ ದೇವನನ್ನೂ; [ ಹೋಮ ಮೂಲಕವಾಗಿ ಸಂತೋಷಪಡಿಸುತ್ತೇವೆ.]

---

ಮಾಂಸದಿಂದ ಭವದೇವನನ್ನೂ, ಚಿಕ್ಕದಾದ ಮಾಂಸವಿಶೇಷದಿಂದ ರುದ್ರನನ್ನೂ, ಹೃದಯದಲ್ಲಿರುವ ಸ್ಥೂಲಮಾಂಸದಿಂದ ಪಶುಪತಿಯನ್ನೂ, ಎದೆಯ ಮಾಂಸದಿಂದ

ಅಗ್ನಿಯನ್ನೂ, ರಕ್ತದಿಂದ ರುದ್ರನನ್ನೂ, ದೀರ್ಘವಾದ ನಾಡೀವಿಶೇಷಗಳಿಂದ ಶರ್ವನನ್ನೂ, ಪಕ್ಕೆಗಳ ಒಳಗಡೆ ಇರುವ ಮಾಂಸವಿಶೇಷದಿಂದ ಮಹಾದೇವನನ್ನೂ, ಶಬ್ದಸ್ಥಾನ-ಕೋಶಸ್ಥಾನಗಳಲ್ಲಿರುವ ಮಾಂಸದಿಂದ ಓಷಿಷ್ಠಹನನನ್ನೂ ಹೋಮದ ಮೂಲಕವಾಗಿ ಸಂತೋಷಪಡಿಸುತ್ತೇವೆ.

'ಚಿತ್ತ' ಮೊದಲಾದವರು* ಮಹತ್ತತ್ತ್ವಾದಿಗಳ ಅಧಿಷ್ಠಾನದೇವತೆಗಳು. ಸಂತಾನಾದಿಗಳಾದ ಅವಯವವಿಶೇಷಗಳಿಂದ ಚಿತ್ತವೇ ಮೊದಲಾದ ದೇವತೆಗಳಿಗೆ ಹೋಮ ಮಾಡುತ್ತೇನೆ. ಆ ದೇವತೆಗಳು ಸುಪ್ರೀತರಾಗಲಿ.* * *



*ಎರಡನೆಯ ವಿನಿಯೋಗದಂತೆ.

* * * 'ತರಣಿಃ..........' ಎಂಬ ಅನುವಾಕದಿಂದ ಆರಂಭಿಸಿ 'ಚಿತ್ತಮ್.........' ಎಂಬಲ್ಲಿಯವರೆಗಿನ ಆರು ಅನುವಾಕಗಳಿಗೆ ಬ್ರಹ್ಮಮೇಧದಲ್ಲಿ ವಿನಿಯೋಗವೆಂದು ಭಾರದ್ವಾಜ ಪೈತೃಮೇಧಿಕಸೂತ್ರದಲ್ಲಿ ಹೇಳಿದೆ.

## ॥ ಸಪ್ತತ್ರಿಂಶೋಽನುವಾಕಃ ॥

**ಆ ತಿಷ್ಠ ವೃತ್ರಹನ್ರಥಂ ಯುಕ್ತಾ ತೇ ಬ್ರಹ್ಮಣಾ ಹರೀ । ಅರ್ವಾಚೀನಗ್ಂ ಸು ತೇ ಮನೋ ಗ್ರಾವಾ ಕೃಣೋತು ವಗ್ನುನಾ ॥ ಉಪಯಾಮಗೃಹೀತೋಽಸೀಂದ್ರಾಯ ತ್ವಾ**

ಏತಿ । ತಿಷ್ಠ । ವೃತ್ರಹನ್ನಿತಿ ವೃತ್ರ-ಹನ್ । ರಥಮ್ । ಯುಕ್ತಾ । ತೇ । ಬ್ರಹ್ಮಣಾ । ಹರೀ ಇತಿ ॥ ಅರ್ವಾಚೀನಮ್ । ಸು । ತೇ । ಮನಃ । ಗ್ರಾವಾ । ಕೃಣೋತು । ವಗ್ನುನಾ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ। ಇಂದ್ರಾಯ । ತ್ವಾ।



| ಮಂತ್ರ | ವಿನಿಯೋಗ |
|---|---|
| ಆ ತಿಷ್ಠ...........ವಗ್ನುನಾ ॥ | ಷೋಡಶಿಗ್ರಹಗ್ರಹಣವನ್ನು |
| ಉಪಯಾಮ.....ಷೋಡಶಿನೇ ॥ | ಮಾಡಲು [ಗ್ರಹಣ ಮತ್ತು ಆಸಾದನಕ್ಕಾಗಿ] |

**ವೃತ್ರಹನ್** = ವೃತ್ರಾಸುರನನ್ನು ಸಂಹಾರ ಮಾಡಿದ ಇಂದ್ರನೇ! **ತೇ** = ನಿನ್ನ; **ಹರೀ** = ಕುದುರೆಗಳು; **ಬ್ರಹ್ಮಣಾ** = ಮಂತ್ರದಿಂದ; **ಯುಕ್ತಾ** = [ರಥದಲ್ಲಿ] ಕಟ್ಟಲ್ಪಟ್ಟಿವೆ; [ಇಂತಹ] **ರಥಮ್** = ರಥವನ್ನು; **ಆ ತಿಷ್ಠ** = ಏರು; **ಗ್ರಾವಾ** = ಅಭಿಷವದ ಕಲ್ಲು; **ವಗ್ನುನಾ** = ಇಂಪಾದ ಅಭಿಷವಧ್ವನಿಯಿಂದ; **ತೇ** = ನಿನ್ನ; **ಮನಃ** = ಮನಸ್ಸನ್ನು; **ಅರ್ವಾಚೀನಮ್** = ಸೋಮರಸಾಭಿಮುಖವನ್ನಾಗಿ. [ಯಜ್ಞಾಭಿಮುಖವನ್ನಾಗಿ] **ಸು ಕೃಣೋತು** = ಚೆನ್ನಾಗಿ ಮಾಡಲಿ. ✣ [ಎಲೈ! ಷೋಡಶಿಗ್ರಹಸೋಮವೇ! ನೀನು;] **ಉಪಯಾಮಗೃಹೀತಃ ಅಸಿ** = ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ.

**ಲೋಕಕ್ಷೇಮಕ್ಕಾಗಿ ವೃತ್ರಾಸುರನನ್ನು ಸಂಹರಿಸಿದ ಇಂದ್ರದೇವನೇ! ನಿನ್ನ ಎರಡು**

## ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ॥

## ॥ ೩೭-38 ॥

[ಆ ತಿಷ್ಠ ಷಡ್ವಿಗ್‌ಂಶತಿಃ ।]

ಷೋಡಶಿನೇ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಷೋಡಶಿನೇ ॥೩೭॥

ಇಂದ್ರಾಯ ಷೋಡಶಿನೇ = ಷೋಡಶಿಸಂಜ್ಞಕನಾದ ಇಂದ್ರನಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ.] [ಎಲೈ! ಷೋಡಶಿಪಾತ್ರವೇ!] ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನ; ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು [ಇಲ್ಲಿ ಸಾದನ ಮಾಡುತ್ತೇನೆ.]

ಕುದುರೆಗಳು ಮಂತ್ರಪೂರ್ವಕವಾಗಿ ರಥಕ್ಕೆ ಕಟ್ಟಲ್ಪಟ್ಟಿವೆ. ಇಂತಹ ರಥವನ್ನು ಏರು. ಅಭಿಷವ ಮಾಡುವ ಕಲ್ಲು ತನ್ನ ಇಂಪಾದ ಅರೆಯುವ ಶಬ್ದದಿಂದ ನಿನ್ನ ಮನಸ್ಸು ನಮ್ಮ ಯಜ್ಞಕ್ಕೆ/ಸೋಮರಸಕ್ಕೆ ಅಭಿಮುಖವಾಗುವಂತೆ ಮಾಡಲಿ. ಆ ಶಬ್ದದಿಂದ ಆಕರ್ಷಿತನಾಗಿ ನೀನು ಯಜ್ಞಕ್ಕೆ ಬಾ. ಸೋಮರಸವನ್ನು ಪಾನ ಮಾಡಿ ನಮ್ಮ ಇಷ್ಟಾರ್ಥವನ್ನು ನೆರವೇರಿಸು.

*ಎಲೈ! ಷೋಡಶಿಗ್ರಹಸೋಮವೇ! ನೀನು ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ. ಷೋಡಶಿಸಂಜ್ಞಕನಾದ ಇಂದ್ರನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಷೋಡಶಿಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಷೋಡಶೀಂದ್ರನಿಗಾಗಿ ನಿನ್ನನ್ನಿಲ್ಲಿ ಸಾದನ ಮಾಡುತ್ತೇನೆ.

### ಛಂದಸ್ಸು

ಆ ತಿಷ್ಠ..........ವಗ್ನುನಾ । ಅನುಷ್ಟುಪ್.

*ಷೋಡಶ ಸ್ತೋತ್ರಗಳೂ, ಷೋಡಶ ಶಸ್ತ್ರಗಳೂ ಇರುವುದರಿಂದ ಯಾಗಕ್ಕೆ 'ಷೋಡಶಿ' ಎಂದು ಹೆಸರು. ಆ ಗ್ರಹಕ್ಕೂ ಷೋಡಶಿ ಎಂದು ಹೆಸರು. ದೇವತೆಯಾದ ಇಂದ್ರನೂ ಷೋಡಶೀ.

## ॥ ಅಷ್ಟಾತ್ರಿಂಶೋಽನುವಾಕಃ ॥

**ಇಂದ್ರಮಿದ್ಧರೀ ವಹತೋಽಪ್ರತಿಧೃಷ್ಟಶವಸಮೃಷೀಣಾಂ ಚ**

**ಸ್ತುತೀರುಪ ಯಜ್ಞಂ ಚ ಮಾನುಷಾಣಾಮ್ ॥**

---

**ಇಂದ್ರಮ್ । ಇತ್ । ಹರೀ ಇತಿ । ವಹತಃ । ಅಪ್ರತಿಧೃಷ್ಟಶವಸಮಿತ್ಯಪ್ರತಿಧೃಷ್ಟ-ಶವಸಮ್ । ಋಷೀಣಾಮ್ । ಚ । ಸ್ತುತೀಃ । ಉಪೇತಿ । ಯಜ್ಞಮ್ । ಚ । ಮಾನುಷಾಣಾಮ್॥**

---

| ಮಂತ್ರ | ವಿನಿಯೋಗ |
|---|---|
| **ಇಂದ್ರಮಿತ್....ಮಾನುಷಾಣಾಮ್ ॥** | ಷೋಡಶಿಗ್ರಹಗ್ರಹಣದಲ್ಲಿ ವೈಕಲ್ಪಿಕವಾದ ಮಂತ್ರಗಳಲ್ಲಿ ಒಂದು. |
| **ಉಪಯಾಮ....ಷೋಡಶಿನೇ ॥** | |

---

**ಋಷೀಣಾಮ್**=ಮಂತ್ರಗಳ; **ಸ್ತುತೀಃ**=ಸ್ತೋತ್ರಗಳನ್ನೂ; **ಚ**=ಮತ್ತು; **ಮಾನುಷಾಣಾಮ್** =ಮನುಷ್ಯರ; **ಯಜ್ಞಮ್ ಚ**=ಯಾಗವನ್ನೂ; **ಉಪ** [ಇತ್ಯ] = ಹೊಂದಿ; **ಅಪ್ರತಿಧೃಷ್ಟಶವಸಮ್**=ಯಾರಿಂದಲೂ ತಿರಸ್ಕರಿಸಲಾಗದ ಬಲವುಳ್ಳ; **ಇಂದ್ರಮ್ ಇತ್** = ಇಂದ್ರನನ್ನೇ; **ಹರೀ**=ಎರಡು ಕುದುರೆಗಳು; **ವಹತಃ** = [ರಥದಿಂದ] ಒಯ್ಯುತ್ತವೆ. [ಅಪ್ರತಿಧೃಷ್ಟಶವಸಮ್ ಇಂದ್ರಮ್ ಇತ್=ಎದುರಿಸಲಾಗದ ಬಲವುಳ್ಳ ಇಂದ್ರನನ್ನೇ; ಹರೀ ಯಜ್ಞಮ್ ಉಪವಹತಃ=ಎರಡು ಕುದುರೆಗಳು ಯಜ್ಞಸಮೀಪಕ್ಕೆ[ರಥದಲ್ಲಿ] ಒಯ್ಯುತ್ತವೆ. ಋಷೀಣಾಮ್ ಚ ಮಾನುಷಾಣಾಮ್ ಚ ಸ್ತುತೀಃ ಚ ಉಪವಹತಃ = ಋಷಿಗಳು ಮತ್ತು ಮನುಷ್ಯರು ಸ್ತೋತ್ರಮಾಡುವ ಕಡೆಗೆ ಕುದುರೆಗಳು ಇಂದ್ರನನ್ನು ಒಯ್ಯುತ್ತವೆ.

---

ಇಂದ್ರನ ಬಲವು ಯಾರೂ ತಿರಸ್ಕರಿಸಲಾಗದಂತಹುದು. ಅಂತಹ ಬಲಸಂಪನ್ನನಾದ ಇಂದ್ರನನ್ನೇ ಎರಡು ಕುದುರೆಗಳು ಮಂತ್ರಗಳು [ಋಷಿಗಳು] ಮತ್ತು ಮನುಷ್ಯರು

ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ

ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೩೮-39 ॥

[ಇಂದ್ರಮಿತ್ರಯೋವಿಗ್‌ಂಶತಿಃ ।]

---

ಉಪಯಾಮಗೃಹೀತ ಇತ್ಯುಪಯಾಮ - ಗೃಹೀತಃ । ಅಸಿ । ಇಂದ್ರಾಯ । ತ್ವಾ ।

ಷೋಡಶಿನೇ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಷೋಡಶಿನೇ ॥

---

| ಮಂತ್ರ | ವಿನಿಯೋಗ |
|---|---|
| ಹಿಂದಿನಂತೆ | *ಮಾಧ್ಯಂದಿನಸವನದಲ್ಲಿ ಷೋಡಶಿಗ್ರಹಣಕ್ಕಾಗಿ |

---

❖ [ಎಲೈ ಸೋಮನೇ! ನೀನು] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಗೃಹೀತನಾಗಿರುವೆ; ಇಂದ್ರಾಯ ಷೋಡಶಿನೇ = ಷೋಡಶಿಸಂಜ್ಞಕನಾದ ಇಂದ್ರನಿಗಾಗಿ; ತ್ವಾ = ನಿನ್ನನ್ನು; [ಗ್ರಹಿಸುತ್ತೇನೆ] ❖ಎಲೈ! ಷೋಡಶಿಪಾತ್ರವೇ! ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನ; ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು; [ಇಲ್ಲಿ ಸಾದನ ಮಾಡುತ್ತೇನೆ.]

---

ಸ್ತೋತ್ರಮಾಡುವ ಯಜ್ಞದ ಕಡೆಗೆ ಒಯ್ಯುತ್ತವೆ. [ಸೋಮನನ್ನು ಕುಡಿದು ಅತಿಶಯ ಬಲಸಂಪನ್ನನಾದ ಇಂದ್ರನನ್ನೇ ಮತ್ತೆ ಹಿಂದಕ್ಕೆ ಒಯ್ಯುತ್ತವೆ.]

ಎಲೈ! ಸೋಮನೇ! ನೀನು ದಾರುಪಾತ್ರಗೃಹೀತನಾಗಿರುವೆ. ಷೋಡಶೀಂದ್ರನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಷೋಡಶೀಂದ್ರನಿಗಾಗಿ ನಿನ್ನನ್ನು ಇಲ್ಲಿಡುತ್ತೇನೆ.

## ಛಂದಸ್ಸು

ಇಂದ್ರಮಿದ್ಧರೀ....ಮಾನುಷಾಣಾಮ್ ॥ ಅನುಷ್ಟುಪ್

---

*ಇದು ಭಟ್ಟಭಾಸ್ಕರಮಿಶ್ರರ ಮತ.

## ॥ ಏಕೋನಚತ್ವಾರಿಂಶೋಽನುವಾಕಃ ॥

ಅಸಾವಿ ಸೋಮ ಇಂದ್ರ ತೇ ಶವಿಷ್ಠ ಧೃಷ್ಣವಾಗಹಿ । ಆ ತ್ವಾ ಪೃಣಕ್ತ್ವಿಂದ್ರಿಯಗ್ಂ ರಜಃ ಸೂರ್ಯಂ ನ ರಶ್ಮಿಭಿಃ ॥

---

ಅಸಾವಿ । ಸೋಮಃ । ಇಂದ್ರ । ತೇ । ಶವಿಷ್ಠ । ಧೃಷ್ಣೋ । ಆ । ಇತಿ । ಗಹಿ ॥ ಆ । ಇತಿ । ತ್ವಾ । ಪೃಣಕ್ತು । ಇಂದ್ರಿಯಮ್ । ರಜಃ । ಸೂರ್ಯಮ್ । ನ । ರಶ್ಮಿಭಿರಿತಿ ರಶ್ಮಿ-ಭಿಃ॥

---

| ಮಂತ್ರ | ವಿನಿಯೋಗ |
|---|---|
| ಅಸಾವಿ......ರಶ್ಮಿಭಿಃ । | ಷೋಡಶಿಗ್ರಹಗ್ರಹಣದಲ್ಲಿ ವೈಕಲ್ಪಿಕವಾದ ಎರಡನೆಯ ಮಂತ್ರ. ತೃತೀಯಸವನದಲ್ಲಿ ಷೋಡಶಿಗ್ರಹಗ್ರಹಣಕ್ಕಾಗಿ (ಭ.ಭಾ.) |

---

**ಶವಿಷ್ಠ** = ಅತ್ಯಂತ ಬಲವುಳ್ಳ; **ಇಂದ್ರ** = ಇಂದ್ರನೇ!; **ತೇ** = ನಿನಗಾಗಿ; **ಸೋಮಃ** = ಸೋಮನು; **ಅಸಾವಿ**= ಅಭಿಷುತನಾಗಿದ್ದಾನೆ; **ಧೃಷ್ಣೋ** = ಶತ್ರುಗಳನ್ನು ಧರ್ಷಿಸುವ [ಇಂದ್ರನೇ!]; **ಆ ಗಹಿ** = [ನಮ್ಮ ಯಜ್ಞಕ್ಕೆ] ಬಾ; **ಇಂದ್ರಿಯಮ್** = ಇಂದ್ರಿಯಶಕ್ತಿಯು; **ರಶ್ಮಿಭಿಃ** = ಕಿರಣಗಳಿಂದ ಗ್ರಹಿಸಲ್ಪಟ್ಟ; **ರಜಃ** = ನೀರು; **ಸೂರ್ಯಮ್ ನ** = ಸೂರ್ಯನನ್ನು ಹೇಗೋ ಹಾಗೆ; **ತ್ವಾ** = ನಿನ್ನನ್ನು; **ಆ ಪೃಣಕ್ತು** = ತುಂಬಿಕೊಳ್ಳಲಿ.

---

ಬಲವಂತರಲ್ಲಿ ಶ್ರೇಷ್ಠನಾದ ಇಂದ್ರನೇ! ನಿನಗಾಗಿ ಯಜ್ಞದಲ್ಲಿ ಸೋಮಾಭಿಷವ ವಾಗಿದೆ. ಆ ಸೋಮರಸವನ್ನು ಸ್ವೀಕರಿಸಲು ಶತ್ರುಗಳನ್ನು ಧರ್ಷಿಸಿ ಸೋಲಿಸಬಲ್ಲ ನೀನು ನಮ್ಮ ಯಜ್ಞಕ್ಕೆ ಬಾ. ಕಿರಣಗಳಿಂದ ಆವಿಯ ರೂಪದಲ್ಲಿ ಸಂಗ್ರಹಿಸಲ್ಪಟ್ಟ ನೀರು ಸೂರ್ಯನನ್ನು ಆವರಿಸುವಂತೆ [ಮೇಘರೂಪವಾಗಿ ತುಂಬುವಂತೆ] ಇಂದ್ರಿಯ

ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೩೯-40 ॥

[ಆಸಾವಿ ಸಪ್ತವಿಗ್ಂಶತಿಃ ।]

---

ಉಪಯಾಮಗೃಹೀತ ಇತ್ಯುಪಯಾಮ - ಗೃಹೀತಃ । ಅಸಿ । ಇಂದ್ರಾಯ । ತ್ವಾ । ಷೋಡಶಿನೇ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಷೋಡಶಿನೇ ॥೩೯॥

---



✣ ಎಲೈ ಸೋಮರಸವೇ! ಉಪಯಾಮಗೃಹೀತಃ ಅಸಿ = ಮರದ ಪಾತ್ರದಿಂದ ಹಿಡಿದಿಡಲ್ಪಟ್ಟಿರುವೆ; ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು [ಗ್ರಹಿಸುತ್ತೇನೆ.] ✣ ಎಲೈ ಷೋಡಶಿಪಾತ್ರವೇ! ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನ; ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು [ಇಲ್ಲಿ ಇಡುತ್ತೇನೆ.]

---

ಶಕ್ತಿಯು ನಿನ್ನನ್ನು ತುಂಬಲಿ. ಸೋಮರಸಪಾನದಿಂದ ಮತ್ತಷ್ಟು ಇಂದ್ರಿಯಶಕ್ತಿಯನ್ನು ಪಡೆದ ನೀನು ನಮ್ಮ ಇಷ್ಟಾರ್ಥಗಳನ್ನು ಪೂರ್ಣಗೊಳಿಸು.

ಎಲೈ ಸೋಮರಸವೇ! ನೀನು ಷೋಡಶಿಗ್ರಹಪಾತ್ರದಿಂದ ಗೃಹೀತನಾಗಿರುವೆ. ಷೋಡಶೀಂದ್ರನಿಗಾಗಿ ನಿನ್ನನ್ನು ಗ್ರಹಿಸುತ್ತೇನೆ.

ಎಲೈ! ಪಾತ್ರವೇ! ನಿನ್ನ ಸ್ಥಾನವಾದ ಖರಪ್ರದೇಶದಲ್ಲಿ ಷೋಡಶೀಂದ್ರದೇವನಿಗಾಗಿ ನಿನ್ನನ್ನು ಸಾದನ ಮಾಡುತ್ತೇನೆ.

### ಛಂದಸ್ಸು

ಆಸಾವಿ............ರಶ್ಮಿಭಿಃ ॥ ಅನುಷ್ಟುಪ್

---

## ॥ ಚತ್ವಾರಿಂಶೋಽನುವಾಕಃ ॥

ಸರ್ವಸ್ಯ ಪ್ರತಿಶೀವರೀ ಭೂಮಿಸ್ತ್ವೋಪಸ್ಥ ಆಽಧಿತ ।
ಸ್ಯೋನಾಽಸ್ಮೈ ಸುಷದಾ ಭವ ಯಚ್ಛಾಸ್ಮೈ ಶರ್ಮ ಸಪ್ರಥಾಃ॥

---

ಸರ್ವಸ್ಯ । ಪ್ರತಿಶೀವರೀತಿ ಪ್ರತಿ-ಶೀವರೀ । ಭೂಮಿಃ । ತ್ವಾ । ಉಪಸ್ಥ ಇತ್ಯುಪ-ಸ್ಥೇ । ಏತಿ । ಅಧಿತ ॥ ಸ್ಯೋನಾ । ಅಸ್ಮೈ । ಸುಷದೇತಿ ಸು-ಸದಾ । ಭವ । ಯಚ್ಛ । ಅಸ್ಮೈ । ಶರ್ಮ । ಸಪ್ರಥಾ ಇತಿ ಸ-ಪ್ರಥಾಃ ॥

---

| ಮಂತ್ರ | ವಿನಿಯೋಗ |
|---|---|
| ಸರ್ವಸ್ಯ............ಸಪ್ರಥಾಃ ॥ | ಷೋಡಶಿಗ್ರಹಗ್ರಹಣದಲ್ಲಿ ವೈಕಲ್ಪಿಕವಾದ ಇನ್ನೊಂದು ಮಂತ್ರ. |

---

ಎಲೈ! ಇಂದ್ರನೇ! **ಸರ್ವಸ್ಯ** = ಎಲ್ಲಾ ಪ್ರಾಣಿಸಮೂಹಕ್ಕೂ; **ಪ್ರತಿಶೀವರೀ** = ಪ್ರತ್ಯೇಕವಾಗಿ ಮಲಗಿಕೊಳ್ಳಲು ಸುಖಸ್ಥಾನವಾಗಿರುವ/ಪ್ರಾಣಿಗಳಿಗೆ ಅಭಿಮುಖವಾಗಿ ಮಲಗಿರುವ/ ಮಗುವಿಗೆ ತಾಯಿಯಂತಿರುವ; **ಭೂಮಿಃ** = ಭೂಮಿಯು; **ತ್ವಾ** = ನಿನ್ನನ್ನು; **ಉಪಸ್ಥೇ** = ಮೇಲ್ಭಾಗದಲ್ಲಿ; **ಆ ಅಧಿತ** = ಇಟ್ಟುಕೊಳ್ಳಲಿ; [ಎಲೈ! ಭೂದೇವಿಯೇ!] **ಅಸ್ಮೈ** = ಈ ಇಂದ್ರನಿಗೆ/ಯಜಮಾನನಿಗೆ; **ಸ್ಯೋನಾ**= ಸುಖಪ್ರದಳಾಗಿಯೂ; **ಸುಷದಾ** = ಒಳ್ಳೆಯ ವಾಸಸ್ಥಾನವಾಗಿಯೂ; ಭವ = ಆಗು; **ಅಸ್ಮೈ** = ಈ ಯಜಮಾನನಿಗೆ; **ಸಪ್ರಥಾಃ** = ಅತಿವಿಸ್ತೀರ್ಣಳಾಗಿ; **ಶರ್ಮ** = ಸುಖವನ್ನು; **ಯಚ್ಛ** = ಕೊಡು.

---

ಇಂದ್ರನೇ! ಈ ಭೂಮಿಯು ಎಲ್ಲಾ ಪ್ರಾಣಿಗಳಿಗೂ ಪ್ರತ್ಯೇಕವಾಗಿ ಸುಖವಾಗಿ ಮಲಗಿಕೊಳ್ಳಲು ಆಶ್ರಯಸ್ಥಾನವಾಗಿದೆ. ಈ ಭೂಮಿಯು ನಿನ್ನನ್ನು ತನ್ನ [ತೊಡೆಯ] ಮೇಲೆ ಇಟ್ಟುಕೊಳ್ಳಲಿ. ಎಲೈ! ಭೂದೇವಿಯೇ! ಈ ಇಂದ್ರನಿಗೆ ಸುಖಪ್ರದಳಾಗಿಯೂ,

**ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೪೦-41 ॥**

**[ಸರ್ವಸ್ಯ ಷಡ್ವಿಗ್ಂಶತಿಃ ।]**

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ। ಇಂದ್ರಾಯ। ತ್ವಾ। ಷೋಡಶಿನೇ। ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಷೋಡಶಿನೇ ॥ ೪೦ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ.......ಷೋಡಶಿನೇ ॥ | ಷೋಡಶಿಗ್ರಹಗ್ರಹಣ, ಆಸಾದನ. |

---

❖ [ಎಲೈ! ಸೋಮರಸವೇ!] **ಉಪಯಾಮಗೃಹೀತಃ ಅಸಿ** = ದಾರುಪಾತ್ರದಿಂದ ಗೃಹೀತನಾಗಿರುವೆ; **ತ್ವಾ**= ನಿನ್ನನ್ನು; **ಇಂದ್ರಾಯ ಷೋಡಶಿನೇ** = ಷೋಡಶೀಂದ್ರದೇವನಿಗಾಗಿ; [ಗ್ರಹಿಸುತ್ತೇನೆ.] ❖ [ಎಲೈ! ಪಾತ್ರವೇ!] **ಏಷಃ ತೇ ಯೋನಿಃ** = ಈ ಖರಪ್ರದೇಶವು ನಿನ್ನ ಸ್ಥಾನ; **ತ್ವಾ** = ನಿನ್ನನ್ನು; **ಇಂದ್ರಾಯ ಷೋಡಶಿನೇ** = ಷೋಡಶೀಂದ್ರದೇವನಿಗಾಗಿ [ಖರಪ್ರದೇಶದಲ್ಲಿ ಇಡುತ್ತೇನೆ.]

---

ಒಳ್ಳೆಯ ವಾಸಸ್ಥಾನವಾಗಿಯೂ ಆಗು. ಯಜಮಾನನು ಹೊಂದಿರುವ ಭೂಮಿಯು ವಿಸ್ತೀರ್ಣಗೊಂಡು ಯಜಮಾನನಿಗೆ ಸುಖವನ್ನು ಕೊಡಲಿ.

ಎಲೈ! ಸೋಮನೇ! ನೀನು ಷೋಡಶಿಪಾತ್ರದಲ್ಲಿ ಗೃಹೀತನಾಗಿರುವೆ. ನಿನ್ನನ್ನು ಷೋಡಶೀಂದ್ರನಿಗಾಗಿ ಗ್ರಹಿಸುತ್ತೇನೆ.

ಎಲೈ ಷೋಡಶಿಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನವಾಗಿದ. ಷೋಡಶೀಂದ್ರನಿಗಾಗಿ ಷೋಡಶಿಪಾತ್ರವನ್ನು ಇಲ್ಲಿ ಸಾದನ ಮಾಡುತ್ತೇನೆ.

**ಛಂದಸ್ಸು**

| | |
|---|---|
| ಸರ್ವಸ್ಯ..........ಸಪ್ರಥಾಃ ॥ | ಅನುಷ್ಟುಪ್. |

## ॥ ಏಕಚತ್ವಾರಿಂಶೋಽನುವಾಕಃ ॥

ಮಹಾಗ್ಂ ಇಂದ್ರೋ ವಜ್ರಬಾಹುಃ ಷೋಡಶೀ ಶರ್ಮ

ಯಚ್ಛತು । ಸ್ವಸ್ತಿ ನೋ ಮಘವಾ ಕರೋತು ಹಂತು

ಪಾಪ್ಮಾನಂ ಯೋಽಸ್ಮಾನ್ದ್ವೇಷ್ಟಿ ॥ ಉಪಯಾಮ

---

ಮಹಾನ್ । ಇಂದ್ರಃ । ವಜ್ರಬಾಹುರಿತಿ ವಜ್ರ - ಬಾಹುಃ । ಷೋಡಶೀ । ಶರ್ಮ ।

ಯಚ್ಛತು ॥ ಸ್ವಸ್ತಿ । ನಃ । ಮಘವೇತಿ ಮಘ-ವಾ । ಕರೋತು । ಹಂತು । ಪಾಪ್ಮಾನಮ್।

ಯಃ । ಅಸ್ಮಾನ್ । ದ್ವೇಷ್ಟಿ ॥ ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ ।

---

| ಮಂತ್ರ | ವಿನಿಯೋಗ |
|---|---|
| ಮಹಾನ್........ದ್ವೇಷ್ಟಿ ॥ | ಷೋಡಶಿಗ್ರಹಗ್ರಹಣದಲ್ಲಿ ವೈಕಲ್ಪಿಕವಾದ |
| ಉಪಯಾಮ.....ಷೋಡಶಿನೇ ॥ | ಇನ್ನೊಂದು ಮಂತ್ರ. |

---

**ವಜ್ರಬಾಹುಃ** = ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವ; **ಷೋಡಶೀ** = ಷೋಡಶ ಸ್ತೋತ್ರ-ಶಸ್ತ್ರಗಳುಳ್ಳವನಾದ; **ಮಹಾನ್** = ಮಹತ್ತ್ವಾದಿಗುಣಗಳುಳ್ಳ; **ಇಂದ್ರಃ** = ಇಂದ್ರನು; **ಶರ್ಮ ಯಚ್ಛತು** = [ಈ ಯಜಮಾನನಿಗೆ] ಸುಖವನ್ನು ಕೊಡಲಿ; **ಮಘವಾ** = ಧನವಂತನಾದ ಇಂದ್ರನು; **ನಃ** = ನಮಗೆ; **ಸ್ವಸ್ತಿ** = ಮಂಗಲವನ್ನು/ಅವಿನಾಶವನ್ನು; **ಕರೋತು** = ಉಂಟುಮಾಡಲಿ; **ಪಾಪ್ಮಾನಮ್**= ಪಾಪವನ್ನು; **ಹಂತು** = ನಾಶಪಡಿಸಲಿ; **ಯಃ ಅಸ್ಮಾನ್ ದ್ವೇಷ್ಟಿ** = ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ; [ಅಂತಹ ಪಾಪ್ಮಾನಮ್ ಹಂತು = ನಾಶಪಡಿಸಲಿ.]

---

ಇಂದ್ರನು ಶತ್ರುಗಳನ್ನು ಸಂಹರಿಸಲು ವಜ್ರಾಯುಧವನ್ನು ಕೈಯಲ್ಲಿ ಧರಿಸಿರುತ್ತಾನೆ.

ಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ

ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೪೧-42 ॥

[ಮಹಾನ್ಷಡ್ವಿಗ್ಂಶತಿಃ ।]

---

ಅಸಿ । ಇಂದ್ರಾಯ । ತ್ವಾ । ಷೋಡಶಿನೇ । ಏಷಃ । ತೇ । ಯೋನಿಃ । ಇಂದ್ರಾಯ।

ತ್ವಾ । ಷೋಡಶಿನೇ ॥ ೪೧ ॥

---

❖ [ಎಲೈ! ಸೋಮರಸವೇ! ನೀನು] ಉಪಯಾಮಗೃಹೀತಃ ಅಸಿ = ದಾರುಪಾತ್ರದಲ್ಲಿ ಗ್ರಹಿಸಲ್ಪಟ್ಟಿರುವೆ; ತ್ವಾ = ನಿನ್ನನ್ನು ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; [ಗ್ರಹಿಸುತ್ತೇನೆ]; ❖ [ಎಲೈ! ಷೋಡಶಿಪಾತ್ರವೇ!] ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ. ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು [ಇಲ್ಲಿಡುತ್ತೇನೆ.]

---

ಆತನನ್ನು ಷೋಡಶಸ್ತೋತ್ರಗಳಿಂದಲೂ, ಷೋಡಶಶಸ್ತ್ರಗಳಿಂದಲೂ ಷೋಡಶಿ ಸಂಸ್ಥಾಕವಾದ ಅಗ್ನಿಷ್ಟೋಮದಲ್ಲಿ ಸ್ತುತಿಸುತ್ತಾರೆ. ಆ ಇಂದ್ರನು ಎಲ್ಲದರಲ್ಲಿಯೂ ಮಹತ್ತ್ವವನ್ನು ಪಡೆದಿರುತ್ತಾನೆ. ಇಂತಹ ಇಂದ್ರನು ನಮಗೆ ಸುಖವನ್ನು ಕೊಡಲಿ. ನಮಗೆ ಕ್ಷೇಮವನ್ನು ಉಂಟುಮಾಡಲಿ. ಮಘವಂತ [ಧನವಂತ]ನಾದ ಇಂದ್ರನು ನಮ್ಮ ಪಾಪಗಳನ್ನು ಪರಿಹರಿಸಲಿ. ನಾವು ದ್ವೇಷಿಸುವ ಹಗೆಯನ್ನೂ, ನಮ್ಮನ್ನು ದ್ವೇಷಿಸುವ ಶತ್ರುವನ್ನೂ ನಾಶಪಡಿಸಲಿ.

ಎಲೈ! ಸೋಮರಸವೇ! ನೀನು ದಾರುಪಾತ್ರದಲ್ಲಿ ಇಡಲ್ಪಟ್ಟಿರುವೆ. ನಿನ್ನನ್ನು ಷೋಡಶೀಂದ್ರನಿಗಾಗಿ ಗ್ರಹಿಸುತ್ತೇನೆ.

ಈ ಖರಪ್ರದೇಶದಲ್ಲಿ ಈ ಷೋಡಶಿಪಾತ್ರವನ್ನು ಷೋಡಶೀಂದ್ರನಿಗಾಗಿ ಸಾದನ ಮಾಡುತ್ತೇನೆ.

ಛಂದಸ್ಸು

ಮಹಾಗ್ಂ ಇಂದ್ರೋ........ದ್ವೇಷ್ಟಿ । ಅನುಷ್ಟುಪ್

---

## ॥ ದ್ವಿಚತ್ವಾರಿಂಶೋಽನುವಾಕಃ ॥

ಸಜೋಷಾ ಇಂದ್ರ ಸಗಣೋ ಮರುದ್ಭಿಃ ಸೋಮಂ ಪಿಬ
ವೃತ್ರಹಞ್ಛೂರ ವಿದ್ವಾನ್ । ಜಹಿ ಶತ್ರೂಗ್ಂರಪ ಮೃಧೋ
ನುದಸ್ವಾಥಾಭಯಂ ಕೃಣುಹಿ ವಿಶ್ವತೋ ನಃ ॥

---

ಸಜೋಷಾ ಇತಿ ಸ-ಜೋಷಾಃ। ಇಂದ್ರ। ಸಗಣ ಇತಿ ಸ-ಗಣಃ । ಮರುದ್ಭಿರಿತಿ ಮರುತ್-ಭಿಃ। ಸೋಮಮ್। ಪಿಬ । ವೃತ್ರಹನ್ನಿತಿ ವೃತ್ರ-ಹನ್। ಶೂರ । ವಿದ್ವಾನ್॥ ಜಹಿ । ಶತ್ರೂನ್। ಅಪೇತಿ । ಮೃಧಃ । ನುದಸ್ವ । ಅಥ । ಅಭಯಮ್ । ಕೃಣುಹಿ । ವಿಶ್ವತಃ । ನಃ ॥

---

| ಮಂತ್ರ | ವಿನಿಯೋಗ |
|---|---|
| ಸಜೋಷಾ.......ನಃ । | ವೈಕಲ್ಪಿಕ ಷೋಡಶಿಗ್ರಹಣಮಂತ್ರಗಳಲ್ಲಿ ಕಡೆಯ ಮಂತ್ರ. |

---

**ವೃತ್ರಹನ್** = ವೃತ್ರಾಸುರನನ್ನು ಕೊಂದವನೇ!; **ಶೂರ** = ಮಹಾಬಲನೇ! **ಇಂದ್ರ** = ಇಂದ್ರದೇವನೇ! **ವಿದ್ವಾನ್** = ಯಜಮಾನನ ಭಕ್ತಿಯನ್ನು [ಎಲ್ಲವನ್ನೂ] ತಿಳಿದಿರುವ; **ಮರುದ್ಭಿಃ** = ಮರುತರಿಂದ[ಕೂಡಿರುವುದರಿಂದ]; **ಸಜೋಷಾಃ** = ಸಮಾನಪ್ರೀತಿಯುಳ್ಳವನಾಗಿ; **ಸಗಣಃ** = ಪರಿವಾರಸಹಿತನಾದ[ನೀನು]; **ಸೋಮಮ್** = ಸೋಮರಸವನ್ನು; **ಪಿಬ** = ಕುಡಿ; **ಶತ್ರೂನ್** = [ಕೊಲ್ಲಲು ಬರುವ] ಹಗೆಗಳನ್ನು; **ಜಹಿ** = ನಾಶಪಡಿಸು; **ಮೃಧಃ**=ಇತರ ಶತ್ರುಗಳನ್ನು; [ಯುದ್ಧಮಾಡಲು ಇಚ್ಛಿಸುವ ಶತ್ರುಗಳನ್ನೂ] **ಅಪನುದಸ್ವ** = ದೂರಕ್ಕೆ ಓಡಿಸು; **ಅಥ** = ಅನಂತರ; **ನಃ** = ನಮಗೆ; **ವಿಶ್ವತಃ** = ಎಲ್ಲ ಕಡೆಗಳಿಂದಲೂ; **ಅಭಯಮ್** = ಹೆದರಿಕೆಯಿಲ್ಲದಿರುವಿಕೆಯನ್ನು; **ಕೃಣುಹಿ** = ಮಾಡು.

---

ಎಲೈ! ಇಂದ್ರನೇ! ನೀನು ವೃತ್ರನನ್ನು ಕೊಂದವನು; ಮಹಾಬಲನು; ಎಲ್ಲವನ್ನೂ

ಉಪಯಾಮಗೃಹೀತೋಽಸೀಂದ್ರಾಯ ತ್ವಾ ಷೋಡಶಿನ ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ॥ ೪೨-43 ॥

---

ಉಪಯಾಮಗೃಹೀತ ಇತ್ಯುಪಯಾಮ - ಗೃಹೀತಃ ॥ ಅಸಿ । ಇಂದ್ರಾಯ । ತ್ವಾ । ಷೋಡಶಿನೇ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ । ಷೋಡಶಿನೇ ॥೪೨॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮ.......ಷೋಡಶಿನೇ । | ಷೋಡಶಿಗ್ರಹಗ್ರಹಣ, ಆಸಾದನ |

---

❖ [ಎಲೈ! ಸೋಮರಸವೇ! ನೀನು] ಉಪಯಾಮಗೃಹೀತಃ ಅಸಿ = ದಾರುಪಾತ್ರದಿಂದ ಸಂಗ್ರಹಿಸಲ್ಪಟ್ಟಿರುವೆ; ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು; [ಗ್ರಹಿಸುತ್ತೇನೆ.] ❖ [ಎಲೈ! ಷೋಡಶಿಪಾತ್ರವೇ!] ಏಷಃ ತೇ ಯೋನಿಃ = ಈ ಖರಪ್ರದೇಶವು ನಿನ್ನ ಸ್ಥಾನ. ಇಂದ್ರಾಯ ಷೋಡಶಿನೇ = ಷೋಡಶೀಂದ್ರನಿಗಾಗಿ; ತ್ವಾ = ನಿನ್ನನ್ನು [ಇಲ್ಲಿಡುತ್ತೇನೆ].

---

ತಿಳಿದವನು. ಮರುತರೊಡನೆ ಸಮಾನವಾದ ಪ್ರೀತಿಯುಳ್ಳವನು. ಅನೇಕ ದೇವಗಣಯುಕ್ತನು. ಇಂತಹ ನೀನು ಸೋಮರಸವನ್ನು ಕುಡಿ. ಕೊಲ್ಲಲು ಬರುವ ಶತ್ರುಗಳನ್ನು ನಾಶಪಡಿಸು. ಇತರ ಶತ್ರುಗಳನ್ನೂ ದೂರಕ್ಕೆ ಅಟ್ಟು. ಅನಂತರ ನಮಗೆ ಯಾವ ಕಡೆಯಿಂದಲೂ ಭಯವಿಲ್ಲದಂತೆ ಮಾಡು.

ಷೋಡಶಿಗ್ರಹದಲ್ಲಿರುವ ಸೋಮರಸವೇ! ನೀನು ಮರದ ಪಾತ್ರದಲ್ಲಿ ಗೃಹೀತನಾಗಿರುವೆ. ನಿನ್ನನ್ನು ಷೋಡಶೀಂದ್ರನಿಗಾಗಿ ಪಾತ್ರದಲ್ಲಿ ಗ್ರಹಿಸುತ್ತೇನೆ.

ಎಲೈ ಷೋಡಶಿಪಾತ್ರವೇ! ಈ ಖರಪ್ರದೇಶವು ನಿನ್ನ ಸ್ಥಾನ. ಷೋಡಶೀಂದ್ರ ದೇವನಿಗಾಗಿ ನಿನ್ನನ್ನು ಇಲ್ಲಿ ಇಡುತ್ತೇನೆ.

## ಛಂದಸ್ಸು

ಸಜೋಷಾ.........ನಃ । ತ್ರಿಷ್ಟುಪ್

## ವಿನಿಯೋಗ ಸಂಗ್ರಹ

ಐಂದ್ರವಾಯವ * ಆ ವಾಯೋ[4] ಇಂದ್ರ✣ ತಸ್ಯ ಪುನರ್ಗ್ರಹಃ ।
ಮೈತ್ರಾವರುಣಕೇಽಯಂ ವಾ[5]ಮಾಶ್ವಿನೇ ದ್ವೌ ವಿಕಲ್ಪಿತಾ[6-7]॥
ಶುಕ್ರೇ[8] ಮಂಥಿನಿ[9] ಚೈಕೈಕಃ ಪ್ರಾಗಿವಾಗ್ರಯಣೇ[10-11] ದ್ವಯಮ್ ।
ಏಕೈಕ[12-13] ಉಕ್ಥ್ಯಧ್ರುವಯೋಶ್ಚತುರ್ದಶ ತು ಮಂತ್ರಕಾಃ ॥
[14]ಋತುಗ್ರಹೇಷೂಪಯಾಮಃ ಸರ್ವೇಷ್ವಾದೌ ಪ್ರಯುಜ್ಯತೇ ।
ಐಂದ್ರಾಗ್ನೋ[15] ವೈಶ್ವದೇವಶ್ಚ[16] ತ್ರಯೋ[17-19] ಮಾರುತ್ವತಗ್ರಹಾಃ॥
ವೈಕಲ್ಪಿಕೌ ದ್ವೌ[20-21] ಮಾಹೇಂದ್ರೇ[22] ಕದಾಽಽದಿತ್ಯಗ್ರಹಸ್ತಥಾ ।
ಕದಾ✣ ದಧಿಗ್ರಹಸ್ತತ್ರ ಯಜ್ಞ✣ ಸೋಮಂ ಪುನಃ ಕ್ಷಿಪೇತ್ ॥
ವಿವ✣ ಗ್ರಾವ್ಣಾಽಽಲೋಡಯೇದ್ವಾ✣ ಕಾಮ್ಯೋ ದಧ್ನಃ ಪರಿಶ್ರಯಃ ।
ತ್ರಯೋ ವಿಕಲ್ಪ್ಯಾಃ ಸಾವಿತ್ರೇ[23-25] ವೈಶ್ವದೇವೇ ಪಠೋಹ್ಯಸೌ ॥[26]
[27]ಪಾತ್ನೀವತಗ್ರಹಸ್ಯಾಸ್ಯ ಹೋಮೋಽಗ್ನಾ✣ ಇತಿ ಮಂತ್ರತಃ ।
[28]ಹಾರಿಯೋಜನನಾಮ್ನಸ್ತು✣ ಹರಿಃ ಸ್ಥೇತಿ ಹುತರ್ಭವೇತ್ ॥
[29]ಅಗ್ನೇಽತಿಗ್ರಾಹ್ಯ ಆಗ್ನೇಯ ಉತ್ತಿಷ್ಠನ್[30] ಗ್ರಾಹ್ಯ ಐಂದ್ರಕಃ । **
[37-42]ಷಡ್ವಿಕಲ್ಪ್ಯಾಃ ಷೋಡಶಿನಿ ಗ್ರಹಕಾಂಡಂ ಸಮಾಪ್ಯತೇ ॥

---

*ಇದಕ್ಕಿಂತಲೂ ಹಿಂದಿನ ಅನುವಾಕಗಳ ವಿನಿಯೋಗಸಂಗ್ರಹವನ್ನು ಹಿಂದೆಯೇ ನೀಡಲಾಗಿದೆ. 4 ಎಂಬುದು ಅನುವಾಕದ ಸಂಖ್ಯೆ. ಈ 'ವಿನಿಯೋಗ ಸಂಗ್ರಹ' ದಲ್ಲಿ ಅನುವಾಕಗಳ ಸಂಖ್ಯೆಯನ್ನು ನೀಡಲಾಗಿದೆ.

✣ ಆಯಾ ಅನುವಾಕದಲ್ಲಿನ ಮಂತ್ರಗಳು.

** 31 ರಿಂದ 36 ರವರೆಗಿನ ಅನುವಾಕಗಳು ಗ್ರಹಕಾಂಡದಲ್ಲಿನ ವಿನಿಯೋಗವನ್ನು ತಿಳಿಸುವುದಿಲ್ಲ.

## ಗ್ರಹಕಾಂಡದ ವಿವರ

| ಅನುವಾಕ ಸಂಖ್ಯೆ | ಗ್ರಹಗಳು | ಮಂತ್ರಗಳು |
|---|---|---|
| 4 | ಐಂದ್ರವಾಯವಗ್ರಹ | 2 |
| 5 | ಮೈತ್ರಾವರುಣಗ್ರಹ | 1 |
| 6-7 | ಆಶ್ವಿನಗ್ರಹ | 2 |
| 8 | ಶುಕ್ರಗ್ರಹ | 1 |
| 9 | ಮಂಥಿಗ್ರಹ | 1 |
| 10-11 | ಆಗ್ರಯಣಗ್ರಹ | 2 |
| 12 | ಉಕ್ಥ್ಯಗ್ರಹ | 1 |
| 13 | ಧ್ರುವಗ್ರಹ | 1 |
| 14 | ಋತುಗ್ರಹಗಳು | 13 |
| 15 | ಐಂದ್ರಾಗ್ನಗ್ರಹ | 1 |
| 16 | ವೈಶ್ವದೇವಗ್ರಹ | 1 |
| 17, 18, 19 | ಮರುತ್ವತೀಯಗ್ರಹ | 3 |
| 20-21 | ಮಾಹೇಂದ್ರಗ್ರಹ | 2 |
| 22 | ಆದಿತ್ಯಗ್ರಹ, ದಧಿಗ್ರಹ | 5 |
| 23, 24, 25 | ಸಾವಿತ್ರಗ್ರಹ | 3 |
| 26 | ವೈಶ್ವದೇವಗ್ರಹ | 1 |
| 27 | ಪಾತ್ನೀವತಗ್ರಹ | 2 |
| 28 | ಹಾರಿಯೋಜನಗ್ರಹ | 3 |
| 29 | ಆಗ್ನೇಯಗ್ರಹ | 1 |
| 30 | ಐಂದ್ರಗ್ರಹ | 1 |
| 37 ರಿಂದ 42 | ಷೋಡಶಿಗ್ರಹಗಳು | 6 |

31 ರಿಂದ 36ರವರೆಗಿನ ಅನುವಾಕಗಳ ವಿನಿಯೋಗವು ಗ್ರಹಗಳ ಬಗೆಗಿಲ್ಲ.

## ॥ ತ್ರಿಚತ್ವಾರಿಂಶೋಽನುವಾಕಃ ॥

**ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ ॥**

---

**ಉದಿತಿ । ಉ । ತ್ಯಮ್ । ಜಾತವೇದಸಮಿತಿ ಜಾತ-ವೇದಸಮ್। ದೇವಮ್ । ವಹಂತಿ। ಕೇತವಃ ॥ ದೃಶೇ । ವಿಶ್ವಾಯ । ಸೂರ್ಯಮ್ ॥**

---

'ತರಣಿಃ' ಎಂಬ ಅನುವಾಕದಿಂದ 6 ಅನುವಾಕಗಳನ್ನು ಬಿಟ್ಟು, ಉಳಿದ 36 ಅನುವಾಕಗಳಲ್ಲಿ ಗ್ರಹಕಾಂಡವು ಮುಗಿಯಿತು. ಈ 37ನೆಯ ಅನುವಾಕದಲ್ಲಿ ದಕ್ಷಿಣೆಯು ಹೇಳಲ್ಪಡುತ್ತದೆ.

| ಮಂತ್ರ | ವಿನಿಯೋಗ |
| --- | --- |
| ಉದು ತ್ಯಂ........ಸೂರ್ಯಮ್ ॥ | ಗಾರ್ಹಪತ್ಯದಲ್ಲಿ ಹೋಮಮಾಡಲು [ಮೊದಲನೆಯ ಮಂತ್ರ] |

---

**ಕೇತವಃ** = ಕಿರಣಗಳು; **ತ್ಯಮ್ ಜಾತವೇದಸಮ್** = ಆ ಅಗ್ನಿಸದೃಶನಾದ; **ದೇವಮ್** = ದೇವನಾದ; **ಸೂರ್ಯಮ್ ಉ** = ಸೂರ್ಯನನ್ನೇ; **ವಿಶ್ವಾಯ** = ಲೋಕಕ್ಕೆಲ್ಲಕ್ಕೂ; **ದೃಶೇ** = ನೋಡುವುದಕ್ಕಾಗಿ; **ಉತ್ ವಹಂತಿ** = ಮೇಲಕ್ಕೆ ಒಯ್ಯುತ್ತವೆ.

---

ಕಿರಣಗಳು — ಅಗ್ನಿಸದೃಶನಾದವನೂ, ಹುಟ್ಟಿದುದೆಲ್ಲವನ್ನೂ ತಿಳಿದಿರತಕ್ಕವನೂ, ಪ್ರಕಾಶಮಾನನೂ ಆದ ಸೂರ್ಯನನ್ನು ಪ್ರಪಂಚವೆಲ್ಲವೂ ನೋಡುವುದಕ್ಕಾಗಿ— ಊರ್ಧ್ವಪ್ರದೇಶಕ್ಕೆ ಒಯ್ಯುತ್ತವೆ. ✶ ಸೂರ್ಯಮಂಡಲವು ಹಲವು ಬಣ್ಣಗಳನ್ನು ಹೊಂದಿ

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣ ಸ್ಯಾಗ್ನೇಃ । ಆऽऽಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್‌ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

---

ಚಿತ್ರಮ್ । ದೇವಾನಾಮ್ । ಉದಿತಿ । ಅಗಾತ್ । ಅನೀಕಮ್ । ಚಕ್ಷುಃ । ಮಿತ್ರಸ್ಯ। ವರುಣಸ್ಯ । ಅಗ್ನೇಃ ॥ ಏತಿ । ಅಪ್ರಾಃ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಅಂತರಿಕ್ಷಮ್ । ಸೂರ್ಯಃ । ಆತ್ಮಾ । ಜಗತಃ । ತಸ್ಥುಷಃ । ಚ ॥



---

| ಮಂತ್ರ | ವಿನಿಯೋಗ |
|---|---|
| ಚಿತ್ರಂ.......ಚ ॥ | [illegible]ದಲ್ಲಿ ಹೋಮ ಮಾಡಲು [ಎರಡನೆಯ ಮಂತ್ರ] |

---

✣ **ಚಿತ್ರಮ್** = ಹಲವು ಬಣ್ಣಗಳುಳ್ಳ; **ಮಿತ್ರಸ್ಯ, ವರುಣಸ್ಯ, ಅಗ್ನೇಃ** = ಮಿತ್ರ, ವರುಣ ಮತ್ತು ಅಗ್ನಿ - ಈ ದೇವತೆಗಳ/ಮಿತ್ರಾದಿಗಳಾದ ಸಕಲ ಪ್ರಾಣಿಗಳಿಗೆ/ತನ್ನ ಉಪಾಸನೆಯಿಂದ ಮಿತ್ರನ ಸ್ಥಾನಕ್ಕೇ ಒಯ್ಯುವ; **ಚಕ್ಷುಃ** = ಕಣ್ಣಿನಂತಿರುವ; **ದೇವಾನಾಮ್** = ಕಿರಣಗಳ; **ಅನೀಕಮ್** = ಸೈನ್ಯಸದೃಶವಾದ ;[ಸೂರ್ಯಮಂಡಲವು] **ಉದಗಾತ್** = ಹುಟ್ಟುತ್ತದೆ; **ಜಗತಃ** = ಸಂಚರಿಸುವ [ಚರರೂಪವಾದ] **ಚ** = ಮತ್ತು **ತಸ್ಥುಷಃ** = ಸ್ಥಾವರರೂಪವಾದ [ವಿಶ್ವಕ್ಕೆ]; **ಆತ್ಮಾ** = ಆತ್ಮಸ್ವರೂಪನಾಗಿರುವ; **ಸೂರ್ಯಃ** = ಸೂರ್ಯನು; **ದ್ಯಾವಾಪೃಥಿವೀ** = ದ್ಯುಲೋಕ-ಭೂಲೋಕಗಳನ್ನೂ; **ಅಂತರಿಕ್ಷಮ್** = ಅಂತರಿಕ್ಷವನ್ನೂ; **ಆ ಅಪ್ರಾಃ** = [ಕಿರಣಗಳಿಂದ] ತುಂಬುತ್ತಾನೆ.

---

ಚಿತ್ರವಾಗಿದೆ. ಕಿರಣಗಳ ಸಮೂಹವನ್ನು ಒಳಗೊಂಡಿದೆ. ಮಿತ್ರ, ಅಗ್ನಿ, ವರುಣ ಮೊದಲಾದ ದೇವತೆಗಳ ಮತ್ತು ಸಮಸ್ತ ಜಗತ್ತಿನ ಕಣ್ಣೇ ಆಗಿದೆ. ಸೂರ್ಯನ ಉಪಾಸನೆಯಿಂದ ದೇವತಾಪದವಿಗಳನ್ನು ಪಡೆಯಬಹುದು. ಇಂತಹ ಮಂಡಲರೂಪನಾದ

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್, ವಿಶ್ವಾನಿ ದೇವ**

**ವಯುನಾನಿ ವಿದ್ವಾನ್ । ಯುಯೋಧ್ಯಸ್ಮಜ್ಜುಹುರಾಣ**

**ಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥**

---

ಅಗ್ನೇ । ನಯ । ಸುಪಥೇತಿ ಸು-ಪಥಾ । ರಾಯೇ । ಅಸ್ಮಾನ್ । ವಿಶ್ವಾನಿ । ದೇವ।

ವಯುನಾನಿ । ವಿದ್ವಾನ್ ॥ ಯುಯೋಧಿ । ಅಸ್ಮತ್ । ಜುಹುರಾಣಮ್ । ಏನಃ ।

ಭೂಯಿಷ್ಠಾಮ್ । ತೇ । ನಮಉಕ್ತಿಮಿತಿ ನಮಃ-ಉಕ್ತಿಮ್ । ವಿಧೇಮ ॥



---

| ಮಂತ್ರ | ವಿನಿಯೋಗ |
|---|---|
| ಅಗ್ನೇ..........ವಿಧೇಮ ॥ | ಅಗ್ನೀಧ್ರೀಯಾಗ್ನಿಯಲ್ಲಿ ಹೋಮ ಮಾಡಲು |

---

❖ ಅಗ್ನೇ = ಅಗ್ನಿದೇವನೇ!; ರಾಯೇ = ಧನಕ್ಕೋಸ್ಕರ [ಆಮುಷ್ಮಿಕಧನಪ್ರಾಪ್ತಿಗಾಗಿ]; ಸುಪಥಾ = ಒಳ್ಳೆಯ ಮಾರ್ಗದಿಂದ; ಅಸ್ಮಾನ್ ನಯ =ನಮ್ಮನ್ನು ಕರೆದುಕೊಂಡು ಹೋಗು; ದೇವ = ಪ್ರಕಾಶಮಾನನಾದ [ಅಗ್ನಿದೇವನೇ!] [ನೀನು] ವಿಶ್ವಾನಿ = ಎಲ್ಲ; ವಯುನಾನಿ = ಮಾರ್ಗಗಳನ್ನು/ಉಪಾಯಗಳನ್ನು; ವಿದ್ವಾನ್ = ತಿಳಿದವನಾಗಿದ್ದೀಯೆ; ಜುಹುರಾಣಮ್ = ಕುಟಿಲವಾದ; ಏನಃ = ಪಾಪವನ್ನು; ಅಸ್ಮತ್ = ನಮ್ಮಿಂದ; ಯುಯೋಧಿ=ಬೇರ್ಪಡಿಸು/ದೂರಮಾಡು; [ನಾವು] ತೇ = ನಿನಗೆ; ಭೂಯಿಷ್ಠಾಮ್ = ಅತಿ ವಿಪುಲವಾದ; ನಮಉಕ್ತಿಮ್=ನಮಸ್ಕಾರೋಕ್ತಿಗಳನ್ನು; ವಿಧೇಮ= ಮಾಡುತ್ತೇವೆ.

---

ಸೂರ್ಯನು ಉದಯಿಸುತ್ತಾನೆ. ಸ್ಥಾವರ-ಜಂಗಮಾತ್ಮಕವಾದ ಸಕಲ ವಿಶ್ವಕ್ಕೆ ಆತ್ಮಸ್ವರೂಪನಾದ ಸೂರ್ಯನು ಹುಟ್ಟಿದೊಡನೆಯೇ ದ್ಯುಲೋಕ-ಭೂಲೋಕ-ಅಂತರಿಕ್ಷಲೋಕಗಳನ್ನು ತನ್ನ ಕಿರಣಗಳಿಂದ ತುಂಬಿಬಿಡುತ್ತಾನೆ. ಇಂತಹ ಸೂರ್ಯನು ಹೋಮದಿಂದ ಸುಪ್ರೀತನಾಗಿ ನಮ್ಮ ಇಷ್ಟಾರ್ಥಗಳನ್ನು ಕರುಣಿಸಲಿ.

**ಎಲೈ! ಅಗ್ನಿದೇವನೇ! ನೀನು ನಮ್ಮನ್ನು ಪಾರಲೌಕಿಕಧನಕ್ಕಾಗಿ [ಹಣಕ್ಕಾಗಿ] ಒಳ್ಳೆಯ ಮಾರ್ಗದಿಂದ ಕರೆದುಕೊಂಡು ಹೋಗು. ನೀನು ಎಲ್ಲ ಮಾರ್ಗೋಪಾಯ**

ದಿವಂ ಗಚ್ಛ ಸುವಃ ಪತ ರೂಪೇಣ [ರೂಪೇಣ (೧) ವೋ ರೂಪ]ವೋ ರೂಪಮಭ್ಯೇಮಿ ವಯಸಾ ವಯಃ । ತುಥೋ ವೋ ವಿಶ್ವವೇದಾ ವಿ ಭಜತು ವರ್‌ಷಿಷ್ಠೇ ಅಧಿ ನಾಕೇ ।

---

ದಿವಮ್ । ಗಚ್ಛ । ಸುವಃ । ಪತ । ರೂಪೇಣ । ವಃ । ರೂಪಮ್ । ಅಭಿ । ಏತಿ। ಏಮಿ । ವಯಸಾ । ವಯಃ ॥ ತುಥಃ । ವಃ । ವಿಶ್ವವೇದಾ ಇತಿ ವಿಶ್ವ-ವೇದಾಃ। ವೀತಿ। ಭಜತು । ವರ್‌ಷಿಷ್ಠೇ । ಅಧೀತಿ । ನಾಕೇ ॥



---

| ಮಂತ್ರ | ವಿನಿಯೋಗ |
|---|---|
| ದಿವಂ............ಪತ । | ಹಿರಣ್ಯವನ್ನು ಹೋಮಮಾಡಿ ಮೇಲೆತ್ತಿಕೊಳ್ಳಲು |
| ರೂಪೇಣ........ವಯಃ ॥ | ದಕ್ಷಿಣೆಗಳನ್ನು ಎತ್ತಿಕೊಳ್ಳಲು |
| ತುಥೋ..........ನಾಕೇ ॥ | ದಕ್ಷಿಣೆಗಳನ್ನು ವಿಭಾಗಿಸಲು |

---

⁘ ಎಲೈ! [ಹಿರಣ್ಯವೇ! ನೀನು] ದಿವಮ್ = ಆಕಾಶವನ್ನು ಕುರಿತು; ಗಚ್ಛ = ಹೋಗು; ಸುವಃ = ಸ್ವರ್ಗವನ್ನು; ಪತ = ಹೊಂದು; ⁘ [ಎಲೈ ದಕ್ಷಿಣಾದ್ರವ್ಯಗಳೇ!] ವಯಸಾ ರೂಪೇಣ = ಮನೋಹರವಾದ ಅಗ್ನಿಯಿಂದ ಹೊರತೆಗೆದಿರುವ ಚಿನ್ನದ ರೂಪದಿಂದ; ವಃ = [ವೇದಿಯ ದಕ್ಷಿಣಭಾಗದಲ್ಲಿರುವ] ನಿಮ್ಮ; ವಯಃ ರೂಪಮ್ = ಮನೋಹರ ವಾದ ರೂಪವನ್ನು; ಅಭಿ ಆ ಏಮಿ = ಎದುರಾಗಿ ಬಂದು ಹೊಂದುತ್ತೇನೆ; ⁘ [ಎಲೈ! ದಕ್ಷಿಣೆಗಳೇ!] ವರ್‌ಷಿಷ್ಠೇ ನಾಕೇ ಅಧಿ [ರೂಢಃ] = ಅತ್ಯಂತ ವೃದ್ಧಿಹೊಂದಿದ ಸುಖೈಕ ರೂಪವಾದ ಸ್ವರ್ಗದಲ್ಲಿರುವ; ವಿಶ್ವವೇದಾಃ=ಎಲ್ಲವನ್ನೂ ತಿಳಿದಿರುವ; ತುಥಃ = ತುಥ ಸಂಜ್ಞಕನಾದ ಅಗ್ನಿಯು; ವಃ=ನಿಮ್ಮನ್ನು; ವಿಭಜತು=[ಋತ್ವಿಜರಿಗೆ] ವಿಭಾಗಮಾಡಲಿ.

---

ಗಳನ್ನೂ ತಿಳಿದಿರುತ್ತೀಯೆ. ಕುಟಿಲಸ್ವಭಾವದ ಪಾಪವನ್ನು ನಮ್ಮಿಂದ ಬೇರ್ಪಡಿಸಿ ದೂರ ಮಾಡು. ನಾವು ನಿನಗೆ ಹಲವು ನಮಸ್ಕಾರದ ಮಾತುಗಳನ್ನು ಸಮರ್ಪಿಸುತ್ತೇವೆ. ನಾವು ನಿನ್ನನ್ನು ಹಲವು ನಮಸ್ಕಾರೋಕ್ತಿಗಳಿಂದ ಸ್ತುತಿಸುತ್ತೇವೆ.

**ಏತತ್ತೇ ಅಗ್ನೇ ರಾಧ ಐತಿ ಸೋಮಚ್ಯುತಂ ತನ್ಮಿತ್ರಸ್ಯ ಪಥಾ ನಯರ್ತಸ್ಯ ಪಥಾ ಪ್ರೇತ ಚಂದ್ರದಕ್ಷಿಣಾ ಯಜ್ಞಸ್ಯ ಪಥಾ ಸುವಿತಾ ನಯಂತೀರ್ಬ್ರಾಹ್ಮಣಮದ್ಯ**

---

**ಏತತ್** । ತೇ । ಅಗ್ನೇ । ರಾಧಃ । ಐತಿ । ಐತಿ । ಸೋಮಚ್ಯುತಮಿತಿ ಸೋಮ-ಚ್ಯುತಮ್। ತತ್। ಮಿತ್ರಸ್ಯ। ಪಥಾ। ನಯ। ಋತಸ್ಯ। ಪಥಾ। ಪ್ರೇತಿ। ಇತ। ಚಂದ್ರದಕ್ಷಿಣಾ ಇತಿ ಚಂದ್ರ-ದಕ್ಷಿಣಾಃ। ಯಜ್ಞಸ್ಯ। ಪಥಾ । ಸುವಿತಾ । ನಯಂತೀಃ । ಬ್ರಾಹ್ಮಣಮ್। ಅದ್ಯ।

---



| ಮಂತ್ರ | ವಿನಿಯೋಗ |
|---|---|
| ಏತತ್ತೇ.......ನಯಂತೀಃ । | ದಕ್ಷಿಣೆಗಳನ್ನು ಉತ್ತರಕ್ಕೆ ಒಯ್ಯಲು |
| ಬ್ರಾಹ್ಮಣಮದ್ಯ....ದಕ್ಷಿಣಾಮ್ । | ಆತ್ರೇಯನಿಗೆ ಪ್ರಥಮದಕ್ಷಿಣೆಯನ್ನು ಕೊಡಲು. |

---

✢ **ಅಗ್ನೇ**=ಎಲೈ ಅಗ್ನಿಯೇ! **ಏತತ್** = ಈ ದಕ್ಷಿಣಾದ್ರವ್ಯಗಳು; **ತೇ** = ನಿನ್ನ; **ರಾಧಃ** = ಸಮೃದ್ಧಿಕಾರಣಗಳಾಗಿವೆ; [ಧನವಾಗಿದೆ] **ಸೋಮಚ್ಯುತಮ್** = ಸೋಮಯಾಗದಲ್ಲಿ ಪ್ರಾಪ್ತವಾದ[ಈ ದಕ್ಷಿಣಾದ್ರವ್ಯವು] **ಆ ಏತಿ**=ಬರುತ್ತದೆ; **ತತ್**=ಆ ದ್ರವ್ಯವನ್ನು; **ಮಿತ್ರಸ್ಯ** = ಶಾಂತನಾದ [ನಿನ್ನ]; **ಪಥಾ**=ಮಾರ್ಗದಿಂದ; [ಮಿತ್ರಸ್ಯ ಪಥಾ = ಸೂರ್ಯನ ಮಾರ್ಗದಿಂದ] **ನಯ** = ತೆಗೆದುಕೊಂಡು ಹೋಗು; **ಚಂದ್ರದಕ್ಷಿಣಾಃ** = ಸ್ವರ್ಣಪ್ರಧಾನವಾದ ದಕ್ಷಿಣೆಗಳೇ!; **ಸುವಿತಾ** = ಶುಭವಾದ ಗಮನವುಳ್ಳ; **ಯಜ್ಞಸ್ಯ ಪಥಾ** = ಸದಸ್ಸು-ಗಾರ್ಹಪತ್ಯಾಗ್ನಿಗಳ ಮಧ್ಯವರ್ತಿಯಾದ ಮಾರ್ಗದಿಂದ[ಯಜ್ಞವಿಹಿತವಾದ ಹೋಮಾದಿಮಾರ್ಗದಿಂದ] **ನಯಂತೀಃ** = [ದಕ್ಷಿಣಪ್ರದೇಶದಿಂದ ಉತ್ತರಪ್ರದೇಶಕ್ಕೆ] ಒಯ್ಯಲ್ಪಡುವವರಾಗಿ;

---

ಎಲೈ! ಹಿರಣ್ಯವೇ! ನೀನು ಆಕಾಶವನ್ನು ಕುರಿತು ಹೋಗು. ಸ್ವರ್ಗವನ್ನು ಹೊಂದು.

ವೇದಿಯ ದಕ್ಷಿಣಭಾಗದಲ್ಲಿ ದಕ್ಷಿಣಾರ್ಥವಾಗಿ ಇಟ್ಟಿರುವ ವಸ್ತುಗಳೇ! ಈಗ ಹೋಮಮಾಡಿ ತೆಗೆದಿರುವ ಚಿನ್ನದ ಮನೋಹರವಾದ ರೂಪದಿಂದ ನಿಮ್ಮ ಮನೋಹರವಾದ ರೂಪವನ್ನು ಹೊಂದುತ್ತೇನೆ.

## ರಾಧ್ಯಾಸಮೃಷಿಮಾರ್‌ಷೇಯಂ ಪಿತೃಮಂತಂ ಪೈತೃಮತ್ಯಗ್ಂ

## ಸುಧಾತುದಕ್ಷಿಣಂ

---

ರಾಧ್ಯಾಸಮ್ । ಋಷಿಮ್ । ಆರ್‌ಷೇಯಮ್ । ಪಿತೃಮಂತಮಿತಿ ಪಿತೃ-ಮಂತಮ್।

ಪೈತೃಮತ್ಯಮಿತಿ ಪೈತೃ-ಮತ್ಯಮ್ । ಸುಧಾತುದಕ್ಷಿಣಮಿತಿ ಸುಧಾತು-ದಕ್ಷಿಣಮ್ ।

---

ಋತಸ್ಯ = ಸತ್ಯದ; ಪಥಾ = ಮಾರ್ಗದಿಂ[illegible] = ಪ್ರಯಾಣಮಾಡಿರಿ./ಸತ್ಯವಾದ ರೀತಿಯಂತೆ ವಿಭಾಗ ಹೊಂದಿದವ[illegible] ಅದ್ಯ = ಈ ಯಜ್ಞದಿನದಲ್ಲಿ; ಋಷಿಮ್ =ವೇದಾರ್ಥವನ್ನು ತಿ[illegible] ಆರ್‌ಷೇಯಮ್ = ವೇದಾರ್ಥವೇತ್ತನ ಮಗನಾಗಿರುವ; ಪಿತೃಮಂತಮ್ = [illegible]ಯಿಂದ [illegible]ಯ ರೀತಿ ಶಿಕ್ಷಣ ಪಡೆದಿರುವ; ಪೈತೃಮತ್ಯಮ್ = ತಂದೆ[illegible] ಸುಶಿಕ್ಷಿತಳಾದ ಪತಿವ್ರತೆಯ ಮಗನಾದ; [ಮಗನ ವಿಷಯದಲ್ಲಿ ಜಾಗರೂ[illegible]ರುವ ತಂದೆಯ [illegible]ದ] ಸುಧಾತುದಕ್ಷಿಣಮ್ =ಸ್ವರ್ಣದಕ್ಷಿಣೆಯನ್ನು [illegible] ಣಮ್ = [ಅತ್ರಿ ಗೋತ್ರೋತ್ಪನ್ನನಾದ] ಬ್ರಾ[illegible] [ಈ [illegible]ದಕ್ಷಿಣೆಯಿಂದ] ರಾಧ್ಯಾಸಮ್ = ಸಂತೋಷಪಡಿಸುತ್ತೇನೆ.

---

ಎಲೈ! ದಕ್ಷಿಣೆಗಳೇ! ಅತಿಶ್ರೇಷ್ಠವಾದ ಸುಖಸ್ವರೂಪವಾದ ಸ್ವರ್ಗದಲ್ಲಿರುವ, ಸರ್ವಜ್ಞನಾದ, ದೇವತೆಗಳ ದಕ್ಷಿಣೆಗಳನ್ನು ಹಂಚಿಕೊಡುವ ತುಥನೆಂಬ ಅಗ್ನಿದೇವನು ದಕ್ಷಿಣಾರ್ಥವಾಗಿರುವ ನಿಮ್ಮನ್ನು ವಿಭಾಗಿಸಲಿ. [ನಾಲ್ಕು ಭಾಗ ಮಾಡಿ ಒಂದೊಂದು ಭಾಗವನ್ನು ಅಧ್ವರ್ಯು, ಬ್ರಹ್ಮ, ಹೋತೃ ಮತ್ತು ಉದ್ಗಾತೃ ಈ ಗಣಗಳಿಗೆ ಹಂಚಿಕೊಡಬೇಕು.]

ಅಗ್ನಿಯೇ! [ಧಿಷ್ಣಿಯಾಗ್ನಿಗಳಿಂದ ಕೂಡಿದ ಸದಸ್ಸೇ ಅಗ್ನಿ. [ಭ.ಭಾ.] ಸೋಮ ಯಾಗದಲ್ಲಿ ಪ್ರಾಪ್ತವಾದ [ಸೋಮದೇವನಿಂದ ಕೊಡಲ್ಪಟ್ಟಿರುವ] ನಿನ್ನ ಸಮೃದ್ಧಿಕಾರಣ ವಾದ ಸುವರ್ಣವೇ ಪ್ರಧಾನವಾದ ದಕ್ಷಿಣೆಯು ಬರುತ್ತಿದೆ. ಅದನ್ನು ಶಾಂತವಾದ ನಿನ್ನ

## ವಿ ಸುವಃ ಪಶ್ಯ ವ್ಯಂತರಿಕ್ಷಂ ಯತಸ್ವ ಸದಸ್ಯೈರಸ್ಮದ್ದಾತ್ರಾ ದೇವತ್ರಾ ಗಚ್ಛತ ಮಧುಮತೀಃ ಪ್ರದಾತಾರಮಾ

---

ವೀತಿ । ಸುವಃ । ಪಶ್ಯ । ವೀತಿ । ಅಂತರಿಕ್ಷಮ್ । ಯತಸ್ವ । ಸದಸ್ಯೈಃ । ಅಸ್ಮದ್ದಾತ್ರಾ ಇತ್ಯಸ್ಮತ್-ದಾತ್ರಾಃ। ದೇವತ್ರೇತಿ ದೇವ-ತ್ರಾ। ಗಚ್ಛತ। ಮಧುಮತೀರಿತಿ ಮಧು-ಮತೀಃ ಪ್ರದಾತಾರಮಿತಿ ಪ್ರ-ದಾತಾರಮ್ । ಏತಿ ।

---



ಮಂತ್ರ — ವಿನಿಯೋಗ

ವಿ ಸುವಃ.........ಸದಸ್ಯೈಃ । — ಸದಸ್ಸಿನ ಅನುವೀಕ್ಷಣ ಮಾಡಲು –ಆಪಸ್ತಂಬ.

೧) ವಿ ಸುವಃ....ಅಂತರಿಕ್ಷಮ್ । ಆದಿತ್ಯೇಕ್ಷಣ ಮಾಡಲು

೨) ಯತಸ್ವ ಸದಸ್ಯೈಃ । — ಸಭೆಯಲ್ಲಿ ಉಪವೇಶನ ಮಾಡಲು – ಬೌಧಾಯನ.

ಅಸ್ಮದ್ದಾತ್ರಾ.....ಸಗ್ಂಸ್ಪೃತವಃ । — ದಕ್ಷಿಣೆಗಳ ಅನುಮಂತ್ರಣಕ್ಕಾಗಿ

---

✣ [ಎಲೈ ಯಜಮಾನನೇ!] **ಸುವಃ** = ಸ್ವರ್ಗವನ್ನು [ಆದಿತ್ಯನನ್ನು] **ವಿ ಪಶ್ಯ** = ಚೆನ್ನಾಗಿ ನೋಡು; **ಅಂತರಿಕ್ಷಮ್**=ಆಕಾಶವನ್ನೂ; ವಿ ಪಶ್ಯ = ಚೆನ್ನಾಗಿ ನೋಡು; **ಸದಸ್ಯೈಃ** = ಸದಸ್ಸಿನಲ್ಲಿರುವ ಬ್ರಾಹ್ಮಣರೊಡನೆ; **ಯತಸ್ವ**=ಅನುಷ್ಠಾನ ಮಾಡು; ✣ [ಎಲೈ ದಕ್ಷಿಣೆಗಳೇ!] [ನೀವು] **ಅಸ್ಮದ್ದಾತ್ರಾಃ**=ನಮ್ಮಿಂದ ಕೊಡಲ್ಪಟ್ಟವರಾಗಿ; **ದೇವತ್ರಾ**=ದೇವಸ್ವರೂಪರಾದ [ಋತ್ವಿಜರನ್ನು]; **ಗಚ್ಛತ**=ಸೇರಿರಿ; [ಎಲೈ! ಗೋವುಗಳೇ!] **ಮಧುಮತೀಃ**= ಮಧುರವಾದ ಕ್ಷೀರವುಳ್ಳವರಾಗಿ; **ಪ್ರದಾತಾರಮ್**=ದಾನಕೊಟ್ಟಿರುವ ಯಜಮಾನನನ್ನು;

---

ಮಾರ್ಗದಿಂದ ತೆಗೆದುಕೊಂಡು ಹೋಗು. [ಸೂರ್ಯನ ಮಾರ್ಗದಿಂದ ತೆಗೆದುಕೊಂಡು ಹೋಗು]. ಮಂಗಳಕರಮಾರ್ಗವಾದ ಯಜ್ಞದ ಮಾರ್ಗದಿಂದ ಒಯ್ಯಲ್ಪಡುತ್ತಿರುವ ಸುವರ್ಣಪ್ರಧಾನವಾದ ದಕ್ಷಿಣೆಗಳೇ! ಸತ್ಯದ ಮಾರ್ಗದಿಂದ ವಿಭಾಗಿಸಲ್ಪಟ್ಟವರಾಗಿ

ವಿಶತಾನವಹಾಯಾಸ್ಮಾನ್ದೇವಯಾನೇನ ಪಥೇತ ಸುಕೃತಾಂ

ಲೋಕೇ ಸೀದತ ತನ್ನಸ್ಸಗ್ಂಸ್ಕೃತಮ್ ॥ ೪೩-45 ॥

[ರೂಪೇಣ ಸದಸ್ಯೈರಷ್ಟಾದಶ ಚ ॥]

---

ವಿಶತ । ಅನವಹಾಯೇತ್ಯನವ - ಹಾಯ । ಅಸ್ಮಾನ್ । ದೇವಯಾನೇನೇತಿ ದೇವ - ಯಾನೇನ । ಪಥಾ । ಇತ । ಸುಕೃತಾಮಿತಿ ಸು - ಕೃತಾಮ್ । ಲೋಕೇ । ಸೀದತ । ತತ್ । ನಃ । ಸಗ್ಂಸ್ಕೃತಮ್ ॥ ೪೩ ॥

---

ಆ ವಿಶತ = [ರೂಪಾಂತರದಿಂದ] ಹೊಂದಿರಿ; ಅಸ್ಮಾನ್ = ನಮ್ಮನ್ನು; ಅನವಹಾಯ =ಬಿಡದೆ; ದೇವಯಾನೇನ ಪಥಾ = ದೇವತೆಗಳು ಸಂಚರಿಸುವ ಪುಣ್ಯವಂತರ ಮಾರ್ಗದಿಂದ; ಇತ = ಹೋಗಿರಿ; ಸುಕೃತಾಮ್ = ಪುಣ್ಯವಂತರ; ಲೋಕೇ = ಲೋಕದಲ್ಲಿ/ ಸ್ಥಾನದಲ್ಲಿ; ಸೀದತ=[illegible] ಕುಳಿತುಕೊಳ್ಳಿರಿ; ತತ್=ಆ ಸ್ಥಾನವು; ನಃ = ನಮಗೆ; ಸಗ್ಂಸ್ಕೃತಮ್=ನಮ್ಮ [illegible]ದಿಂದ ನಿರ್ಮಿತವಾದ ಸ್ಥಾನವಾಗಿದೆ.

---

ಗಾರ್ಹಪತ್ಯ-ಸದಸ್ಸು ಇವುಗಳ ಮಧ್ಯಮಾರ್ಗದಿಂದ/ಯಜ್ಞವಿಹಿತವಾದ ಹೋಮಾದಿ ಮಾರ್ಗದಿಂದ ದಕ್ಷಿಣಪ್ರದೇಶದಿಂದ ಉತ್ತರಪ್ರದೇಶಕ್ಕೆ ಪ್ರಯಾಣ ಮಾಡಿರಿ.

ನಾನು ಈ ಯಜ್ಞದಿನದಲ್ಲಿ ವೇದಾರ್ಥವನ್ನು ತಿಳಿದವನೂ, ವೇದಾರ್ಥವಿದನ ಮಗನೂ, ತಂದೆಯಿಂದ ಸುಶಿಕ್ಷಿತನೂ, ತಂದೆಯಿಂದ ಸುಶಿಕ್ಷಿತಳಾದ ಸಾಧ್ವಿಯ ಮಗನೂ, [ಮಗನ ವಿಷಯದಲ್ಲಿ ಜಾಗರೂಕನಾಗಿರುವಂತಹ ತಂದೆಯ ಮಗನೂ] ಹಿರಣ್ಯದಕ್ಷಿಣೆಯನ್ನು ಪಡೆಯಲು ಯೋಗ್ಯನೂ ಆಗಿರುವ ಅತ್ರಿಗೋತ್ರೋದ್ಭವನಾದ ಬ್ರಾಹ್ಮಣನನ್ನು ಮೊದಲು ಕೊಡುವ ಸುವರ್ಣದಕ್ಷಿಣೆಯಿಂದ ಸಂತೋಷಪಡಿಸುತ್ತೇನೆ.

ಎಲೈ! ಯಜಮಾನನೇ! ಸ್ವರ್ಗವನ್ನು/ಆದಿತ್ಯನನ್ನು ಚೆನ್ನಾಗಿ ನೋಡು. ಆಕಾಶವನ್ನೂ ಚೆನ್ನಾಗಿ ನೋಡು. ಸದಸ್ಸಿನಲ್ಲಿರುವ ಬ್ರಾಹ್ಮಣರೊಡನೆ ಅನುಷ್ಠಾನ ಮಾಡು.

ಎಲೈ! ಯಜ್ಞದಕ್ಷಿಣೆಗಳೇ! ನೀವು ನಮ್ಮಿಂದ ಕೊಡಲ್ಪಟ್ಟವರಾಗಿ ದೇವಸ್ವರೂಪ

ರಾದ ಋತ್ವಿಜರನ್ನು ಹೊಂದಿರಿ. ಎಲೈ! ದಕ್ಷಿಣಾರೂಪದ ಗೋವುಗಳೇ! ರುಚಿಕರವಾದ ಹಾಲುಳ್ಳವರಾಗಿ ನೀವು ಯಜಮಾನನನ್ನು ರೂಪಾಂತರದಿಂದ [ಪುಣ್ಯರೂಪದಿಂದ] ಹೊಂದಿರಿ. ನಮ್ಮನ್ನು ಬಿಟ್ಟುಬಿಡದೆ ಪುಣ್ಯವಂತರು ಸಂಚರಿಸುವ ದೇವಮಾರ್ಗದಿಂದ ಸ್ವರ್ಗವನ್ನು ಸೇರಿರಿ. ಪುಣ್ಯವಂತರ ಸ್ಥಾನವಾದ ಸ್ವರ್ಗದಲ್ಲಿ ನಮ್ಮೊಡನೆ ಇರಿ. ಆ ಸ್ವರ್ಗವು ನಮ್ಮ ಪುಣ್ಯಫಲಭೋಗಕ್ಕಾಗಿ ಈಶ್ವರನಿಂದ ಸೃಷ್ಟಿಸಲ್ಪಟ್ಟ ಸ್ಥಾನವಾಗಿದೆ. ಯಜ್ಞದಲ್ಲಿ ಉಪಯುಕ್ತವಾದ ಪ್ರತಿಯೊಂದು ಪ್ರಾಣಿಯೂ ಸ್ವರ್ಗವನ್ನು ಸೇರುತ್ತದೆ.

## ವಿನಿಯೋಗ ಸಂಗ್ರಹ

ಉದು[1-3] ತ್ರಿಭಿರ್ದಕ್ಷಿಣಾನಾಂ ಹೋಮೋ [4]ದಿವಮತೋ ಘೃತಾತ್ ।
ಹಿರಣ್ಯಮುದ್ಗೃಹ್ಯ ರೂಪೇ[5] ದಕ್ಷಿಣಾ ಅಭಿಗಚ್ಛತಿ ॥
[6]ತುಥೋ ವೋ ವಿಶ್ವವೇದೇತಿ ಭಿಂದ್ಯಾಚ್ಛರ್ಮಣಿ ದಕ್ಷಿಣಾಃ ।
[7]ಏತತ್ತಾ ನಿನಯೇತ್ ಬ್ರಾಹ್ಮ[8] ಹೇಮಾಽಽತ್ರೇಯಾಯ ಯಚ್ಛತಿ ॥
[9]ವಿ ಸುವಃ ಸದ ಆಲೋಕ್ಯ [10]ಹಸ್ತದ್ವಾತ್ರ್ಯನುಮಂತ್ರಣಮ್ ।
ಸಪ್ತತ್ರಿಂಶೇಽನುವಾಕೇಽಸ್ಮಿನ್ ದಶ ಮಂತ್ರಾ ಉದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ - 10
ಬೋಧಾಯನ - 11



## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) ದಕ್ಷಿಣಾದಾನವು ದೃಷ್ಟಾರ್ಥವೇ? ಅದೃಷ್ಟಾರ್ಥವೇ? [ಜೈ.ಸೂ. 10-2-9/10]**

**'ಋತ್ವಿಗ್ಭ್ಯೋ ದಕ್ಷಿಣಾಂ ದದಾತಿ'** ಎಂಬ ವಾಕ್ಯವಿದೆ. ಇದರಿಂದ ವಿಹಿತವಾದ ದಕ್ಷಿಣಾದಾನವು ಅದೃಷ್ಟಾರ್ಥವೇ? ಅಲ್ಲವೇ? ಇದು ಇಲ್ಲಿನ ಸಂಶಯ.

ಲೋಕದಲ್ಲಿ ಅದೃಷ್ಟಾರ್ಥವಾಗಿ ನಮ್ಮ ವಸ್ತುವನ್ನು ಬೇರೊಬ್ಬರಿಗೆ ನೀಡುವುದೇ ದಾನವೆಂದು ಪ್ರಸಿದ್ಧವಾಗಿದೆ. ಕೆಲಸ ಮಾಡುವ ಕೆಲಸಗಾರರಿಗೆ ಕೊಡುವ ವೇತನವು ದಾನವಲ್ಲ; ಅವರನ್ನು ಕೆಲಸ ಮಾಡಲು ಪ್ರೋತ್ಸಾಹಿಸುವ ಸಾಧನ. ಕೆಲಸಕ್ಕೆ ತಕ್ಕಂತೆ ಅಥವಾ ಯಾಗಕ್ಕೆ ತಕ್ಕಂತೆ ದಕ್ಷಿಣೆಯಿಲ್ಲ. ಅಲ್ಪಯಜ್ಞಕ್ಕೆ ಮಹಾದಕ್ಷಿಣೆಯೂ,

ಮಹಾಯಜ್ಞಕ್ಕೆ ಅಲ್ಪದಕ್ಷಿಣೆಯೂ ಕೆಲವು ಕಡೆಗಳಲ್ಲಿ ಕಂಡುಬರುತ್ತದೆ. ಆದುದರಿಂದ ದಕ್ಷಿಣೆಯು ಅದೃಷ್ಟಾರ್ಥವೇ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ದೃಷ್ಟಾರ್ಥತ್ವವು ಇರುವಾಗ ಅದೃಷ್ಟಾರ್ಥತ್ವ ಕಲ್ಪನೆಯೂ ಸರಿಯಲ್ಲ. 'ಭೃತಿರ್ದೇಯಾ' ಎಂದು ದಾನಶಬ್ದವು ಸಂಬಳವನ್ನು ಕೊಡುವುದರಲ್ಲಿಯೂ ಪ್ರಯೋಗದಲ್ಲಿದೆ. ಕೊಡುವ ವಸ್ತುವಿನ ಪರಿಮಾಣ, ಮಂತ್ರ ಮೊದಲಾದವು ಅದೃಷ್ಟಾರ್ಥವಾಗಬಹುದು. ದಕ್ಷಿಣಾವೈಷಮ್ಯವು ಶ್ರುತಿವಚನವಿರುವುದರಿಂದ ಅಂಗೀಕರಿಸಲ್ಪಡುತ್ತದೆ. 'ದೀಕ್ಷಿತಮದೀಕ್ಷಿತಾ ದಕ್ಷಿಣಾಪರಿಕ್ರೀತಾ ಋತ್ವಿಜೋ ಯಾಜಯೇಯುಃ' [ಕಾಠಕ ಸಂಹಿತಾ 34-9] ಎಂಬ ವಚನವೂ ದಕ್ಷಿಣೆಯೂ ಕೆಲಸಕ್ಕೆ ಪ್ರತಿಫಲವೆಂದು ತಿಳಿಸುತ್ತದೆ. ಆದುದರಿಂದ ದಕ್ಷಿಣೆಯು ಋತ್ವಿಜರನ್ನು ತೃಪ್ತಿಪಡಿಸುವುದರಿಂದ ದೃಷ್ಟಾರ್ಥವೇ ಆಗಿದೆ. ಸತ್ರಯಾಗದಲ್ಲಿ ಯಜಮಾನರೇ ಋತ್ವಿಜರು. ಅಲ್ಲಿ ದಕ್ಷಿಣೆಯಿಲ್ಲ. ಉಳಿದೆಡೆ ದಕ್ಷಿಣಾದಾನವು ದೃಷ್ಟಾರ್ಥವೇ ಆಗಿದೆ. ಇದು ಇಲ್ಲಿನ ಸಿದ್ಧಾಂತ.



೨) 'ದ್ವಾದಶಶತಂ' ಎಂಬ ಸಂಖ್ಯೆಯು ಯಾವುದಕ್ಕೆ ಸಂಬಂಧಿಸಿದ್ದು?

[ಜೈ.ಸೂ. 10-3-15/20]

ಜ್ಯೋತಿಷ್ಟೋಮದಲ್ಲಿ 'ಗಶ್ಚಾಶ್ವಶ್ಚಾಶ್ವತರಶ್ಚ ಗರ್ದಭಶ್ಚಾಜಾಶ್ಚಾವಯಶ್ಚ ವ್ರೀಹಯಶ್ಚ ಯವಾಶ್ಚ ತಿಲಾಶ್ಚ ಮಾಷಾಶ್ಚ ತಸ್ಯ ದ್ವಾದಶಶತಂ ದಕ್ಷಿಣಾ' [ಪಂಚವಿಂಶಬ್ರಾಹ್ಮಣ 10-1-10-11] ಎಂಬ ವಚನವಿದೆ. ಇಲ್ಲಿ 'ದ್ವಾದಶಶತ' [ನೂರಹನ್ನೆರಡು] ಸಂಖ್ಯೆಯು ಗೋವು, ಕುದುರೆ, ಹೇಸರಗತ್ತೆ, ಕತ್ತೆ, ಆಡು, ಕುರಿ, ಭತ್ತ, ಜವೆಗೋಧಿ, ಎಳ್ಳು ಮತ್ತು ಉದ್ದು ಇವುಗಳಲ್ಲಿ ಯಾವುದಕ್ಕೆ ಸಂಬಂಧಿಸುತ್ತದೆ? ಯಾವುದಕ್ಕೆ ಇಲ್ಲ? ಎಂಬುದು ಇಲ್ಲಿನ ಸಂಶಯ.

ಇಲ್ಲಿ ಮೂರು ಪೂರ್ವಪಕ್ಷಗಳಿವೆ.

**ಪೂರ್ವಪಕ್ಷ – ೧**

ಇವು ಒಂದೊಂದೂ ನೂರಹನ್ನೆರಡು. ಏಕೆಂದರೆ ಸಂಖ್ಯೆಯು ಗುಣ. ದ್ರವ್ಯವು ಪ್ರಧಾನ. ಪ್ರಧಾನಕ್ಕೆ ಅನುಗುಣವಾಗಿ ಗುಣದ ಆವೃತ್ತಿಯು ನ್ಯಾಯ್ಯವಾದುದು.

**ಪೂರ್ವಪಕ್ಷ – ೨**

ಮೇಲೆ ಹೇಳಿದ ಎಲ್ಲ ದ್ರವ್ಯಗಳೂ ಸೇರಿ ನೂರಹನ್ನೆರಡು. ಈ ರೀತಿ ಸಮೂಹದಲ್ಲಿ ಅನ್ವಯ ಮಾಡುವುದರಿಂದಲೇ ಸಮುಚ್ಚಯಸೂಚಕವಾದ 'ಚ' ಎಂಬ ಪದವೂ ಸಾರ್ಥಕವೆನಿಸುತ್ತದೆ.

**ಪೂರ್ವಪಕ್ಷ – ೩**

ವ್ರೀಹಿ ಮುಂತಾದ ಧಾನ್ಯಗಳಲ್ಲಿ ಎಂಟು ಹತ್ತು ವ್ರೀಹಿಧಾನ್ಯಗಳಿಂದ ಋತ್ವಿಜರಿಗೆ ಯಾವ ಪ್ರಯೋಜನವೂ ಇಲ್ಲ. ಆದುದರಿಂದ '**ದ್ವಾದಶಶತಂ**' ಎಂಬ ಸಂಖ್ಯೆಯು ಗೋವು ಮುಂತಾಗಿ ನಿರ್ದೇಶಿಸಿರುವ ಪಶುಗಳಲ್ಲಿ ಅನ್ವಯಿಸುತ್ತದೆ.

**ಸಿದ್ಧಾಂತ :** ಒಂದೊಂದೂ ನೂರಹನ್ನೆರಡು ಎಂಬ ಪಕ್ಷವು ಸರಿಯಲ್ಲ. ಹೀಗೆ ಅನ್ವಯವನ್ನು ಮಾಡಿದರೆ ಅನೇಕ ವಾಕ್ಯಗಳು ಆಗಬೇಕಾಗುವುದರಿಂದ ವಾಕ್ಯಭೇದವುಂಟಾಗುವುದು. ವಾಕ್ಯಭೇದವು ದೋಷಗ್ರಸ್ತವಾದುದರಿಂದ ಒಂದನೆಯ ಪಕ್ಷವು ಸರಿಯಲ್ಲ.

ಎರಡನೆಯ ಪಕ್ಷದಂತೆ ಸಮೂಹದಲ್ಲಿ ಅನ್ವಯ ಮಾಡಿದರೆ ಸಂಖ್ಯಾಪೂರ್ತಿಗಾಗಿ ಭತ್ತ ಮುಂತಾದವುಗಳ ಕೆಲವಷ್ಟು ಕಾಳುಗಳ ದಕ್ಷಿಣೆಯನ್ನು ನೀಡಿದರೆ ಋತ್ವಿಜರಿಗೆ ಏನೂ ಪ್ರಯೋಜನವಾಗಲಾರದು. ಆದುದರಿಂದ ಎರಡನೆಯ ಪಕ್ಷವೂ ಸರಿಯಲ್ಲ.

ಮೂರನೆಯ ಪಕ್ಷದಂತೆ ಗೋವು ಮುಂತಾದ ಪಶುಗಳಲ್ಲಿ ಸಂಖ್ಯೆಯನ್ನು ಅನ್ವಯಿಸಬಹುದಾದರೂ ಗೋವು ಅಗ್ನಿಹೋತ್ರ ಮುಂತಾದವಕ್ಕೆ ಬಹು ಉಪಕಾರವನ್ನು ಮಾಡುವುದರಿಂದ '**ದ್ವಾದಶಶತಂ**' ಎಂಬ ಸಂಖ್ಯೆಯು ವಾಕ್ಯದಲ್ಲಿ ಮೊದಲಲ್ಲಿರುವ ಗೋದ್ರವ್ಯಕ್ಕೇ ಅನ್ವಯಿಸುವುದು. ಇದು ಇಲ್ಲಿನ **ಸಿದ್ಧಾಂತ.**

**೩) ಗೋದಕ್ಷಿಣೆಯನ್ನು ಹೇಗೆ ಕೊಡಬೇಕು?** **[ಜೈ.ಸೂ. 10-3-21/22]**

ನೂರಹನ್ನೆರಡು ಗೋವುಗಳನ್ನು ದಕ್ಷಿಣೆಯನ್ನು ನೀಡುವಾಗ ಒಂದೊಂದಾಗಿ ನೀಡಬೇಕೆ? ಅಥವಾ ಗೋಸಮೂಹವನ್ನೇ ನೀಡಬಹುದೇ? ಯಜಮಾನನ ಇಚ್ಛೆಯಂತೆ ನೀಡಬಹುದೇ? ಅಥವಾ ನಿಯಮವಿದೆಯೇ? ಇದು ಇಲ್ಲಿನ **ಸಂಶಯ.**

"**ಋತ್ವಿಗ್ಭ್ಯೋ ದದಾತಿ**" ಎಂಬಲ್ಲಿ '**ಋತ್ವಿಗ್ಭ್ಯಃ**' ಎಂದು ಬಹುವಚನವಿರುವುದ ರಿಂದ ಋತ್ವಿಜರು ದಕ್ಷಿಣೆಯನ್ನು ಪರಿಗ್ರಹಿಸುವುದರಿಂದ ಅವರ ಗುಂಪಿಗೆ ಗೋ ಸಮೂಹವನ್ನು ವಿಭಾಗ ಮಾಡದೇ ನೀಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಸಮೂಹಕ್ಕೆ ನೀಡಿದರೆ ಪ್ರತಿಯೊಬ್ಬ ಋತ್ವಿಜರಿಗೂ ಸ್ವಾಮಿತ್ವವು ಬರುವುದಿಲ್ಲ. ಯಥೇಚ್ಛವಿನಿಯೋಗಯೋಗ್ಯತ್ವವೆಂಬ ಸ್ವತ್ವವು ಉಂಟಾಗದೇ ಇರುವುದರಿಂದ ಗೋದ್ರವ್ಯವನ್ನು ವಿಭಾಗ ಮಾಡಿಯೇ ನೀಡಬೇಕು. ಇದು ಇಲ್ಲಿನ **ಸಿದ್ಧಾಂತ.**

**೪) ವಿಭಾಗವು ಹೇಗೆ?** **[ಜೈ.ಸೂ. 10-3-23]**

ದಕ್ಷಿಣೆಯನ್ನು ಹೇಗೆ ವಿಭಾಗಿಸಬೇಕು? ಸಮನಾಗಿ ವಿಭಾಗಿಸಬೇಕೇ? ಅಥವಾ ಅಲ್ಲವೇ? ಇದು **ಸಂಶಯ.**

ಲೋಕದಲ್ಲಿ ಆಸ್ತಿಯನ್ನು ವಿಭಾಗ ಮಾಡುವಾಗ ಸಮನಾಗಿಯೇ ವಿಭಾಗ ಮಾಡುತ್ತಾರೆ. ಆದುದರಿಂದ ದಕ್ಷಿಣೆಯನ್ನೂ ಸಮನಾಗಿ ಋತ್ವಿಜರಿಗೆ ವಿಭಾಗಿಸಿ ನೀಡಬೇಕು. ಇದು ಮೊದಲನೆಯ ಪೂರ್ವಪಕ್ಷ.

ಕೆಲಸದ ಶ್ರಮವನ್ನನುಸರಿಸಿ ವಿಷಮವಾಗಿ ವಿಭಾಗಿಸಿ ನೀಡಬೇಕೆನ್ನುವುದು ಎರಡನೆಯ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ : ದ್ವಾದಶಾಹದಲ್ಲಿ ದೀಕ್ಷಾಪ್ರಸಂಗದಲ್ಲಿ 'ಅರ್ಧಿನೋ ದೀಕ್ಷಯಂತಿ', 'ಪಾದಿನೋ ದೀಕ್ಷಯಂತಿ' ಎಂದು ಋತ್ವಿಜರಿಗೆ 'ಅರ್ಧೀ', 'ಪಾದೀ', 'ತೃತೀಯೀ' ಮುಂತಾದ ಸಮಾಖ್ಯೆಯಿದೆ. ಆ ಸಮಾಖ್ಯೆಗೆ ಅನುಗುಣವಾಗಿ ಅಧ್ವರ್ಯು, ಬ್ರಹ್ಮ, ಹೋತೃ ಮತ್ತು ಉದ್ಗಾತೃಗಣದ ನಾಲ್ವರು ನಾಲ್ವರು ಋತ್ವಿಜರಿಗೆ ದಕ್ಷಿಣಾವಿಭಾಗವನ್ನು ಮಾಡಬೇಕು. ಸಮನಾಗಿ ಅಲ್ಲ. ಆಯಾ ಗಣದಲ್ಲಿ ಅಧ್ವರ್ಯು, ಬ್ರಹ್ಮ, ಹೋತೃ ಮತ್ತು ಉದ್ಗಾತೃಗಳು ಪಡೆಯುವ ದಕ್ಷಿಣೆಯ ಅರ್ಧದಕ್ಷಿಣೆಯು ಯಾರಿಗೆ ಸಲ್ಲುವುದೋ ಅವರು ಅರ್ಧಿಗಳು. ಕಾಲುಭಾಗ ದಕ್ಷಿಣೆಯನ್ನು ಪಡೆಯುವವರು ಪಾದಿಗಳು. ಅದಕ್ಕೆ ತಕ್ಕಂತೆ ದಕ್ಷಿಣೆ. ಸಮವಿಭಾಗ ಇರುವುದಿಲ್ಲ.



### ಅ) ಛಂದಸ್ಸು

೧) ಉದು ತ್ಯಂ..........। ಗಾಯತ್ರೀ

೨) ಚಿತ್ರಂ.............। ತ್ರಿಷ್ಟುಪ್

೩) ಅಗ್ನೇ ನಯ..........। ತ್ರಿಷ್ಟುಪ್

೪) ದಿವಂ ಗಚ್ಛ...........। ಏಕಪದಾ ಗಾಯತ್ರೀ

೫) ರೂಪೇಣ ವಃ.........। ಪ್ರಥಮಾ ಚತುರ್ದಶಾಕ್ಷರಾ

೬) ಏತತ್ತೇ ಅಗ್ನೇ........। ಮಧ್ಯೇ ಜ್ಯೋತಿರ್ಜಗತೀ

---

## ॥ ಚತುಶ್ಚತ್ವಾರಿಂಶೋಽನುವಾಕಃ ॥

**ಧಾತಾ ರಾತಿಃ ಸವಿತೇದಂ ಜುಷಂತಾಂ ಪ್ರಜಾಪತಿರ್ನಿಧಿ**

**ಪತಿರ್ನೋ ಅಗ್ನಿಃ। ತ್ವಷ್ಟಾ ವಿಷ್ಣುಃ ಪ್ರಜಯಾ ಸಗ್ಂರರಾಣೋ**

---

ಧಾತಾ । ರಾತಿಃ । ಸವಿತಾ । ಇದಮ್ । ಜುಷಂತಾಮ್ । ಪ್ರಜಾಪತಿರಿತಿ ಪ್ರಜಾ-ಪತಿಃ। ನಿಧಿಪತಿರಿತಿ ನಿಧಿ-ಪತಿಃ । ನಃ । ಅಗ್ನಿಃ । ತ್ವಷ್ಟಾ । ವಿಷ್ಣುಃ । ಪ್ರಜಯೇತಿ ಪ್ರ-ಜಯಾ। ಸಗ್ಂರರಾಣ ಇತಿ ಸಮ್-ರರಾಣಃ।

---

ಮೂವತ್ತೇಳನೆಯ ಅನುವಾಕದಲ್ಲಿ [ತರಣಿಃ...... ಇತ್ಯಾದಿ ಆರು ಅನುವಾಕಗಳನ್ನು ಬಿಟ್ಟು] ದಕ್ಷಿಣಾವಿಷಯವು ಹೇಳಲ್ಪಟ್ಟಿತು. ಈ ಮೂವತ್ತೆಂಟನೆಯ ಅನುವಾಕದಲ್ಲಿ [44] ಸಮಿಷ್ಟಯಜುರ್ಹೋಮವು ಹೇಳಲ್ಪಟ್ಟಿದೆ. ಇವು ಒಂಬತ್ತು ಹೋಮಗಳು. ಇದಕ್ಕಾಗಿ ಆರು ಋಕ್ಕುಗಳು. ಮೂರು ಯಜುಸ್ಸುಗಳು. ಜುಹುವಿನಲ್ಲಿ ಆಜ್ಯವನ್ನು 9 ಬಾರಿ ಗ್ರಹಣ ಮಾಡಿ ಹೋಮ ಮಾಡಬೇಕು.

| ಮಂತ್ರ | ವಿನಿಯೋಗ |
| --- | --- |
| ಧಾತಾ.......... ದಧಾತು ॥ | ಸಮಿಷ್ಟಯಜುರ್ಹೋಮದ ಮೊದಲನೆಯ ಮಂತ್ರ. |

---

**ರಾತಿಃ** = ದಾನಶೀಲನಾದ/ಸರ್ವಶ್ರೇಯಸ್ಸನ್ನೂ ಕೊಡುವ; **ಧಾತಾ** = ಧಾತೃದೇವನು (ಬ್ರಹ್ಮದೇವನು); **ಸವಿತಾ** = ಸರ್ವಪ್ರೇರಕನಾದ ಸವಿತೃದೇವನು; **ನಿಧಿಪತಿಃ** = ಮಹಾಶಂಖ-ಖರ್ವಾದಿ ನವನಿಧಿಗಳ ರಕ್ಷಕನಾದ; **ಪ್ರಜಾಪತಿಃ** = ಪ್ರಜಾಪತಿದೇವನು; **ಅಗ್ನಿಃ** = ಅಗ್ನಿದೇವನು; **ತ್ವಷ್ಟಾ** = ತ್ವಷ್ಟೃದೇವನು; **ವಿಷ್ಣುಃ** = ವಿಷ್ಣುದೇವನು [ಈ ಆರು ದೇವತೆಗಳು] **ನಃ** = ನಮ್ಮ; **ಇದಮ್** = ಈ [ಹವಿಸ್ಸನ್ನು] **ಜುಷಂತಾಮ್** = ಸೇವಿಸಲಿ; [ಪ್ರಸಿದ್ಧವಾದ ಈ ದೇವಗಣವು] **ಪ್ರಜಯಾ** = ಮಕ್ಕಳೊಡನೆ; **ಸಂರರಾಣಃ**= ಚೆನ್ನಾಗಿ ಕ್ರೀಡಿಸುತ್ತಾ; [ಮಕ್ಕಳನ್ನು ಕೊಟ್ಟು ಆ ಮಕ್ಕಳೂ ಚೆನ್ನಾಗಿರುವಂತೆ ಮಾಡುತ್ತಾ]

---

ದಾನಶೀಲನಾದ, ಜಗತ್ತನ್ನು ಸೃಷ್ಟಿಸುವವನಾದ ಬ್ರಹ್ಮದೇವನೂ ಸರ್ವಪ್ರೇರಕನಾದ

ಯಜಮಾನಾಯ ದ್ರವಿಣಂ ದಧಾತು॥ ಸಮಿಂದ್ರ ಣೋ ಮನಸಾ

ನೇಷಿ ಗೋಭಿಸ್ಸಗ್ಂ ಸೂರಿಭಿರ್ಮಘವನ್ತ್ಸಗ್ಂಸ್ವಸ್ತ್ಯಾ ।

---

ಯಜಮಾನಾಯ । ದ್ರವಿಣಮ್ । ದಧಾತು ॥ ಸಮಿತಿ । ಇಂದ್ರ । ನಃ । ಮನಸಾ । ನೇಷಿ । ಗೋಭಿಃ । ಸಮಿತಿ । ಸೂರಿಭಿರಿತಿ ಸೂರಿ-ಭಿಃ । ಮಘವನ್ನಿತಿ ಮಘ-ವನ್ । ಸಮಿತಿ । ಸ್ವಸ್ತ್ಯಾ ॥

---



| ಮಂತ್ರ | ವಿನಿಯೋಗ |
| --- | --- |
| ಸಮಿಂದ್ರ.....ಯಜ್ಞಿಯಾನಾಮ್ ॥ | ಸಮಿಷ್ಟಯಜುರ್ಹೋಮದ ಎರಡನೆಯ ಮಂತ್ರ. |

---

**ಯಜಮಾನಾಯ** = ಯಜಮಾನನಿಗೆ; **ದ್ರವಿಣಮ್** = ಧನವನ್ನು; **ದಧಾತು** = ಪೋಷಿಸಲಿ/ವೃದ್ಧಿಹೊಂದಿಸಲಿ/ಕೊಡಲಿ; **ಇಂದ್ರ** = ಇಂದ್ರದೇವನೇ! [ನೀನು] **ಮನಸಾ** = [ಅನುಗ್ರಹಯುಕ್ತವಾದ] ಮನಸ್ಸಿನಿಂದ/ಪ್ರಾಣದೊಡನೆ; **ನಃ** = ನಮ್ಮನ್ನು; **ಗೋಭಿಃ**= ಗೋವುಗಳೊಡನೆ/ಸ್ತುತಿರೂಪವಾದ ಮಾತುಗಳೊಡನೆ; **ಸಮ್ ನೇಷಿ** = ಸೇರಿಸು; **ಸೂರಿಭಿಃ** = ವಿದ್ವಾಂಸರಾದ ಹೋತೃ ಮುಂತಾದ ಋತ್ವಿಜರೊಡನೆ; **ಸಮ್ ನೇಷಿ** = ಸೇರಿಸು; **ಮಘವನ್** = ಮಹಾಧನನಾದ ಇಂದ್ರದೇವನೇ! **ಸ್ವಸ್ತ್ಯಾ** = ಕ್ಷೇಮದೊಡನೆ; **ಸಮ್ ನೇಷಿ** = [ನಮ್ಮನ್ನು] ಕೂಡಿಸು.

---

ಸವಿತೃದೇವನೂ, ನವನಿಧಿಗಳ ಪಾಲಕನಾದ ಪ್ರಜಾಪತಿಯೂ, ಅಗ್ನಿಯೂ, ತ್ವಷ್ಟೃದೇವನೂ, ವಿಷ್ಣುದೇವನೂ - ಈ ಆರು ದೇವತೆಗಳೂ ನಾವು ಕೊಡುವ ಈ ಆಜ್ಯಹವಿಸ್ಸನ್ನು ಸ್ವೀಕರಿಸಲಿ. ಈ ದೇವಗಣವು ಯಜಮಾನನಿಗೆ ಪ್ರಜೆಯನ್ನು ಕೊಟ್ಟು ಆ ಪ್ರಜೆಗಳೂ ಸುಖವಾಗಿರುವಂತೆ ಮಾಡಲಿ. ಅವರೂ ದೇವಭಕ್ತರಾಗುವಂತೆ ಮಾಡಲಿ. ಯಜಮಾನನಿಗೆ ಧನಾದಿಸಂಪತ್ಸಮೃದ್ಧಿಯನ್ನು ಕೊಡಲಿ.

**ಸಂ ಬ್ರಹ್ಮಣಾ ದೇವಕೃತಂ ಯದಸ್ತಿ ಸಂ ದೇವಾನಾಗ್ಂ ಸುಮತ್ಯಾ ಯಜ್ಞಿಯಾನಾಮ್ ॥**

---

ಸಮಿತಿ । ಬ್ರಹ್ಮಣಾ । ದೇವಕೃತಮಿತಿ ದೇವ-ಕೃತಮ್ । ಯತ್ । ಅಸ್ತಿ । ಸಮಿತಿ । ದೇವಾನಾಮ್ । ಸುಮತ್ಯೇತಿ ಸು-ಮತ್ಯಾ । ಯಜ್ಞಿಯಾನಾಮ್ ॥

---

ಬ್ರಹ್ಮಣಾ = ವೇದದಿಂದ/ಅರ್ಥಜ್ಞಾನದಿಂದ; ಸಮ್ ನೇಷಿ = ಸೇರಿಸು; ದೇವಕೃತಮ್ = ದೇವತೆಗಳಿಗೋಸ್ಕರ ಮಾಡಿದ; ಯತ್ = ಯಾವ ಅಗ್ನಿಹೋತ್ರಾದಿಕರ್ಮವು; ಅಸ್ತಿ = ಇದೆಯೋ; [ತೇನ= ಆದರಿಂದ] ಸಮ್ ನೇಷಿ = ಸೇರಿಸು; ಯಜ್ಞಿಯಾನಾಮ್ = ಯಜ್ಞಕ್ಕೆ ಸಂಬಂಧಿಸಿದ; ದೇವಾನಾಮ್ = ದೇವತೆಗಳ; ಸುಮತ್ಯಾ = ಒಳ್ಳೆಯ ಅನುಗ್ರಹಬುದ್ಧಿಯೊಡನೆ; ಸಮ್ ನೇಷಿ = ಒಂದುಗೂಡಿಸು;

---

ಇಂದ್ರದೇವನೇ! ಅನುಗ್ರಹಬುದ್ಧಿಯುಳ್ಳ ಮನಸ್ಸಿನಿಂದ ನಾವು ಯಾವಾಗಲೂ ಹಸುಗಳಿಂದ ಕೂಡಿರುವಂತೆ ಮಾಡು. ನಾವು ದೇವತೆಗಳನ್ನು ಸ್ತುತಿಸುತ್ತಿರುವಂತೆ ಮಾಡು. ನಾವು ಯಾಗಶೀಲರಾಗಿ ಹೋತೃವೇ ಮೊದಲಾದ ಋತ್ವಿಜರೊಡನೆ ಕೂಡಿರುವಂತೆ ಮಾಡು. ಮಘವಂತನೇ! ನಾವು ಕ್ಷೇಮವಾಗಿರುವಂತೆ ಮಾಡು. ನಾವು ಅರ್ಥಜ್ಞಾನಸಹಿತವಾದ ವೇದದೊಡನೆ ಇರುವಂತೆ ಮಾಡು. ಅಂತಹ ವೇದವಿಹಿತವಾದ, ದೇವತೆಗಳಿಗೋಸ್ಕರ ಮಾಡಿದ ಅಗ್ನಿಹೋತ್ರಾದಿಕರ್ಮಗಳಿಂದ ಕೂಡಿರುವಂತೆ ಮಾಡು. ಯಜ್ಞಸಂಬಂಧಿದೇವತೆಗಳ ಅನುಗ್ರಹಬುದ್ಧಿಯು ನಮ್ಮ ಮೇಲೆ ಯಾವಾಗಲೂ ಇರುವಂತೆ ಮಾಡು.

ಸಂ ವರ್ಚಸಾ ಪಯಸಾ ಸಂ ತನೂಭಿರಗನ್ಮಹಿ ಮನಸಾ ಸಗ್‌ಂ

ಶಿವೇನ । ತ್ವಷ್ಟಾ ನೋ ಅತ್ರ ವರಿವಃ

ಕೃಣೋತ್ವ [ಕೃಣೋತು (೧) ಅನು] ನುಮಾರ್ಷ್ಟು

---

ಸಮಿತಿ। ವರ್ಚಸಾ । ಪಯಸಾ । ಸಮಿತಿ । ತನೂಭಿಃ । ಅಗನ್ಮಹಿ । ಮನಸಾ । ಸಮಿತಿ

ಶಿವೇನ ॥ ತ್ವಷ್ಟಾ । ನಃ । ಅತ್ರ । ವರಿವಃ । ಕೃಣೋತು (೧) ಅನ್ವಿತಿ । ಮಾರ್ಷ್ಟು।

---



| ಮಂತ್ರ | ವಿನಿಯೋಗ |
|---|---|
| ಸಂ ವರ್ಚಸಾ..ವಿಲಿಷ್ಟಮ್ ॥ | ಸಮಿಷ್ಟಯಜುರ್ಹೋಮದ ಮೂರನೆಯ ಮಂತ್ರ. |

---

✢ [ನಾವು ದೇವತೆಗಳ ಅನುಗ್ರಹದಿಂದ] **ವರ್ಚಸಾ** = ಬಲದಿಂದಲೂ; **ಪಯಸಾ** = [ಬಲಕಾರಣವಾದ] ಕ್ಷೀರದಿಂದಲೂ; **ಸಮ್ ಅಗನ್ಮಹಿ** = ಕೂಡಿದವರಾಗಿದ್ದೇವೆ; **ತನೂಭಿಃ** = ಒಳ್ಳೆಯ ಶರೀರಗಳಿಂದಲೂ; **ಸಮ್ ಅಗನ್ಮಹಿ** = ಯುಕ್ತರಾಗಿದ್ದೇವೆ; **ಶಿವೇನ** = ಶ್ರದ್ಧಾಳುವಾದ/ಮಂಗಳವಾದ; **ಮನಸಾ**= ಮನಸ್ಸಿನಿಂದ; **ಸಮ್ ಅಗನ್ಮಹಿ** = ಕೂಡಿದವರಾಗಿದ್ದೇವೆ; **ತ್ವಷ್ಟಾ** = ತ್ವಷ್ಟೃದೇವನು; **ನಃ** = ನಮಗೆ; **ಅತ್ರ** = ಈ ಕರ್ಮದಲ್ಲಿ; **ವರಿವಃ** = ಅಪೇಕ್ಷಿಸುವ ಧನವನ್ನು; **ಕೃಣೋತು** = ಉಂಟುಮಾಡಲಿ.

---

ದೇವತೆಗಳ ಅನುಗ್ರಹಬಲದಿಂದ ನಾವು ಬಲದೊಡನೆಯೂ, ಬಲಕ್ಕೆ ಕಾರಣವಾದ ಕ್ಷೀರಾದಿಗಳೊಡನೆಯೂ ಕೂಡಿದವರಾಗಿದ್ದೇವೆ. ಒಳ್ಳೆಯ ಶರೀರಗಳನ್ನೂ ಹೊಂದಿದ್ದೇವೆ. ಮಂಗಲಕರವಾದ ಶ್ರದ್ಧಾಯುಕ್ತವಾದ ಮನಸ್ಸನ್ನೂ ಹೊಂದಿರುತ್ತೇವೆ. ದೇವನಾದ ತ್ವಷ್ಟನು ನಾವು ಈ ಯಾಗಕರ್ಮದಲ್ಲಿ ಅಪೇಕ್ಷಿಸುವ ಧನವನ್ನು ಕೊಡಲಿ.

**ತನುವೋ ಯದ್ವಿಲಿಷ್ಟಮ್ ॥ ಯದದ್ಯ ತ್ವಾ ಪ್ರಯತಿ ಯಜ್ಞೇ**

**ಅಸ್ಮಿನ್ನಗ್ನೇ ಹೋತಾರಮವೃಣೀಮಹೀಹ ।**

**ಋಧಗಯಾಡೃಧಗುತಾಶಮಿಷ್ಠಾಃ**

---

ತನುವಃ । ಯತ್ । ವಿಲಿಷ್ಟಮಿತಿ ವಿ-ಲಿಷ್ಟಮ್ ॥ ಯತ್ । ಅದ್ಯ । ತ್ವಾ । ಪ್ರಯತೀತಿ ಪ್ರ-ಯತಿ । ಯಜ್ಞೇ । ಅಸ್ಮಿನ್ । ಅಗ್ನೇ । ಹೋತಾರಮ್ । ಅವೃಣೀಮಹಿ । ಇಹ॥ ಋಧಕ್ । ಅಯಾಟ್ । ಋಧಕ್ । ಉತ । ಅಶಮಿಷ್ಠಾಃ ।

---

| ಮಂತ್ರ | ವಿನಿಯೋಗ |
|---|---|
| ಯದದ್ಯ.......ವಿದ್ವಾನ್ । | ಸಮಿಷ್ಟಯಜುರ್ಹೋಮದ ನಾಲ್ಕನೆಯ ಮಂತ್ರ. |

---

**ತನುವಃ** = [ನಮ್ಮ] ಶರೀರಗಳನ್ನು; **ಅನುಮಾರ್ಷ್ಟು** = ಶುದ್ಧಿಗೊಳಿಸಲಿ; **ಯತ್** = ಯಾವ; **ವಿಲಿಷ್ಟಮ್**= ಪಾಪಕರ್ಮವಿದೆಯೋ, **ತತ್ ಅನುಮಾರ್ಷ್ಟು** = ಅದನ್ನು ಹೋಗಲಾಡಿಸಲಿ/ತೊಳೆದುಹಾಕಲಿ. ❖ **ಅಗ್ನೇ** = ಅಗ್ನಿದೇವನೇ! **ಯತ್** = ಯಾವ ಕಾರಣದಿಂದ; **ಅದ್ಯ ಇಹ** = ಈ ದಿನ ಈ ದೇವಯಜನಪ್ರದೇಶದಲ್ಲಿ; **ಅಸ್ಮಿನ್ ಯಜ್ಞೇ** = ಈ ಯಜ್ಞವು; **ಪ್ರಯತಿ** ಸತಿ = ನಡೆಯುತ್ತಿರಲಾಗಿ; [ಪ್ರಯತಿ ಯಜ್ಞೇ = ನಡೆಯುತ್ತಿರುವ ಯಜ್ಞದಲ್ಲಿ] **ತ್ವಾ** = ನಿನ್ನನ್ನು; **ಹೋತಾರಮ್** = ಹೋಮವನ್ನು ನೆರವೇರಿಸುವವನನ್ನಾಗಿ; **ಅವೃಣೀಮಹಿ** = ವರಿಸಿದೆವೋ; [ಆ ಕಾರಣದಿಂದ] **ಋಧಕ್** = ಸಮೃದ್ಧವಾಗುವಂತೆ; **ಅಯಾಟ್** = ಯಾಗವನ್ನು ನಡೆಸಿಕೊಟ್ಟಿದ್ದೀಯೆ; **ಉತ** = ಮತ್ತು; [ನೀನು] **ಋಧಕ್** = ಸಮೃದ್ಧವಾದುದನ್ನಾಗಿ [ವೈಗುಣ್ಯವಿಲ್ಲದುದನ್ನಾಗಿ]

---

ನಮ್ಮ ಶರೀರಗಳನ್ನೂ ಶುದ್ಧಿಗೊಳಿಸಲಿ. ನಮ್ಮ ಪಾಪಗಳನ್ನು ತೊಳೆದುಹಾಕಲಿ.

ಎಲೈ! ಅಗ್ನಿದೇವನೇ! ನಾವು ಈ ದಿನ ಈ ಯಾಗಪ್ರದೇಶದಲ್ಲಿ ಈ ಯಜ್ಞವು ನಡೆಯುತ್ತಿರಲು[ನಡೆಯುತ್ತಿರುವ ಈ ಯಜ್ಞದಲ್ಲಿ] ನಿನ್ನನ್ನು ಯಾಗನಿಷ್ಪಾದಕನನ್ನಾಗಿ

ಪ್ರಜಾನನ್ ಯಜ್ಞಮುಪಯಾಹಿ ವಿದ್ವಾನ್॥ ಸ್ವಗಾ ವೋ ದೇವಾಃ

ಸದನಮಕರ್ಮ ಯ ಆಜಗ್ಮ ಸವನೇದಂ ಜುಷಾಣಾಃ ।

---

ಪ್ರಜಾನನ್ನಿತಿ ಪ್ರ-ಜಾನನ್ । ಯಜ್ಞಮ್ । ಉಪೇತಿ । ಯಾಹಿ । ವಿದ್ವಾನ್ । ಸ್ವಗೇತಿ ಸ್ವ-ಗಾ । ವಃ । ದೇವಾಃ । ಸದನಮ್ । ಅಕರ್ಮ । ಯೇ । ಆಜಗ್ಮೇತ್ಯಾ - ಜಗ್ಮ । ಸವನಾ । ಇದಮ್ । ಜುಷಾಣಾಃ ॥

---

| ಮಂತ್ರ | ವಿನಿಯೋಗ |
|---|---|
| ಸ್ವಗಾ..........ವಸೂನಿ ॥ | ಸಮಿಷ್ಟಯಜುರ್ಹೋಮದ ಐದನೆಯ ಋಕ್ಕು. |

---

**ಪ್ರಜಾನನ್** = ತಿಳಿಯುತ್ತಾ, **ಅಶಮಿಷ್ಠಾಃ** = [ವಿಘ್ನಗಳನ್ನು] ಶಾಂತಗೊಳಿಸಿರುತ್ತೀಯೆ; **ವಿದ್ವಾನ್** = ಸರ್ವಾರ್ಥಸಾಧನೆಗಳ ಉಪಾಯಗಳನ್ನು ತಿಳಿದಿರುವ ನೀನು;] ನಮ್ಮ ಭಕ್ತಿಯನ್ನು ತಿಳಿದಿರುವ ನೀನು; **ಯಜ್ಞಮ್** = [ನಮ್ಮ] ಯಜ್ಞಗಳನ್ನು ಕುರಿತು; **ಉಪಯಾಹಿ** = ಮತ್ತೆ ಮತ್ತೆ ಬಾ; **ದೇವಾಃ** = ಎಲೈ! ದೇವತೆಗಳೇ! **ಯೇ** = ಯಾವ ನೀವು; **ಇದಮ್ ಸವನಾ** = ಈ ಪ್ರಾತಃಸವನ, ಮಾಧ್ಯಂದಿನ ಮತ್ತು ತೃತೀಯ ಸವನಗಳನ್ನು ಕುರಿತು; [ಇದಮ್ ಜುಷಾಣಾಃ = ಇಲ್ಲಿ ಪ್ರೀತಿಯುಕ್ತರಾಗಿ/ಇದಮ್ ಜುಷಾಣಾಃ= ಈ ಹವಿಸ್ಸನ್ನು ಪ್ರೀತಿಸುವವರಾಗಿ] **ಜುಷಾಣಾಃ** = ಪ್ರೀತಿಯುಳ್ಳವರಾಗಿ; **ಆ ಜಗ್ಮ** = ಬಂದಿದ್ದೀರೋ; [ಅಂತಹ] **ವಃ** = ನಿಮಗೆ; **ಸದನಮ್** = ಸ್ಥಾನವನ್ನು; **ಸ್ವಗಾ ಅಕರ್ಮ** = ಸ್ವಾಧೀನವನ್ನಾಗಿ ಮಾಡಿದೆವು.

---

ವರಿಸಿದೆವು. ನೀನು ನಮ್ಮ ಯಜ್ಞವನ್ನು ಸಮೃದ್ಧವಾಗುವಂತೆ ನಡೆಸಿಕೊಟ್ಟಿರುತ್ತೀಯೆ. ಚೆನ್ನಾಗಿ ತಿಳಿದಿರುವ ನೀನು ಸಮೃದ್ಧವಾಗಿ ವಿಘ್ನಗಳ ಶಾಂತಿಯನ್ನೂ ಮಾಡಿರುತ್ತೀಯೆ. ನೀನು ವಿದ್ವಾಂಸನು. ಎಲ್ಲವನ್ನೂ ಹೇಗೆ ಸಾಧಿಸಬೇಕೆಂಬುದನ್ನು ತಿಳಿದಿರುವೆ. ನಮ್ಮ ಭಕ್ತಿಯನ್ನೂ ತಿಳಿದಿರುವೆ. ನೀನು ನಮ್ಮ ಯಜ್ಞಗಳಿಗೆ ಮತ್ತೆ ಮತ್ತೆ ಬಾ.

ದೇವತೆಗಳೇ! ನೀವು ಪ್ರೀತಿಯುಕ್ತರಾಗಿ ಈ ಪ್ರಾತಃಸವನಾದಿ ಮೂರು ಸವನಗಳನ್ನು ಕುರಿತು ಬಂದಿದ್ದೀರಿ. ನಿಮಗೆ ಸ್ಥಾನವನ್ನು ಸ್ವಾಧೀನಮಾಡಿಕೊಟ್ಟಿದ್ದೇವೆ. ನೀವು

**ಜಕ್ಷಿವಾಗ್ಂಸಃ ಪಪಿವಾಗ್ಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ॥ ಯಾನಾವಹ ಉಶತೋ ದೇವ ದೇವಾನ್ತಾನ್ [೨] ಪ್ರೇರಯ ಸ್ವೇ ಅಗ್ನೇ ಸಧಸ್ಥೇ ।**

---

ಜಕ್ಷಿವಾಗ್ಂಸಃ । ಪಪಿವಾಗ್ಂಸಃ । ಚ । ವಿಶ್ವೇ । ಅಸ್ಮೇ ಇತಿ । ಧತ್ತ । ವಸವಃ । ವಸೂನಿ॥ ಯಾನ್ । ಆ । ಅವಹಃ । ಉಶತಃ । ದೇವ । ದೇವಾನ್ । ತಾನ್ [೨] ಪ್ರೇತಿ । ಈರಯ । ಸ್ವೇ । ಅಗ್ನೇ । ಸಧಸ್ಥ ಇತಿ ಸಧ-ಸ್ಥೇ ॥

---

| ಮಂತ್ರ | ವಿನಿಯೋಗ |
|---|---|
| ಯಾನಾವಹ........ತಿಷ್ಠತಾನು । | ಸಮಿಷ್ಟಯಜುರ್ಹೋಮದ ಆರನೆಯ ಋಕ್ಕು |

ತೇ ವಿಶ್ವೇ = ಆ ನೀವೆಲ್ಲರೂ [ಎಲ್ಲ ದೇವತೆಗಳೂ]; **ಜಕ್ಷಿವಾಗ್ಂಸಃ** = [ಸವನೀಯ ಪುರೋಡಾಶಾದಿಗಳನ್ನು] ಭಕ್ಷಿಸಿದವರಾಗಿದ್ದೀರಿ; **ಚ** = ಮತ್ತು **ಪಪಿವಾಗ್ಂಸಃ** = [ಸೋಮರಸವನ್ನು] ಪಾನಮಾಡಿದವರಾಗಿದ್ದೀರಿ; **ವಸವಃ** = ಎಲೈ! ಲೋಕಗಳಿಗೆ ವಾಸಸ್ಥಾನವನ್ನುಂಟುಮಾಡಿಕೊಡುವ ದೇವತೆಗಳೇ! **ಅಸ್ಮೇ** = ನಮ್ಮಲ್ಲಿ; **ವಸೂನಿ** = ಧನಗಳನ್ನು; **ಧತ್ತ** = ಸ್ಥಾಪಿಸಿರಿ. [ಸ್ಥಿರವಾಗಿ ಇರುವಂತೆ ಮಾಡಿರಿ.] ❖ **ದೇವ ಅಗ್ನೇ** = ಎಲೈ ಪ್ರಕಾಶಮಾನನಾದ ಅಗ್ನಿದೇವನೇ! **ಉಶತಃ** = [ಹವಿಸ್ಸನ್ನು] ಅಪೇಕ್ಷಿಸುವ; **ಯಾನ್ ದೇವಾನ್** = ಯಾವ ದೇವತೆಗಳನ್ನು; ಆ **ಅವಹಃ** = [ಯಾಗಕ್ಕೆ] ಆಹ್ವಾನಿಸಿದೆಯೋ; **ತಾನ್** = ಆ ದೇವತೆಗಳನ್ನು; **ಸ್ವೇ ಸಧಸ್ಥೇ** = ತಮ್ಮದಾದ ಸಹಸ್ಥಾನದಲ್ಲಿ; **ಪ್ರೇರಯ** = ಕಳುಹಿಸಿಕೊಡು;

---

ಸವನೀಯಪುರೋಡಾಶಾದಿಗಳನ್ನು ಭಕ್ಷಿಸಿರುತ್ತೀರಿ. ಸೋಮರಸವನ್ನು ಪಾನಮಾಡಿರುತ್ತೀರಿ. ಜಗತ್ತಿಗೆ ವಾಸಸ್ಥಾನವನ್ನು ಕಲ್ಪಿಸಿಕೊಡುವ ನೀವು ತೃಪ್ತರಾಗಿ ನಮ್ಮಲ್ಲಿ ಧನಾದಿಗಳನ್ನು ಸ್ಥಿರವಾಗಿರುವಂತೆ ಮಾಡಿರಿ. ★ ಅಗ್ನಿದೇವನೇ! ಹವಿಸ್ಸನ್ನು ಅಪೇಕ್ಷಿಸುವ ಯಾವ ಯಾವ ದೇವತೆಗಳನ್ನು ಯಜ್ಞಕ್ಕಾಗಿ ನೀನು ಆಹ್ವಾನಿಸಿದ್ದೆಯೋ ಆ ದೇವತೆಗಳನ್ನು ತಮ್ಮ ಸಹಸ್ಥಾನಗಳಿಗೆ ಕಳುಹಿಸಿಕೊಡು.

ವಹಮಾನಾ ಭರಮಾಣಾ ಹವೀಗ್ಂಷಿ ವಸುಂ ಘರ್ಮಂ ದಿವಮಾತಿಷ್ಠತಾನು ॥ ಯಜ್ಞ ಯಜ್ಞಂ ಗಚ್ಛ ಯಜ್ಞಪತಿಂ ಗಚ್ಛ ಸ್ವಾಂ ಯೋನಿಂ ಗಚ್ಛ ಸ್ವಾಹೈಷ ತೇ ಯಜ್ಞೋ ಯಜ್ಞಪತೇ

---

ವಹಮಾನಾಃ । ಭರಮಾಣಾಃ। ಹವೀಗ್ಂಷಿ । ವಸುಮ್। ಘರ್ಮಮ್। ದಿವಮ್ । ಏತಿ। ತಿಷ್ಠತ । ಅನು॥ ಯಜ್ಞ। ಯಜ್ಞಮ್। ಗಚ್ಛ। ಯಜ್ಞಪತಿಮಿತಿ ಯಜ್ಞ-ಪತಿಮ್ । ಗಚ್ಛ । ಸ್ವಾಮ್। ಯೋನಿಮ್। ಗಚ್ಛ। ಸ್ವಾಹಾ। ಏಷಃ। ತೇ। ಯಜ್ಞಃ ಯಜ್ಞಪತ ಇತಿ ಯಜ್ಞ-ಪತೇ।

---

| ಮಂತ್ರ | ವಿನಿಯೋಗ |
|---|---|
| ಯಜ್ಞ..........ಗಚ್ಛ ಸ್ವಾಹಾ । | ಸಮಿಷ್ಟಯಜುರ್ಹೋಮದ ಮಂತ್ರಗಳಲ್ಲಿಯ ಯಜುರ್ಮಂತ್ರಗಳಲ್ಲಿ ಮೊದಲನೆಯದು. |
| ಏಷ..............ಸ್ವಾಹಾ । | ಯಜುರ್ಮಂತ್ರಗಳಲ್ಲಿ ಎರಡನೆಯ ಮಂತ್ರ. |

---

[ಎಲೈ ದೇವತೆಗಳೇ!] ಹವೀಗ್ಂಷಿ=[ನಿಮಗೆ ಕೊಟ್ಟ] ಹವಿಸ್ಸನ್ನು; ವಹಮಾನಾಃ=[ರಥಾದಿಗಳಿಂದ] ಒಯ್ಯುವವರಾಗಿ; ಭರಮಾಣಾಃ=ಪೋಷಿಸುವವರಾಗಿ; ವಸುಮ್=ಜಗತ್ತಿಗೆ ವಾಸಕಾರಣನಾದ; ಘರ್ಮಮ್=ಆದಿತ್ಯನನ್ನು; ಆ ತಿಷ್ಠತ=ಹೊಂದಿರಿ; ಅನು=ಅನಂತರ; ದಿವಮ್ = ಸ್ವರ್ಗವನ್ನು; ಆ ತಿಷ್ಠತ = ಹೊಂದಿರಿ; ⁘ಯಜ್ಞ = ಓ ಯಜ್ಞಪುರುಷನೇ! ಯಜ್ಞಮ್ = [ಪ್ರತಿಷ್ಠಾರ್ಥವಾಗಿ] ಪರಮಾತ್ಮನಾದ ಯಜ್ಞಶಬ್ದವಾಚ್ಯನಾದ ವಿಷ್ಣುವನ್ನು; ಗಚ್ಛ = ಹೊಂದು; ಯಜ್ಞಪತಿಮ್ = [ಫಲಪ್ರದಾನಕ್ಕಾಗಿ] ಯಜ್ಞಪಾಲಕನಾದ ಯಜಮಾನನನ್ನು; ಗಚ್ಛ = ಹೊಂದು; ಸ್ವಾಮ್ ಯೋನಿಮ್ = ತನ್ನ ನಿಷ್ಪತ್ತಿಗಾಗಿ ತನಗೆ ಕಾರಣವಾದ [ವಾಯುವಿನ ಕ್ರಿಯಾಶಕ್ತಿಯನ್ನು] ಗಚ್ಛ = ಹೊಂದು; ಸ್ವಾಹಾ = ನಿನಗೆ ಹುತವಾಗಲಿ. ⁘ ಯಜ್ಞಪತೇ = ಯಜ್ಞಸ್ವಾಮಿಯಾದ ಅಗ್ನಿಯೇ!

---

ಎಲೈ ! ದೇವತೆಗಳೇ ! ನೀವು ಯಜ್ಞದಲ್ಲಿ ನಿಮಗೆ ಸಮರ್ಪಿಸಿದ ಹವಿಸ್ಸುಗಳನ್ನು

ಸಹಸೂಕ್ತವಾಕಃ ಸುವೀರಃ ಸ್ವಾಹಾ ದೇವಾ ಗಾತುವಿದೋ ಗಾತುಂ ವಿತ್ವಾ ಗಾತುಮಿತ ಮನಸಸ್ಪತ ಇಮಂ ನೋ ದೇವ

---

ಸಹಸೂಕ್ತವಾಕ ಇತಿ ಸಹಸೂಕ್ತ-ವಾಕಃ । ಸುವೀರ ಇತಿ ಸು-ವೀರಃ । ಸ್ವಾಹಾ । ದೇವಾಃ। ಗಾತುವಿದ ಇತಿ ಗಾತು-ವಿದಃ । ಗಾತುಮ್ । ವಿತ್ವಾ । ಗಾತುಮ್ । ಇತ । ಮನಸಃ। ಪತೇ । ಇಮಮ್ । ನಃ । ದೇವ ।

---



| ಮಂತ್ರ | ವಿನಿಯೋಗ |
|---|---|
| ದೇವಾ..........ಧಾಃ ॥ | ಸಮಿಷ್ಟಯಜುರ್ಹೋಮದ ಮಂತ್ರಗಳಲ್ಲಿ ಕೊನೆಯದು. ಯಜುರ್ಮಂತ್ರಗಳಲ್ಲಿ ಮೂರನೆಯದು. |

---

[ಯಜ್ಞಕ್ಕೆ ಒಡೆಯನಾದ ಯಜಮಾನನೇ!] **ವಿಷಃ** = **ಈ**; **ತೇ** = ನಿನ್ನ; **ಯಜ್ಞಃ** = ಯಜ್ಞವು; **ಸಹಸೂಕ್ತವಾಕಃ** = ಸೂಕ್ತವಾಕಸಹಿತವಾದ ವಿವಿಧ ಸ್ತೋತ್ರಗಳುಳ್ಳದ್ದಾಗಿದೆ; **ಸುವೀರಃ** = ಕಾರ್ಯಕುಶಲರಾದ ಋತ್ವಿಜರುಳ್ಳದ್ದಾಗಿದೆ; [ಪುತ್ರಪೌತ್ರಾದಿಪ್ರದವಾಗಿದೆ]; **ಸ್ವಾಹಾ** = [ನಿನ್ನಿಂದ ಕೊಡಲ್ಪಟ್ಟ ಆಜ್ಯಹವಿಸ್ಸು ಅಗ್ನಿಗೆ] ಹುತವಾಗಲಿ. ✣ **ಗಾತುವಿದಃ**=ಮಾರ್ಗಗಳನ್ನು ತಿಳಿದಿರುವ; **ದೇವಾಃ** = ದೇವತೆಗಳೇ! **ಗಾತುಮ್** = ಬಂದಿರುವ ಮಾರ್ಗವನ್ನು; **ವಿತ್ವಾ**=ತಿಳಿದು; **ಗಾತುಮ್**=[ಹವಿರ್ಭಾಗವನ್ನು ಸ್ವೀಕರಿಸಿ ಹೋಗುವಾಗ ಹಿಂದಿರುಗಲು] ಬಂದ ಮಾರ್ಗವನ್ನೇ; **ಇತ** = ಹೊಂದಿರಿ; **ಮನಸಸ್ಪತೇ** = ಮನಸ್ಸಿನ ಒಡೆಯನೇ!/ ಪರಮೇಶ್ವರನೇ! **ದೇವ** = ದೇವನಾದಿಗುಣಯುಕ್ತನೇ! **ಇಮಮ್** = **ಈ**;

---

ರಥಾದಿಗಳಿಂದ ಒಯ್ಯುತ್ತಲೂ, ಪೋಷಿಸುತ್ತಲೂ ಲೋಕಗಳ ವಾಸಕ್ಕೆ ಕಾರಣನಾದ ಸೂರ್ಯನನ್ನು ಹೊಂದಿರಿ. ಅನಂತರ ಸ್ವರ್ಗಕ್ಕೆ ಹೋಗಿರಿ. ★ ಓ! ಯಜ್ಞಪುರುಷನೇ! ಪ್ರತಿಷ್ಠಿತನಾಗಿ ಇರುವುದಕ್ಕಾಗಿ 'ಯಜ್ಞೋ ವೈ ವಿಷ್ಣುಃ'' ಎಂದು ಯಜ್ಞಶಬ್ದವಾಚ್ಯನಾದ ಪರಮಾತ್ಮನಾದ ವಿಷ್ಣುವನ್ನು ಹೊಂದು. ಫಲವನ್ನು ಕೊಡುವುದಕ್ಕಾಗಿ ಯಜ್ಞಪತಿಯಾದ

ದೇವೇಷು ಯಜ್ಞಗ್ಗ್ಂ ಸ್ವಾಹಾ ವಾಚಿ ಸ್ವಾಹಾ

ವಾತೇ ಧಾಃ ॥ ೪೪-48 ॥

[ಕೃಣೋತು ತಾನಷ್ಟಾಚತ್ವಾರಿಗ್ಂಶಚ್ಚ ।]

---

ದೇವೇಷು । ಯಜ್ಞಮ್ । ಸ್ವಾಹಾ । ವಾಚಿ । ಸ್ವಾಹಾ । ವಾತೇ । ಧಾಃ ॥ ೪೪ ॥

---

ನಃ = ನಮ್ಮ; ಯಜ್ಞಮ್ = ಯಜ್ಞವನ್ನು; ದೇವೇಷು = [ಹವಿಸ್ಸನ್ನು ಸ್ವೀಕರಿಸುವ] ದೇವತೆಗಳಲ್ಲಿ; ಸ್ವಾಹಾ = ಸ್ಥಾಪಿಸು; [ಅನಂತರ] ವಾಚಿ = ಮಂತ್ರರೂಪವಾದ ವಾಗ್ದೇವತೆಯಲ್ಲಿ; ಸ್ವಾಹಾ = ಸ್ಥಾಪಿಸು; [ಬಳಿಕ] ವಾತೇ = [ಕ್ರಿಯಾಪ್ರವರ್ತಕನಾದ] ವಾಯುದೇವನಲ್ಲಿ; ಧಾಃ = ಸ್ಥಾಪಿಸು.

---



ಯಜಮಾನನನ್ನು 'ಹೊಂದು' 'ವಾತಾದ್ಯಕ್ಷು ಪ್ರಯುಜ್ಯತಾಮ್' ಎಂಬಂತೆ ತನ್ನ ಉತ್ಪತ್ತಿಗೆ ಕಾರಣವಾದ ವಾಯುವಿನ [ಪರಮಾತ್ಮನ] ಕ್ರಿಯಾಶಕ್ತಿರೂಪನಾದ] ಕ್ರಿಯಾಶಕ್ತಿಯನ್ನು ಹೊಂದಿ ನಿನಗೆ [ಅಗ್ನಿದೇವನಿಗೆ] [ಯಜ್ಞಪುರುಷನಿಗೆ] ಹುತವಾಗಲಿ.

ಎಲೈ ಯಜ್ಞಸ್ವಾಮಿಯೇ! [ಅಗ್ನಿಯೇ!] [ಯಜಮಾನನೇ!] ಈ ನಿನ್ನ ಯಜ್ಞವು ಸೂಕ್ತವಾಕಾದಿಸ್ತೋತ್ರಯುಕ್ತವಾಗಿದೆ. ಕುಶಲರಾದ ಋತ್ವಿಜರಿಂದ ಯುಕ್ತವಾಗಿದೆ. ಪುತ್ರಪೌತ್ರಾದಿಪ್ರದವಾಗಿದೆ. ನೀನು ಕೊಡುವ ಆಜ್ಯವು ಯಜ್ಞಪತಿಗೆ [ಅಗ್ನಿದೇವನಿಗೆ] ಹುತವಾಗಲಿ.

ಎಲೈ! ಮಾರ್ಗಗಳನ್ನು ತಿಳಿದಿರುವ ದೇವತೆಗಳೇ! ನೀವು ಯಜ್ಞಕ್ಕೆ ಬಂದಿರುವ ಮಾರ್ಗವನ್ನು ತಿಳಿದು, ಹವಿಸ್ಸನ್ನು ಸ್ವೀಕರಿಸಿ ಹಿಂದಿರುಗುವಾಗಲೂ ಅದೇ ಮಾರ್ಗದಲ್ಲಿ ಹೋಗಿರಿ. ಮನಸ್ಸಿನ ಒಡೆಯನಾದ ಪರಮೇಶ್ವರನೇ! ನಮ್ಮ ಈ ಯಜ್ಞವನ್ನು ಮೊದಲು –ಹವಿಸ್ಸನ್ನು ಸ್ವೀಕರಿಸುವ ದೇವತೆಗಳಲ್ಲಿ–ಸ್ಥಾಪಿಸು. ಅನಂತರ ಮಂತ್ರರೂಪವಾದ ವಾಗ್ದೇವತೆಯಲ್ಲಿ ಸ್ಥಾಪಿಸು. ಬಳಿಕ ಯಾಗಕ್ರಿಯಾಪ್ರವರ್ತಕನಾದ ವಾತನಲ್ಲಿ ಸ್ಥಾಪಿಸು.

## ವಿನಿಯೋಗ ಸಂಗ್ರಹ

ಧಾತಾನುವಾಕೇ ಸರ್ವಸ್ಮಿನ್ ಸಮಿಷ್ಟಾಖ್ಯಯಜೂಂಷಿ ಹಿ ।
ಋಚಃ[6] ಷಡಾದ್ಯಾಶ್ಚೇಷಾಣಿ[7-9] ಯಜೂಂಷ್ಯೇತ್ಯೈರ್ಜುಹೋತಿ ಹಿ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ — 9**

## ಅನುವಾಕದ ವಿಶೇಷ ವಿಷಯಗಳು

### ಅ) ಛಂದಸ್ಸು

೧) ಧಾತಾ ರಾತಿಃ.......... ।

೨) ಸಮಿಂದ್ರ............।

೩) ಸಂ ವರ್ಚಸಾ............।

೪) ಯದದ್ಯ..............।

೫) ಸ್ವಗಾ ವೋ...........।

೬) ಯಾನಾವಹ..............।

ಈ ಆರೂ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನಲ್ಲಿವೆ.

---

## ॥ ಪಂಚಚತ್ವಾರಿಂಶೋಽನುವಾಕಃ ॥

ಉರುಗ್ಂ ಹಿ ರಾಜಾ ವರುಣಶ್ಚಕಾರ ಸೂರ್ಯಾಯ

ಪಂಥಾಮನ್ವೇತವಾ ಉ । ಅಪದೇ ಪಾದಾ ಪ್ರತಿಧಾತ-

---

ಉರುಮ್ । ಹಿ । ರಾಜಾ । ವರುಣಃ । ಚಕಾರ । ಸೂರ್ಯಾಯ । ಪಂಥಾಮ್ । ಅನ್ವೇತವಾ ಇತ್ಯನು-ಏತವೈ । ಉ ॥ ಅಪದೇ । ಪಾದಾ । ಪ್ರತಿಧಾತವ ಇತಿ ಪ್ರತಿ-ಧಾತವೇ ।

---

ಮೂವತ್ತೆಂಟನೆಯ[44] ಅನುವಾಕದಲ್ಲಿ ಸಮಿಷ್ಟಯಜುರ್ಹೋಮವು ಹೇಳಲ್ಪಟ್ಟಿತು. ಈ ಮೂವತ್ತೊಂಬತ್ತನೆಯ (45) ಅನುವಾಕದಲ್ಲಿ ಅವಭೃಥವು ಹೇಳಲ್ಪಡುತ್ತದೆ. ಯಾಗವು ಮುಗಿದ ಮೇಲೆ ಕೊನೆಯ ದಿನ ಮಾಡುವ ಕರ್ಮವೇ ಅವಭೃಥ.

---

| ಮಂತ್ರ | ವಿನಿಯೋಗ |
|---|---|
| ಉರುಗ್ಂ ಹಿ......ವಿಧಶ್ಚಿತ್ ॥ | ಅವಭೃಥಕ್ಕೆ ಹೊರಡುವವರು ಹೇಳುವ ಮಂತ್ರವಿದು. |

---

**ವರುಣಃ ರಾಜಾ ಉ** = ರಾಜನಾದ ವರುಣನೇ; **ಸೂರ್ಯಾಯ** = ಸೂರ್ಯನಿಗೆ; **ಅನ್ವೇತವೈ** = ಅನುಕ್ರಮವಾಗಿ ಅನುಸರಿಸಿ ಹೋಗುವುದಕ್ಕೆ; **ಅಪದೇ** = ಕಾಲಿಡಲು ಅವಕಾಶವಿಲ್ಲದ/ನಿರಾಲಂಬವಾದ ಅಂತರಿಕ್ಷದಲ್ಲಿ; **ಉರುಮ್** = ವಿಸ್ತೀರ್ಣವಾದ; **ಪಂಥಾಮ್** = ಮಾರ್ಗವನ್ನು; **ಹಿ** = ಯಾವ ಕಾರಣದಿಂದ; **ಚಕಾರ** = ಮಾಡಿದನೋ; [ಆ ಕಾರಣದಿಂದ] ನಮಗೂ; **ಪಾದಾ** = ಹೆಜ್ಜೆಗಳನ್ನು; **ಪ್ರತಿಧಾತವೇ** = ಇಡುವುದಕ್ಕಾಗಿ;

---

ರಾಜನಾದ ವರುಣನೇ ಸೂರ್ಯನಿಗೆ ಅನುಕ್ರಮವಾಗಿ ಸಂಚರಿಸುವುದಕ್ಕೆ ಹೆಜ್ಜೆಯಿಡಲು ಆಶ್ರಯವಿಲ್ಲದ ನಿರಾಲಂಬವಾದ ಅಂತರಿಕ್ಷದಲ್ಲಿ ವಿಸ್ತೀರ್ಣವಾದ ಮಾರ್ಗವನ್ನು ಮಾಡಿರುತ್ತಾನೆ. ನಮಗೂ ಹೆಜ್ಜೆಯಿಡುವುದಕ್ಕೆ ವರುಣರಾಜನು ಮಾರ್ಗವನ್ನು

ವೇಽಕರುತಾಪವಕ್ತಾ ಹೃದಯಾವಿಧಶ್ಚಿತ್ ॥ ಶತಂ ತೇ

ರಾಜನ್ಭಿಷಜಸ್ಸಹಸ್ರಮುರ್ವೀ ಗಂಭೀರಾ ಸುಮತಿಷ್ಟೇ ಅಸ್ತು।

---

ಅಕಃ । ಉತ । ಅಪವಕ್ತೇತ್ಯಪ-ವಕ್ತಾ । ಹೃದಯಾವಿಧ ಇತಿ ಹೃದಯ-ವಿಧಃ । ಚಿತ್॥

ಶತಮ್ । ತೇ। ರಾಜನ್ । ಭಿಷಜಃ । ಸಹಸ್ರಮ್ । ಉರ್ವೀ । ಗಂಭೀರಾ । ಸುಮತಿ

ರಿತಿ ಸು-ಮತಿಃ । ತೇ । ಅಸ್ತು ॥

---

| ಮಂತ್ರ | ವಿನಿಯೋಗ |
| --- | --- |
| ಶತಂ ತೇ...ಪ್ರಮುಮುಗ್ಧ್ಯಸ್ಮತ್ ॥ | ನೀರನ್ನು ನೋಡಿ ಯಜಮಾನನು ಜಪಿಸಲು. |

---

**ಅಕಃ** = [ಮಾರ್ಗವನ್ನು] ಮಾಡಲಿ; **ಉತ** = ಮತ್ತು; **ಅಪವಕ್ತಾ** = [ನಮ್ಮನ್ನು] [ಪರೋಕ್ಷವಾಗಿ] ನಿಂದಿಸುವವನೂ; **ಚಿತ್** = ಮತ್ತು; **ಹೃದಯಾವಿಧಃ** = ಶರೀರವನ್ನು ಪ್ರಹರಿಸುವವನೂ/ಎದುರಿನಲ್ಲಿಯೇ ಚುಚ್ಚುವಂತಹ ಮಾತನ್ನು ಹೇಳುವವನೂ; **ಅಕಃ** = ಅಡ್ಡಿಪಡಿಸದೇ ಮಾರ್ಗವನ್ನು ಸುಗಮಗೊಳಿಸಲಿ. **ಹೇ ರಾಜನ್** = ಎಲೈ ವರುಣ ರಾಜನೇ! **ತೇ** = ನಿನಗೆ [ನಿನ್ನ ಅಧೀನದಲ್ಲಿ] **ಶತಮ್**=ನೂರು; **ಸಹಸ್ರಮ್**= ಸಾವಿರ/ ಅಸಂಖ್ಯಾತರಾದ; **ಭಿಷಜಃ** = ನಮ್ಮ ಉಪದ್ರವಗಳನ್ನು ಹೋಗಲಾಡಿಸತಕ್ಕವರು; [ಇರುತ್ತಾರೆ] [ಆದುದರಿಂದ] **ಉರ್ವೀ** = ಹೆಚ್ಚಾದ/ಸಾರ್ವಕಾಲಿಕವಾದ; **ಗಂಭೀರಾ** = ಆದರ ಯುಕ್ತವಾದ; **ತೇ**=ನಿನ್ನ; **ಸುಮತಿಃ**=ಅನುಗ್ರಹಬುದ್ಧಿಯು; **ಅಸ್ತು** = ನಮ್ಮ ಮೇಲಿರಲಿ.

---

ಮಾಡಲಿ. ನಮ್ಮನ್ನು ನಿಂದಿಸುವ ಶತ್ರುವೂ, ನಮ್ಮ ಶರೀರವನ್ನು ಪ್ರಹರಿಸುವ ಶತ್ರುವೂ ವರುಣಪ್ರೇರಿತನಾಗಿ ನಮಗೆ ಮಾರ್ಗವಿಘ್ನವನ್ನುಂಟುಮಾಡದೆ ಮಾರ್ಗವು ಸುಗಮವಾಗುವಂತೆ ಮಾಡಲಿ.

ವರುಣರಾಜನು ಸೂರ್ಯನನ್ನು ಅನುಸರಿಸಿ [ಸ್ವರ್ಗಕ್ಕೆ] ಹೋಗುವುದಕ್ಕಾಗಿ ಒಳ್ಳೆಯ ಕೆಲಸಗಳಲ್ಲಿ ಪುರುಷನು ಪ್ರವೃತ್ತನಾಗುವಂತೆ ಮಾಡುತ್ತಾನೆ. ಅವನೇ ಅಸಾಧುಕರ್ಮಗಳಲ್ಲಿ ಪ್ರವರ್ತಿಸುವಂತೆಯೂ ಮಾಡುತ್ತಾನೆ.

**ಬಾಧಸ್ವ ದ್ವೇಷೋ ನಿರ್‌ಋತಿಂ ಪರಾಚ್ಯೈಃ ಕೃತಂ ಚಿದೇನಃ ಪ್ರ ಮುಮುಗ್ಧ್ಯಸ್ಮತ್ ॥ ಅಭಿಷ್ಠಿತೋ ವರುಣಸ್ಯ ಪಾಶೋಽಗ್ನೇರನೀಕಮಪ ಆ ವಿವೇಶ ।**

---

ಬಾಧಸ್ವ । ದ್ವೇಷಃ । ನಿರ್‌ಋತಿಮಿತಿ ನಿಃ-ಋತಿಮ್ । ಪರಾಚ್ಯೈಃ । ಕೃತಮ್ । ಚಿತ್। ಏನಃ। ಪ್ರೇತಿ । ಮುಮುಗ್ಧಿ । ಅಸ್ಮತ್॥ ಅಭಿಷ್ಠಿತ ಇತ್ಯಭಿ-ಸ್ಥಿತಃ। ವರುಣಸ್ಯ । ಪಾಶಃ। ಅಗ್ನೇಃ । ಅನೀಕಮ್ । ಅಪಃ । ಏತಿ । ವಿವೇಶ ॥

---

| ಮಂತ್ರ | ವಿನಿಯೋಗ |
|---|---|
| ಅಭಿಷ್ಠಿತಃ.....ಪಾಶಃ । | ಜಲಾಶಯದ ಕೊನೆಯ ಭಾಗದ ನೀರನ್ನು ಕಾಲಿನಿಂದ ತುಳಿಯಲು. |
| ೧) ಅಗ್ನೇರನೀಕಂ....ಯಕ್ಷ್ವಗ್ನೇ । | ನೀರಿನಲ್ಲಿ ಬರ್ಹಿಸ್ಸನ್ನು ಹಾಕಲು |
| ೨) ಪ್ರತಿ ತೇ..ಉಚ್ಛುರಣ್ಯೇತ್ । | ಬರ್ಹಿಸ್ಸಿನ ಮೇಲೆ ಹೋಮಮಾಡಲು –ಬೌ. |

---

ದ್ವೇಷಃ = ನಮ್ಮ ಶತ್ರುಗಳನ್ನು; ಬಾಧಸ್ವ = ಹಿಂಸಿಸು; ನಿರ್‌ಋತಿಮ್ = [ಯಜ್ಞಕ್ಕೆ ವಿಘಾತವನ್ನುಂಟುಮಾಡುವ] ರಾಕ್ಷಸಿಯನ್ನು; ಪರಾಚ್ಯೈಃ ಕುರು = ತಿರಸ್ಕರಿಸು/ದೂರ ಮಾಡು; ಏನಃ = ಪಾಪವು; ಕೃತಮ್ ಚಿತ್ = ನಮ್ಮಿಂದ ಮಾಡಲ್ಪಟ್ಟಿದ್ದರೆ / ಮಾಡಲ್ಪಟ್ಟಿದ್ದರೂ; [ಆ ಪಾಪವನ್ನು;] ಅಸ್ಮತ್ ಪ್ರ ಮುಮುಗ್ಧಿ = ನಮ್ಮಿಂದ ಬಿಡಿಸು/ಹೋಗಲಾಡಿಸು; ⁘ ವರುಣಸ್ಯ = ವರುಣದೇವನ; ಪಾಶಃ= ಪಾಶವು*; ಅಭಿಷ್ಠಿತಃ = ಕಾಲಿನಿಂದ ತುಳಿಯಲ್ಪಟ್ಟು ತಿರಸ್ಕೃತವಾಗಿದೆ. ⁘ ಅಗ್ನೇಃ = ಅಗ್ನಿಯಾದ ನಿನ್ನ; ಅನೀಕಮ್ = ಮುಖವು; ಅಪಃ = ನೀರುಗಳನ್ನು; ಆ ವಿವೇಶ = ಪ್ರವೇಶಿಸಿತು.

---

ವರುಣರಾಜನೇ! ನಿನ್ನ ಅಧೀನದಲ್ಲಿ ನಮ್ಮ ಉಪದ್ರವವನ್ನು ಹೋಗಲಾಡಿಸಬಲ್ಲ

---

*ಸೂಕ್ಷ್ಮವಾದ ಎಳೆಗಳ ಆಕಾರವುಳ್ಳ, ಮಾನವನನ್ನು ಬಂಧಿಸಬಲ್ಲ, ನೀರಿನಲ್ಲಿರುವ ಪ್ರಾಣಿ ವಿಶೇಷವೇ ವರುಣನ ಪಾಶ.

ಆ ತೂ ನ [ನಃ (ಳ)] ಉಪ ಗಂತನ ॥ ಯಾ ವಶ್ಶರ್ಮ ಶಶಮಾನಾಯ
ಸಂತಿ ತ್ರಿಧಾತೂನಿ ದಾಶುಷೇ ಯಚ್ಛತಾಧಿ । ಅಸ್ಮಭ್ಯಂ ತಾನಿ ಮರುತೋ
ವಿಯಂತ ರಯಿಂ ನೋ ಧತ್ತ ವೃಷಣಃ ಸುವೀರಮ್ ॥ ಅದಿತಿರ್ನ
ಉರುಷ್ಯತ್ವದಿತಿಶ್ಶರ್ಮ ಯಚ್ಛತು । ಅದಿತಿಃ ಪಾತ್ವಗ್ಂಹಸಃ ॥
ಮಹೀಮೂ ಷು ಮಾತರಗ್ಂ ಸುವ್ರತಾನಾಮೃತಸ್ಯ ಪತ್ನೀಮವಸೇ
ಹುವೇಮ । ತುವಿಕ್ಷತ್ರಾಮಜರಂತೀಮುರೂಚೀಗ್ಂ ಸುಶರ್ಮಾಣಮದಿತಿ
ಗ್ಂ ಸುಪ್ರಣೀತಿಮ್ ॥ ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಗ್ಂ
ಸುಶರ್ಮಾಣಮದಿತಿಗ್ಂ ಸುಪ್ರಣೀತಿಮ್ । ದೈವೀಂ ನಾವಗ್ಂ ಸ್ವರಿ
ತ್ರಾಮನಾಗಸಮಸ್ರವಂತೀಮಾರುಹೇಮಾ ಸ್ವಸ್ತಯೇ ॥ ಇಮಾಗ್ಂ
ಸು ನಾವಮಾರುಹಗ್ಂ ಶತಾರಿತ್ರಾಗ್ಂ ಶತಸ್ಫ್ಯಮ್ ॥ ಅಚ್ಛಿದ್ರಾಂ
ಪಾರಯಿಷ್ಣುಮ್ ॥೧೧-51॥

[ದಿವಾ ಸ ಸಹಸ್ರಿಣಂ ವೈಶ್ವಾನರಾಽಽದಿತ್ಯ ತೂನೋಽನೇಹಸಗ್ಂ
ಸುಶರ್ಮಾಣಮೇಕಾನ್ನವಿಗ್ಂಶತಿಶ್ಚ॥]

ದೇವಾಸ ರಾಃ ಪರಾ ಭೂಮಿರ್ಭೂಮಿರುಪ ಪ್ರಯಂತಸ್ಸಂಪಶ್ಯಾಮ್ಯ

ಯಜ್ಞಸ್ಸಂಪಶ್ಯಾಮ್ಯಗ್ನಿಹೋತ್ರಂ ಮಮ ನಾಮ ವೈಶ್ವಾನರ ಏಕಾದಶ

॥ ೧೧ ॥

ದೇವಾಸುರಾಃ ಕ್ರುದ್ಧಸ್ಸಂಪಶ್ಯಾಮಿ ಸಂಪಶ್ಯಾಮಿ ನಕ್ತಮುಪಗಂತನ್ನೈಕ

ಪಂಚಾಶತ್ ॥ ೫೧ ॥



॥ ದೇವಾಸುರಾಃ ಪಾತಯಿಷ್ಣುಮ್ ॥

ಹರಿಃ ಓಂ ಶ್ರೀ ಕೃಷ್ಣಾರ್ಪಣಮಸ್ತು.

ಇತಿ ಪ್ರಥಮಕಾಂಡೇ ಪಂಚಮಃ ಪ್ರಶ್ನಃ

---

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಪಂಚಮಃ ಪ್ರಶ್ನಃ

**ಹರಿಃ ಓಮ್ ॥**

ದೇವಾಸುರಾಸ್ಸಂಯತ್ತಾ ಆಸನ್ತೇ ದೇವಾ

***ದೇವಾಸುರಾ ಇತಿ ದೇವ-ಅಸುರಾಃ । ಸಂಯತ್ತಾ ಇತಿ ಸಮ್-ಯತ್ತಾಃ । ಆಸನ್ ।** ತೇ । **ದೇವಾಃ ।**

ಮೊದಲಿನ ನಾಲ್ಕು ಪ್ರಶ್ನೆಗಳಲ್ಲಿ ಪ್ರಕೃತಿಯಾಗಗಳಾದ ದರ್ಶ-ಪೂರ್ಣಮಾಸ, ಪಶುಬಂಧ, ಸೋಮಯಾಗಗಳಲ್ಲಿ ಅಧ್ವರ್ಯುವಿಗೆ ಸಂಬಂಧಿಸಿದ ಮಂತ್ರಗಳು ಹೇಳಲ್ಪಟ್ಟಿವೆ. ಈ ಐದನೆಯ ಪ್ರಶ್ನೆಯ ಆರಂಭದಲ್ಲಿ ಪುನರಾಧೇಯವು ಹೇಳಲ್ಪಟ್ಟಿದೆ. ಅಗ್ನ್ಯಾಧಾನವನ್ನು ಹೇಳಿದ ನಂತರ ಪುನರಾಧಾನವನ್ನು ಹೇಳಬೇಕಾಗಿತ್ತು. ಆದರೂ ಸಾರಸ್ವತನು ವರವನ್ನು ಕೇಳಿದ ರೀತಿಯಲ್ಲಿ ಅಧ್ಯಯನಕ್ರಮವಿರುವುದರಿಂದ ಅದನ್ನು ಅನುಸರಿಸಿ ಪುನರಾಧೇಯವನ್ನು ಆಧಾನಕ್ಕೆ ಮೊದಲೇ ಹೇಳಲಾಗಿದೆ. ಸರಸ್ವತಿಯು ತನ್ನ ಮಗನಾದ ಸಾರಸ್ವತನಿಗೆ ಅವನ ಬುದ್ಧಿಯಲ್ಲಿರುವ ಕ್ರಮವನ್ನು ಅನುಸರಿಸಿ ವರವನ್ನಿತ್ತಳು. ಆ ಕ್ರಮವನ್ನೇ ವೇದಾಧ್ಯಯನ ಮಾಡುವವರೂ ಅನುಸರಿಸುತ್ತಾರೆ.

ಈ ಐದನೆಯ ಪ್ರಶ್ನೆಯಲ್ಲಿ 11 ಅನುವಾಕಗಳಿವೆ. ಅವುಗಳಲ್ಲಿ ಹೇಳಿರುವ ವಿಷಯಗಳು ಹೀಗಿವೆ.

| ಅನುವಾಕ | ವಿಷಯ |
|---|---|
| ೧-೨ | ಪುನರಾಧೇಯ [ವಿಧಿ] |
| ೩ | ಪುನರಾಧೇಯ [ಮಂತ್ರಗಳು] |
| ೪ | ಪುನರಾಧೇಯ [ವಿಧಿ] |
| ೫-೬ | ಅಗ್ನ್ಯುಪಸ್ಥಾನ [ಮಂತ್ರಗಳು] |

***ಕಾಂಡಪಾಠದಂತೆ ಇದು ಆಗ್ನೇಯಕಾಂಡದ ಪುನರಾಧೇಯದ ಬ್ರಾಹ್ಮಣ. ನೋಡಿ ಸಂಪುಟ ೧ ಭಾಗ ೨ ಪುಟ ೯೯.೨೮**

ವಿಜಯಮುಪಯಂತೋಽಗ್ನೌ ವಾಮಂ ವಸು ಸಂನ್ಯದಧತೇ-
ದಮು ನೋ ಭವಿಷ್ಯತಿ ಯದಿ ನೋ ಜೇಷ್ಯಂತೀತಿ

---

ವಿಜಯಮಿತಿ ವಿ-ಜಯಮ್ । ಉಪಯಂತ ಇತ್ಯುಪ-ಯಂತಃ । ಅಗ್ನೌ । ವಾಮಮ್।
ವಸು । ಸಮ್ । ನೀತಿ । ಅದಧತ । ಇದಮ್ । ಉ । ನಃ । ಭವಿಷ್ಯತಿ । ಯದಿ ।
ನಃ । ಜೇಷ್ಯಂತಿ । ಇತಿ ।

---

| | |
|---|---|
| ೭-೮-೯ | ಅಗ್ನ್ಯುಪಸ್ಥಾನ [ಬ್ರಾಹ್ಮಣ] |
| ೧೦ | *ಅಗ್ನ್ಯುಪಸ್ಥಾನ [ಮಂತ್ರಗಳು] |
| ೧೧ | ಕಾಮ್ಯಯಾಜ್ಯಾ-ಪುರೋನುವಾಕ್ಯೆ |

## ಪುನರಾಧಾನ ವಿಧಿ

***ರಜತ(ಬೆಳ್ಳಿ)ದ ಉತ್ಪತ್ತಿ; [ಪ್ರಾಸಂಗಿಕವಾಗಿ ಹೇಳಿರುವ]ಯಜ್ಞದಲ್ಲಿ ರಜತದಾನನಿಷೇಧ.**

| ಬ್ರಾಹ್ಮಣಭಾಗ | ವಿವರಣೆ |
|---|---|
| ದೇವಾಸುರಾಃ ಸಂಯತ್ತಾ ಆಸನ್ | ದೇವತೆಗಳೂ ಅಸುರರೂ ಯುದ್ಧ ಮಾಡಲು ಉದ್ಯುಕ್ತರಾದರು. |
| ತೇ ದೇವಾಃ ವಿಜಯಮ್ ಉಪಯಂತಃ | ಆ ದೇವತೆಗಳು [ಮೊದಲಿನ] ಯುದ್ಧದಲ್ಲಿ ಗೆಲುವನ್ನು ಹೊಂದಿದವರಾಗಿ |
| ಅಗ್ನೌ ವಾಮಮ್ ವಸು ಸಮ್ ನ್ಯದಧತ; | [ಅಸುರರಿಂದ ಗೆದ್ದುಕೊಂಡ] ಶ್ರೇಷ್ಠವಾದ ಧನವನ್ನು ಅಗ್ನಿಯಲ್ಲಿ ಇಟ್ಟರು. |
| ಇದಮ್ ಉ ನಃ ಭವಿಷ್ಯತಿ ಯದಿ ನಃ ಜೇಷ್ಯಂತಿ ಇತಿ | ಒಂದು ವೇಳೆ ಇನ್ನೊಂದು ಯುದ್ಧದಲ್ಲಿ ರಾಕ್ಷಸರು ನಮ್ಮನ್ನು ಗೆದ್ದರೆ [ಅಗ್ನಿಯಲ್ಲಿ ಇಟ್ಟಿರುವ] ಹಣವು ನಮಗೆ ಒದಗುವುದು ಎಂದು [ತಿಳಿದು ಧನವನ್ನು ಅಗ್ನಿಯಲ್ಲಿ ಇಟ್ಟರು.] |

---

*ಇದರಲ್ಲಿ ಯಾಜಮಾನಮಂತ್ರಗಳೂ ಇವೆ.

ತದಗ್ನಿರ್ನ್ಯಕಾಮಯತ ತೇನಾಪಾಕ್ರಾಮತ್ತದ್ದೇವಾ ವಿಜಿತ್ಯ

ವರುರುತ್ಸಮಾನಾ ಅನ್ವಾಯನ್ತದಸ್ಯ ಸಹಸಾಽಽದಿತ್ಸಂತ

ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ

---

ತತ್ । ಅಗ್ನಿಃ । ನೀತಿ । ಅಕಾಮಯತ । ತೇನ । ಅಪೇತಿ । ಅಕ್ರಾಮತ್ । ತತ್ । ದೇವಾಃ । ವಿಜಿತ್ಯೇತಿ ವಿ-ಜಿತ್ಯ । ಅವರುರುತ್ಸಮಾನಾ ಇತ್ಯವ-ರುರುತ್ಸಮಾನಾಃ । ಅನ್ವಿತಿ । ಆಯನ್ನ್ । ತತ್ । ಅಸ್ಯ । ಸಹಸಾ । ಏತಿ । ಅದಿತ್ಸಂತ । ಸಃ । ಅರೋದೀತ್ । ಯತ್ । ಅರೋದೀತ್ । ತತ್ । ರುದ್ರಸ್ಯ । ರುದ್ರತ್ವಮಿತಿ ರುದ್ರ-ತ್ವಮ್ ।

---

| | |
|---|---|
| ತತ್ ಅಗ್ನಿಃ ನ್ಯಕಾಮಯತ | ಅದನ್ನು ಅಗ್ನಿಯು ತನ್ನದನ್ನಾಗಿ ಮಾಡಿಕೊಳ್ಳ ಬೇಕೆಂದು ಬಯಸಿದನು. |
| ತೇನ ಅಪಾಕ್ರಾಮತ್ | ಆ ಧನದೊಡನೆ ದೇವತೆಗಳ ಸಮೀಪದಿಂದ ದೂರಕ್ಕೆ ಹೊರಟು ಓಡಿಹೋದನು. |
| ತತ್ ದೇವಾಃ ವಿಜಿತ್ಯ, ಅವ ರುರುತ್ಸಮಾನಾಃ ಅನ್ವಾಯನ್ | [ಅದೃಷ್ಟವಿಶೇಷದಿಂದ] ಯುದ್ಧದಲ್ಲಿ ಗೆಲುವನ್ನು ಪಡೆದ ದೇವತೆಗಳು ಮೊದಲು ಅಗ್ನಿಯಲ್ಲಿ ಇಟ್ಟಿದ್ದ ಹಣಕ್ಕಾಗಿ ಅಗ್ನಿಯನ್ನು ಹಿಂಬಾಲಿಸಿದರು. |
| ತತ್ ಅಸ್ಯ ಸಹಸಾ ಆ ಅದಿತ್ಸಂತ | ಆ ಹಣವನ್ನು ಅಗ್ನಿಯಿಂದ ಬಲಾತ್ಕಾರವಾಗಿ ಕಿತ್ತುಕೊಳ್ಳಲು ಬಯಸಿದರು. |
| ಸಃ ಅರೋದೀತ್ | ಆ ಅಗ್ನಿಯು ಅತ್ತನು. |
| ಯತ್ ಅರೋದೀತ್ | ಯಾವ ಕಾರಣದಿಂದ ಅಗ್ನಿಯು ರೋದಿಸಿದನೋ, |
| ತತ್ ರುದ್ರಸ್ಯ ರುದ್ರತ್ವಮ್ | ಆ ಕಾರಣದಿಂದ ಅಗ್ನಿಗೆ [ರುದ್ರರೂಪನಾದ ಅಗ್ನಿಗೆ]* ರುದ್ರತ್ವವು [ರುದ್ರನೆನ್ನುವಿಕೆಯು] ಉಂಟಾಯಿತು. [ರೋದಿಸಿದುದರಿಂದ ಅಗ್ನಿಗೆ ರುದ್ರನೆಂಬ ಹೆಸರು ಬಂದಿತು.] |

---

* 'ರುದ್ರೋ ವಾ ಏಷ ಯದಗ್ನಿಃ' ಎಂಬ ಶ್ರುತಿಯು ಅಗ್ನಿಯು ರುದ್ರಸ್ವರೂಪನೆಂದು ಹೇಳಿದೆ.

ಯದಶ್ರ್ವಶೀಯತ [ತತ್ (೧) ರಜತಗ್ಂ] ತದ್ರಜತಗ್ಂ ಹಿರಣ್ಯಮಭವತ್ತಸ್ಮಾದ್ರಜತಗ್ಂ ಹಿರಣ್ಯಮದಕ್ಷಿಣ್ಯಮಶ್ರು ಜಗ್ಂ ಹಿ ಯೋ ಬರ್ಹಿಷಿ ದದಾತಿ ಪುರಾಽಸ್ಯ ಸಂವತ್ಸರಾದ್ಗೃಹೇ ರುದಂತಿ

---

ಯತ್। ಅಶ್ರು । ಅಶೀಯತ। ತತ್। (೧) ರಜತಮ್। ಹಿರಣ್ಯಮ್। ಅಭವತ್। ತಸ್ಮಾತ್। ರಜತಮ್ । ಹಿರಣ್ಯಮ್ । ಅದಕ್ಷಿಣ್ಯಮ್ । ಅಶ್ರುಜಮಿತ್ಯಶ್ರು-ಜಮ್। ಹಿ । ಯಃ। ಬರ್ಹಿಷಿ। ದದಾತಿ। ಪುರಾ। ಅಸ್ಯ। ಸಂವತ್ಸರಾದಿತಿ ಸಮ್-ವತ್ಸರಾತ್। ಗೃಹೇ । ರುದಂತಿ।

---

| | |
|---|---|
| ಯತ್ ಅಶ್ರು ಅಶೀಯತ | [ಅಗ್ನಿಯು ರೋದಿಸಿದಾಗ] ಯಾವ ಕಣ್ಣೀರು [ಭೂಮಿಯ ಮೇಲೆ] ಬಿದ್ದಿತೋ |
| ತತ್ ರಜತಮ್ ಹಿರಣ್ಯಮ್ ಅಭವತ್ | ಅದು ರಜತ [ಬೆಳ್ಳಿ]ರೂಪವಾದ ಧನವಾಯಿತು. |
| ತಸ್ಮಾತ್ ರಜತಮ್ ಹಿರಣ್ಯಮ್ ಅದಕ್ಷಿಣ್ಯಮ್ | [ಹೀಗೆ ಕಣ್ಣೀರಿನಿಂದ ಹುಟ್ಟಿದ] ಕಾರಣದಿಂದ ರಜತರೂಪಧನವು [ಯಜ್ಞದಲ್ಲಿ] ದಕ್ಷಿಣೆಯಾಗಿ ಕೊಡಲು ಯೋಗ್ಯವಾದುದಲ್ಲ. |
| ಅಶ್ರುಜಮ್ ಹಿ | [ಆ ಬೆಳ್ಳಿಯು] ಅಗ್ನಿಯ ಕಣ್ಣೀರಿನಿಂದ ಹುಟ್ಟಿದುದಷ್ಟೆ. |
| ಯಃ ಬರ್ಹಿಷಿ ದದಾತಿ ಪುರಾ ಅಸ್ಯ ಸಂವತ್ಸರಾತ್ ಗೃಹೇ ರುದಂತಿ | ಯಾವ ಯಜಮಾನನು ಯಜ್ಞದಲ್ಲಿ ಬೆಳ್ಳಿಯನ್ನು ದಕ್ಷಿಣೆಯನ್ನಾಗಿ ಕೊಡುತ್ತಾನೆಯೋ, ಆ ಯಜಮಾನನ ಮನೆಯಲ್ಲಿ ಒಂದು ಸಂವತ್ಸರಕ್ಕೆ ಮೊದಲು [ರೋದನಕರವಾದ ಅಹಿತಕರ ಘಟನೆಯು ಸಂಭವಿಸಿ] ಮನೆಯವರು ಅಳುತ್ತಾರೆ. |

---

*ಹಿರಣ್ಯ=ಧನ, ಬೆಳ್ಳಿ, ಚಿನ್ನ. '.......ಹಿರಣ್ಯಂ ಚ ಹೇಮರೂಪ್ಯೇ ಕೃತಾಕೃತೇ । 'ಹಿರಣ್ಯಂ ದ್ರವಿಣಂ ದ್ಯುಮ್ನಮ್' ಅಮರಕೋಶ, ವೈಶ್ಯವರ್ಗ, 91.

ತಸ್ಮಾದ್ಬರ್ಹಿಷಿ ನ ದೇಯಗ್ಂ ಸೋಽಗ್ನಿರಬ್ರವೀದ್ಭಾಗ್ಯಸಾನ್ಯಥ ವ ಇದಮಿತಿ ಪುನರಾಧೇಯಂ ತೇ ಕೇವಲಮಿತ್ಯಬ್ರುವನ್ನೃಧ್ನವತ್ಖಲು ಸ ಇತ್ಯಬ್ರವೀದ್ಯೋಽಮದ್ದೇವತ್ಯಮಗ್ನಿ ಮಾದಧಾತಾ ಇತಿ

---

ತಸ್ಮಾತ್ । ಬರ್ಹಿಷಿ ನ। ದೇಯಮ್ । ಸಃ । ಅಗ್ನಿಃ । ಅಬ್ರವೀತ್। ಭಾಗೀ। ಅಸಾನಿ। ಅಥ। ವಃ । ಇದಮ್। ಇತಿ। ಪುನರಾಧೇಯಮಿತಿ ಪುನಃ-ಆಧೇಯಮ್। ತೇ । ಕೇವಲಮ್। ಇತಿ। ಅಬ್ರುವನ್। ಋಧ್ನವತ್। ಖಲು । ಸಃ । ಇತಿ । ಅಬ್ರವೀತ್ । ಯಃ । ಮದ್ದೇವತ್ಯಮಿತಿ ಮತ್-ದೇವತ್ಯಮ್ । ಅಗ್ನಿಮ್ । ಆದಧಾತಾ ಇತ್ಯಾ-ದಧಾತೈ। ಇತಿ ।

---

| | |
|---|---|
| ತಸ್ಮಾತ್ ಬರ್ಹಿಷಿ ನ ದೇಯಮ್ | ಆದುದರಿಂದ ಯಜ್ಞದಲ್ಲಿ ಬೆಳ್ಳಿಯನ್ನು ದಕ್ಷಿಣೆಯಾಗಿ ಕೊಡಬಾರದು+. [ಹೀಗೆ ಪ್ರಾಸಂಗಿಕವಾಗಿ ರಜತದಾನವನ್ನು ನಿಷೇಧಿಸಲಾಗಿದೆ.] |

**ಪುನರಾಧಾನವು ಅಗ್ನಿಯ ಭಾಗವಾದುದು ಹೇಗೆ?**

| | |
|---|---|
| ಸಃ ಅಗ್ನಿಃ ಅಬ್ರವೀತ್ ಭಾಗೀ ಅಸಾನಿ ಅಥ ವಃ ಇದಮ್ ಇತಿ | [ಅನಂತರ] ಆ ಅಗ್ನಿಯು '[ಮೊದಲು ನಾನು] ಭಾಗವುಳ್ಳವನಾಗಬೇಕು; ಅನಂತರ ನನ್ನಲ್ಲಿರುವ ಧನವು ನಿಮ್ಮದು' ಎಂದು ಹೇಳಿದನು. |
| ಪುನರಾಧೇಯಮ್ ತೇ ಕೇವಲಮ್ ಇತಿ ಅಬ್ರುವನ್ | [ದೇವತೆಗಳು] 'ಪುನರಾಧೇಯವು [ಮತ್ತೆ ಆಧಾನ ಮಾಡುವುದು] ನಿನಗೆ ಮಾತ್ರವೇ [ಬೇರೆಯವರಿಗಿಲ್ಲದ ಭಾಗವಾಗಲಿ] ಎಂದು ಹೇಳಿದರು. |
| ಋಧ್ನವತ್ ಖಲು ಸಃ ಇತಿ ಅಬ್ರವೀತ್ ಯಃ ಮದ್ದೇವತ್ಯಮ್ ಅಗ್ನಿಮ್ ಆದಧಾತೈ ಇತಿ | ಆ ಅಗ್ನಿಯು 'ಯಾವನು ಅಗ್ನಿದೇವತಾಕವಾದ ಪುನರಾಧಾನವನ್ನು ಮಾಡುತ್ತಾನೆಯೋ ಅವನು ಋದ್ಧಿ [ಸಮೃದ್ಧಿ]ಯನ್ನು ಹೊಂದಲಿ' ಎಂದು ಹೇಳಿದನು. |

---

+ ಬ್ರಾಹ್ಮಣಭಾಗಗಳಲ್ಲಿ ಪದಶಃ ವಿವರಣೆಯಿಂದಲೇ ತಾತ್ಪರ್ಯವು ತಿಳಿಯುವಂತಿರುವುದರಿಂದ ತಾತ್ಪರ್ಯವನ್ನು ಬೇರೆ ನೀಡಿಲ್ಲ.

ತಂ ಪೂಷಾಽಽಧತ್ತ ತೇನ [೨] ಪೂಷಾಽಽರ್ಧ್ನೋತ್ತಸ್ಮಾ

ತ್ಪೌಷ್ಣಾಃ ಪಶವ ಉಚ್ಯಂತೇ ತಂ ತ್ವಷ್ಟಾಽಽಧತ್ತ ತೇನ

ತ್ವಷ್ಟಾರ್ಧ್ನೋತ್ತಸ್ಮಾತ್ತ್ವಾಷ್ಟ್ರಾಃ ಪಶವ ಉಚ್ಯಂತೇ

---

**ತಮ್** । ಪೂಷಾ । ಏತಿ । ಅಧತ್ತ । ತೇನ (೨)। ಪೂಷಾ । ಆರ್ಧ್ನೋತ್ । ತಸ್ಮಾತ್।
ಪೌಷ್ಣಾಃ। ಪಶವಃ । ಉಚ್ಯಂತೇ । ತಮ್। ತ್ವಷ್ಟಾ । ಏತಿ । ಅಧತ್ತ । ತೇನ । ತ್ವಷ್ಟಾ।
ಆರ್ಧ್ನೋತ್ । ತಸ್ಮಾತ್ । ತ್ವಾಷ್ಟ್ರಾಃ । ಪಶವಃ । ಉಚ್ಯಂತೇ ।

---

[ಅದಕ್ಕೆ ದೇವತೆಗಳು ಒಪ್ಪಿದರು. ಹೀಗೆ ಪುನರಾಧಾನವು ಅಗ್ನಿಯ ಭಾಗವಾಯಿತು. ಆದುದರಿಂದ ಸಮೃದ್ಧಿಯನ್ನು ಬಯಸುವವನು ಪುನರಾಧಾನವನ್ನು ಮಾಡಬೇಕು.]

ಇಲ್ಲಿ ದೇವತಾವಾಚಕವಿರುವುದರಿಂದ ಇದು ಪುನರಾಧಾನದ ವಿಧಿ. ವಿಧಿಯ ಸ್ವರೂಪವನ್ನು ಹೀಗೆ ತಿಳಿಸಬಹುದು. **'ಅಗ್ನಿದೇವತಾಕೇನ ಪುನರಾಧಾನೇನ ಸಮೃದ್ಧಿಂ ಭಾವಯೇತ್'**. ಇದು ವಿಧಿಯ ಸ್ವರೂಪ.

**ಪುನರಾಧೇಯವನ್ನು ಮಾಡಿ ಋದ್ಧಿಯನ್ನು ಯಾರು ಯಾರು ಹೊಂದಿದರು?**

| | |
|---|---|
| ತಮ್ ಪೂಷಾ ಆ ಅಧತ್ತ, ತೇನ ಪೂಷಾ ಆರ್ಧ್ನೋತ್ | ಆ ಪುನರಾಧೇಯವನ್ನು ಪೂಷದೇವನು ಮಾಡಿದನು. ಆದರಿಂದ ಪೂಷನು ಪಶುಸಮೃದ್ಧಿಯನ್ನು ಹೊಂದಿದನು. |
| ತಸ್ಮಾತ್ ಪೌಷ್ಣಾಃ ಪಶವಃ ಉಚ್ಯಂತೇ | ಆದುದರಿಂದ 'ಪಶುಗಳು ಪೂಷದೇವತಾ ಸಂಬಂಧಿಗಳು' ಎಂದು ಹೇಳಲ್ಪಡುತ್ತವೆ. |
| ತಮ್ ತ್ವಷ್ಟಾ ಆ ಅಧತ್ತ, ತೇನ ತ್ವಷ್ಟಾ ಆರ್ಧ್ನೋತ್ | ತ್ವಷ್ಟೃದೇವನು ಪುನರಾಧೇಯವನ್ನು ಮಾಡಿದನು. ಆದರಿಂದ ತ್ವಷ್ಟೃದೇವನು ಪಶುಸಮೃದ್ಧಿಯನ್ನು ಹೊಂದಿದನು. |
| ತಸ್ಮಾತ್ ತ್ವಾಷ್ಟ್ರಾಃ ಪಶವ ಉಚ್ಯಂತೇ | ಆ ಕಾರಣದಿಂದ 'ಪಶುಗಳು ತ್ವಷ್ಟೃಸಂಬಂಧಿಗಳು' ಎನಿಸಿಕೊಳ್ಳುತ್ತವೆ. |

ತಂ ಮನುರಾಽಧತ್ತ ತೇನ ಮನುರಾರ್ಧ್ನೋತ್ತಸ್ಮಾನ್ಮಾನವ್ಯಃ

ಪ್ರಜಾ ಉಚ್ಯಂತೇ ತಂ ಧಾತಾಽಽಧತ್ತ ತೇನ

ಧಾತಾಽಽರ್ಧ್ನೋತ್ಸಂವತ್ಸರೋ ವೈ ಧಾತಾ

---

ತಮ್ । ಮನುಃ । ಏತಿ । ಅಧತ್ತ । ತೇನ । ಮನುಃ । ಆರ್ಧ್ನೋತ್ । ತಸ್ಮಾತ್ । ಮಾನವ್ಯಃ । ಪ್ರಜಾ ಇತಿ ಪ್ರ-ಜಾಃ । ಉಚ್ಯಂತೇ । ತಮ್ । ಧಾತಾ । ಏತಿ । ಅಧತ್ತ । ತೇನ । ಧಾತಾ । ಆರ್ಧ್ನೋತ್ । ಸಂವತ್ಸರ ಇತಿ ಸಮ್-ವತ್ಸರಃ । ವೈ । ಧಾತಾ ।

---

| | |
|---|---|
| ತಮ್ ಮನುಃ ಆ ಅಧತ್ತ, ತೇನ ಮನುಃ ಆರ್ಧ್ನೋತ್ | ಮನುವು ಪುನಃ ಅಗ್ನಿಯನ್ನು ಆಧಾನ ಮಾಡಿದನು. ಆದರಿಂದ ಮನುವು ಪ್ರಜಾಸಮೃದ್ಧಿಯನ್ನು ಪಡೆದನು. |
| ತಸ್ಮಾತ್ ಮಾನವ್ಯಃ ಪ್ರಜಾಃ ಉಚ್ಯಂತೇ | ಆ ಕಾರಣದಿಂದ 'ಪ್ರಜೆಗಳು ಮಾನವಿ[ಮನು ಸಂಬಂಧಿ]ಯರು' ಎನಿಸಿಕೊಳ್ಳುತ್ತಾರೆ. |
| ತಮ್ ಧಾತಾ ಆ ಅಧತ್ತ, ತೇನ ಧಾತಾ ಆರ್ಧ್ನೋತ್ | ಧಾತೃದೇವನು ಪುನರಾಧೇಯವನ್ನು ಮಾಡಿದನು. ಆದರಿಂದ ಧಾತೃದೇವನು ಪ್ರಜಾ-ಪಶುಸಮೃದ್ಧಿಯನ್ನು ಹೊಂದಿದನು. |
| ಸಂವತ್ಸರಃ ವೈ ಧಾತಾ | ಧಾತೃದೇವನು ಸಂವತ್ಸರಸ್ವರೂಪನು. |

ತಸ್ಮಾತ್ಸಂವತ್ಸರಂ ಪ್ರಜಾಃ ಪಶವೋಽನು ಪ್ರಜಾಯಂತೇ ೧ಯ

ಏವಂ ಪುನರಾಧೇಯಸ್ಯರ್ಧಿಂ ವೇದರ್ಧ್ನೋತ್ಯೇವ [....ವೇದ

(೩) ಋಧ್ನೋತ್ಯೇವ.....] ಯೋಽಸ್ಯೈವಂ ಬಂಧುತಾಂ ವೇದ

---

ತಸ್ಮಾತ್ । ಸಂವತ್ಸರಮಿತಿ ಸಮ್-ವತ್ಸರಮ್ । ಪ್ರಜಾ ಇತಿ ಪ್ರ-ಜಾಃ । ಪಶವಃ ।

ಅನು । ಪ್ರೇತಿ । ಜಾಯಂತೇ । ಯಃ । ಏವಮ್ । ಪುನರಾಧೇಯಸ್ಯೇತಿ ಪುನಃ-ಆಧೇಯಸ್ಯ ।

ಋದ್ಧಿಮ್ । ವೇದ [೩] । ಋಧ್ನೋತಿ । ಏವ । ಯಃ । ಅಸ್ಯ । ಏವಮ್ । ಬಂಧು

ತಾಮ್ । ವೇದ ।

---

| | |
|---|---|
| ತಸ್ಮಾತ್ ಸಂವತ್ಸರಮ್ ಪ್ರಜಾಃ ಪಶವಃ ಅನು ಪ್ರಜಾಯಂತೇ | ಆದುದರಿಂದ ಸಂವತ್ಸರವನ್ನು ಅನುಸರಿಸಿ ಪ್ರಜೆಗಳೂ ಮತ್ತು ಪಶುಗಳು ಹುಟ್ಟುತ್ತಾರೆ. ಸಂವತ್ಸರಕಾಲವನ್ನನುಸರಿಸಿ, ಪ್ರಜಾ-ಪಶು ವೃದ್ಧಿಯಾಗುತ್ತದೆ. |

**ಹೀಗೆ ಪೂಷಾದಿದೇವತೆಗಳು ಪುನರಾಧೇಯವನ್ನು ಮಾಡಿ ಋದ್ಧಿಯನ್ನು ಹೊಂದಿದರು.**

**ಇಂತಹ ಪುನರಾಧೇಯದ ಸಮೃದ್ಧಿಯನ್ನು ತಿಳಿಯುವುದರ ಫಲವೇನು?**

| | |
|---|---|
| ಯಃ ಏವಮ್ ಪುನರಾಧೇಯಸ್ಯ ಋದ್ಧಿಮ್ ವೇದ, ಋಧ್ನೋತ್ಯೇವ | ಯಾವನು ಈ ಪುನರಾಧೇಯದ ಅನುಷ್ಠಾನದಿಂದ ಉಂಟಾಗುವ ಋದ್ಧಿಯನ್ನು ತಿಳಿಯುತ್ತಾನೆಯೋ, ಅವನೂ ಪ್ರಜಾ-ಪಶ್ವಾದಿ ಸಮೃದ್ಧಿಯನ್ನು ಹೊಂದುತ್ತಾನೆ. |
| ಯಃ ಅಸ್ಯ ಏವಮ್ ಬಂಧುತಾಮ್ ವೇದ | ಯಾವನು ಪೂಷಾದಿದೇವತೆಗಳು ಅಗ್ನಿದೇವನ ಬಂಧುಗಳೆಂದು ತಿಳಿಯುತ್ತಾನೆಯೋ, |

ಬಂಧುಮಾನ್ಭವತಿ ಭಾಗಧೇಯಂ ವೈ ಅಗ್ನಿರಾಹಿತ ಇಚ್ಛಮಾನಃ ಪ್ರಜಾಂ ಪಶೂನ್, ಯಜಮಾನಸ್ಯೋಪದೋದ್ರಾವೋದ್ವಾಸ್ಯ ಪುನರಾದಧೀತ

---

ಬಂಧುಮಾನಿತಿ ಬಂಧು-ಮಾನ್। ಭವತಿ । ಭಾಗಧೇಯಮಿತಿ ಭಾಗ-ಧೇಯಮ್। ವೈ। ಅಗ್ನಿಃ । ಆಹಿತ ಇತ್ಯಾ-ಹಿತಃ । ಇಚ್ಛಮಾನಃ । ಪ್ರಜಾಮಿತಿ ಪ್ರ-ಜಾಮ್ । ಪಶೂನ್। ಯಜಮಾನಸ್ಯ । ಉಪೇತಿ । ದೋದ್ರಾವ । ಉದ್ವಾಸ್ಯೇತ್ಯುತ್-ವಾಸ್ಯ । ಪುನಃ । ಏತಿ। ದಧೀತ ।



---

ಬಂಧುಮಾನ್ ಭವತಿ - ಅವನೂ ಒಳ್ಳೆಯ ಬಂಧುಗಳುಳ್ಳವನಾಗುತ್ತಾನೆ.*

**ಮೊದಲಿನ ಅಗ್ನಿಯ ಉದ್ವಾಸನೆ - ಅದಕ್ಕೆ ಕಾರಣ - ಉದ್ವಾಸನಪ್ರಕಾರ**

| | |
|---|---|
| ಆಹಿತಃ ಅಗ್ನಿಃ ವೈ ಭಾಗಧೇಯಮ್ ಇಚ್ಛಮಾನಃ ಯಜಮಾನಸ್ಯ ಪ್ರಜಾಮ್ ಪಶೂನ್ ಉಪ ದೋದ್ರಾವ | ಮೊದಲು ಆಧಾನಮಾಡಿರುವ ಅಗ್ನಿಯು ಹೆಚ್ಚಿನ ಹವಿರ್ಭಾಗವನ್ನು ಬಯಸುವವನಾಗಿ, ಯಜಮಾನನ ಪ್ರಜೆಯನ್ನೂ, ಗವಾದಿ ಪಶುಗಳನ್ನೂ ಉಪದ್ರವಗೊಳಿಸುತ್ತಾನೆ. |
| ಉದ್ವಾಸ್ಯ ಪುನರಾದಧೀತ | ಮೊದಲು ಆಹಿತನಾಗಿರುವ ಅಗ್ನಿಯನ್ನು ಉದ್ವಾಸನ ಮಾಡಿ ಬಳಿಕ ಪುನರಾಧಾನ ಮಾಡಬೇಕು. |

---

*ಇದೆಲ್ಲವೂ ಪುನರಾಧೇಯದ ಪ್ರಶಂಸಾರೂಪವಾದ ಅರ್ಥವಾದಗಳು. [ಸಂಪುಟ ೧. ಪುಟ ೮೦] ಪುನರಾಧೇಯವೂ, ಅದರ ಫಲಪ್ರದತ್ವಜ್ಞಾನವೂ ಪ್ರಶಸ್ತಗಳೆಂದು ಅರ್ಥವಾದ ಸಮೂಹದ ಅರ್ಥ.

ಭಾಗಧೇಯೇನೈವೈನಗ್ಂ ಸಮರ್ಧಯತ್ಯಥೋ ಶಾಂತಿ

ರೇವಾಸ್ಯೈಷಾ ಪುನರ್ವಸ್ವೋರಾದಧೀತೈತದ್ವೈ ಪುನರಾಧೇ

ಯಸ್ಯ ನಕ್ಷತ್ರಂ ಯತ್ಪುನರ್ವಸೂ

---

ಭಾಗಧೇಯೇನೇತಿ ಭಾಗ-ಧೇಯೇನ। ಏವ । ಏನಮ್। ಸಮಿತಿ। ಅರ್ಧಯತಿ । ಅಥೋ ಇತಿ । ಶಾಂತಿಃ । ಏವ । ಅಸ್ಯ । ಏಷಾ । ಪುನರ್ವಸ್ವೋರಿತಿ ಪುನಃ-ವಸ್ವೋಃ । ಏತಿ। ದಧೀತ । ಏತತ್ । ವೈ । ಪುನರಾಧೇಯಸ್ಯೇತಿ ಪುನಃ-ಆಧೇಯಸ್ಯ । ನಕ್ಷತ್ರಮ್ । ಯತ್ । ಪುನರ್ವಸೂ ಇತಿ ಪುನಃ-ವಸೂ ।

---

**ಉದ್ವಾಸನೇಷ್ಟಿಯ ಪ್ರಕಾರ**

[ಆಗ್ನೇಯ ಅಷ್ಟಾಕಪಾಲ, ವೈಶ್ವಾನರ ದ್ವಾದಶ ಕಪಾಲ, ವಾರುಣ ದಶಕಪಾಲ, ಅಪ್ಸುಮಂತ ಅಗ್ನಿಗೆ ಅಷ್ಟಾಕಪಾಲ, ಮೈತ್ರ ಚರು-ಈ ಇಷ್ಟಿಗಳನ್ನು ಮಾಡಬೇಕು. ಪೌರ್ಣಮಾಸೀಷ್ಟಿಯನ್ನು ಮಾಡಿ ಜ್ವಲಿಸುತ್ತಿರುವ ಅಗ್ನಿಗಳನ್ನು ಉತ್ಸರ್ಜನ ಮಾಡಬೇಕು.]

| | |
|---|---|
| ಭಾಗಧೇಯೇನ ಏವ ಏನಮ್ ಸಮರ್ಧಯತಿ | ಹೆಚ್ಚಿನ ಹವಿರ್ಭಾಗದಿಂದ ಈ ಮೊದಲು ಆಧಾನ ಮಾಡಿದ ಅಗ್ನಿಯನ್ನು ಯಜಮಾನನು ಸುಪ್ರೀತನನ್ನಾಗಿ ಮಾಡುತ್ತಾನೆ. |
| ಅಥೋ ಏಷಾ ಅಸ್ಯ ಶಾಂತಿರೇವ | ಮತ್ತು ಈ ಉದ್ವಾಸನೇಷ್ಟಿಯು ಈ ಅಗ್ನಿಯ ಶಾಂತಿಯೇ [ಸಮಾಧಾನಗೊಳಿಸುವುದು] ಆಗುತ್ತದೆ. |

**ಪುನರಾಧೇಯದ ಕಾಲ ಮತ್ತು ಅದರ ವಿಧಿ**

| | |
|---|---|
| ಪುನರ್ವಸ್ವೋಃ ಆದಧೀತ | ಪುನರ್ವಸು ನಕ್ಷತ್ರದಲ್ಲಿ ಪುನರಾಧಾನ ಮಾಡಬೇಕು. |
| ಏತತ್ ವೈ ಪುನರಾಧೇಯಸ್ಯ ನಕ್ಷತ್ರಮ್ ಯತ್ ಪುನರ್ವಸೂ | ಪುನರ್ವಸು ನಕ್ಷತ್ರವೆಂಬುದು ಯಾವುದುಂಟೋ, ಅದು ಪುನರಾಧೇಯದ ನಕ್ಷತ್ರವಾಗಿದೆ.* |

---

* ಪುನರೇವೈನಂ ವಾಮಂ ವಸೂಪಾವರ್ತತೇ । ಭದ್ರೋ ಭವತಿ । [ತೈ.ಬ್ರಾ. 1.1.2.] 'ಪುನರ್ವಸು ನಕ್ಷತ್ರದಲ್ಲಿ ಪುನರಾಧಾನ ಮಾಡಿದರೆ, ಮತ್ತೆ ಶ್ರೇಷ್ಠವಾದ ಧನವು ಒದಗುತ್ತದೆ ಮತ್ತು ಮಂಗಲಯುಕ್ತನಾಗುತ್ತಾನೆ ಎಂದು ಅರ್ಥವಾದವಿದೆ.

ಸ್ವಾಯಾಮೇವೈನಂ ದೇವತಾಯಾಮಾಧಾಯ ಬ್ರಹ್ಮವರ್ಚಸೀ
ಭವತಿ ದರ್ಭೈರಾದಧಾತ್ಯಯಾತಯಾಮತ್ವಾಯ ದರ್ಭೈ-
ರಾದಧಾತ್ಯದ್ಭ್ಯ ಏವೈನಮೋಷಧೀಭ್ಯೋಽವರುಧ್ಯಾಽಽಧತ್ತೇ

ಸ್ವಾಯಾಮ್। ಏವ। ಏನಮ್। ದೇವತಾಯಾಮ್। ಆಧಾಯೇತ್ಯಾ-ಧಾಯ। ಬ್ರಹ್ಮವರ್ಚ
ಸೀತಿ ಬ್ರಹ್ಮ-ವರ್ಚಸೀ। ಭವತಿ। ದರ್ಭೈಃ। ಏತಿ। ದಧಾತಿ। ಅಯಾತಯಾಮತ್ವಾಯೇತ್ಯ
ಯಾತಯಾಮ-ತ್ವಾಯ। ದರ್ಭೈಃ। ಏತಿ। ದಧಾತಿ। ಅದ್ಭ್ಯ ಇತ್ಯತ್-ಭ್ಯಃ। ಏವ।
ಏನಮ್। ಓಷಧೀಭ್ಯ ಇತ್ಯೋಷಧಿ-ಭ್ಯಃ। ಅವರುಧ್ಯೇತ್ಯವ-ರುಧ್ಯ। ಏತಿ। ಧತ್ತೇ।

| | |
|---|---|
| ಸ್ವಾಯಾಮ್ ಏವ ಏನಮ್ ದೇವತಾಯಾಮ್ ಆಧಾಯ ಬ್ರಹ್ಮವರ್ಚಸೀ ಭವತಿ | ತನ್ನ [ಪುನರಾಧೇಯ] ದೇವತೆಯಾದ ಪುನರ್ವಸು ನಕ್ಷತ್ರದಲ್ಲಿಯೇ ಆಧಾನ ಮಾಡಿ ಯಜಮಾನನು ಬ್ರಹ್ಮವರ್ಚಸವುಳ್ಳವನಾಗುತ್ತಾನೆ. [ಬ್ರಹ್ಮವರ್ಚಸವೇ ಬ್ರಾಹ್ಮಣನ ಸಮೃದ್ಧಿ.] |

**ಪುನರಾಧೇಯದಲ್ಲಿ ಪೂರ್ವಾಧಾನಕ್ಕಿಂತ ವಿಶೇಷವಿಧಿ; ಸಮಿದಾಧಾನಸ್ಥಾನದಲ್ಲಿ ದರ್ಭಾಧಾನ**

| | |
|---|---|
| ದರ್ಭೈಃ ಆದಧಾತಿ ಅಯಾತಯಾಮತ್ವಾಯ | [ಅಗ್ನ್ಯಾಯತನಗಳಲ್ಲಿ ಕಾಷ್ಠಗಳ ಬದಲು] [ಪುನರಾಧೇಯವು] ಸಾರಹೀನ [ಪುನರುಕ್ತ]ವಾಗದಿರಲು ದರ್ಭೆಗಳನ್ನು ಆಸ್ತರಣ ಮಾಡಿ ಅಗ್ನ್ಯಾಧಾನ ಮಾಡಬೇಕು. [ಕಟ್ಟಿಗೆಗಳನ್ನು ಹಾಕಿದರೆ ಸಾರಹೀನವಾಗುತ್ತದೆ [ಪುನರುಕ್ತವಾಗುತ್ತದೆ] ದರ್ಭೆಗಳನ್ನು ಹಾಕಿದರೆ ಸಾರಯುಕ್ತವಾಗುತ್ತದೆ. [ಪುನರುಕ್ತವಾಗುವುದಿಲ್ಲ.] |
| ದರ್ಭೈಃ ಆದಧಾತಿ ಅದ್ಭ್ಯಃ ಏವ ಏನಮ್ ಓಷಧೀಭ್ಯಃ ಅವರುಧ್ಯ ಆಧತ್ತೇ | ದರ್ಭೆಗಳನ್ನು ಹಾಕಿ ಆಧಾನ ಮಾಡಬೇಕು. ಹೀಗೆ ಮಾಡುವುದರಿಂದ ನೀರಿನಿಂದಲೂ, ಓಷಧಿಗಳಿಂದಲೂ ಅಗ್ನಿಯನ್ನು ಪಡೆದು ಆಧಾನ ಮಾಡಿದಂತೆ ಆಗುತ್ತದೆ.* |

---

*ನೀರಿನ ಪವಿತ್ರವಾದ ಮತ್ತು ಯಜ್ಞಸಂಬಂಧಿಯಾದ ಭಾಗದಿಂದ ದರ್ಭೆಗಳ ಉತ್ಪತ್ತಿಯಾಯಿತೆಂದು ಶ್ರುತಿವಚನವಿದೆ. –ತೈ.ಬ್ರಾ. 3.2.5.

ಪಂಚಕಪಾಲಃ ಪುರೋಡಾಶೋ ಭವತಿ ಪಂಚ ವಾ ಋತವ

ಋತುಭ್ಯ ಏವೈನಮವರುಧ್ಯಾಽಽಧತ್ತೇ॥ ೧-4 ॥

[ಅಶೀಯತ ತತ್ತೇನ ವೇದ ದರ್ಭೈಃ ಪಂಚವಿಗ್ಂಶತಿಶ್ಚ ।]

---

**ಪಂಚಕಪಾಲ ಇತಿ ಪಂಚ-ಕಪಾಲಃ । ಪುರೋಡಾಶಃ । ಭವತಿ । ಪಂಚ । ವೈ । ಋತವಃ।**

**ಋತುಭ್ಯ ಇತ್ಯೃತು-ಭ್ಯಃ । ಏವ । ಏನಮ್ । ಅವರುಧ್ಯೇತ್ಯವ-ರುಧ್ಯ । ಏತಿ । ಧತ್ತೇ**

**॥ ೧ ॥**

---

**ಅಷ್ಟಾಕಪಾಲಸ್ಥಾನದಲ್ಲಿ ಪಂಚಕಪಾಲವಿಧಿ**

| | |
|---|---|
| ಪಂಚಕಪಾಲಃ ಪುರೋಡಾಶಃ ಭವತಿ | [ಈ ಪುನರಾಧಾನದಲ್ಲಿ] ಎಂಟು ಕಪಾಲಗಳಲ್ಲಿ ಸಂಸ್ಕರಿಸಿದ ಪುರೋಡಾಶದ ಸ್ಥಾನದಲ್ಲಿ ಐದು ಕಪಾಲಗಳಲ್ಲಿ ಸಂಸ್ಕರಿಸಿದ ಪುರೋಡಾಶವು ಹವಿಸ್ಸು ಆಗುತ್ತದೆ. [ಹವಿಸ್ಸನ್ನಾಗಿ ಮಾಡಬೇಕು.] |
| ಪಂಚ ವೈ ಋತವಃ | ಐದು ಋತುಗಳಷ್ಟೆ.* |
| ಋತುಭ್ಯಃ ಏವ ಏನಮ್ ಅವರುಧ್ಯ ಆಧತ್ತೇ | [ಸಂಖ್ಯಾಸಾದೃಶ್ಯದಿಂದ] ಋತುಗಳಿಂದಲೇ ಅಗ್ನಿಯನ್ನು ಪಡೆದು ಆಧಾನ ಮಾಡಿದಂತೆ ಆಗುತ್ತದೆ. |

---

*** ಹೇಮಂತ-ಶಿಶಿರಗಳು ಸೇರಿ ಒಂದು ಋತುವೆಂಬುದಾಗಿಯೂ ಶ್ರುತಿಯಲ್ಲಿ ಪರಿಗಣನೆ ಇದೆ. [ಐ.ಬ್ರಾ.1.1.]**

---

## ॥ ದ್ವಿತೀಯೋಽನುವಾಕಃ ॥

ಪರಾ ವಾ ಏಷ ಯಜ್ಞಂ ಪಶೂನ್, ವಪತಿ ಯೋಽಗ್ನಿಮುದ್ವಾಸ-ಯತೇ ಪಂಚಕಪಾಲಃ ಪುರೋಡಾಶೋ ಭವತಿ

---

ಪರೇತಿ । ವೈ । ಏಷಃ । ಯಜ್ಞಮ್ । ಪಶೂನ್ । ವಪತಿ । ಯಃ । ಅಗ್ನಿಮ್। ಉದ್ವಾಸಯತ ಇತ್ಯುತ್-ವಾಸಯತೇ । ಪಂಚಕಪಾಲ ಇತಿ ಪಂಚ-ಕಪಾಲಃ । ಪುರೋಡಾಶಃ। ಭವತಿ ।

---



ಪುನರಾ[illegible] ಕುರಿತು ವಿಶೇಷಗಳು

ಪಂಚಕಪಾಲವಿಧಿಪ್ರಶಂಸೆ

| | |
|---|---|
| ಪರಾ ವೈ ಏಷಃ ಯಜ್ಞಮ್ ಪಶೂನ್ ವಪತಿ ಯಃ ಅಗ್ನಿಮ್ ಉದ್ವಾಸಯತೇ | ಯಾವ ಯಜಮಾನನು ಅಗ್ನಿಯನ್ನು ಉದ್ವಾಸನೆ ಮಾಡುತ್ತಾನೆಯೋ, ಆತನು ಯಜ್ಞವನ್ನೂ ಪಶುಗಳನ್ನೂ ನಾಶಗೊಳಿಸುತ್ತಾನೆ. |
| ಪಂಚಕಪಾಲಃ ಪುರೋಡಾಶಃ ಭವತಿ | [ಆ ದೋಷಪರಿಹಾರಕ್ಕಾಗಿ] ಪಂಚಕಪಾಲ [ಐದು ಕಪಾಲಗಳಲ್ಲಿ ಸಂಸ್ಕರಿಸಿದ] ಪುರೋಡಾಶವನ್ನು ಹವಿಸ್ಸನ್ನಾಗಿ ಕೊಡಬೇಕು. |

ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವೋ ಯಜ್ಞಮೇವ ಪಶೂ

ನವರುಂಧೇ ವೀರಹಾ ವಾ ಏಷ ದೇವಾನಾಂ

ಯೋಽಗ್ನಿಮುದ್ವಾಸಯತೇ

---

ಪಾಂಕ್ತಃ । ಯಜ್ಞಃ । ಪಾಂಕ್ತಾಃ । ಪಶವಃ । ಯಜ್ಞಮ್ । ಏವ । ಪಶೂನ್ । ಅವೇತಿ। ರುಂಧೇ । ವೀರಹೇತಿ ವೀರ-ಹಾ । ವೈ । ಏಷಃ । ದೇವಾನಾಮ್ । ಯಃ । ಅಗ್ನಿಮ್। ಉದ್ವಾಸಯತ ಇತ್ಯುತ್-ವಾಸಯತೇ ।

---

| | |
|---|---|
| ಪಾಂಕ್ತಃ ಯಜ್ಞಃ | ಯಜ್ಞವೂ ಪಾಂಕ್ತವೇ. [ಧಾನಾ, ಕರಂಭ, ಪರಿವಾಪ, ಪುರೋಡಾಶ ಮತ್ತು ಪಯಸ್ಯಾ- ಈ ಪಂಚದ್ರವ್ಯಗಳು ಯಜ್ಞದ ಹವಿಸ್ಸಾಗಿರುವುದರಿಂದ.]* |
| ಪಾಂಕ್ತಾಃ ಪಶವಃ | ಪಶುಗಳೂ ಪಾಂಕ್ತಗಳೇ. [ಪಂಕ್ತಿಛಂದಸ್ಸು ಪಶುಸಾಧನವಾಗಿರುವುದರಿಂದ] |
| ಯಜ್ಞಮ್ ಏವ ಪಶೂನ್ ಅವರುಂಧೇ | [ಈ ಪಂಚಕಪಾಲ ಪುರೋಡಾಶ ಹವಿಸ್ಸಿನಿಂದ] ಯಜ್ಞವನ್ನೂ, ಪಶುಗಳನ್ನೂ ಯಜಮಾನನು ಹೊಂದುತ್ತಾನೆ.] |

**ಯಾಜ್ಯಾ-ಪುರೋನುವಾಕ್ಯೆಗಳಲ್ಲಿ *ಪಾಂಕ್ತರೂಪವಿಶೇಷವಿಧಿ**

| | |
|---|---|
| ವೀರಹಾ ವೈ ಏಷ ದೇವಾನಾಮ್ ಯಃ ಅಗ್ನಿಮ್ ಉದ್ವಾಸಯತೇ | ಅಗ್ನಿಯನ್ನು ಉದ್ವಾಸನೆ ಮಾಡುವ ಯಜಮಾನನು [ದೇವತೆಗಳ ಮಧ್ಯದಲ್ಲಿ ವೀರನಾದ ಅಗ್ನಿಯನ್ನು ಕೊಂದವನಾಗಿ] 'ವೀರಹಾ' ಎನಿಸಿಕೊಳ್ಳುತ್ತಾನೆ. |

---

* ತೈ.ಸಂ. 6.5.11.

* ಪಾಂಕ್ತ = ಪಂಕ್ತಿಛಂದಸ್ಸಿನದು.

# ನ ವಾ ಏತಸ್ಯ ಬ್ರಾಹ್ಮಣಾ ಋತಾಯವಃ ಪುರಾಽನ್ನಮಕ್ಷ

# ನ್ಪಂಕ್ತ್ಯೋ ಯಾಜ್ಯಾನುವಾಕ್ಯಾ ಭವಂತಿ

---

ನ । ವೈ । ಏತಸ್ಯ । ಬ್ರಾಹ್ಮಣಾಃ । ಋತಾಯವ ಇತ್ಯೃತ-ಯವಃ । ಪುರಾ । ಅನ್ನಮ್।

ಅಕ್ಷನ್ನ್ । ಪಂಕ್ತ್ಯಃ । ಯಾಜ್ಯಾನುವಾಕ್ಯಾ ಇತಿ ಯಾಜ್ಯಾ-ಅನುವಾಕ್ಯಾಃ । ಭವಂತಿ ।

---

| | |
|---|---|
| ನ ವೈ ಏತಸ್ಯ ಬ್ರಾಹ್ಮಣಾಃ ಋತಾಯವಃ ಪುರಾ ಅನ್ನಮ್ ಅಕ್ಷನ್ನ್ | ಪೂರ್ವಕಾಲದಲ್ಲಿ ಸತ್ಯವನ್ನು [ಯಜ್ಞವನ್ನು] ಇಚ್ಛಿಸುವ ಬ್ರಾಹ್ಮಣರು [ಅಗ್ನ್ಯುದ್ವಾಸನೆ ಮಾಡಿದ] ಈ ಯಜಮಾನನ ಅನ್ನವನ್ನು ತಿನ್ನಲಿಲ್ಲ. |
| ಪಂಕ್ತ್ಯಃ ಯಾಜ್ಯಾನುವಾಕ್ಯಾಃ ಭವಂತಿ | [ಯಜಮಾನನ ಈ ದೋಷನಿವೃತ್ತಿಗಾಗಿ] ಪುನರಾಧೇಯದ ಪ್ರಧಾನಯಾಗ ಮತ್ತು ಸ್ವಿಷ್ಟಕೃತ್ತಿನ] ಯಾಜ್ಯಾ-ಪುರೋನುವಾಕ್ಯೆಗಳನ್ನು ಪಂಕ್ತಿ ಛಂದಸ್ಸಿನವುಗಳನ್ನಾಗಿ ಮಾಡಬೇಕು.* |

---

*ತೈತ್ತಿರೀಯಸಂಹಿತೆಯ ನಾಲ್ಕನೆಯ ಕಾಂಡದ ನಾಲ್ಕನೆಯ ಪ್ರಪಾಠಕದಲ್ಲಿರುವ **'ಅಗ್ನಿರ್ಮೂರ್ಧಾ ದಿವಃ'** ಎಂಬ ಅನುವಾಕದಲ್ಲಿರುವ

1. ಅಗ್ನೇ ತಮದ್ಯಾಶ್ವಮ್..............॥ 2. ಅಧಾಹ್ಯಗ್ನೇ ಕ್ರತೋಃ.............. ॥

3. ಅಭಿಷ್ಟೇ ಅದ್ಯ ಗೀರ್ಭಿಃ...........॥ 4. ಏಭಿರ್ನೋ ಅರ್ಕೈಃ................ ॥

ಈ ನಾಲ್ಕು ಋಕ್‌ಗಳು ಅಕ್ಷರಪಂಕ್ತಿಛಂದಸ್ಸಿನಲ್ಲಿವೆ. ಇವುಗಳಲ್ಲಿ ಮೊದಲ ಎರಡು ಋಕ್‌ಗಳು ಪ್ರಧಾನಯಾಗದ ಯಾಜ್ಯಾ-ಪುರೋನುವಾಕ್ಯೆಗಳು. ಅನಂತರದ ಎರಡು ಋಕ್‌ಗಳು ಸ್ವಿಷ್ಟಕೃದ್ಯಾಗದ ಯಾಜ್ಯಾ-ಪುರೋನುವಾಕ್ಯೆಗಳು. ಹೀಗೆ ವಿಶೇಷವಿಧಿಯಿದೆ.

ಪಾಂಕ್ತೋ ಯಜ್ಞಃ ಪಾಂಕ್ತಃ ಪುರುಷೋ ದೇವಾನೇವ ವೀರಂ

ನಿರವದಾಯಾಗ್ನಿಂ ಪುನರಾ[.....ಪುನರಾ (೧) ಧತ್ತೇ......]

ಧತ್ತೇ ಶತಾಕ್ಷರಾ ಭವಂತಿ

---

ಪಾಂಕ್ತಃ । ಯಜ್ಞಃ । ಪಾಂಕ್ತಃ । ಪುರುಷಃ । ದೇವಾನ್ । ಏವ । ವೀರಮ್ । ನಿರವದಾಯೇತಿ ನಿಃ-ಅವದಾಯ । ಅಗ್ನಿಮ್ । ಪುನಃ । ಏತಿ । ಧತ್ತೇ । ಶತಾಕ್ಷರಾ ಇತಿ ಶತ-ಅಕ್ಷರಾಃ। ಭವಂತಿ ।

---

| | |
|---|---|
| ಪಾಂಕ್ತಃ ಯಜ್ಞಃ | ಯಜ್ಞವೂ ಪಾಂಕ್ತ. [ಹಿಂದೆ ಹೇಳಿದಂತೆ ಐದು ಹವಿಸ್ಸುಗಳಿಂದಾಗಿದೆ.] |
| ಪಾಂಕ್ತಃ ಪುರುಷಃ | ಪುರುಷನೂ ಪಾಂಕ್ತ. [ಎರಡು ಕಾಲುಗಳು, ಎರಡು ಕೈಗಳು, ಮತ್ತು ತಲೆ ಇವುಗಳಿಂದ ಕೂಡಿರುವುದರಿಂದ] |
| ದೇವಾನ್ ಏವ ವೀರಮ್ ನಿರವದಾಯ ಅಗ್ನಿಮ್ ಪುನಃ ಆ ಧತ್ತೇ | ದೇವತೆಗಳನ್ನೂ, [ದೇವತೆಗಳಲ್ಲಿ] ವೀರನಾದ ಅಗ್ನಿಯನ್ನೂ [ಅಗ್ನ್ಯುದ್ವಾಸನವೆಂಬ ವಧದ ಭಯದಿಂದ] ಬೇರ್ಪಡಿಸಿ, ಅಗ್ನಿಯನ್ನು ಮತ್ತೆ ಆಧಾನ ಮಾಡುತ್ತಾನೆ. [ಪುನರಾಧಾನ ಮಾಡುವುದರಿಂದ ಅಗ್ನಿವಧವಿಲ್ಲ.] |

**ಋಕ್‌ಗಳ ಒಟ್ಟು ಅಕ್ಷರಗಳ ಸಂಖ್ಯೆಯ ಪ್ರಶಂಸೆ**

| | |
|---|---|
| ಶತಾಕ್ಷರಾಃ ಭವಂತಿ | [ಈ ಪಂಕ್ತಿಛಂದಸ್ಸಿನ ನಾಲ್ಕು ಋಕ್‌ಗಳು] ಒಟ್ಟು |

**ಶತಾಯುಃ ಪುರುಷಃ ಶತೇಂದ್ರಿಯ ಆಯುಷ್ಯೇವೇಂದ್ರಿಯೇ**

**ಪ್ರತಿತಿಷ್ಠತಿ**

---

**ಶತಾಯುರಿತಿ ಶತ-ಆಯುಃ । ಪುರುಷಃ । ಶತೇಂದ್ರಿಯ ಇತಿ ಶತ-ಇಂದ್ರಿಯಃ । ಆಯುಷಿ ಏವ । ಇಂದ್ರಿಯೇ । ಪ್ರತೀತಿ । ತಿಷ್ಠತಿ ।**

---

| | |
|---|---|
| | ನೂರು ಅಕ್ಷರಗಳುಳ್ಳವಾಗಿವೆ.* |
| ಶತಾಯುಃ ಪುರುಷಃ | ಮಾನವನೂ ಶತಾಯುಷನು. [ಬ್ರಹ್ಮಾಂಡಾಧಿಪತಿಯಾದ ಬ್ರಹ್ಮನಿಗೂ ಬ್ರಹ್ಮಮಾನದಿಂದ ನೂರು ವರ್ಷಗಳ ಆಯುಸ್ಸು. ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಮಾನವಸಂತತಿಗೆ ಮಾನವಮಾನದ ನೂರು ವರ್ಷಗಳ ಆಯುಸ್ಸು. ಇದು ಮಾನವನ ಧರ್ಮಾಧರ್ಮಗಳ ಫಲವಾಗಿ ಹೆಚ್ಚಾಗಬಹುದು-ಕಡಿಮೆಯಾಗಬಹುದು.] |
| ಶತೇಂದ್ರಿಯಃ | ನೂರು ಇಂದ್ರಿಯವುಳ್ಳವನು. [ಶತನಾಡೀಸಂಚಾರದಿಂದ ದಶೇಂದ್ರಿಯಗಳು ಶತಸಂಖ್ಯಾಕವಾಗಿವೆ.] ಶತವೀರ್ಯವುಳ್ಳವನು. |
| ಆಯುಷಿ ಏವ ಇಂದ್ರಿಯೇ ಪ್ರತಿತಿಷ್ಠತಿ | [ಇಂತಹ ಅಕ್ಷರಸಂಖ್ಯೆಯಿಂದ ಪುರುಷನು] ಶತಾಯುಸ್ಸಿನಲ್ಲಿಯೂ, ಶತವೀರ್ಯದಲ್ಲಿಯೂ/ಇಂದ್ರಿಯಗಳಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ./ಸ್ಥಿರನಾಗಿರುತ್ತಾನೆ. |

---

*1. ಅಗ್ನೇ ತಮದ್ಯಾಶ್ವಮ್..........24 ಅಕ್ಷರಗಳು

2. ಅಧಾ ಹ್ಯಗ್ನೇ.......................25 ಅಕ್ಷರಗಳು

3. ಅಭಿಷ್ಟೇ ಅದ್ಯ.................... 25 ಅಕ್ಷರಗಳು

4. ಏಭಿರ್ನೋ ಅರ್ಕೈಃ...............26 ಅಕ್ಷರಗಳು. ಒಟ್ಟು 100 ಅಕ್ಷರಗಳು.

ಯದ್ವಾ ಅಗ್ನಿರಾಹಿತೋ ನರ್ಧ್ಯತೇ ಜ್ಯಾಯೋ ಭಾಗಧೇಯಂ ನಿಕಾಮಯಮಾನೋ ಯದಾಗ್ನೇಯಗ್ಂ ಸರ್ವಂ ಭವತಿ

ಸೈವಾಸ್ಯರ್ಧಿಃ

---

ಯತ್ । ವೈ । ಅಗ್ನಿಃ । ಆಹಿತ ಇತ್ಯಾ-ಹಿತಃ । ನ । ಋಧ್ಯತೇ । ಜ್ಯಾಯಃ। ಭಾಗಧೇಯಮಿತಿ ಭಾಗ-ಧೇಯಮ್। ನಿಕಾಮಯಮಾನ ಇತಿ ನಿ-ಕಾಮಯಮಾನಃ। ಯತ್। ಆಗ್ನೇಯಮ್। ಸರ್ವಮ್ । ಭವತಿ । ಸಾ । ಏವ । ಅಸ್ಯ । ಋದ್ಧಿಃ ।

---

**ಪ್ರಧಾನಯಾಗದಂತೆಯೇ ಅಂಗಹೋಮಗಳಿಗೂ ಅಗ್ನಿಯೇ ದೇವತೆಯಾಗಿರಬೇಕು.**

**ವಿಶೇಷವಿಧಿ**

| | |
|---|---|
| ಯತ್ ವೈ ಅಗ್ನಿಃ ಆಹಿತಃ ನ ಋಧ್ಯತೇ, ಜ್ಯಾಯಃ ಭಾಗ ಧೇಯಮ್ ನಿಕಾಮಯಮಾನಃ | [ಪುನರಾಧೇಯದಿಂದ] ಆಹಿತನಾದ ಅಗ್ನಿಯು ಹೆಚ್ಚಾದ ಹವಿರ್ಭಾಗವನ್ನು ಅಪೇಕ್ಷಿಸುತ್ತಾನೆ. [ಪುನರಾಧೇಯವು ಋದ್ಧಿಫಲಕ್ಕಾಗಿ. ಹೆಚ್ಚಾದ ಹವಿರ್ಭಾಗವಿಲ್ಲದೆ ಅಗ್ನಿಯು ಋದ್ಧಿ ಹೊಂದುವುದಿಲ್ಲ. ಯಜಮಾನನೂ ಋದ್ಧಿ ಹೊಂದುವುದಿಲ್ಲ.] |
| ಯತ್ ಆಗ್ನೇಯಮ್ ಸರ್ವಮ್ ಭವತಿ | ಪ್ರಧಾನಯಾಗದಂತೆಯೇ ಅಂಗಯಾಗಾದಿಗಳೆಲ್ಲವೂ ಅಗ್ನಿದೇವತಾಕಗಳೇ ಆಗಬೇಕು. |
| ಸಾ ಏವ ಅಸ್ಯ ಋದ್ಧಿಃ | ಅದೇ ಅಗ್ನಿಯ ಋದ್ಧಿ. [ಎಲ್ಲವೂ ಆಗ್ನೇಯವಾಗುವುದರಿಂದ ಅಗ್ನಿಗೆ ಹೆಚ್ಚಾದ ಹವಿರ್ಭಾಗವು ಸಿಕ್ಕಿ ಋದ್ಧನಾಗುತ್ತಾನೆ. ಅವನ ಅನುಗ್ರಹದಿಂದ ಯಜಮಾನನೂ ಋದ್ಧಿಯನ್ನು ಹೊಂದುತ್ತಾನೆ. ಆದುದರಿಂದ ಎಲ್ಲವೂ ಆಗ್ನೇಯವಾಗಬೇಕು.] |

**ಸಂ ವಾ ಏತಸ್ಯ ಗೃಹೇ ವಾಕ್ಸೃಜ್ಯತೇ ಯೋಽಗ್ನಿಮುದ್ವಾಸ**

**ಯತೇ ಸ ವಾಚಗ್ಂ ಸಗ್ಂಸೃಷ್ಟಾಂ ಯಜಮಾನ**

**ಈಶ್ವರೋಽನು ಪರಾಭವಿತೋರ್ವಿಭಕ್ತಯೋ ಭವಂತಿ**

---

**ಸಮಿತಿ । ವೈ । ಏತಸ್ಯ । ಗೃಹೇ । ವಾಕ್ । ಸೃಜ್ಯತೇ । ಯಃ । ಅಗ್ನಿಮ್ । ಉದ್ವಾಸ ಯತ ಇತ್ಯುತ್-ವಾಸಯತೇ । ಸಃ । ವಾಚಮ್ । ಸಗ್ಂಸೃಷ್ಟಾಮಿತಿ ಸಮ್-ಸೃಷ್ಟಾಮ್ । ಯಜಮಾನಃ । ಈಶ್ವರಃ । ಅನ್ವಿತಿ । ಪರಾಭವಿತೋರಿತಿ ಪರಾ-ಭವಿತೋಃ । ವಿಭಕ್ತಯ ಇತಿ ವಿ-ಭಕ್ತಯಃ । ಭವಂತಿ ।**

---

**ಪ್ರಯಾಜಗಳಲ್ಲಿ ವಿಶೇಷವಿಭಕ್ತಿಗಳೆಂಬ ವಿಶೇಷವಿಧಿ**

| | |
|---|---|
| ಸಮ್ ವೈ ಏತಸ್ಯ ಗೃಹೇ ವಾಕ್ ಸೃಜ್ಯತೇ ಯಃ ಅಗ್ನಿಮ್ ಉದ್ವಾಸಯತೇ | ಯಾವ ಯಜಮಾನನು ಅಗ್ನಿಯನ್ನು ಉದ್ವಾಸನೆ ಮಾಡುತ್ತಾನೆಯೋ, ಆ ಯಜಮಾನನ ಮಾತು ಮನೆಯ ಉಳಿದವರ ಮಾತಿಗೇ ಸಮಾನವಾಗುತ್ತದೆ. [ಯಜಮಾನನಲ್ಲಿ ಆಧಿಕ್ಯವೇನೂ ಉಳಿಯುವುದಿಲ್ಲ.] |
| ಸಃ ವಾಚಮ್ ಸಗ್ಂಸೃಷ್ಟಾಮ್ ಯಜಮಾನಃ ಈಶ್ವರಃ ಅನು ಪರಾಭವಿತೋಃ | [ಬೇರೆಯವರು ಯಜಮಾನನ ಮಾತನ್ನು ಗೌರವಿಸುವುದಿಲ್ಲ.] ಆ ಮಾತಿನಂತೆಯೇ ಯಜಮಾನನು (ಇತರರ) ತಿರಸ್ಕಾರವನ್ನು ಹೊಂದಲು ತಕ್ಕವನಾಗುತ್ತಾನೆ. |
| ವಿಭಕ್ತಯಃ ಭವಂತಿ | [ಆದುದರಿಂದ ಮೊದಲಿನ ನಾಲ್ಕು ಪ್ರಯಾಜಗಳಲ್ಲಿ] ವಿಭಕ್ತಿಗಳನ್ನು ಪ್ರಯೋಗಿಸಬೇಕು.* |

---

*ವಿಭಕ್ತಿಪ್ರಯೋಗಗಳು ಹೀಗೆ ಸೂತ್ರದಲ್ಲಿ ಹೇಳಲ್ಪಟ್ಟಿವೆ. '**ಅಗ್ನೇಽಗ್ನೇ**', '**ಅಗ್ನಾವಗ್ನೇ**', '**ಅಗ್ನಿನಾಗ್ನೇ**', '**ಅಗ್ನಿಮಗ್ನೇ**' ಎಂದು. ಮಂತ್ರಪಾಠವು ಹೀಗೆ ಆಗುತ್ತದೆ. ೧. **ಸಮಿಧೋ ಅಗ್ನೇಽಗ್ನ ಆಜ್ಯಸ್ಯ ವಿಯಂತು. ೨. ತನೂನಪಾದಗ್ನಾವಗ್ನ ಆಜ್ಯಸ್ಯ ವೇತು. ೩. ಇಡೋ ಅಗ್ನಿನಾಗ್ನ ಆಜ್ಯಸ್ಯ ವಿಯಂತು. ೪. ಬರ್ಹಿರಗ್ನಿಮಗ್ನ ಆಜ್ಯಸ್ಯ ವೇತು.** ಹೀಗೆ ಪುನರಾಧೇಯದ ವಿಭಕ್ತಿಪ್ರಯೋಗ.

ವಾಚೋ ವಿಧೃತ್ಯೈ ಯಜಮಾನಸ್ಯಾಪರಾಭಾವಾಯ

[...ಭಾವಾಯ [೨] ವಿಭಕ್ತಿಂ........] ವಿಭಕ್ತಿಂ ಕರೋತಿ

ಬ್ರಹ್ಮೈವ ತದಕರುಪಾಗ್ಂಶು ಯಜತಿ

---

ವಾಚಃ । ವಿಧೃತ್ಯಾ ಇತಿ ವಿ-ಧೃತ್ಯೈ । ಯಜಮಾನಸ್ಯ । ಅಪರಾಭಾವಾಯೇತ್ಯಪರಾ-ಭಾವಾಯ । ವಿಭಕ್ತಿಮಿತಿ ವಿ-ಭಕ್ತಿಮ್ । ಕರೋತಿ । ಬ್ರಹ್ಮ । ಏವ । ತತ್ । ಅಕಃ । ಉಪಾಗ್ಂಶ್ವಿತ್ಯುಪ-ಅಗ್ಂಶು । ಯಜತಿ ।

---

| | |
|---|---|
| ವಾಚಃ ವಿಧೃತ್ಯೈ | [ಇದರಿಂದ] ಯಜಮಾನನ ಮಾತು ಇತರರ ಮಾತಿಗಿಂತ ವೈಲಕ್ಷಣ್ಯವನ್ನು ಹೊಂದಿ ಗೌರವಿಸಲ್ಪಡುತ್ತದೆ. |
| ಯಜಮಾನಸ್ಯ ಅಪರಾಭಾವಾಯ | [ಇದು] ಯಜಮಾನನ ಗೆಲುವಿಗೂ ಕಾರಣವಾಗುತ್ತದೆ. [ಬೇರೆಯವರ ಗೌರವಕ್ಕೆ ಪಾತ್ರನಾಗುವುದೇ ಗೆಲುವು.] |
| ವಿಭಕ್ತಿಮ್ ಕರೋತಿ ಬ್ರಹ್ಮ ಏವ ತತ್ ಅಕಃ | [ಹೀಗೆ] [ವಿಭಕ್ತಿಪ್ರಯೋಗವನ್ನು ಮಾಡುವುದರಿಂದ ಅಗ್ನ್ಯಾಧೇಯಕ್ಕಿಂತಲೂ ಪುನರಾಧೇಯವು ಶ್ರೇಷ್ಠವಾಗುತ್ತದೆ.] ವಿಭಕ್ತಿಪ್ರಯೋಗವು [ಪುನರಾಧೇಯವನ್ನು] ಶ್ರೇಷ್ಠವನ್ನಾಗಿಸುತ್ತದೆ. [ಆದುದರಿಂದ ವಿಭಕ್ತಿಪ್ರಯೋಗವು ಪ್ರಶಸ್ತ.] |

**ಉಪಾಂಶುವಾಗಿ [ಇತರರಿಗೆ ಕೇಳದಂತೆ ಮಂತ್ರೋಚ್ಚಾರಣೆ ಮಾಡುವುದು] ಯಾಗ ಮಾಡಬೇಕೆಂಬ ವಿಶೇಷವಿಧಿ. ಇದು ಏಕೆ?**

| | |
|---|---|
| ಉಪಾಗ್ಂಶು ಯಜತಿ | [ಸಾಂಗಯಾಗವನ್ನು ಉಪಾಂಶುವಾಗಿ ಉಚ್ಚರಿಸಿದ ಮಂತ್ರಗಳಿಂದ ಅನುಷ್ಠಿಸಬೇಕು. |

**ಯಥಾ ವಾಮಂ ವಸು ವಿವಿದಾನೋ ಗೂಹತಿ ತಾದೃಗೇವ ತದಗ್ನಿಂ ಪ್ರತಿ ಸ್ವಿಷ್ಟಕೃತಂ ನಿರಾಹ ಯಥಾ ವಾಮಂ ವಸು ವಿವಿದಾನಃ ಪ್ರಕಾಶಂ ಜಿಗಮಿಷತಿ**

---

ಯಥಾ । ವಾಮಮ್ । ವಸು । ವಿವಿದಾನಃ । ಗೂಹತಿ । ತಾದೃಕ್ । ಏವ । ತತ್ । ಅಗ್ನಿಮ್ । ಪ್ರತೀತಿ। ಸ್ವಿಷ್ಟಕೃತಮಿತಿ ಸ್ವಿಷ್ಟ - ಕೃತಮ್ । ನಿರಿತಿ । ಆಹ । ಯಥಾ । ವಾಮಮ್ । ವಸು । ವಿವಿದಾನಃ । ಪ್ರಕಾಶಮಿತಿ ಪ್ರ-ಕಾಶಮ್ । ಜಿಗಮಿಷತಿ ।

---

| | |
|---|---|
| ಯಥಾ ವಾಮಮ್ ವಸು ವಿವಿದಾನಃ ಗೂಹತಿ ತಾದೃಕ್ ಏವ ತತ್ | ಹೇಗೆ ಶ್ರೇಷ್ಠವಾದ ಧನವನ್ನು ಹೊಂದಲು ಯತ್ನಿಸುವವನು [ಬೇರೆಯವರಿಗೆ ತಿಳಿಯದಂತೆ ಗುಟ್ಟಾಗಿ] ಕೆಲಸ ಮಾಡುತ್ತಾನೆಯೋ, ಅದರಂತೆ ಈ ಉಪಾಂಶುಪ್ರಯೋಗ/ಶ್ರೇಷ್ಠವಾದ ಧನವನ್ನು ಹೊಂದಿದವನು ಆ ಹಣವನ್ನು ಗುಟ್ಟಾಗಿ ಇಡುವಂತೆ ಈ ಉಪಾಂಶುಪ್ರಯೋಗ. |

**ಸ್ವಿಷ್ಟಕೃದ್ಯಾಗವನ್ನು ಉಚ್ಚಧ್ವನಿಯಲ್ಲಿ ಮಾಡಬೇಕು, ಏಕೆ?**

| | |
|---|---|
| ಅಗ್ನಿಮ್ ಪ್ರತಿ ಸ್ವಿಷ್ಟಕೃತಮ್ ನಿರಾಹ | ಸ್ವಿಷ್ಟಕೃದಗ್ನಿಯನ್ನು ಉದ್ದೇಶಿಸಿ ಮಾಡುವ ಯಾಗವನ್ನು ಉಚ್ಚಧ್ವನಿಯಿಂದ ಅನುಷ್ಠಿಸಬೇಕು. |
| ಯಥಾ ವಾಮಂ ವಸು ವಿವಿದಾನಃ ಪ್ರಕಾಶಂ ಜಿಗಮಿಷತಿ | ಹೇಗೆ ಶ್ರೇಷ್ಠವಾದ ಧನವನ್ನು ಪಡೆದವನು ಅದನ್ನು ಪ್ರಕಾಶಪಡಿಸಿ, ಪ್ರಸಿದ್ಧಿ ಪಡೆಯಲು ಇಚ್ಛಿಸುತ್ತಾನೆಯೋ, |

ತಾದೃಗೇವ ತದ್ವಿಭಕ್ತಿಮುಕ್ತ್ವಾ ಪ್ರಯಾಜೇನ ವಷಟ್ಕರೋ

ತ್ಯಾಯತನಾದೇವ ನೈತಿ ಯಜಮಾನೋ ವೈ ಪುರೋಡಾಶಃ

---

ತಾದೃಕ್ । ಏವ । ತತ್ । ವಿಭಕ್ತಿಮಿತಿ ವಿ-ಭಕ್ತಿಮ್ । ಉಕ್ತ್ವಾ । ಪ್ರಯಾಜೇನೇತಿ ಪ್ರ-ಯಾಜೇನ । ವಷಟ್ । ಕರೋತಿ । ಆಯತನಾದಿತ್ಯಾ-ಯತನಾತ್ । ಏವ । ನ । ಏತಿ । ಯಜಮಾನಃ । ವೈ । ಪುರೋಡಾಶಃ ।

---

| | |
|---|---|
| ತಾದೃಕ್ ಏವ ತತ್ | ಉಚ್ಚಧ್ವನಿಯಲ್ಲಿ ಸ್ವಿಷ್ಟಕೃದ್ಯಾಗ ಮಾಡುವುದು ಹಾಗೆಯೇ ಆಗುತ್ತದೆ. |

**ವಿಭಕ್ತಿಗಳಿಗೆ ಪ್ರಯಾಜಗಳ ಸಂಬಂಧದ ವಿಶೇಷವಿಧಿ**

| | |
|---|---|
| ವಿಭಕ್ತಿಮ್ ಉಕ್ತ್ವಾ ಪ್ರಯಾಜೇನ ವಷಟ್ ಕರೋತಿ | ವಿಭಕ್ತಿವಚನಸಹಿತವಾದ ಪ್ರಯಾಜಮಂತ್ರದಿಂದ ವಷಟ್ಕಾರಪೂರ್ವಕವಾಗಿ ಪ್ರಯಾಜಹೋಮವನ್ನು ಅನುಷ್ಠಿಸಬೇಕು. |
| ಆಯತನಾತ್ ಏವ ನ ಏತಿ | [ಹೀಗೆ ಮಾಡುವುದರಿಂದ] ಯಜಮಾನನು ತನ್ನ ಆಯತನ [ಮನೆ] ದಿಂದ ಹೊರಗೆ ಹೋಗುವುದಿಲ್ಲ. ಮನೆಯಲ್ಲಿಯೇ ಸ್ಥಿರವಾಗಿ, ಸುಖವಾಗಿರುತ್ತಾನೆ. |

**ಆಗ್ನೇಯಪುರೋಡಾಶಕ್ಕೆ ಮೊದಲು ಮತ್ತು ಅನಂತರ ಎರಡು ಆಹುತಿಗಳ ವಿಶೇಷವಿಧಿ**

| | |
|---|---|
| ಯಜಮಾನಃ ವೈ ಪುರೋಡಾಶಃ | ಯಜಮಾನನು ಪುರೋಡಾಶವೇ.* |

---

*ಯಾಗದಲ್ಲಿ ಯಜಮಾನನು ಮುಖ್ಯ. ಪುರೋಡಾಶವು ಮುಖ್ಯ ಹವಿಸ್ಸಾಗಿರುವುದರಿಂದ ಮುಖ್ಯ. ಆದ್ದರಿಂದ ಯಜಮಾನನು ಪುರೋಡಾಶವೆಂದು ಹೇಳಿದೆ.

ಪಶವ ಏತೇ ಆಹುತೀ ಯದಭಿತಃ ಪುರೋಡಾಶಮೇತೇ

ಆಹುತೀ[೩] ಜುಹೋತಿ ಯಜಮಾನಮೇವೋಭಯತಃ

ಪಶುಭಿಃ ಪರಿಗೃಹ್ಣಾತಿ

---

ಪಶವಃ । ಏತೇ ಇತಿ । ಆಹುತೀ ಇತ್ಯಾ-ಹುತೀ । ಯತ್ । ಅಭಿತಃ । ಪುರೋಡಾಶಮ್।

ಏತೇ ಇತಿ । ಆಹುತೀ ಇತ್ಯಾ-ಹುತೀ(೩) । ಜುಹೋತಿ । ಯಜಮಾನಮ್ । ಏವ ।

ಉಭಯತಃ। ಪಶುಭಿರಿತಿ ಪಶು-ಭಿಃ । ಪರೀತಿ । ಗೃಹ್ಣಾತಿ ।



---

| | |
|---|---|
| ಪಶವಃ ಏತೇ ಆಹುತೀ | 'ಪುನರೂರ್ಜಾ' 'ಸಹ ರಯ್ಯಾ'* ಎಂಬ ಎರಡು ಮಂತ್ರಗಳಿಂದ ಮಾಡುವ ಆಹುತಿಗಳು [ಪಶು ಸಾಧನಗಳಾಗಿರುವುದರಿಂದ] ಪಶುಗಳೇ ಆಗಿವೆ. |
| ಯತ್ ಅಭಿತಃ ಪುರೋಡಾಶಮ್ ಏತೇ ಆಹುತೀ ಜುಹೋತಿ | ಪುರೋಡಾಶಯಾಗಕ್ಕೆ ಮೊದಲು ಮತ್ತು ಅನಂತರ ಹೀಗೆ ಎರಡು ಕಡೆಗಳಲ್ಲಿಯೂ ಈ ಆಹುತಿಗಳನ್ನು ಮಾಡುವುದರಿಂದ |
| ಯಜಮಾನಮ್ ಏವ ಉಭಯತಃ ಪಶುಭಿಃ ಪರಿ ಗೃಹ್ಣಾತಿ | [ಅಧ್ವರ್ಯುವು] ಯಜಮಾನನನ್ನು ಎರಡು ಕಡೆಗಳಲ್ಲಿಯೂ ಪಶುಗಳಿಂದ ಸುತ್ತುವರಿಯಲ್ಪಟ್ಟಂತೆ ಮಾಡುತ್ತಾನೆ. |

---

* ತೈ.ಸಂ. ೧.೫.೩.

## ಕೃತಯಜುಸ್ಸಂಭೃತಸಂಭಾರ ಇತ್ಯಾಹುರ್ನ ಸಂಭೃತ್ಯಾ ಸ್ಸಂಭಾರಾ

---

ಕೃತಯಜುರಿತಿ ಕೃತ - ಯಜುಃ । ಸಂಭೃತಸಂಭಾರ ಇತಿ ಸಂಭೃತ-ಸಂಭಾರಃ । ಇತಿ । ಆಹುಃ । ನ । ಸಂಭೃತ್ಯಾ ಇತಿ ಸಮ್-ಭೃತ್ಯಾಃ । ಸಂಭಾರಾ ಇತಿ ಸಮ್-ಭಾರಾಃ ।

---



***ಪುನರಾಧಾನದಲ್ಲಿ ಸಂಭಾರಾಹರಣ, ಮಂತ್ರಗಳು ಇವೆಯೇ?**

| | |
|---|---|
| ಕೃತಯಜುಃ ಸಂಭೃತಸಂಭಾರಃ ಇತ್ಯಾಹುಃ | [ಈ ಯಜಮಾನನು ಅಗ್ನ್ಯಾಧಾನವನ್ನು ಮಾಡುವಾಗ] ಯಜುರಾದಿಗಳನ್ನು ಪಠಿಸಿರುತ್ತಾನೆ. ಹಾಗೆಯೇ [ಪಾರ್ಥಿವ ಮತ್ತು ವಾನಸ್ಪತ್ಯ] ಸಂಭಾರಗಳನ್ನು ತಂದು ಉಪಯೋಗಿಸಿರುತ್ತಾನೆ' [ಎಂದು ಬ್ರಹ್ಮವಾದಿಗಳು] ಹೇಳುತ್ತಾರೆ. |
| ನ ಸಂಭೃತ್ಯಾಃ ಸಂಭಾರಾಃ | [ಆದುದರಿಂದ] ಸಂಭಾರಗಳನ್ನು ತರಬೇಕಾಗಿಲ್ಲ. |

---

*ಅಗ್ನ್ಯಾಧಾನದಲ್ಲಿ **'ಸಪ್ತ ಪಾರ್ಥಿವಾನ್ ಸಂಭಾರಾನಾಹರತಿ'** 'ಏವಂ ವಾನಸ್ಪತ್ಯಾನ್..........' ಎಂದು ಅಗ್ನಿಗಳ ಆಯತನದಲ್ಲಿ ಹಾಕಲು ಏಳು ಬಗೆಯ ಮಣ್ಣಿನ ಸಂಭಾರಗಳನ್ನೂ, ಏಳು ಬಗೆಯ ವೃಕ್ಷಸಂಬಂಧಿಯಾದ ಸಂಭಾರಗಳನ್ನು ತರಬೇಕೆಂದು ಹೇಳಿದೆ. ಅಗ್ನ್ಯಾಧಾನದ ಮಂತ್ರಗಳನ್ನೂ ಹೇಳಿದೆ. ಪುನರಾಧಾನದಲ್ಲಿ ಇವು ಬೇಕೆ? ಬೇಡವೇ? ಎಂಬ ಜಿಜ್ಞಾಸೆ. ಆವಶ್ಯಕವೆಂದು ಸಿದ್ಧಾಂತ.

ನ ಯಜುಃ ಕರ್ತವ್ಯಮಿತ್ಯಥೋ ಖಲು ಸಂಭೃತ್ಯಾ ಏವ ಸಂಭಾರಾಃ ಕರ್ತವ್ಯಂ ಯಜುರ್ಯಜ್ಞಸ್ಯ ಸಮೃದ್ಧ್ಯೈ

ಪುನರ್ನಿಷ್ಕೃತೋ ರಥೋ ದಕ್ಷಿಣಾ .

---

ನ । ಯಜುಃ । ಕರ್ತವ್ಯಮ್। ಇತಿ । ಅಥೋ ಇತಿ । ಖಲು । ಸಂಭೃತ್ಯಾ ಇತಿ ಸಮ್-ಭೃತ್ಯಾಃ । ಏವ। ಸಂಭಾರಾ ಇತಿ ಸಮ್-ಭಾರಾಃ । ಕರ್ತವ್ಯಮ್ । ಯಜುಃ । ಯಜ್ಞಸ್ಯ। ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ। ಪುನರ್ನಿಷ್ಕೃತ ಇತಿ ಪುನಃ-ನಿಷ್ಕೃತಃ। ರಥಃ। ದಕ್ಷಿಣಾ।

---

| | |
|---|---|
| ನ ಯಜುಃ ಕರ್ತವ್ಯಮ್ ಇತಿ ಅಥೋ ಖಲು | ಆಧಾನಮಂತ್ರಪಠನವು ಆವಶ್ಯಕವಿಲ್ಲ ಎಂದು ಹೇಳುತ್ತಾರೆ. 'ಇದು ಸರಿಯಲ್ಲ' ಎಂದು ತಿಳಿದವರು ಹೇಳುತ್ತಾರೆ. |
| ಸಂಭಾರಾಃ ಸಂಭೃತ್ಯಾಃ ಏವ ಯಜುಃ ಕರ್ತವ್ಯಮ್ ಏವ | ಸಂಭಾರಗಳನ್ನು ತರಲೇಬೇಕು. ಆಧಾನ ಮಂತ್ರಪಠನವೂ ಮಾಡಬೇಕಾದುದೇ.* |
| ಯಜ್ಞಸ್ಯ ಸಮೃದ್ಧ್ಯೈ | [ಹೀಗೆ ಸಂಭಾರಾಹರಣ, ಮಂತ್ರಪಠನಗಳಿಂದ] ಯಜ್ಞವು ಸಮೃದ್ಧವಾಗುತ್ತದೆ. |

**ಪುನರಾಧೇಯದ ದಕ್ಷಿಣಾವಿಶೇಷ**

| | |
|---|---|
| ಪುನರ್ನಿಷ್ಕೃತಃ ರಥಃ ದಕ್ಷಿಣಾ | [ಪುನರಾಧಾನದಲ್ಲಿ] ಶಿಥಿಲವಾಗಿ ಹೋಗಿ ಮತ್ತೆ ಸರಿಪಡಿಸಿರುವ ರಥವು ದಕ್ಷಿಣೆ. |

---

*ಆಪಸ್ತಂಬಸೂತ್ರದಲ್ಲಿ 'ಕೃತಾಕೃತಾಃ ಸಂಭಾರಾ ಭವಂತಿ, ಯಜೂಂಷಿ ಚ । ಅಪಿ ವಾ ಪಂಚ ಪಾರ್ಥಿವಾನ್ ಸಂಭಾರಾನ್ ಸಂಭರೇತ್ । ಭೂಯಸೋ ವಾ ಇತಿ ವಾಜಸನೇಯಕಮ್ ।' ಎಂದು ಪಕ್ಷದ್ವಯವನ್ನು ಹೇಳಿದೆ.

ಪುನರುತ್ಸ್ಯೂತಂ ವಾಸಃ ಪುನರುತ್ಸೃಷ್ಟೋಽನಡ್ವಾನ್ಪುನ

ರಾಧೇಯಸ್ಯ ಸಮೃದ್ಧ್ಯೈ ಸಪ್ತ ತೇ ಅಗ್ನೇ ಸಮಿಧಸ್ಸಪ್ತ ಜಿಹ್ವಾ

ಇತ್ಯಗ್ನಿಹೋತ್ರಂ ಜುಹೋತಿ

---

ಪುನರುತ್ಸ್ಯೂತಮಿತಿ ಪುನಃ - ಉತ್ಸ್ಯೂತಮ್ । ವಾಸಃ । ಪುನರುತ್ಸೃಷ್ಟ ಇತಿ ಪುನಃ-ಉತ್ಸೃಷ್ಟಃ । ಅನಡ್ವಾನ್ । ಪುನರಾಧೇಯಸ್ಯೇತಿ ಪುನಃ-ಆಧೇಯಸ್ಯ । ಸಮೃಧ್ಯಾ ಇತಿ ಸಮ್-ಋಧ್ಯೈ । ಸಪ್ತ । ತೇ । ಅಗ್ನೇ । ಸಮಿಧ ಇತಿ ಸಮ್-ಇಧಃ । ಸಪ್ತ । ಜಿಹ್ವಾಃ ಇತಿ । ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್ । ಜುಹೋತಿ ।

---

| | |
|---|---|
| ಪುನರುತ್ಸ್ಯೂತಂ ವಾಸಃ [ದಕ್ಷಿಣಾ] | ಹರಿದುಹೋಗಿ ಸೂಜಿಯಿಂದ ಮತ್ತೆ ಹೊಲಿದು ಸರಿಪಡಿಸಿರುವ ಬಟ್ಟೆಯು ದಕ್ಷಿಣೆ. |
| ಪುನರುತ್ಸೃಷ್ಟಃ ಅನಡ್ವಾನ್ [ದಕ್ಷಿಣಾ] | ದುರ್ಬಲವಾಗಿ ಭಾರವನ್ನು ಎಳೆಯಲು ಅಸಮರ್ಥವೆಂದು ಬಿಟ್ಟಿದ್ದು, ಅನಂತರ ಪೋಷಣೆ ಮಾಡಿ ಎತ್ತಿನ ಕೆಲಸಕ್ಕೆ ಸಿದ್ಧಪಡಿಸಿರುವ ಎತ್ತು ದಕ್ಷಿಣೆ. |
| ಪುನರಾಧೇಯಸ್ಯ ಸಮೃಧ್ಯೈ | [ಇಂತಹ ದಕ್ಷಿಣೆಗಳಿಂದ] ಪುನರಾಧೇಯವು ಸಮೃದ್ಧಿಯನ್ನು ಹೊಂದಲು ಶಕ್ತವಾಗುತ್ತದೆ. |

**ಪುನರಾಧಾನದ ಅಗ್ನಿಹೋತ್ರ ಮಂತ್ರ**

| | |
|---|---|
| ಸಪ್ತ ತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಇತಿ ಅಗ್ನಿಹೋತ್ರಂ ಜುಹೋತಿ | 'ಸಪ್ತ ತೇ ಅಗ್ನೇ' ಎಂಬ ಮಂತ್ರದಿಂದ ಅಗ್ನಿಹೋತ್ರ ಹೋಮವನ್ನು ಮಾಡಬೇಕು. [ಪ್ರಥಮಾಧಾನದಲ್ಲಿ ತೂಷ್ಣೀಂಹೋಮವನ್ನು ಹೇಳಿದೆ.] |

यत्र्ययत्त्रैवास्य न्यक्तं तत [ತತಃ [೪] ಏವೈನ......]

ಏವೈನಮವರುಂಧೇ ವೀರಹಾ ವಾ ಏಷ ದೇವಾನಾಂ

ಯೋಽಗ್ನಿಮುದ್ವಾಸಯತೇ

---

ಯತ್ರಯತ್ರೇತಿ ಯತ್ರ-ಯತ್ರ । ಏವ । ಅಸ್ಯ । ನ್ಯಕ್ತಮಿತಿ ನಿ-ಅಕ್ತಮ್ । ತತಃ ।

ಏವ । ಏನಮ್ । ಅವೇತಿ । ರುಂಧೇ । ವೀರಹೇತಿ ವೀರ-ಹಾ । ವೈ । ಏಷಃ । ದೇವಾ-

ನಾಮ್ । ಯಃ । ಅಗ್ನಿಮ್ । ಉದ್ವಾಸಯತ ಇತ್ಯುತ್-ವಾಸಯತೇ ।



---

| | |
|---|---|
| ಯತ್ರಯತ್ರ ಏವ ಅಸ್ಯ ನ್ಯಕ್ತಮ್ | ಯಾವ ಯಾವ ಪ್ರದೇಶದಲ್ಲಿಯೇ [ಈ ಪುನರಾಧೇಯದೇವತೆಯಾದ] ಅಗ್ನಿಯ [ಯಾವ ಯಾವ ಅಂಗವು] ನಿಮಗ್ನ [ವಿಸ್ಮೃತ] ವಾಗಿದೆಯೋ, |
| ತತಃ ಏವ ಏನಮ್ ಅವ ರುಂಧೇ | ಆ ಪ್ರದೇಶದಿಂದಲೇ ಈ ಸಾಂಗನಾದ ಅಗ್ನಿಯು ತೃಪ್ತಿಹೊಂದುತ್ತಾನೆ.* |

**ಅಗ್ನೀವರುಣದೇವತಾಕವಾದ ಏಕಾದಶಕಪಾಲಪುರೋಡಾಶದ ಯಾಗವಿಧಿ**

| | |
|---|---|
| ವೀರಹಾ ವೈ ಏಷಃ ದೇವಾನಾಮ್ ಯಃ ಅಗ್ನಿಮ್ ಉದ್ವಾಸಯತೇ | ಅಗ್ನಿಯನ್ನು ಉದ್ವಾಸನೆ ಮಾಡುವ ಯಜಮಾನನು ದೇವತೆಗಳಲ್ಲಿ ವೀರನಾದ ಅಗ್ನಿಯನ್ನು ಕೊಂದವನೇ ಆಗುತ್ತಾನೆ. |

---

*ಅಗ್ನಿಗೆ ಏಳು ಶರೀರಗಳುಂಟು. ಅವೆಲ್ಲವನ್ನೂ ಯಜಮಾನನು ಪಡೆದು ಈ ಮಂತ್ರದಿಂದ ತೃಪ್ತಿಪಡಿಸುತ್ತಾನೆ.

ತಸ್ಯ ವರುಣ ಏವರ್ಣಯಾದಾಗ್ನಿವಾರುಣ ಮೇಕಾದಶಕಪಾಲ

ಮನುನಿರ್ವಪೇದ್ಯಂ ಚೈವ ಹಂತಿ ಯಶ್ಚಾಸ್ಯರ್ಣಯಾತ್ತೌ

ಭಾಗಧೇಯೇನ ಪ್ರೀಣಾತಿ ನಾರ್ತಿಮಾರ್ಛತಿ ಯಜಮಾನಃ ||೨-9||

[ಆಽಪರಾಭಾವಾಯ ಪುರೋಡಾಶಮೇತೇ ಆಹುತೀ ತತಃ ಷಟ್ತ್ರಿಗ್ಂಶಚ್ಚ||]

---

ತಸ್ಯ | ವರುಣಃ| ಏವ | ಋಣಯಾದಿತ್ಯೃಣ-ಯಾತ್ | ಆಗ್ನಿವಾರುಣಮಿತ್ಯಾಗ್ನಿ- ವಾರುಣಮ್| ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ | ಅನು | ನಿರಿತಿ | ವಪೇತ್| ಯಮ್| ಚ| ಏವ| ಹಂತಿ | ಯಃ | ಚ | ಅಸ್ಯ | ಋಣಯಾದಿತ್ಯೃಣ-ಯಾತ್| ತೌ | ಭಾಗಧೇಯೇನೇತಿ ಭಾಗ-ಧೇಯೇನ| ಪ್ರೀಣಾತಿ | ನ | ಆರ್ತಿಮ್ | ಋಚ್ಛತಿ | ಯಜಮಾನಃ ||೨||

---

| | |
|---|---|
| ತಸ್ಯ ವರುಣಃ ಏವ ಋಣಯಾತ್ | ಆ ಯಜಮಾನನನ್ನು ವರುಣನು [ಸಾಲವನ್ನು ಕೊಟ್ಟ ಸಾಲಿಗನು ಸಾಲವನ್ನು ತೆಗೆದುಕೊಂಡ ಸಾಲಗಾರನನ್ನು ಪೀಡಿಸುವಂತೆ] ಪೀಡಿಸುತ್ತಾನೆ. |
| ಆಗ್ನಿವಾರುಣಮ್ ಏಕಾದಶ ಕಪಾಲಮ್ ಅನು ನಿರ್ವಪೇತ್ | ಅಗ್ನೀವರುಣದೇವತಾಕವಾದ ಏಕಾದಶಕಪಾಲ ಪುರೋಡಾಶಯಾಗವನ್ನು ಪ್ರಧಾನಯಾಗವನ್ನು ಅನುಸರಿಸಿ ಮಾಡಬೇಕು.[ಹೀಗೆ ಮಾಡುವುದರಿಂದ] |
| ಯಮ್ ಚ ಏವ ಹಂತಿ | ಯಾವ ಅಗ್ನಿಯನ್ನು ಉದ್ವಾಸನೆ ಮಾಡುತ್ತಾನೆಯೋ, |
| ಯಃ ಚ ಅಸ್ಯ ಋಣಯಾತ್ | ಯಾವ ವರುಣನು ಸಾಲವನ್ನು ಕೊಟ್ಟವನಂತೆ ಪೀಡಿಸುತ್ತಾನೆಯೋ, |
| ತೌ ಭಾಗಧೇಯೇನ ಪ್ರೀಣಾತಿ | ಆವರಿಬ್ಬರನ್ನೂ ಯಜಮಾನನು ಈ ಯಾಗದಿಂದ ಸಂತೋಷಪಡಿಸುತ್ತಾನೆ. |
| ನ ಆರ್ತಿಮ್ ಋಚ್ಛತಿ ಯಜಮಾನಃ | | ಯಜಮಾನನು ಪೀಡೆಯನ್ನು ಹೊಂದುವುದಿಲ್ಲ. |

## ಅನುವಾಕದ ವಿಶೇಷ ವಿಷಯಗಳು

### ಮೀಮಾಂಸಾ

**೧. ಪುನರಾಧೇಯದಲ್ಲಿ ದಕ್ಷಿಣೆ ಹೇಗೆ?** **[ಜೈ.ಸೂ. 10.3.8/9]**

ಆಧಾನದಲ್ಲಿ ವೈಕಲ್ಪಿಕವಾಗಿ ಗೋದಕ್ಷಿಣೆಯೂ, ದ್ರವ್ಯಾಂತರದಕ್ಷಿಣೆಯೂ ವಿಹಿತವಾಗಿವೆ. ಅದೆಲ್ಲವೂ ಅತಿದೇಶದಿಂದ ಪುನರಾಧಾನದಲ್ಲಿಯೂ ಬರುತ್ತದೆ. ಪುನರಾಧಾನದಲ್ಲಿ **'ಪುನರ್ನಿಷ್ಕೃತೋ ರಥೋ ದಕ್ಷಿಣಾ'** ಮೊದಲಾಗಿ ವಿಶೇಷ ದಕ್ಷಿಣೆಗಳನ್ನು ಹೇಳಲಾಗಿದೆ. ಹೀಗಾಗಿ ಅತಿದೇಶದಿಂದ ಪ್ರಾಪ್ತವಾದ ದಕ್ಷಿಣೆ, ಮತ್ತು ಇಲ್ಲಿಯ ವಿಶೇಷದಕ್ಷಿಣೆ — ಈ ಎರಡನ್ನೂ ಕೊಡಬೇಕೆ? ಇಲ್ಲಿ ಹೇಳಿರುವುದನ್ನು ಮಾತ್ರ ಕೊಡಬೇಕೆ? ಎಂಬುದು ಇಲ್ಲಿನ **ಸಂಶಯ.**

ಇಲ್ಲಿಯ **ಪೂರ್ವಪಕ್ಷ** ಹೀಗಿದೆ : **'ಉಭಯೀರ್ದಕ್ಷಿಣಾ ದದಾತಿ'** ಎಂದು ಈ ಪ್ರಕರಣದಲ್ಲಿ ಇರುವುದರಿಂದ ಎರಡೂ ದಕ್ಷಿಣೆಗಳನ್ನು ಕೊಡಬೇಕು.

ಇಲ್ಲಿಯ **ಸಿದ್ಧಾಂತವು** ಹೀಗಿದೆ, ಹಿಂದೆ ಆಧಾನದಲ್ಲಿ ದಕ್ಷಿಣೆಗಳನ್ನು ಕೊಟ್ಟು ಆಗಿದೆ. ಈಗ ಪುನರಾಧೇಯದಲ್ಲಿ ಇಲ್ಲಿ ಹೇಳಿರುವ ದಕ್ಷಿಣೆಗಳನ್ನು ಕೊಡುವುದರಿಂದ **'ಉಭಯೀರ್ದಕ್ಷಿಣಾ ದದಾತಿ'** ಎಂಬ ವಚನವು ಸಾರ್ಥಕವಾಗುತ್ತದೆ. ಆ ವಾಕ್ಯದಲ್ಲಿ **'ದದ್ಯಾತ್'** ಎಂದು ವಿಧಿವಾಚಕವಿಲ್ಲ, ವರ್ತಮಾನಕಾಲವಾಚಕವಾದ **'ದದಾತಿ'** ಎಂಬ ರೂಪವಿದೆ. ಆದುದರಿಂದ ಆಧಾನದ ದಕ್ಷಿಣೆಗಳನ್ನು ಬಾಧಿಸಿ, ಇಲ್ಲಿ ಹೇಳಿರುವ ದಕ್ಷಿಣೆಗಳನ್ನು ಮಾತ್ರವೇ ಕೊಡಬೇಕು.

---

## ॥ ತೃತೀಯೋಽನುವಾಕಃ ॥

ಭೂಮಿರ್ಭೂಮ್ನಾ ದ್ಯೌರ್ವರಿಣಾಂತರಿಕ್ಷಂ ಮಹಿತ್ವಾ। ಉಪಸ್ಥೇ

ತೇ ದೇವ್ಯದಿತೇಽಗ್ನಿಮನ್ನಾದಮನ್ನಾದ್ಯಾಯಾಽಽದಧೇ ॥

---

ಭೂಮಿಃ । ಭೂಮ್ನಾ । ದ್ಯೌಃ । ವರಿಣಾ । ಅಂತರಿಕ್ಷಮ್ । ಮಹಿತ್ವೇತಿ ಮಹಿ-ತ್ವಾ॥

ಉಪಸ್ಥ ಇತ್ಯುಪ-ಸ್ಥೇ । ತೇ । ದೇವಿ । ಅದಿತೇ । ಅಗ್ನಿಮ್ । ಅನ್ನಾದಮಿತ್ಯನ್ನ-ಅದಮ್।

ಅನ್ನಾದ್ಯಾಯೇತ್ಯನ್ನ-ಅದ್ಯಾಯ । ಆ । ದಧೇ ॥

---

ಈ ಪ್ರಶ್ನದ ಮೊದಲ 2 ಅನುವಾಕಗಳಿಂದ ಪುನರಾಧೇಯವೂ, ಅದಕ್ಕೆ ಸಂಬಂಧಿಸಿದ ವಿಶೇಷವಿಧಿಗಳೂ ಹೇಳಲ್ಪಟ್ಟವು. ಮೂರನೆಯ ಅನುವಾಕದಲ್ಲಿ ಪುನರಾಧೇಯದ ಮಂತ್ರಗಳು ಹೇಳಲ್ಪಟ್ಟಿವೆ.

| ಮಂತ್ರ | ವಿನಿಯೋಗ |
|---|---|
| ಭೂಮಿರ್ಭೂಮ್ನಾ.........ದಧೇ ॥ | *ಗಾರ್ಹಪತ್ಯಾಧಾನವನ್ನು ಮಾಡಲು |

---

[ಎಲೈ! ಗಾರ್ಹಪತ್ಯಪ್ರದೇಶವೇ! ನೀನು] ಭೂಮ್ನಾ = ಬಹುವಿಧವಾಗಿರುವಿಕೆಯಿಂದಲೂ / ವಿಸ್ತೀರ್ಣವಾಗಿರುವಿಕೆಯಿಂದಲೂ; ಭೂಮಿಃ = ಭೂಮಿಯಾಗಿರುವೆ; ವರಿಣಾ = ಶ್ರೇಷ್ಠತೆಯಿಂದ; ದ್ಯೌಃ = ಸ್ವರ್ಗವಾಗಿರುವೆ; ಮಹಿತ್ವಾ=ಮಹತ್ತ್ವದಿಂದ; ಅಂತರಿಕ್ಷಮ್ = ಅಂತರಿಕ್ಷವೂ ಆಗಿರುವೆ; ದೇವಿ! ಅದಿತೇ = ಅಖಂಡಿತೆಯಾದ [ಗಾರ್ಹಪತ್ಯಪ್ರದೇಶ ರೂಪಳಾದ] ಭೂದೇವಿಯೇ! ತೇ = ನಿನ್ನ; ಉಪಸ್ಥೇ= ತೊಡೆಯಂತಿರುವ ಈ ಗಾರ್ಹಪತ್ಯಾಯತನದಲ್ಲಿ; ಅನ್ನಾದಮ್ = [ಹವ್ಯರೂಪವಾದ] ಅನ್ನವನ್ನು ಭುಂಜಿಸುವ; ಅಗ್ನಿಮ್ = ಗಾರ್ಹಪತ್ಯಾಗ್ನಿಯನ್ನು; ಅನ್ನಾದ್ಯಾಯ = [ಯಜಮಾನನಿಗೆ] ಅನ್ನವನ್ನು ತಿನ್ನುವ ಸಾಮರ್ಥ್ಯರೂಪವಾದ ಋದ್ಧಿಗಾಗಿ; ಆ ದಧೇ = ಇಡುತ್ತೇನೆ.

---

ಎಲೈ! ಗಾರ್ಹಪತ್ಯಾಯತನಪ್ರದೇಶವೇ! ನೀನು ಲೋಕತ್ರಯಸ್ವರೂಪನು.

---

*ಭೂಮಿರ್ಭೂಮ್ನೇತಿ ಗಾರ್ಹಪತ್ಯಮಾದಧಾತಿ, ಯತ್ವಾ ಕ್ರುದ್ಧಃ ಪರೋವಪೇತಿ ದಕ್ಷಿಣಾಗ್ನಿಮ್.

ಆಽಯಂ ಗೌಃ ಪೃಶ್ನಿರಕ್ರಮೀದಸನನ್ಮಾತರಂ ಪುನಃ । ಪಿತರಂ

ಚ ಪ್ರಯನ್ಥ್ಸುವಃ ॥

---

ಏತಿ । ಅಯಮ್ । ಗೌಃ । ಪೃಶ್ನಿಃ । ಅಕ್ರಮೀತ್ । ಅಸನತ್ । ಮಾತರಮ್ ।

ಪುನಃ ॥ ಪಿತರಮ್ । ಚ । ಪ್ರಯನ್ನಿತಿ ಪ್ರ-ಯನ್ನ್ । ಸುವಃ ॥

---

| ಮಂತ್ರ | ವಿನಿಯೋಗ |
|---|---|
| ಆಯಂ............ಸುವಃ । | ಗಾರ್ಹಪತ್ಯಾಧಾನದ ಎರಡನೆಯ ಮಂತ್ರ. |

---

✢ ಅಯಮ್ = ಈ ಗಾರ್ಹಪತ್ಯಾಗ್ನಿಯು; ಗೌಃ = [ಸೂರ್ಯರೂಪದಿಂದ] ಗಮನಶೀಲನಾಗಿ; ಪೃಶ್ನಿಃ = ಶ್ವೇತವರ್ಣವುಳ್ಳವನಾಗಿ/ಪೃಶ್ನಿಯೆಂಬ ಹೆಸರುಳ್ಳವನಾಗಿ; ಆ ಅಕ್ರಮೀತ್ = [ಜಗತ್ತನ್ನು] ಆಕ್ರಮಿಸಿದನು/ವ್ಯಾಪಿಸಿದ್ದನು; ಪುನಃ = ಮತ್ತೆ; ಮಾತರಮ್ = ತಾಯಿಯಾದ ಭೂಮಿಯನ್ನು; ಅಸನತ್ = ಹೊಂದಿದನು/ಹೊಂದಿ ಶಾಂತನಾದನು; ಚ = ಮತ್ತು; ಪಿತರಮ್ = ತಂದೆಯಾದ; ಸುವಃ = ದ್ಯುಲೋಕವನ್ನು; ಪ್ರಯನ್ = ಅಧಿಕವಾಗಿ ಹೊಂದುತ್ತಾ [ಅವಸ್ಥಿತಃ = ಇದ್ದನು.] [ಅಗ್ನಿಯನ್ನು ಸೂರ್ಯನಂತೆ ಸ್ತುತಿಸಲಾಗಿದೆ.] ['ದ್ಯೌಃ ಪಿತಾ', 'ಪೃಥಿವೀ ಮಾತಾ' ಎಂದು ಶ್ರುತಿಯೂ ಇದೆ.]

---

ಬಹುವಿಧವಾಗಿ ವಿಸ್ತೀರ್ಣವಾಗಿರುವುದರಿಂದ ಭೂಮಿಯೂ, ಶ್ರೇಷ್ಠತೆಯಿಂದ ಸ್ವರ್ಗವೂ, ಮಹತ್ತ್ವದಿಂದ ಅಂತರಿಕ್ಷವೂ ಆಗಿರುತ್ತೀಯೆ. ಎಲೈ ಗಾರ್ಹಪತ್ಯ ಪ್ರದೇಶರೂಪಭೂದೇವಿಯೇ! ನಿನ್ನ ತೊಡೆಯಂತಿರುವ ಈ ಗಾರ್ಹಪತ್ಯಾಯತನದಲ್ಲಿ ಅನ್ನಾದಿ ಹವಿಸ್ಸುಗಳನ್ನು ಭಕ್ಷಿಸುವ ಗಾರ್ಹಪತ್ಯಾಗ್ನಿಯನ್ನು ಯಜಮಾನನ ಅನ್ನಾದ್ಯ

---

ಯತ್ತೇ ಮನ್ಯುಪರೋಪ್ತಸ್ಯೇತೀತರಾನ್ [ಆಪ. ಶ್ರೌ.ಸೂ. 5.27.9-11] ಎಂದು ಸೂತ್ರವು ಮೊದಲ

ತ್ರಿಗ್ಂಶದ್ಧಾಮ ವಿರಾಜತಿ ವಾಕ್ಪತಂಗಾಯ ಶಿಶ್ರಿಯೇ ।

---

ತ್ರಿಗ್ಂಶತ್ । ಧಾಮ । ವೀತಿ । ರಾಜತಿ । ವಾಕ್ । ಪತಂಗಾಯ । ಶಿಶ್ರಿಯೇ ॥

---

| ಮಂತ್ರ | ವಿನಿಯೋಗ |
| --- | --- |
| ತ್ರಿಗ್ಂಶದ್ಧಾಮ.........ದ್ಯುಭಿಃ ॥ | ಗಾರ್ಹಪತ್ಯಾಧಾನದ ಮೂರನೆಯ ಮಂತ್ರ. |

---

✢ [ಆದಿತ್ಯರೂಪನಾದ ಗಾರ್ಹಪತ್ಯನ] ತ್ರಿಂಶತ್ ಧಾಮ = ಮೂವತ್ತು ಮುಹೂರ್ತಗಳ ರೂಪವಾದ ತೇಜಸ್ಸು; ವಿರಾಜತಿ = ವಿಶೇಷವಾಗಿ ಪ್ರಕಾಶಿಸುತ್ತದೆ. ವಾಕ್ = [ವೈದಿಕಸ್ತುತಿರೂಪವಾದ] ವಾಕ್ಕು; ಪತಂಗಾಯ = ಹಕ್ಕಿಯಂತೆ ಅಂತರಿಕ್ಷದಲ್ಲಿ ಸಂಚರಿಸುವ ಸೂರ್ಯನನ್ನು; ಶಿಶ್ರಿಯೇ = ಆಶ್ರಯಿಸಿದೆ.

---

ಪ್ರಾಪ್ತಿಗಾಗಿ/ಋದ್ಧಿಗಾಗಿ ಇಡುತ್ತೇನೆ.

ಅಗ್ನಿಯು ಆದಿತ್ಯಾತ್ಮನು. ಆತನು ಶ್ವೇತವರ್ಣದವನು. ಆತನಿಗೆ 'ಪೃಶ್ನಿ' ಎಂದೂ ಹೆಸರು. ಆತನು ಗಮನಶೀಲನು. ಸೂರ್ಯರೂಪನಾದ ಅಗ್ನಿಯು ಜಗತ್ತನ್ನು ಆಕ್ರಮಿಸಿರುತ್ತಾನೆ. ಭೂಮಿಯೆಂಬ ತಾಯಿಯನ್ನು ಹೊಂದುತ್ತಾನೆ./ಹೊಂದಿ ಶಾಂತನಾಗುತ್ತಾನೆ. ತಂದೆಯಾದ ದ್ಯುಲೋಕವನ್ನೂ ಮತ್ತೆ ಮತ್ತೆ ಹೊಂದುತ್ತಾನೆ. ಇಂತಹ ಗಾರ್ಹಪತ್ಯಾಗ್ನಿಯನ್ನು ಗಾರ್ಹಪತ್ಯಾಯತನದಲ್ಲಿ ಪ್ರತಿಷ್ಠಿಸುತ್ತೇನೆ.

[ಸೂರ್ಯರೂಪದಿಂದ ಅಗ್ನಿಯನ್ನು ಸ್ತುತಿಸಲಾಗಿದೆ.] ದಿನದ ಒಟ್ಟು ಮೂವತ್ತು

---

ನಾಲ್ಕು ಮಂತ್ರಗಳಿಂದ ಗಾರ್ಹಪತ್ಯ, ಐದನೆಯದ್ದರಿಂದ ದಕ್ಷಿಣಾಗ್ನಿ, ಆರನೆಯ ಮಂತ್ರದಿಂದ 'ಇತರಾನ್' ಎಂದರೆ ಆಹವನೀಯ, ಸಭ್ಯ ಮತ್ತು ಆವಸಥ್ಯಾಗ್ನಿಗಳನ್ನು ಆಧಾನ ಮಾಡಬೇಕೆಂದು 6 ಮಂತ್ರಗಳ ವಿನಿಯೋಗವನ್ನು ತಿಳಿಸಿದೆ.

ಮಿಶ್ರರು ಮೊದಲ 3 ಮಂತ್ರಗಳಿಂದ ಗಾರ್ಹಪತ್ಯ, ಅನಂತರದ 3 ಮಂತ್ರಗಳಿಂದ ಆಹವನೀಯದ ಆಧಾನವೆಂದು ತಿಳಿಸಿರುತ್ತಾರೆ.

**ಪ್ರತ್ಯಸ್ಯ ವಹ ದ್ಯುಭಿಃ । ಅಸ್ಯ ಪ್ರಾಣಾದಪಾನತ್ಯಂತಶ್ಚರತಿ ರೋಚನಾ । ವ್ಯಖ್ಯನ್ಮಹಿಷಸ್ಸುವಃ ।**

---

ಪ್ರತೀತಿ । ಅಸ್ಯ । ವಹ । ದ್ಯುಭಿರಿತಿ ದ್ಯು-ಭಿಃ । ಅಸ್ಯ । ಪ್ರಾಣಾದಿತಿ ಪ್ರ-ಅನಾತ್। ಅಪಾನತೀತ್ಯಪ-ಅನತೀ। ಅಂತಃ। ಚರತಿ। ರೋಚನಾ॥ ವೀತಿ। ಅಖ್ಯತ್। ಮಹಿಷಃ। ಸುವಃ॥

---

| ಮಂತ್ರ | ವಿನಿಯೋಗ |
|---|---|
| ಅಸ್ಯ.........ಸುವಃ । | ಗಾರ್ಹಪತ್ಯಾಧಾನದ ನಾಲ್ಕನೆಯ ಮಂತ್ರ [ಸಾ.] ಆಹವನೀಯಾಧಾನದ ಮೊದಲನೆಯ ಮಂತ್ರ.ಭ. |

---

[ಎಲೈ ಗಾರ್ಹಪತ್ಯಾಗ್ನಿಯೇ!] **ಪ್ರತಿ ಅಸ್ಯ** = [ಅಗ್ನ್ಯುದ್ವಾಸನೆಯೆಂಬ ನಮ್ಮ] ಪ್ರತಿಕೂಲವಾದ ಆಚರಣೆಯನ್ನು ದೂರ ಮಾಡು/ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡ; **ದ್ಯುಭಿಃ** = ಜ್ವಾಲಾರೂಪವಾದ ಕಿರಣಗಳಿಂದ; **ವಹ** = [ನಮ್ಮ ಹವಿಸ್ಸನ್ನು] ದೇವತೆಗಳಿಗೆ ಒಯ್ದುಕೊಡು; [ದ್ಯುಭಿಃ = ದಿನೇ ದಿನೇ] **ಅಸ್ಯ**= ಈ ಸೂರ್ಯನ; **ಪ್ರತಿ ವಹ** = ಪ್ರತಿರೂಪನಾಗಿರು; [ದ್ಯುಭಿಃ=ತೇಜಸ್ಸುಗಳಿಂದ] **ಇ ಅಸ್ಯ**=ಈ ಸೂರ್ಯನ; **ರೋಚನಾ**= ದೀಪ್ತಿಯು; **ಪ್ರಾಣಾತ್**=ಉಚ್ಛ್ವಾಸರೂಪವಾದ ಉದಯದಿಂದ; **ಅಪಾನತೀ**=ನಿಃಶ್ವಾಸ ಸದೃಶವಾದ ಅಸ್ತವನ್ನು ಹೊಂದುತ್ತಾ; **ಅಂತಃ** = ಭೂಮಿ-ಆಕಾಶಗಳ ಮಧ್ಯದಲ್ಲಿ; **ಚರತಿ** = ಸಂಚರಿಸುತ್ತದೆ; **ಮಹಿಷಃ** = [ಮಹತ್ತಾದ ಮಂಡಲ(ಬಿಂಬ)ದಲ್ಲಿರುವ] ಸೂರ್ಯನು; **ಸುವಃ**=ಸ್ವರ್ಗವನ್ನು; **ವಿ ಅಖ್ಯತ್** = ಯಜಮಾನರಿಗೆ ಪ್ರಕಾಶಗೊಳಿಸಿದನು.

---

ಮುಹೂರ್ತಗಳು ಸೂರ್ಯನ ತೇಜೋರೂಪವಾಗಿ ಪ್ರಕಾಶಿಸುತ್ತವೆ.* ವೈದಿಕ ಸ್ತುತಿರೂಪ ವಾಕ್ಕು ಸೂರ್ಯನನ್ನು ವೇದತ್ರಯಸ್ವರೂಪನೆಂದು ಸ್ತುತಿಸುತ್ತದೆ.* ಅಗ್ನ್ಯುದ್ವಾಸನ ರೂಪವಾದ ನಮ್ಮ ಅಪರಾಧವನ್ನು ಮನ್ನಿಸು. ಅದನ್ನು ಮನಸ್ಸಿನಲ್ಲಿಡಬೇಡ.

---

***ಹಗಲಿನಲ್ಲಿ 15 ಮುಹೂರ್ತಗಳು. ರಾತ್ರಿಯಲ್ಲಿ 15. 1 ಮುಹೂರ್ತಕ್ಕೆ 2 ಗಳಿಗೆ=48 ನಿಮಿಷಗಳು.**

***ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ। ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ। ಸಾಮವೇದೇನಾಸ್ತಮಯೇ ಮಹೀಯತೇ । ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ ॥**

**ತೈ.ಬ್ರಾ. 3.12.9.**

श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री:

**ಯತ್ತ್ವಾ [೧] ಕ್ರುದ್ಧಃ ಪರೋವಪ ಮನ್ಯುನಾ ಯದವರ್ತ್ಯಾ।**

---

ಯತ್। ತ್ವಾ। ಕ್ರುದ್ಧಃ। ಪರೋವಪೇತಿ ಪರಾ-ಉವಪ। ಮನ್ಯುನಾ। ಯತ್। ಅವರ್ತ್ಯಾ॥

---

| ಮಂತ್ರ | ವಿನಿಯೋಗ |
|---|---|
| ಯತ್ತ್ವಾ.....ದೀಪಯಾಮಸಿ। | ದಕ್ಷಿಣಾಗ್ನಿಯ ಆಧಾನವನ್ನು ಮಾಡಲು [ಸಾ] ಆಹವನೀಯಾಧಾನದ ಎರಡನೆಯ ಮಂತ್ರ. [ಭ.ಭಾ.] |

---

ಅಸ್ಯ = ಈ ಅಗ್ನಿಯ; ರೋಚನಾ = ದೀಪ್ತಿಯು; ಅಂತಃ = ಶರೀರಾಂತರ್ಭಾಗದಲ್ಲಿ; ಚರತಿ = ಇರುತ್ತದೆ; ಪ್ರಾಣಾತ್ ಅಪಾನತೀ = ಪ್ರಾಣವ್ಯಾಪಾರದಿಂದ ಅಪಾನನ ವ್ಯಾಪಾರವನ್ನು ಮಾಡುತ್ತಾ ಇರುತ್ತದೆ; ಮಹಿಷಃ = ಜೀವವು [ಶ್ವಾಸವಾಯುವು] ಸುವಃ = ಸ್ವರ್ಗದ; ರೋಚನಾ = ದೀಪ್ತಿಯಾಗಿ; ವಿ ಅಖ್ಯತ್ = ಜೀವರೂಪವಾಗಿ ಒಳಗೆ ಪ್ರಕಾಶಿಸುತ್ತದೆ. ಹೇ ಅಗ್ನೇ = ಎಲೈ! ದಕ್ಷಿಣಾಗ್ನಿಯೇ! [ನಾನು] ಕ್ರುದ್ಧಃ = [ಖುದ್ಧಿಯಿಲ್ಲದಿರುವಿಕೆಯಿಂದ] ಕೋಪಗೊಂಡವನಾಗಿ, ಮನ್ಯುನಾ = [ಆ] ಕೋಪದಿಂದ; ತ್ವಾ= ನಿನ್ನನ್ನು; ಪರೋವಪ [ಇತಿ] ಯತ್ = ಉದ್ವಾಸನೆ ಮಾಡಿದೆನೆಂಬುದು ಯಾವುದೋ; ಅವರ್ತ್ಯಾ = ಜೀವನಾಧಾರವೃತ್ತಿ ಇಲ್ಲದಿರುವಿಕೆ [ಬಡತನ]ಯಿಂದ ಉಂಟಾದ; ಮನ್ಯುನಾ = ಶೋಕದಿಂದ [ದೈನ್ಯದಿಂದ] ತ್ವಾ = ನಿನ್ನನ್ನು; ಯತ್ ಪರೋವಪ = ಉದ್ವಾಸನೆ ಮಾಡಿದೆನೆಂಬುದು ಯಾವುದೋ;

---

ನಿನ್ನ ಜ್ವಾಲೆಗಳೆಂಬ ಕಿರಣಗಳಿಂದ ನಮ್ಮ [ಈ ಯಜಮಾನನ] ಹವಿಸ್ಸುಗಳನ್ನೊಯ್ದು ದೇವತೆಗಳಿಗರ್ಪಿಸು.

ಆದಿತ್ಯರೂಪನಾದ ಅಗ್ನಿಯ ಪ್ರಕಾಶವು ಪ್ರಾಣರೂಪವಾದ [ಉಚ್ಛ್ವಾಸ] ಉದಯದಿಂದ ಅಪಾನರೂಪ[ನಿಃಶ್ವಾಸರೂಪ]ವಾದ ಅಸ್ತಮಾನದವರೆವಿಗೂ ಭೂಮ್ಯಾಕಾಶಗಳಲ್ಲಿ ಪ್ರಕಾಶಿಸುತ್ತದೆ. ಮಹಾಮಂಡಲಗತನಾದ ಸೂರ್ಯನು ಯಜಮಾನರಿಗೆ

श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री: श्री:

ಸುಕಲ್ಪಮಗ್ನೇ ತತ್ತವ ಪುನಸ್ತ್ವೋದ್ದೀಪಯಾಮಸಿ । ಯತ್ತೇ ಮನ್ಯುಪರೋಪ್ತಸ್ಯ ಪೃಥಿವೀಮನುದಧ್ವಸೇ । ಆದಿತ್ಯಾ ವಿಶ್ವೇ

---

ಸುಕಲ್ಪಮಿತಿ ಸು-ಕಲ್ಪಮ್। ಅಗ್ನೇ । ತತ್ । ತವ । ಪುನಃ । ತ್ವಾ । ಉದಿತಿ । ದೀಪಯಾಮಸಿ । ಯತ್ । ತೇ । ಮನ್ಯುಪರೋಪ್ತಸ್ಯೇತಿ ಮನ್ಯು-ಪರೋಪ್ತಸ್ಯ । ಪೃಥಿವೀಮ್। ಅನ್ವಿತಿ । ದಧ್ವಸೇ । ಆದಿತ್ಯಾಃ । ವಿಶ್ವೇ ।

---



| ಮಂತ್ರ | ವಿನಿಯೋಗ |
|---|---|
| ಯತ್ತೇ........ಸಮಾಭರನ್ । | ಆಹವನೀಯ, ಸಭ್ಯ, ಆವಸಥ್ಯಗಳ ಆಧಾನ ಮಾಡಲು. ಆಹ. ಆಹವನೀಯಾಧಾನದ ಮೂರನೆಯ ಮಂತ್ರ. [ಭ.ಭಾ.] |

---

ತತ್ = ಅದು; ತವ = ನಿನ್ನ [ಅನುಗ್ರಹದಿಂದ] ಸುಕಲ್ಪಮ್ = ಒಳ್ಳೆಯ ಕೆಲಸವೇ ಆಗಲಿ. [ಏಕೆಂದರೆ] ನಾವು; ತ್ವಾ = ನಿನ್ನನ್ನು; ಪುನಃ = ಮತ್ತೆ; ಉದ್ದೀಪಯಾಮಸಿ = ಹೆಚ್ಚಾಗಿ ಪ್ರಜ್ವಲಿಸುವಂತೆ ಆಧಾನ ಮಾಡುತ್ತಿದ್ದೇವೆ. ✢ [ಎಲೈ! ಅಗ್ನಿದೇವನೇ!] ಮನ್ಯುಪರೋಪ್ತಸ್ಯ = ಕೋಪದಿಂದ ಅಥವಾ ಶೋಕದಿಂದ ಉದ್ವಾಸನೆ ಮಾಡಲ್ಪಟ್ಟ; ತೇ = ನಿನ್ನ; ಯತ್ = ಯಾವ ತೇಜಸ್ಸು; ಪೃಥಿವೀಮ್ ಅನು= ಭೂಮಿಯನ್ನು ಹೊಂದಿ; ದಧ್ವಸೇ = ಧ್ವಸ್ತವಾಗಿ ಹೋಯಿತೋ; ತತ್ = ಆ ತೇಜಸ್ಸನ್ನು; ಆದಿತ್ಯಾಃ = ಆದಿತ್ಯರೂ; ವಿಶ್ವೇ ದೇವಾಃ = ವಿಶ್ವೇದೇವರೂ;

---

ಸ್ವರ್ಗವನ್ನು ಪ್ರಕಾಶಪಡಿಸುತ್ತಾನೆ/ಅಗ್ನಿಯು ಜಠರಾಗ್ನಿರೂಪದಿಂದ ಜೀವಗಳ ಒಳಗೆ ಇರುತ್ತಾನೆ. ಮಹತ್ತಾದ ಪ್ರಕಾಶವು ಜೀವಗಳ ಒಳಗಡೆಯಲ್ಲಿ ಬೆಳಗುತ್ತದೆ/ಅಗ್ನಿಯು ಪ್ರಾಣಾಪಾನಕ್ರಿಯೆಗಳಿಗೆ ಕಾರಣನಾಗಿರುತ್ತಾನೆ.

ಎಲೈ! ಅಗ್ನಿದೇವನೇ! ಋದ್ಧಿಯನ್ನು ಹೊಂದದ ನಾನು ಕೋಪೋದ್ರಿಕ್ತನಾಗಿ ಆ

ತದ್ದೇವಾ ವಸವಶ್ಚ ಸಮಾಭರನ್ ॥ ಮನೋ ಜ್ಯೋತಿರ್ಜು-ಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್‌ಂ ಸಮಿಮಂ ದಧಾತು ॥

---

ತತ್। ದೇವಾಃ। ವಸವಃ । ಚ । ಸಮಾಭರನ್ನಿತಿ ಸಮ್-ಆಭರನ್ ॥ ಮನಃ । ಜ್ಯೋತಿಃ। ಜುಷತಾಮ್। ಆಜ್ಯಮ್ । ವಿಚ್ಛಿನ್ನಮಿತಿ ವಿ-ಛಿನ್ನಮ್ । ಯಜ್ಞಮ್। ಸಮಿತಿ । ಇಮಮ್। ದಧಾತು ॥

---

| ಮಂತ್ರ | ವಿನಿಯೋಗ |
|---|---|
| ಮನೋ ಜ್ಯೋತಿಃ.....ಮಾದಯಂತಾಮ್ ॥ | ಅಗ್ನ್ಯುಪಸ್ಥಾನವನ್ನು ಮಾಡಲು |

---

ಚ = ಮತ್ತು; ವಸವಃ = ಅಷ್ಟವಸುಗಳೂ; ಸಮಾಭರನ್ = ತಂದುಕೊಡಲಿ. +[ಉದ್ವಾಸನಾಪರಾಧದ ಪರಿಹಾರಕ್ಕಾಗಿ] ಮನಃ = ಮಾನನೀಯವಾದ (ಗೌರವಾಸ್ಪದವಾದ) ಜ್ಯೋತಿಃ= ಅಗ್ನಿಯ ತೇಜಸ್ಸು/ಅಗ್ನಿಯೆಂಬ ತೇಜಸ್ಸು; ಆಜ್ಯಮ್ = ಆಜ್ಯಹವಿಸ್ಸನ್ನು; ಜುಷತಾಮ್ = ಸೇವಿಸಲಿ. [ಅನಂತರ ಪ್ರಸನ್ನನಾಗಿ] ವಿಚ್ಛಿನ್ನಮ್ = ಅಗ್ನ್ಯುದ್ವಾಸನೆಯಿಂದ ವಿಚ್ಛಿನ್ನವಾಗಿರುವ; ಇಮಮ್ ಯಜ್ಞಮ್ = ಈ ನಮ್ಮ ಯಜ್ಞವನ್ನು; ಸಮ್ ದಧಾತು = ವಿಚ್ಛಿನ್ನವಾಗದಂತೆ ಸೇರಿಸಲಿ.

---

ಕೋಪದಿಂದ ನಿನ್ನನ್ನು ಉದ್ವಾಸನೆ ಮಾಡಿದುದು ಯಾವುದುಂಟೋ, ಅಥವಾ ಜೀವನಾಧಾರವೃತ್ತಿಯಿಲ್ಲದೆ ಬಡತನದಿಂದುಂಟಾದ ಶೋಕದಿಂದ ನಿನ್ನನ್ನು ಉದ್ವಾಸನೆ ಮಾಡಿದುದು ಯಾವುದುಂಟೋ, ಅದೆಲ್ಲವೂ ನಿನ್ನ ಅನುಗ್ರಹದಿಂದ ಒಳ್ಳೆಯದೇ ಆಗಲಿ. ಏಕೆಂದರೆ, ನಾವು ಮತ್ತೆ ನಿನ್ನನ್ನು ಆಧಾನ ಮಾಡಿ ಹೆಚ್ಚಾಗಿ ಪ್ರಜ್ವಲಿಸುವಂತೆ ಮಾಡುತ್ತಿದ್ದೇವ.

**ಬೃಹಸ್ಪತಿಸ್ತನುತಾಮಿಮಂ ನೋ ವಿಶ್ವೇ ದೇವಾ ಇಹ**

**ಮಾದಯಂತಾಮ್ ॥**

---

**ಬೃಹಸ್ಪತಿಃ । ತನುತಾಮ್ । ಇಮಮ್ । ನಃ । ವಿಶ್ವೇ । ದೇವಾಃ । ಇಹ । ಮಾದಯಂತಾಮ್॥**

---



**ಬೃಹಸ್ಪತಿಃ** = ಬೃಹಸ್ಪತಿಯು; **ನಃ** = ನಮ್ಮ; **ಇಮಮ್** = ಈ ಯಜ್ಞವನ್ನು; **ತನುತಾಮ್** = ವಿಸ್ತರಿಸಲಿ; **ವಿಶ್ವೇ ದೇವಾಃ** = ದೇವತೆಗಳೆಲ್ಲರೂ; **ಇಹ** = ಈ ಕರ್ಮದಲ್ಲಿ; **ಮಾದಯಂತಾಮ್** = ಸಂತೋಷಪಡಲಿ/ತೃಪ್ತಿ ಹೊಂದಲಿ.

---

ಅಗ್ನಿದೇವನೇ! ನಾನು ಶೋಕ-ಕೋಪಗಳಿಂದ ನಿನ್ನನ್ನು ಉದ್ವಾಸನೆ ಮಾಡಿದೆನು. ಆದುದರಿಂದ ನಿನ್ನ ತೇಜಸ್ಸು ಭೂಮಿಯನ್ನು ಪ್ರವೇಶಿಸಿ ನಾಶ ಹೊಂದಿತು. ಆ ನಿನ್ನ ತೇಜಸ್ಸನ್ನು ಆದಿತ್ಯರೂ, ವಿಶ್ವೇದೇವರೂ, ಅಷ್ಟವಸುಗಳೂ ನಿನಗೆ ತಂದುಕೊಡಲಿ. ನಾವು ನಿನ್ನನ್ನು ಆಧಾನ ಮಾಡುತ್ತಿದ್ದೇವೆ. ನೀನು ಆ ಹಿಂದಿನ ತೇಜಸ್ಸನ್ನು ಪಡೆದು ಹೆಚ್ಚಾಗಿ ಪ್ರಜ್ವಲಿಸು.

ನಮ್ಮ ಅಗ್ನ್ಯುದ್ವಾಸನೆಯ ಅಪರಾಧದ ಪರಿಹಾರಕ್ಕಾಗಿ ಮಾನನೀಯವಾದ ಅಗ್ನಿಯ ತೇಜಸ್ಸು/ಅಗ್ನಿಯೆಂಬ ತೇಜಸ್ಸು ಆಜ್ಯಹವಿಸ್ಸನ್ನು ಸೇವಿಸಲಿ. ಅನಂತರ ವಿಚ್ಛಿನ್ನವಾಗಿ ಹೋಗಿರುವ ನಮ್ಮ ಈ ಯಜ್ಞವನ್ನು ಅವಿಚ್ಛಿನ್ನವಾಗುವಂತೆ ಕೂಡಿಸಲಿ. ಬೃಹಸ್ಪತಿಯು ನಮ್ಮ ಯಜ್ಞವನ್ನು ವಿಸ್ತರಿಸಲಿ. ದೇವತೆಗಳೆಲ್ಲರೂ ಸಂತೋಷಪಡಲಿ. ತೃಪ್ತಿಯನ್ನು ಹೊಂದಲಿ.

# ಸಪ್ತ ತೇ ಅಗ್ನೇ ಸಮಿಧಸ್ಸಪ್ತ ಜಿಹ್ವಾಸ್ಸಪ್ತರ್ಷಯಃ

# [ಸಪ್ತ (೨) ಋಷಯಃ] ಸಪ್ತ ಧಾಮ ಪ್ರಿಯಾಣಿ ।

ಸಪ್ತ । ತೇ । ಅಗ್ನೇ । ಸಮಿಧ ಇತಿ ಸಮ್-ಇಧಃ । ಸಪ್ತ । ಜಿಹ್ವಾಃ । ಸಪ್ತ । ಋಷಯಃ ।
ಸಪ್ತ । ಧಾಮ । ಪ್ರಿಯಾಣಿ ॥

| ಮಂತ್ರ | ವಿನಿಯೋಗ |
|---|---|
| ಸಪ್ತ ತೇ.........ಘೃತೇನ । | ಅಗ್ನ್ಯುಪಸ್ಥಾನದ ಎರಡನೆಯ ಮಂತ್ರ –ಭ.ಭಾ. ಅಗ್ನಿಹೋತ್ರಹೋಮವನ್ನು ಮಾಡಲು–ಸಾಯಣ |

✣ ಅಗ್ನೇ = ಹೇ ಅಗ್ನಿದೇವನೇ! ತೇ = ನಿನಗೆ; ಸಪ್ತ ಸಮಿಧಃ = [ಆಧಾನದಲ್ಲಿ ಸಂಗ್ರಹಿಸುವ] ಸಮಿತ್ತುಗಳು ಏಳು[1]. ಸಪ್ತ ಜಿಹ್ವಾಃ = ನಾಲಿಗೆಗಳು/ಜ್ವಾಲೆಗಳು ಏಳು[2]; ಸಪ್ತ ಋಷಯಃ =[ಆ ಸಮಿತ್ತುಗಳನ್ನು ತರುವಾಗ ಹೇಳಬೇಕಾದ] ಮಂತ್ರಗಳೂ ಏಳು[3]; ಪ್ರಿಯಾಣಿ ಧಾಮ ಸಪ್ತ = ಪ್ರಿಯವಾದ ಸ್ಥಾನಗಳು ಏಳು[4].

ಹೇ ಅಗ್ನಿದೇವನೇ! ನಿನಗೆ ಆಧಾನದಲ್ಲಿ ತರುವ ಸಮಿತ್ತುಗಳು ಏಳು/ಶರೀರಗಳು ಏಳು. ಹವಿಸ್ಸನ್ನು ಸ್ವೀಕರಿಸುವ ಜ್ವಾಲಾರೂಪವಾದ 'ಕಾಲೀ' ಮೊದಲಾದ ನಾಲಗೆಗಳೂ ಏಳು. ಮೇಲೆ ಹೇಳಿದ ಸಮಿತ್ತುಗಳನ್ನು ತರುವಾಗ ಹೇಳುವ ಮಂತ್ರಗಳೂ / ಪ್ರಕಾಶನ ಶಕ್ತಿಗಳೂ ಏಳು. ನಿನಗೆ ಪ್ರಿಯವಾದ, ಸೋಮಯಾಗದಲ್ಲಿರುವ ಆಹವನೀಯಾದಿ

1. ಅಶ್ವತ್ಥ, ಉದುಂಬರ, ಪಲಾಶ, ಶಮೀ, ವಿಕಂಕತ, ಅಶನಿಹತವೃಕ್ಷ ಮತ್ತು ಪುಷ್ಕರಪರ್ಣ ಈ ಏಳು ಸಮಿತ್ತುಗಳು. ಮಿಶ್ರರು 'ಸಮಿತ್' ಶಬ್ದಕ್ಕೆ ಶರೀರ ಎಂಬ ಅರ್ಥವನ್ನು ತಿಳಿಸಿ, ಸಪ್ತಲೋಕದಲ್ಲಿ ಸಪ್ತಶರೀರಗಳು ಎಂದು ತಿಳಿಸಿದ್ದಾರೆ.

2. ಕಾಲೀ[1] ಕರಾಲೀ[2] ಚ ಮನೋಜವಾ[3] ಚ ಸುಲೋಹಿತಾ[4] ಯಾ ಚ ಸುಧೂಮ್ರವರ್ಣಾ[5]। ಸ್ಫುಲಿಂಗಿನೀ[6] ವಿಶ್ವರುಚೀ[7] ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥ (ಮುಂಡಕ 1.2.4.)

3. 'ಅಶ್ವೋ ರೂಪಂ ಕೃತ್ವಾ.......' ಮೊದಲಾದವುಗಳು. [ತೈ.ಬ್ರಾ. 1.2.1.] ಮಿಶ್ರರು 'ಋಷಿ' ಎಂಬುದನ್ನು ಪ್ರಕಾಶಶಕ್ತಿ ಎಂದು ವಿವರಿಸಿ ಏಳು ಪ್ರಕಾಶಶಕ್ತಿಗಳು ಎಂದಿದ್ದಾರೆ.

4.ಸೋಮಯಾಗದಲ್ಲಿ ವಹ್ನಿಧಾರಕಗಳಾದ ಆಹವನೀಯ, ಗಾರ್ಹಪತ್ಯ,ದಕ್ಷಿಣಾಗ್ನಿ, ಸಭ್ಯ, ಆವಸಥ್ಯ, ಪ್ರಾಜಹಿತ ಮತ್ತು ಆಗ್ನೀಧ್ರೀಯ—ಈ ಸ್ಥಾನಗಳು.

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

## ಸಪ್ತ ಹೋತ್ರಾಸ್ಸಪ್ತಧಾ ತ್ವಾ ಯಜಂತಿ ಸಪ್ತ ಯೋನೀರಾಪೃಣಸ್ವಾಘೃತೇನ ॥

---

ಸಪ್ತ । ಹೋತ್ರಾಃ । ಸಪ್ತಧೇತಿ ಸಪ್ತ-ಧಾ । ತ್ವಾ । ಯಜಂತಿ । ಸಪ್ತ । ಯೋನೀಃ। ಏತಿ । ಪೃಣಸ್ವ। ಘೃತೇನ ॥

---

**ಸಪ್ತ ಹೋತ್ರಾಃ** = [ಸೋಮಯಾಗದಲ್ಲಿ ವಷಟ್ಕಾರ ಮಾಡುವ] ಋತ್ವಿಜರು ಏಳು ಮಂದಿ[1]. [ಯಜಮಾನರು] **ತ್ವಾ** = ನಿನ್ನನ್ನು, **ಸಪ್ತಧಾ** = ಏಳು ಪ್ರಕಾರವಾಗಿರುವ[2] ಅಗ್ನಿಷ್ಟೋಮಾದಿ ಯಾಗಗಳಿಂದ, **ಯಜಂತಿ** = ಯಾಗ ಮಾಡುತ್ತಾರೆ/ಪೂಜಿಸುತ್ತಾರೆ. [ನೀನು] **ಸಪ್ತ ಯೋನೀಃ** = ಆಹವನೀಯಾದಿ ಸಪ್ತ ಹೋಮಸ್ಥಾನಗಳನ್ನು; [ಭೂರಾದಿ ಲೋಕಗಳನ್ನು;] **ಘೃತೇನ** = ಆಜ್ಯದಿಂದ; [ಯಾಗಫಲವಾದ ನೀರಿನಿಂದ] **ಆ ಪೃಣಸ್ವ** = ತುಂಬಿಸು.



---

ಸ್ಥಾನಗಳೂ ಏಳು/ಭೂರಾದಿ ಲೋಕಗಳು ಏಳು. ಸೋಮಯಾಗದಲ್ಲಿ ವಷಟ್ಕಾರ ಮಾಡುವ ಹೋತೃವೇ ಮೊದಲಾದ ಋತ್ವಿಜರೂ ಏಳು ಮಂದಿ. ಯಜಮಾನರು ನಿನ್ನನ್ನು ಅಗ್ನಿಷ್ಟೋಮಾದಿ ಸಪ್ತ ಸೋಮಸಂಸ್ಥೆಗಳಿಂದ ಆರಾಧಿಸುತ್ತಾರೆ. ನೀನು ಆಹವನೀಯಾದಿ ಸಪ್ತಸ್ಥಾನಗಳನ್ನು [ಭೂರಾದಿ ಲೋಕಗಳನ್ನು] ಆಜ್ಯಾದಿ ಹವಿಸ್ಸುಗಳಿಂದ [ಯಾಗದ ಫಲವಾದ ವೃಷ್ಟಿಯ ನೀರಿನಿಂದ] ಪೂರಣಗೊಳಿಸು. [ಸಂತೋಷಪಡಿಸು.]

---

1. **ಹೋತೃ, ಪ್ರಶಾಸ್ತೃ, ಬ್ರಾಹ್ಮಣಾಚ್ಛಂಸೀ, ಪೋತೃ, ನೇಷ್ಟೃ, ಆಗ್ನೀಧ್ರ ಮತ್ತು ಅಚ್ಛಾವಾಕ ಇವರೇ ಏಳು ಋತ್ವಿಜರು.**

2. **ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ಅಪ್ತೋರ್ಯಾಮ ಮತ್ತು ವಾಜಪೇಯ - ಇವು ಏಳು ಸೋಮಸಂಸ್ಥೆಗಳು.**

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

**ಪುನರೂರ್ಜಾ ನಿವರ್ತಸ್ವ ಪುನರಗ್ನ ಇಷಾಯುಷಾ । ಪುನರ್ನಃ**
**ಪಾಹಿ ವಿಶ್ವತಃ । ಸಹ ರಯ್ಯಾ ನಿವರ್ತಸ್ವಾಗ್ನೇ**

---

ಪುನಃ । ಊರ್ಜಾ । ನೀತಿ । ವರ್ತಸ್ವ । ಪುನಃ। ಅಗ್ನೇ । ಇಷಾ । ಆಯುಷಾ ॥ ಪುನಃ।
ನಃ । ಪಾಹಿ । ವಿಶ್ವತಃ ॥ ಸಹ । ರಯ್ಯಾ । ನೀತಿ । ವರ್ತಸ್ವ । ಅಗ್ನೇ ।

---

| ಮಂತ್ರ | ವಿನಿಯೋಗ |
|---|---|
| ಪುನರೂರ್ಜಾ..........ವಿಶ್ವತಃ ॥ | ಪ್ರಧಾನಪುರೋಡಾಶಯಾಗಕ್ಕೆ ಅಥವಾ ಪ್ರಯಾಜಗಳಿಗೆ ಮೊದಲು ಮಾಡುವ ಹೋಮಕ್ಕಾಗಿ |
| ಸಹ ರಯ್ಯಾ........ವಿಶ್ವತಸ್ಪರಿ । | ಪುರೋಡಾಶಯಾಗದ ಅನಂತರ ಅಥವಾ ಅನೂಯಾಜಗಳ ಅನಂತರ ಮಾಡುವ ಹೋಮಕ್ಕಾಗಿ |

---

❖ **ಅಗ್ನೇ** = ಅಗ್ನಿದೇವನೇ! [ಮೊದಲು ನನ್ನಿಂದ ಉದ್ವಾಸಿತನಾಗಿದ್ದರೂ] **ಪುನಃ** = ಮತ್ತೆ; **ಊರ್ಜಾ**= ಕ್ಷೀರಾದಿರಸವಸ್ತುಗಳೊಡನೆ; **ನಿವರ್ತಸ್ವ** = ಹಿಂದಿರುಗು; **ಇಷಾ** = ಅನ್ನದಿಂದಲೂ; **ಆಯುಷಾ** = ಆಯುಸ್ಸಿನಿಂದಲೂ [ಕೂಡಿಕೊಂಡು] **ಪುನಃ** = ತಿರುಗಿ; ನಿವರ್ತಸ್ವ = ಹಿಂದಿರುಗು; **ನಃ** = ನಮ್ಮನ್ನು; **ಪುನಃ** = ಮತ್ತೆ; **ವಿಶ್ವತಃ** = ಎಲ್ಲಾ ಅಪರಾಧಗಳಿಂದಲೂ; **ಪಾಹಿ** = ರಕ್ಷಿಸು. [ಉದ್ವಾಸನಾದಿದೋಷಗಳಿಂದಲೂ ರಕ್ಷಿಸು]
❖ **ಅಗ್ನೇ** = ಅಗ್ನಿದೇವನೇ! **ರಯ್ಯಾ ಸಹ** = ಧನದೊಡನೆ; **ನಿವರ್ತಸ್ವ** = ಹಿಂದಿರುಗು;

---

ಮೊದಲು ನಾನು ನಿನ್ನನ್ನು ಉದ್ವಾಸನೆ ಮಾಡಿದ್ದರೂ ಅದನ್ನು ಮನಸ್ಸಿಗೆ ತಂದುಕೊಳ್ಳದೇ ಈ ಆಹುತಿಯಿಂದ ಪ್ರೀತನಾಗಿ ಕ್ಷೀರಾದಿರಸದ್ರವ್ಯಗಳೊಡನೆ ಹಿಂದಿರುಗು. ಅನ್ನದೊಡನೆಯೂ, ಆಯುಸ್ಸಿನೊಡನೆಯೂ ಹಿಂದಿರುಗು/ರಸಾದಿಗಳನ್ನು ನಮಗೆ ಕೊಡು. ನಾವು ಮಾಡಿದ ಅಗ್ನ್ಯುದ್ವಾಸನವೇ ಮೊದಲಾದ ಎಲ್ಲ ಅಪರಾಧಗಳಿಂದಲೂ ನಮ್ಮನ್ನು ರಕ್ಷಿಸು. ಆ ದೋಷಗಳನ್ನು ಪರಿಹರಿಸು.

ಪಿನ್ವಸ್ವ ಧಾರಯಾ । ವಿಶ್ವಪ್ಸ್ನಿಯಾ ವಿಶ್ವತಸ್ಪರಿ । ಲೇಕಸ್ಸಲೇಕ

ಸ್ಸುಲೇಕಸ್ತೇ ನ ಆದಿತ್ಯಾ ಆಜ್ಯಂ ಜುಷಾಣಾ ವಿಯಂತು

---

ಪಿನ್ವಸ್ವ । ಧಾರಯಾ ॥ ವಿಶ್ವಪ್ಸ್ನಿಯೇತಿ ವಿಶ್ವ-ಪ್ಸ್ನಿಯಾ । ವಿಶ್ವತಃ । ಪರಿ ॥ ಲೇಕಃ।

ಸಲೇಕ ಇತಿ ಸ-ಲೇಕಃ । ಸುಲೇಕ ಇತಿ ಸು-ಲೇಕಃ । ತೇ । ನಃ । ಆದಿತ್ಯಾಃ । ಆಜ್ಯಮ್।

ಜುಷಾಣಾಃ । ವಿಯಂತು ।

---

| ಮಂತ್ರ | ವಿನಿಯೋಗ |
|---|---|
| ಲೇಕಃ.........ವಿಯಂತು ।* | ಮೂರನೆಯ ಸಲ ಅಗ್ನ್ಯಾಧಾನ ಮಾಡುವವನು ಮಾಡುವ ಮೊದಲನೆಯ ಹೋಮದ ಮಂತ್ರ. |

---

[ಎಲೈ ಅಗ್ನಿಯೇ!] **ವಿಶ್ವಪ್ಸ್ನಿಯಾ** = ಎಲ್ಲರಿಂದಲೂ ಕುಡಿಯಲ್ಪಡುವ/ವಿಶ್ವಜೀವನ ಕಾರಣವಾದ; **ಧಾರಯಾ** = ವೃಷ್ಟಿಜಲಧಾರೆಯಿಂದ, **ವಿಶ್ವತಃ ಪರಿ** = ಎಲ್ಲ ತೃಣ-ಧಾನ್ಯ-ಲತಾ-ವೃಕ್ಷಾದಿಗಳ ಮೇಲೆ; **ಪಿನ್ವಸ್ವ** = ಸೇಚನ ಮಾಡು. ✣ **ಲೇಕಃ** = ಎಲ್ಲರಿಂದಲೂ ನೋಡಲ್ಪಡುವ ಲೇಕನೆಂಬ ಆದಿತ್ಯನೂ; **ಸಲೇಕಃ** = ಪ್ರಕಾಶಾತ್ಮಕದರ್ಶನವುಳ್ಳ ಸಲೇಕನೆಂಬ ಆದಿತ್ಯನೂ; **ಸುಲೇಕಃ** = ಒಳ್ಳೆಯ ದರ್ಶನವುಳ್ಳ ಸುಲೇಕನೆಂಬ ಆದಿತ್ಯನೂ; [ಈ] **ತೇ ಆದಿತ್ಯಾಃ** = ಆ [ಮೂವರು] ಆದಿತ್ಯರೂ; **ನಃ** = ನಮ್ಮ; **ಆಜ್ಯಮ್**= ಆಜ್ಯಹವಿಸ್ಸನ್ನು; **ಜುಷಾಣಾಃ** = ಸಂತೋಷಪಡುವವರಾಗಿ; **ವಿಯಂತು** = ಕುಡಿಯಲಿ.

---

ಅಗ್ನಿದೇವನೇ! ನೀನು ಹಿಂದಿರುಗಿ ಬಾ. ಬರುವಾಗ ಧನವನ್ನೂ ನಿನ್ನೊಡನೆ ತಾ. ಈ ಆಹುತಿಯಿಂದ ಸುಪ್ರೀತನಾಗಿ ವಿಶ್ವವೆಲ್ಲವೂ ಕುಡಿದು ಬದುಕಬೇಕಾಗಿರುವ ವೃಷ್ಟಿ

---

***ಮೂರನೆಯ ಆಧಾನವು ಮೊದಲನೆಯ ಅಗ್ನ್ಯಾಧಾನದಂತೆ ಎಂದು ಕೆಲವರ ಮತ. ಪುನರಾಧಾನದಂತೆ ಎಂದು ಮತ್ತೆ ಕೆಲವರ ಮತ. ಮೂರನೆಯ ಆಧಾನದಲ್ಲಿ 'ವಿಯಂತು' ಎಂಬ ಪದದಿಂದ ಕೊನೆಗೊಳ್ಳುವ ಮೂರು ಮಂತ್ರಗಳಿಂದ ಸ್ರುವಾಹುತಿ ಇರುತ್ತದೆ.**

ಕೇತಸ್ಸಕೇತಸ್ಸುಕೇತಸ್ತೇ ನ ಆದಿತ್ಯಾ ಆಜ್ಯಂ ಜುಷಾಣಾ

ವಿಯಂತು ವಿವಸ್ವಾಗ್ಂ ಅದಿತಿರ್ದೇವಜೂತಿಸ್ತೇ ನ

---

ಕೇತಃ । ಸಕೇತ ಇತಿ ಸ-ಕೇತಃ । ಸುಕೇತ ಇತಿ ಸು-ಕೇತಃ । ತೇ । ನಃ । ಆದಿತ್ಯಾಃ । ಆಜ್ಯಮ್। ಜುಷಾಣಾಃ । ವಿಯಂತು । ವಿವಸ್ವಾನ್ । ಅದಿತಿಃ । ದೇವಜೂತಿರಿತಿ ದೇವ-ಜೂತಿಃ । ತೇ । ನಃ ।

---

| ಮಂತ್ರ | ವಿನಿಯೋಗ |
| --- | --- |
| ಕೇತಃ............ವಿಯಂತು । | ಎರಡನೆಯ ಹೋಮದ ಮಂತ್ರ. |
| ವಿವಸ್ವಾಗ್ಂ ಅದಿತಿಃ....ವಿಯಂತು । | ಮೂರನೆಯ ಹೋಮದ ಮಂತ್ರ. |

---

✢ **ಕೇತಃ**=ಎಲ್ಲರಿಂದಲೂ ತಿಳಿಯಲ್ಪಡುವ ಕೇತನೆಂಬ ಆದಿತ್ಯನೂ; **ಸಕೇತಃ** = ಜ್ಞಾನಿಯಾದ ಸಕೇತನೆಂಬ ಆದಿತ್ಯನೂ; **ಸುಕೇತಃ** = ಸುಜ್ಞಾನಿಯಾದ ಸುಕೇತನೆಂಬ ಆದಿತ್ಯನೂ; **ತೇ ನಃ ಆದಿತ್ಯಾಃ ಆಜ್ಯಮ್ ಜುಷಾಣಾಃ ವಿಯಂತು** = [ಈ] ಆ ಮೂವರು ಆದಿತ್ಯರೂ ನಾವು ಸಮರ್ಪಿಸುವ ಆಜ್ಯಹವಿಸ್ಸನ್ನು ಸಂತುಷ್ಟರಾಗಿ ಕುಡಿಯಲಿ. ✢ **ವಿವಸ್ವಾನ್** = ದೀಪ್ತಿಮಂತನಾದ ವಿವಸ್ವಂತನೆಂಬ ಆದಿತ್ಯನೂ; **ಅದಿತಿಃ** = ಯಾರಿಂದಲೂ ಖಂಡಿಸಲಾಗದ ಅದಿತಿಯೆಂಬ ಆದಿತ್ಯನೂ; **ದೇವಜೂತಿಃ** = ದೇವತೆಗಳಿಗೆ ಗತಿಯಾದ/ ದೇವತೆಗಳಿಂದ ಹೊಂದಲ್ಪಡುವ ದೇವಜೂತಿಯೆಂಬ ಆದಿತ್ಯನೂ; **ತೇ ನಃ ಆದಿತ್ಯಾಃ**=

---

ಜಲಧಾರೆಗಳಿಂದ ಹುಲ್ಲು, ಪೈರು, ಬಳ್ಳಿ, ಮರ ಇವುಗಳೆಲ್ಲವನ್ನೂ ತೋಯಿಸಿ ಚೆನ್ನಾಗಿ ಬೆಳೆಯುವಂತೆ ಮಾಡು.

ಕೇತ, ಸಕೇತ ಮತ್ತು ಸುಕೇತರೆಂಬ ಆದಿತ್ಯರು ನಾವು ಸಮರ್ಪಿಸುವ ಆಜ್ಯಹವಿಸ್ಸನ್ನು ಸಂತೋಷದಿಂದ ಕುಡಿದು ತೃಪ್ತರಾಗಲಿ.

## ಆದಿತ್ಯಾ ಆಜ್ಯಂ ಜುಷಾಣಾ ವಿಯಂತು ॥ ೩-12 ॥

[ತ್ವಾ ಜಿಹ್ವಾಃ ಸಪ್ತ ಸುಕೇತಸ್ತೇನಸ್ತ್ರಯೋದಶ ಚ ।]

---

ಆದಿತ್ಯಾಃ । ಆಜ್ಯಮ್ । ಜುಷಾಣಾಃ । ವಿಯಂತು ॥ ೩ ॥

---

**ಆಜ್ಯಮ್ ಜುಷಾಣಾಃ ವಿಯಂತು = [ಈ] ಮೂವರು ಆದಿತ್ಯರೂ ನಾವು ಸಮರ್ಪಿಸುವ ಆಜ್ಯಹವಿಸ್ಸನ್ನು ಸಂತುಷ್ಟರಾಗಿ ಕುಡಿಯಲಿ.**

---

**ಕೇತ, ಸಕೇತ ಮತ್ತು ಸುಕೇತರೆಂಬ ಮೂವರು ಆದಿತ್ಯರೂ ನಾವು ಸಮರ್ಪಿಸುವ ಆಜ್ಯಹವಿಸ್ಸನ್ನು ಸಂತೋಷದಿಂದ ಕುಡಿಯಲಿ.**

**ವಿವಸ್ವಂತ, ಅದಿತಿ ಮತ್ತು ದೇವಜೂತಿಯೆಂಬ ಮೂವರು ಆದಿತ್ಯರೂ ನಾವು ಸಮರ್ಪಿಸುವ ಆಜ್ಯವನ್ನು ಸಂತೋಷಿಸುತ್ತಾ ಕುಡಿಯಲಿ.**



### ವಿನಿಯೋಗಸಂಗ್ರಹ

ಚತುರ್ಭಿರ್ಭೂಮಿರಿ[1-4]ತ್ಯಾದ್ಯೈರಾದಧ್ಯಾತ್ ಪಶ್ಚಿಮಾನಲಮ್ ।
ದಕ್ಷಿಣಾಗ್ನಿಂ ತು ಯತ್ತ್ವೇತಿ[5] [6]ಯದಿತ್ಯಾಹವನೀಯಕಮ್ ॥
[7]ಮನಸ್ತೂಪಸ್ಥಿತಿಃ ಸಪ್ತ[8] ಜುಹುಯಾದಗ್ನಿಹೋತ್ರಕಮ್ ।
[9-10]ಪುನರ್ದ್ವಾಭ್ಯಾಂ ಪುರೋಡಾಶಮಭಿತೋ ಜುಹುಯಾದಥ ॥
ತೃತೀಯಮಾದಧಾನಸ್ಯ[11-12] ಲೇಕಾದ್ಯಾ ಹೋಮಮಂತ್ರಕಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 13

---

## ॥ ಚತುರ್ಥೋಽನುವಾಕಃ ॥

ಭೂಮಿರ್ಭೂಮ್ನಾ ದ್ಯೌರ್ವರಿಣಾೇತ್ಯಾಹಾಽಽಶಿಷ್ಯೈವೈನ
ಮಾಧತ್ತೇ ಸರ್ಪಾ ವೈ ಜೀರ್ಯಂತೋಽಮನ್ಯಂತ

---

ಭೂಮಿಃ । ಭೂಮ್ನಾ । ದ್ಯೌಃ । ವರಿಣಾ । ಇತಿ । ಆಹ । ಆಶಿಷೇತ್ಯಾ-ಶಿಷಾ । ಏವ।
ಏನಮ್ । ಏತಿ । ಧತ್ತೇ । ಸರ್ಪಾಃ । ವೈ । ಜೀರ್ಯಂತಃ । ಅಮನ್ಯಂತ ।

---

ಮೂರನೆಯ ಅನುವಾಕದಲ್ಲಿ ಪುನರಾಧೇಯದ ಮಂತ್ರಗಳು ಹೇಳಲ್ಪಟ್ಟವು. ನಾಲ್ಕನೆಯ ಅನುವಾಕದಲ್ಲಿ ಅವುಗಳ ವ್ಯಾಖ್ಯಾನರೂಪವಾದ ಬ್ರಾಹ್ಮಣವು ಹೇಳಲ್ಪಡುತ್ತದೆ.

---

**ಮೊದಲ ಮಂತ್ರದ 'ಅನ್ನಾದ್ಯಾಯ' ಎಂಬುದಕ್ಕೆ ಶ್ರುತಿಯ ವಿವರಣೆ**

| | |
|---|---|
| ಭೂಮಿಃ ಭೂಮ್ನಾ ದ್ಯೌಃ ವರಿಣಾ ಇತಿ ಆಹ ಆಶಿಷಾ ಏವ ಏನಮ್ ಆಧತ್ತೇ | ' "ಭೂಮಿರ್ಭೂಮ್ನಾ" ಎಂಬ ಮಂತ್ರವು 'ಅನ್ನಾದ್ಯ' ರೂಪವಾದ ಋದ್ಧಿಯು ಬೇಕೆಂಬ ಇಚ್ಛೆಯಿಂದಲೇ ಈ ಅಗ್ನಿಯನ್ನು ಯಜಮಾನನು ಪುನಃ ಆಧಾನ ಮಾಡುತ್ತಾನೆ' ಎಂದು ಹೇಳುತ್ತದೆ. [ಅಧ್ವರ್ಯುವು ಯಜಮಾನನಿಗಾಗಿ ಪುನರಾಧಾನ ಮಾಡುತ್ತಾನೆ] |

**ಸರ್ಪರಾಜ್ಞೀಗಳೆಂಬ ಋಕ್ಕುಗಳು**

**ಅವುಗಳಿಂದ ಗಾರ್ಹಪತ್ಯಾಧಾನ ಏಕೆಂಬ ಉಪಾಖ್ಯಾನ**

| | |
|---|---|
| ಸರ್ಪಾಃ ವೈ ಜೀರ್ಯಂತಃ ಅಮನ್ಯಂತ | ಸರ್ಪಗಳು ಮುಪ್ಪನ್ನು ಹೊಂದುತ್ತಾ [ಈ ಮುದಿತನವನ್ನು ಕಳೆದುಕೊಳ್ಳುವುದು ಹೇಗೆಂದು] ವಿಚಾರ ಮಾಡಿದವು. |

ಸ ಏತಂ ಕಸರ್ಣೀರಃ ಕಾದ್ರವೇಯೋ ಮಂತ್ರಮಪಶ್ಯತ್ತತೋ

ವೈ ತೇ ಜೀರ್ಣಾಸ್ತನೂರಪಾಘ್ನತ

---

ಸಃ । ಏತಮ್ । ಕಸರ್ಣೀರಃ । ಕಾದ್ರವೇಯಃ । ಮಂತ್ರಮ್ । ಅಪಶ್ಯತ್ । ತತಃ ।

ವೈ । ತೇ । ಜೀರ್ಣಾಃ । ತನೂಃ । ಅಪೇತಿ । ಅಘ್ನತ ।



---

ಸಃ ಏತಮ್ ಕಸರ್ಣೀರಃ ಕಾದ್ರವೇಯಃ ಮಂತ್ರಮ್ ಅಪಶ್ಯತ್ — [ಆಗ] ಪ್ರಸಿದ್ಧನಾದ ಕದ್ರೂದೇವಿಯ ಪುತ್ರನಾದ ಕಸರ್ಣೀರನೆಂಬ ಸರ್ಪನು ["ಸರ್ಪರಾಜ್ಞೀ *ಮಂತ್ರ' ವೆಂಬ] ಈ ಮಂತ್ರವನ್ನು ತಿಳಿದುಕೊಂಡನು.

ತತಃ ವೈ ತೇ ಜೀರ್ಣಾಃ ತನೂಃ ಅಪಾಘ್ನತ — ಅನಂತರ ಅವು [ಆ ಮಂತ್ರದ ಪ್ರಭಾವದಿಂದ ತಮ್ಮ] ಜೀರ್ಣವಾದ ಚರ್ಮಗಳನ್ನು ಕಳೆದು ಕೊಂಡು [ಕೋಮಲವಾದ ಹೊಸ ಚರ್ಮಗಳನ್ನು ಪಡೆದು ಕೊಂಡವು.] ಪೊರೆ ಕಳಚಿದ ಸರ್ಪಗಳಾದವು.

---

* 'ಭೂಮಿರ್ಭೂಮ್ನಾ' ಮುಂತಾದ ನಾಲ್ಕು ಮಂತ್ರಗಳು. [ಸಾಯಣಾಚಾರ್ಯ]. ಮೂರು ಮಂತ್ರಗಳು(ಭ.ಭಾ.)

## ಸರ್ಪರಾಜ್ಞಿಯಾ ಋಗ್ಭಿರ್ಗಾರ್ಹಪತ್ಯಮಾದಧಾತಿ
## ಪುನರ್ನವಮೇವೈನಮಜರಂ ಕೃತ್ವಾಽಽಧತ್ತೇಽಥೋ
## ಪೂತಮೇವ

---

ಸರ್ಪರಾಜ್ಞಿಯಾ ಇತಿ ಸರ್ಪ-ರಾಜ್ಞಿಯಾಃ। ಋಗ್ಭಿರಿತ್ಯೃಕ್ - ಭಿಃ। ಗಾರ್ಹಪತ್ಯಮಿತಿ ಗಾರ್ಹ-ಪತ್ಯಮ್। ಆ। ಇತಿ। ದಧಾತಿ। ಪುನರ್ನವಮಿತಿ ಪುನಃ-ನವಮ್। ಏವ। ಏನಮ್। ಅಜರಮ್। ಕೃತ್ವಾ। ಆ। ಇತಿ। ಧತ್ತೇ। ಅಥೋ ಇತಿ। ಪೂತಮ್। ಏವ।

---

| | |
|---|---|
| ಸರ್ಪರಾಜ್ಞಿಯಾ ಋಗ್ಭಿಃ ಗಾರ್ಹಪತ್ಯಮ್ ಆದಧಾತಿ | [ಈ] *ಸರ್ಪರಾಜ್ಞಿಯ ಋಕ್ಕುಗಳಿಂದ ಗಾರ್ಹಪತ್ಯಾಗ್ನಿಯ ಪುನರಾಧಾನವನ್ನು ಮಾಡಬೇಕು. [ಇದರಿಂದ ಯಜಮಾನನು] |
| ಪುನರ್ನವಮ್ ಏವ ಏನಮ್ ಅಜರಮ್ ಕೃತ್ವಾ ಆಧತ್ತೇ | ಈ ಅಗ್ನಿಯನ್ನು ಮತ್ತೆ ನೂತನನನ್ನಾಗಿಯೂ, ಮುಪ್ಪು ಇಲ್ಲದವನನ್ನಾಗಿಯೂ ಮಾಡಿ ಆಧಾನವನ್ನು ಮಾಡಿದಂತೆ ಆಗುತ್ತದೆ. |
| ಅಥೋ ಪೂತಮ್ ಏವ | ಮತ್ತು ಅಗ್ನಿಯನ್ನು ಪವಿತ್ರನನ್ನಾಗಿಯೂ ಮಾಡಿ ಆಧಾನ ಮಾಡಿದಂತೆ ಆಗುತ್ತದೆ. |

---

*'ಇಯಂ ವೈ ಸರ್ಪತೋ ರಾಜ್ಞೀ' ಎಂಬ ಶ್ರುತಿವಚನದಿಂದ ಭೂಮಿಗೆ 'ಸರ್ಪರಾಜ್ಞೀ' ಎಂದು ಹೆಸರು.

ಪೃಥಿವೀಮನ್ನಾದ್ಯಂ ನೋಪಾನಮತ್ಸೈತಂ [ಸ್ಯೆತಮ್ (೧)
ಮಂತ್ರಮಪಶ್ಯತ್] ಮಂತ್ರಮಪಶ್ಯತ್ತತೋ ವೈ ತಾಮನ್ನಾದ್ಯ
ಮುಪಾನಮದ್ಯತ್ಸರ್ಪರಾಜ್ಞಿಯಾ

---

ಪೃಥಿವೀಮ್ । ಅನ್ನಾದ್ಯಮಿತ್ಯನ್ನ - ಅದ್ಯಮ್ । ನ । ಉಪೇತಿ । ಅನಮತ್ । ಸಾ ।
ಏತಮ್ । ಮಂತ್ರಮ್ । ಅಪಶ್ಯತ್ । ತತಃ । ವೈ । ತಾಮ್ । ಅನ್ನಾದ್ಯಮಿತ್ಯನ್ನ-ಅದ್ಯಮ್ ।
ಉಪೇತಿ । ಅನಮತ್ । ಯತ್ । ಸರ್ಪರಾಜ್ಞಿಯಾ ಇತಿ ಸರ್ಪ-ರಾಜ್ಞಿಯಾಃ ।

---

**ಪುನರಾಧಾನದಿಂದ ಅನ್ನಾದ್ಯರೂಪಸಮೃದ್ಧಿಯು ಲಭಿಸುವ ವಿಷಯದಲ್ಲಿ ಉಪಾಖ್ಯಾನ**

| | |
|---|---|
| ಪೃಥಿವೀಮ್ ಅನ್ನಾದ್ಯಮ್ ನ ಉಪಾನಮತ್ | ಭೂಮಿಯನ್ನು ಅನ್ನಾದ್ಯ [ಅನ್ನವನ್ನು ತಿನ್ನುವ/ ಉತ್ಪಾದಿಸುವ] ಶಕ್ತಿಯು ಹೊಂದಲಿಲ್ಲ. |
| ಸಾ ಏತಮ್ ಮಂತ್ರಮ್ ಅಪಶ್ಯತ್ ತತಃ ವೈ ತಾಮ್ ಅನ್ನಾದ್ಯಮ್ ಉಪಾನಮತ್ | ಆ ಭೂದೇವಿಯು ಈ ಸರ್ಪರಾಜ್ಞೀಮಂತ್ರವನ್ನು ತಿಳಿದುಕೊಂಡಳು. ಅನಂತರ ಈ ಮಂತ್ರದ ಸಾಮರ್ಥ್ಯದಿಂದ ಪೃಥಿವಿಯನ್ನು ಅನ್ನಾದ್ಯ [ಅನ್ನವನ್ನು ತಿನ್ನುವ/ಮತ್ತೆ ಮತ್ತೆ ಬೆಳೆಯುವ] ಶಕ್ತಿಯು ಹೊಂದಿತು. |

**ಸರ್ಪರಾಜ್ಞಿಯ ಋಕ್‌ಗಳಿಂದ ಆಧಾನದ ಪ್ರಶಂಸೆ**

| | |
|---|---|
| ಯತ್ ಸರ್ಪರಾಜ್ಞಿಯಾಃ | ಸರ್ಪರಾಜ್ಞಿಯ ಋಕ್‌ಗಳಿಂದ |

ಋಗ್ಭಿರ್ಗಾರ್ಹಪತ್ಯಮಾದಧಾತ್ಯನ್ನಾದ್ಯಸ್ಯಾವರುದ್ಧ್ಯಾ

ಅಥೋ ಅಸ್ಯಾಮೇವೈನಂ ಪ್ರತಿಷ್ಠಿತಮಾಧತ್ತೇ ಯತ್ತ್ವಾ

ಕ್ರುದ್ಧಃ ಪರೋವಪೇತ್ಯಾಹಾಪಹ್ನುತ ಏವಾಸ್ಮೈ ತತ್

---

ಋಗ್ಭಿರಿತ್ಯೃಕ್-ಭಿಃ। ಗಾರ್ಹಪತ್ಯಮಿತಿ ಗಾರ್ಹ-ಪತ್ಯಮ್ । ಆದಧಾತೀತ್ಯಾ-ದಧಾತಿ । ಅನ್ನಾದ್ಯಸ್ಯೇತ್ಯನ್ನ-ಆದ್ಯಸ್ಯ । ಅವರುಧ್ಯಾ ಇತ್ಯವ-ರುಧ್ಯೈ । ಅಥೋ ಇತಿ । ಅಸ್ಯಾಮ್। ಏವ । ಏನಮ್ । ಪ್ರತಿಷ್ಠಿತಮಿತಿ ಪ್ರತಿ-ಸ್ಥಿತಮ್ । ಐತಿ । ಧತ್ತೇ । ಯತ್ । ತ್ವಾ । ಕ್ರುದ್ಧಃ । ಪರೋವಪೇತಿ ಪರಾ - ಉವಪ । ಇತಿ । ಆಹ । ಅಪೇತಿ। ಹ್ನುತೇ । ಏವ। ಅಸ್ಮೈ । ತತ್ ।

---

| | |
|---|---|
| ಋಗ್ಭಿಃ ಗಾರ್ಹಪತ್ಯಮ್ ಆದಧಾತಿ ಅನ್ನಾದ್ಯಸ್ಯಾವರುಧ್ಯೈ | ಗಾರ್ಹಪತ್ಯಾಗ್ನಿಯ ಪುನರಾಧಾನ ಮಾಡುವುದು ಅನ್ನವನ್ನು ತಿನ್ನುವ ಶಕ್ತಿಯ ಪ್ರಾಪ್ತಿಗೆ ಕಾರಣವಾಗುತ್ತದೆ. ಮತ್ತು ಈ ಭೂಮಿಯಲ್ಲಿ ಈ ಅಗ್ನಿಯನ್ನು ಪ್ರತಿಷ್ಠಿತನನ್ನಾಗಿ/ಸ್ಥಿರನನ್ನಾಗಿ ಆಧಾನ ಮಾಡಿದಂತೆ ಆಗುತ್ತದೆ. |

'ಯತ್ತ್ವಾ....' ಮಂತ್ರದ ವಿವರಣೆ

| | |
|---|---|
| ಯತ್ ತ್ವಾ ಕ್ರುದ್ಧಃ ಪರೋವಪ ಇತಿ ಆಹ ಅಪಹ್ನುತೇ ಏವ ಅಸ್ಮೈ ತತ್ | 'ಯತ್ತ್ವಾ ಕ್ರುದ್ಧಃ.....' ಎಂಬ ಮಂತ್ರವನ್ನು [ಪುನರಾಧಾನ ಮಾಡುವಾಗ] ಹೇಳುವುದು ಉದ್ವಾಸನಾಪರಾಧವನ್ನು ಮರೆಮಾಚಿದಂತೆ ಆಗುತ್ತದೆ ಎಂದು [ಶ್ರುತಿಯು] ಹೇಳುತ್ತದೆ. |

ಪುನಸ್ತ್ವೋದ್ದೀಪಯಾಮಸೀತ್ಯಾಹ ಸಮಿಂಧ ಏವೈನಂ

ಯತ್ತೇ ಮನ್ಯುಪರೋಪ್ತಸ್ಯೇತ್ಯಾಹ ದೇವತಾಭಿರೇವೈನಗ್ಂ

ಸಂಭರತಿ ವಿ ವಾ ಏತಸ್ಯ ಯಜ್ಞಶ್ಛಿದ್ಯತೇ ಯೋಽಗ್ನಿ

ಮುದ್ವಾಸಯತೇ

---

ಪುನಃ । ತ್ವಾ । ಉದಿತಿ । ದೀಪಯಾಮಸಿ । ಇತಿ । ಆಹ । ಸಮಿತಿ । ಇಂಧೇ । ಏವ। ಏನಮ್ । ಯತ್ । ತೇ । ಮನ್ಯುಪರೋಪ್ತಸ್ಯೇತಿ ಮನ್ಯು-ಪರೋಪ್ತಸ್ಯ । ಇತಿ । ಆಹ। ದೇವತಾಭಿಃ । ಏವ । ಏನಮ್ । ಸಮಿತಿ । ಭರತಿ । ವೀತಿ । ವೈ । ಏತಸ್ಯ । ಯಜ್ಞಃ ಛಿದ್ಯತೇ । ಯಃ । ಅಗ್ನಿಮ್ । ಉದ್ವಾಸಯತ ಇತ್ಯುತ್-ವಾಸಯತೇ ।

---

**ಪುನಸ್ತ್ವೋದ್ದೀಪಯಾಮಸಿ..... ಎಂಬುದರ ಅಭಿಪ್ರಾಯ**

| | |
|---|---|
| ಪುನಃ ತ್ವಾ ಉತ್ ದೀಪಯಾಮಸಿ ಇತಿ ಆಹ ಸಮ್ ಇಂಧೇ ಏವ ಏನಮ್ | 'ಪುನಃ....' ಎಂದು ಹೇಳುವುದು ಈ ಅಗ್ನಿಯನ್ನು ಪುನರಾಧಾನ ಮಾಡಿ ಮತ್ತಷ್ಟು ಹೆಚ್ಚಾಗಿ ಜ್ವಲಿಸುವಂತೆ ಮಾಡುತ್ತದೆಯೆಂದು ಶ್ರುತಿಯು ಹೇಳುತ್ತದೆ. |

**'ಯತ್ತೇ....' ಮಂತ್ರದಲ್ಲಿ 'ಆದಿತ್ಯಾ....' ಮುಂತಾದುದರ ಅಭಿಪ್ರಾಯ**

| | |
|---|---|
| ಯತ್ ತೇ ಮನ್ಯುಪರೋಪ್ತಸ್ಯ ಇತಿ ಆಹ ದೇವತಾಭಿಃ ಏವ ಏನಮ್ ಸಂಭರತಿ | 'ಯತ್ತೇ....' ಎಂಬ ಮಂತ್ರವು ಸೂರ್ಯನೇ ಮುಂತಾದ ದೇವತೆಗಳಿಂದ ಈ ಅಗ್ನಿಯನ್ನು ಮತ್ತೆ ತಂದಂತೆ ಮಾಡುತ್ತದೆಯೆಂದು ಶ್ರುತಿಯು ಹೇಳುತ್ತದೆ. |

**ಅಗ್ನ್ಯುಪಸ್ಥಾನವಿಧಿ**

| | |
|---|---|
| ವಿ ವೈ ಏತಸ್ಯ ಯಜ್ಞಃ ಛಿದ್ಯತೇ ಯಃ ಅಗ್ನಿಮ್ ಉದ್ವಾಸಯತೇ | ಅಗ್ನಿಯನ್ನು ಯಾರು ಉದ್ವಾಸನೆ ಮಾಡುತ್ತಾನೆಯೋ, ಅವನ ಯಜ್ಞವು ವಿಚ್ಛಿನ್ನವಾಗುತ್ತದೆ. [ಅ |

ಬೃಹಸ್ಪತಿವತ್ಯರ್ಚೋಽಪತಿಷ್ಠತೇ ಬ್ರಹ್ಮ ವೈ ದೇವಾನಾಂ ಬೃಹ

ಸ್ಪತಿರ್ಬ್ರಹ್ಮಣೈವ ಯಜ್ಞಗ್ಂ ಸಂದಧಾತಿ ವಿಚ್ಛಿನ್ನಂ

ಯಜ್ಞಗ್ಂ ಸಮಿಮಂ ದಧಾತ್ವಿತ್ಯಾಹ ಸಂತತ್ಯೈ

---

ಬೃಹಸ್ಪತಿವತ್ಯೇತಿ ಬೃಹಸ್ಪತಿ-ವತ್ಯಾ । ಋಚಾ । ಉಪೇತಿ । ತಿಷ್ಠತೇ । ಬ್ರಹ್ಮ । ವೈ ।
ದೇವಾನಾಮ್ । ಬೃಹಸ್ಪತಿಃ । ಬ್ರಹ್ಮಣಾ । ಏವ । ಯಜ್ಞಮ್ । ಸಮಿತಿ । ದಧಾತಿ ।
ವಿಚ್ಛಿನ್ನಮಿತಿ ವಿ - ಛಿನ್ನಮ್ । ಯಜ್ಞಮ್ । ಸಮಿತಿ । ಇಮಮ್ । ದಧಾತು । ಇತಿ ।
ಆಹ । ಸಂತತ್ಯಾ ಇತಿ ಸಮ್-ತತ್ಯೈ ।

---



| | |
|---|---|
| | ದೋಷಪರಿಹಾರಕ್ಕಾಗಿ ಅಗ್ನ್ಯುಪಸ್ಥಾನವನ್ನು ಮಾಡಬೇಕು] |
| ಬೃಹಸ್ಪತಿವತ್ಯಾ ಋಚಾ ಉಪತಿಷ್ಠತೇ | ['ಮನೋ ಜ್ಯೋತಿಃ.......' ಎಂಬ ಮಂತ್ರದಲ್ಲಿರುವ 'ಬೃಹಸ್ಪತಿಸ್ತನುತಾಮ್' ಎಂಬುದಾಗಿ] 'ಬೃಹಸ್ಪತಿ' ಪದವನ್ನು ಹೊಂದಿರುವ ಋಙ್ಮಂತ್ರದಿಂದ ಅಗ್ನ್ಯುಪಸ್ಥಾನವನ್ನು ಮಾಡಬೇಕು. |
| ಬ್ರಹ್ಮ ವೈ ದೇವಾನಾಮ್ ಬೃಹಸ್ಪತಿಃ ಬ್ರಹ್ಮಣಾ ಏವ ಯಜ್ಞಮ್ ಸಮ್ ದಧಾತಿ | [ಈ ಉಪಸ್ಥಾನದಿಂದ] ಬ್ರಹ್ಮ [ಮಂತ್ರ]ದಿಂದಲೇ ಯಜ್ಞವನ್ನು ಅವಿಚ್ಛಿನ್ನವಾಗಿ ಮಾಡಿದಂತೆ ಆಗುತ್ತದೆ. |

ವಿಚ್ಛಿನ್ನಂ... ದಧಾತು' ಎಂಬುದರ ಆಶಯ

| | |
|---|---|
| ವಿಚ್ಛಿನ್ನಮ್ ಯಜ್ಞಮ್ | ಈ ಮಂತ್ರದಲ್ಲಿರುವ 'ವಿಚ್ಛಿನ್ನಂ |

ವಿಶ್ವೇ ದೇವಾ ಇಹ ಮಾದಯಂತಾಮಿತ್ಯಾಹ ಸಂತತ್ಯೈವ ಯಜ್ಞಂ ದೇವೇಭ್ಯೋಽನುದಿಶತಿ ಸಪ್ತ ತೇ ಅಗ್ನೇ ಸಮಿಧ ಸ್ಸಪ್ತಜಿಹ್ವಾ [ಜಿಹ್ವಾಃ (೩) ಇತ್ಯಾಹ] ಇತ್ಯಾಹ

---

ವಿಶ್ವೇ । ದೇವಾಃ । ಇಹ । ಮಾದಯಂತಾಮ್ । ಇತಿ । ಆಹ । ಸಂತತ್ಯೇತಿ ಸಮ್-ತತ್ಯ। ಏವ । ಯಜ್ಞಮ್ । ದೇವೇಭ್ಯಃ । ಅನ್ವಿತಿ । ದಿಶತಿ । ಸಪ್ತ । ತೇ । ಅಗ್ನೇ । ಸಮಿಧ ಇತಿ ಸಮ್-ಇಧಃ । ಸಪ್ತ । ಜಿಹ್ವಾಃ । ಇತಿ । ಆಹ ।

---



| | |
|---|---|
| ಸಮ್ ಇಮಮ್ ದಧಾತು ಇತಿ ಆಹ ಸಂತತ್ಯೈ | 'ಯಜ್ಞಂ...ದಧಾತು' [ಎಂಬ ಮಂತ್ರಭಾಗದ ತಾತ್ಪರ್ಯವೆಂದರೆ] ಅಗ್ನ್ಯುದ್ವಾಸನೆಯಿಂದ ವಿಚ್ಛಿನ್ನವಾದ ಯಜ್ಞವನ್ನು ಈ ಮಂತ್ರದ ಮೂಲಕವಾಗಿ ಅವಿಚ್ಛಿನ್ನವಾಗಿ ಮಾಡಿ ಸಂತತಿಯನ್ನು ಉಂಟುಮಾಡಲಾಗುತ್ತದೆ' ಎಂದು ಶ್ರುತಿಯು ಹೇಳುತ್ತದೆ. |
| ವಿಶ್ವೇ ದೇವಾಃ ಇಹ ಮಾದಯಂತಾಮ್ ಇತಿ ಆಹ ಸಂತತ್ಯ ಏವ ಯಜ್ಞಮ್ ದೇವೇಭ್ಯಃ ಅನುದಿಶತಿ | 'ವಿಶ್ವೇ ದೇವಾ... ಮಾದಯಂತಾಮ್' ಈ ಮಂತ್ರ ಭಾಗವು ಯಜ್ಞವನ್ನು ಸಂತತ[ಅವಿಚ್ಛಿನ್ನ]ವಾಗಿ ಮಾಡಿ ದೇವತೆಗಳಿಗೆ ಈ ವಿಷಯವನ್ನು ಸಂಬೋಧಿಸಿ ತಿಳಿಸುತ್ತದೆಯೆಂದು ಶ್ರುತಿಯು ಹೇಳುತ್ತದೆ. |

**ಅಗ್ನಿಹೋತ್ರಹೋಮಮಂತ್ರದ ಅಭಿಪ್ರಾಯ**

| | |
|---|---|
| ಸಪ್ತ ತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಇತಿ ಆಹ | ಸಮಿದಾದಿ ವಸ್ತುಗಳು ಏಳೇಳು ಸಂಖ್ಯೆಗಳಿಂದ ಕೂಡಿದವುಗಳು. [ಸಮಿತ್ತು, ಜಿಹ್ವೆ, ಋಷಿ, ಧಾಮ, ಹೋತ್ರಾ, ಹೋಮಸ್ಥಾನ ಇವು ಸಮಿದಾದಿಗಳು.] |

ಸಪ್ತಸಪ್ತ ವೈ ಸಪ್ತಧಾಽಗ್ನೇಃ ಪ್ರಿಯಾಸ್ತನುವಸ್ತಾ ಏವಾವ ರುಂಧೇ ಪುನರೂರ್ಜಾ ಸಹ ರಯ್ಯೇತ್ಯಭಿತಃ ಪುರೋಡಾಶ ಮಾಹುತೀ ಜುಹೋತಿ

---

ಸಪ್ತಸಪ್ತೇತಿ ಸಪ್ತ-ಸಪ್ತ । ವೈ । ಸಪ್ತಧೇತಿ ಸಪ್ತ-ಧಾ । ಅಗ್ನೇಃ । ಪ್ರಿಯಾಃ । ತನುವಃ। ತಾಃ। ಏವ । ಅವೇತಿ । ರುಂಧೇ । ಪುನಃ । ಊರ್ಜಾ । ಸಹ । ರಯ್ಯಾ । ಇತಿ । ಅಭಿತಃ। ಪುರೋಡಾಶಮ್ । ಆಹುತೀ ಇತ್ಯಾ-ಹುತೀ । ಜುಹೋತಿ ।

---

| | |
|---|---|
| ಸಪ್ತ ಸಪ್ತ ವೈ ಸಪ್ತಧಾ ಅಗ್ನೇಃ ಪ್ರಿಯಾಃ ತನುವಃ ತಾಃ ಏವ ಅವರುಂಧೇ | ಏಳು ಸಂಖ್ಯೆಯು ಅಗ್ನಿಗೆ ಪ್ರಿಯವಾಗಿದೆ. ಅಗ್ನಿಯ ಪ್ರಿಯವಾದ ಶರೀರಗಳೂ ಏಳು. [ಈ ಮಂತ್ರದಿಂದ ಯಜಮಾನನು] ಅಗ್ನಿಯ ಪ್ರಿಯವಾದ ಮೂರ್ತಿಗಳನ್ನು ಹೊಂದಿ ಸಂತೋಷಪಡಿಸುತ್ತಾನೆ ಎಂದು ಈ ಶ್ರುತಿಯು ಹೇಳುತ್ತದೆ. |

**ಪುರೋಡಾಶಯಾಗದ ಉಭಯಭಾಗದ * ಹೋಮದ ಮಂತ್ರಗಳು**

| | |
|---|---|
| ಪುನಃ ಊರ್ಜಾ ಸಹ ರಯ್ಯಾ ಇತಿ ಅಭಿತಃ ಪುರೋಡಾಶಮ್ ಆಹುತೀ ಜುಹೋತಿ | [ಪ್ರಧಾನ ಪುರೋಡಾಶಯಾಗದ] ಮೊದಲು ಮತ್ತು ಅನಂತರ 'ಪುನರೂರ್ಜಾ' 'ಸಹ ರಯ್ಯಾ' ಎಂಬ ಎರಡು ಮಂತ್ರಗಳಿಂದ ಆಹುತಿಯನ್ನು ಕೊಡಬೇಕು. |

---

*'**ಅಭಿತಃ ಪುರೋಡಾಶಮಾಹುತೀ ಜುಹೋತಿ**' ಎಂದು ತೈ.ಸಂ. ೧.೫.೨.ರಲ್ಲಿ ವಿಧಿ ಇದೆ.

ಯಜಮಾನಮೇವೋರ್ಜಾ ಚ ರಯ್ಯಾ ಚೋಭಯತಃ ಪರಿ
ಗೃಹ್ಣಾತ್ಯಾದಿತ್ಯಾ ವಾ ಅಸ್ಮಾಲ್ಲೋಕಾದಮುಂ ಲೋಕಮಾಯ
ನ್ತೇಽಮುಷ್ಮಿನ್ಲೋಕೇ ವ್ಯತೃಷ್ಯನ್ತ ಇಮಂ ಲೋಕಂ

---

ಯಜಮಾನಮ್ । ಏವ । ಊರ್ಜಾ । ಚ । ರಯ್ಯಾ । ಚ । ಉಭಯತಃ । ಪರೀತಿ ।
ಗೃಹ್ಣಾತಿ । ಆದಿತ್ಯಾಃ । ವೈ । ಅಸ್ಮಾತ್ । ಲೋಕಾತ್ । ಅಮುಮ್ । ಲೋಕಮ್ ।
ಆಯನ್ನ್ । ತೇ । ಅಮುಷ್ಮಿನ್ನ್ । ಲೋಕೇ । ವೀತಿ । ಅತೃಷ್ಯನ್ನ್ । ತೇ । ಇಮಮ್ ।
ಲೋಕಮ್ ।

---

| | |
|---|---|
| ಯಜಮಾನಮ್ ಏವ ಊರ್ಜಾ ಚ ರಯ್ಯಾ ಚ ಉಭಯತಃ ಪರಿ ಗೃಹ್ಣಾತಿ | [ಯಜಮಾನನು ಪುರೋಡಾಶಸ್ವರೂಪನು. ಪುರೋಡಾಶಯಾಗದ ಉಭಯಭಾಗಗಳಲ್ಲಿ ಈ ಹೋಮಗಳನ್ನು ಮಾಡುವುದರಿಂದ] ಮಂತ್ರಗಳಲ್ಲಿ ಹೇಳಿರುವ ರಸಾದಿದ್ರವ್ಯಗಳಿಂದಲೂ, ಧನದಿಂದಲೂ ಯಜಮಾನನನ್ನು ಉಭಯಪಾರ್ಶ್ವಗಳಿಂದಲೂ ಪರಿಗ್ರಹಿಸಿದಂತೆ ಆಗುತ್ತದೆ. |

**ತೃತೀಯಾಧಾನದ ಮೂರು ಸ್ರುವಾಹುತಿಗಳ ಬಗೆಗಿನ ಉಪಾಖ್ಯಾನ**

| | |
|---|---|
| ಆದಿತ್ಯಾಃ ವೈ ಅಸ್ಮಾತ್ ಲೋಕಾತ್ ಅಮುಮ್ ಲೋಕಮ್ ಆಯನ್ನ್, ತೇ ಅಮುಷ್ಮಿನ್ ಲೋಕೇ ವಿ ಅತೃಷ್ಯನ್ನ್, | ಆದಿತ್ಯರು ಈ ಲೋಕದಿಂದ ಸ್ವರ್ಗಲೋಕವನ್ನು ಹೊಂದಿದರು. ಅವರು [ಅಲ್ಲಿ ಋದ್ಧಿಯಿಲ್ಲದುದರಿಂದ] ಹೆಚ್ಚಾಗಿ ಬಾಯಾರಿದವರಾದರು. |
| ತೇ ಇಮಮ್ ಲೋಕಮ್ | ಆ ಆದಿತ್ಯರು ಮತ್ತೆ ಈ ಭೂಲೋಕಕ್ಕೆ |

ಪುನರಭ್ಯವೇತ್ಯಾಗ್ನಿಮಾಧಾಯ್ಯೈತಾನ್, ಹೋಮಾನಜುಹವುಸ್ತೆ

ಆರ್ಧ್ನುವನ್ತೇ ಸುವರ್ಗಂ ಲೋಕಮಾಯನ್,

---

ಪುನಃ । ಅಭ್ಯವೇತ್ಯೇತ್ಯಭಿ - ಅವೇತ್ಯ । ಅಗ್ನಿಮ್ । ಆಧಾಯೇತ್ಯಾ-ಧಾಯ । ಏತಾನ್।

ಹೋಮಾನ್ । ಅಜುಹವುಃ । ತೇ । ಆರ್ಧ್ನುವನ್ನ್ । ತೇ । ಸುವರ್ಗಮಿತಿ ಸುವಃ-ಗಮ್।

ಲೋಕಮ್ । ಆಯನ್ನ್ ।



---

| | |
|---|---|
| ಪುನಃ ಅಭ್ಯವೇತ್ಯ ಅಗ್ನಿಮ್ ಆಧಾಯ | [ದೇವಲೋಕವು ಕರ್ಮಭೂಮಿಯಲ್ಲವಾದುದರಿಂದ]ಬಂದು ಮೂರನೆಯ ಬಾರಿ ಅಗ್ನ್ಯಾಧಾನವನ್ನು ಮಾಡಿ |
| ಏತಾನ್ ಹೋಮಾನ್ ಅಜುಹವುಃ | ['ಲೇಕಃ ಸಲೇಕಃ ಸುಲೇಕಃ...... ಏಯಂತು, ಕೇತಃ ಸಕೇತಃ ಸುಕೇತಃ.... ಏಯಂತು, ಏವಸ್ವಾಗ್ಂ ಅದಿತಿಃ....... ಏಯಂತು'] ಎಂಬ ಈ ಮೂರು ಮಂತ್ರಗಳಿಂದ ಮೂರು ಸ್ರುವಾಹುತಿಗಳನ್ನು ಮಾಡಿದರು. |
| ತೇ ಆರ್ಧ್ನುವನ್ನ್, ತೇ ಸುವರ್ಗಮ್ ಲೋಕಮ್ ಆಯನ್ನ್, | ಅವರು ಋದ್ಧಿಯನ್ನು ಹೊಂದಿದರು. ಮತ್ತೆ ಅವರು ಸ್ವರ್ಗಲೋಕವನ್ನು ಹೊಂದಿದರು. |

ಯಃ ಪರಾಚೀನಂ ಪುನರಾಧೇಯಾದಗ್ನಿಮಾದಧೀತ ಸ

ಏತಾನ್ ಹೋಮಾಞ್ಜುಹುಯಾದ್ಯಾಮೇವಾದಿತ್ಯಾ ಋದ್ಧಿ

ಮಾರ್ಧ್ನುವನ್ತಾಮೇವರ್ಧ್ನೋತಿ ॥ ೪-16 ॥

[ಸ್ಯೈತಂ ದೇವತಾಭಿರೇವ ಜಿಹ್ವಾ ಏತಾನ್ಪಂಚವಿಗ್ಂಶತಿಶ್ಚ ॥]

---

ಯಃ । ಪರಾಚೀನಮ್ । ಪುನರಾಧೇಯಾದಿತಿ ಪುನಃ-ಆಧೇಯಾತ್ । ಅಗ್ನಿಮ್ । ಆದ

ಧೀತೇತ್ಯಾ- ದಧೀತ । ಸಃ । ಏತಾನ್ । ಹೋಮಾನ್ । ಜುಹುಯಾತ್ । ಯಾಮ್ ।

ಏವ । ಆದಿತ್ಯಾಃ । ಋದ್ಧಿಮ್ । ಆರ್ಧ್ನುವನ್ । ತಾಮ್ । ಏವ । ಋಧ್ನೋತಿ ॥೪ ॥



ಇತಿ ಪುನರಾಧೇಯಮ್

---

| | |
|---|---|
| ಯಃ ಪರಾಚೀನಮ್ ಪುನರಾಧೇಯಾತ್ ಅಗ್ನಿಮ್ ಆದಧೀತ | ಯಾವನು ಆಧಾನ ಮಾಡಿ, ಅನಂತರ ಪುನರಾಧಾನ ಮಾಡಿ, ಮೂರನೆಯ ಬಾರಿ ಅಗ್ನ್ಯಾಧಾನವನ್ನು ಮಾಡುವನೋ, |
| ಸಃ ಏತಾನ್ ಹೋಮಾನ್ ಜುಹುಯಾತ್, ಯಾಮ್ ಏವ ಆದಿತ್ಯಾಃ ಋದ್ಧಿಮ್ ಆರ್ಧ್ನುವನ್, | ಅವನು ಈ ಮೂರು ಹೋಮಗಳನ್ನು ಮಾಡಬೇಕು. [ಆದರಿಂದ] ಆದಿತ್ಯದೇವತೆಗಳು ಯಾವ ಋದ್ಧಿಯನ್ನು ಹೊಂದಿದರೋ, |
| ತಾಮ್ ಏವ ಋಧ್ನೋತಿ॥ | ಆ ಋದ್ಧಿಯನ್ನೇ ಈ ಹೋಮಗಳನ್ನು ಮಾಡಿದ ಯಜಮಾನನೂ ಹೊಂದುತ್ತಾನೆ. |

ಪುನರಾಧೇಯಪ್ರಕರಣವು ಮುಗಿಯಿತು.

---

## ॥ ಪಂಚಮೋಽನುವಾಕಃ ॥

ಉಪಪ್ರಯಂತೋ ಅಧ್ವರಂ ಮಂತ್ರಂ ವೋಚೇಮಾಗ್ನಯೇ।

ಆರೇ ಅಸ್ಮೇ ಚ ಶೃಣ್ವತೇ ॥

---

ಉಪ ಪ್ರಯಂತ ಇತ್ಯುಪ - ಪ್ರಯಂತಃ। ಅಧ್ವರಮ್। ಮಂತ್ರಮ್। ವೋಚೇಮ। ಅಗ್ನಯೇ ॥ ಆರೇ। ಅಸ್ಮೇ ಇತಿ। ಚ। ಶೃಣ್ವತೇ ॥

---

ಈ ಪ್ರಶ್ನದ ನಾಲ್ಕು ಅನುವಾಕಗಳಿಂದ ಪುನರಾಧಾನವನ್ನು ಹೇಳಿಯಾಯಿತು. ಮುಂದಿನ ಐದೂವರೆ ಅನುವಾಕಗಳಿಂದ 'ಅಗ್ನ್ಯುಪಸ್ಥಾನ'ವನ್ನು ಹೇಳುತ್ತಾರೆ. ಇವು ಕಾಂಡಪಾಠದಂತೆ ಆಗ್ನೇಯಕಾಂಡಕ್ಕೆ ಸೇರಿವೆ. ಈ ಉಪಸ್ಥಾನಪ್ರಸಂಗದಲ್ಲಿ ಸಾಮಾನ್ಯವಾಗಿ 'ಉಪತಿಷ್ಠತೇ' ಎಂದು ಹೇಳಿದರೆ ಆಹವನೀಯೋಪಸ್ಥಾನ ಎಂದು ಅರ್ಥ. ಬೇರೆಯ ಅಗ್ನಿಯ ಉಪಸ್ಥಾನವು ವಚನದಿಂದ ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
| --- | --- |
| ಉಪಪ್ರಯಂತೋ... ಶೃಣ್ವತೇ। | ಆಹವನೀಯೋಪಸ್ಥಾನದ ಮೊದಲನೆಯ ಮಂತ್ರ |

---

ಅಧ್ವರಮ್=ಯಜ್ಞವನ್ನು; ಉಪ ಪ್ರಯಂತಃ = ಹೊಂದುತ್ತಿರುವ/ಮಾಡುತ್ತಿರುವ [ನಾವು]; ಆರೇ ಚ = ದೂರದಲ್ಲಿಯೂ ಕೂಡ; ಅಸ್ಮೇ = ನಮ್ಮ [ಪ್ರಾರ್ಥನೆಯನ್ನು]; ಶೃಣ್ವತೇ = ಕೇಳುತ್ತಿರುವ; ಅಗ್ನಯೇ = ಅಗ್ನಿಗೋಸ್ಕರ/ಅಗ್ನಿಯನ್ನು ಸಂತೋಷಪಡಿಸುವುದಕ್ಕಾಗಿ; ಮಂತ್ರಮ್ = [ಉಪಸ್ಥಾನ] ಮಂತ್ರವನ್ನು; ವೋಚೇಮ = ಹೇಳೋಣ.

---

ಯಜ್ಞವನ್ನು ಅವಿಚ್ಛಿನ್ನವಾಗಿ ಮಾಡುತ್ತಿರುವ ನಾವು ದೂರದಲ್ಲಿಯೂ ನಮ್ಮ ಮಾತುಗಳನ್ನು ಕೇಳುವ, ಕೇಳಿ ನಮ್ಮ ಕೋರಿಕೆಗಳನ್ನು ಈಡೇರಿಸುವ ಅಗ್ನಿಯನ್ನು ಸಂತೋಷಪಡಿಸಲು ಉಪಸ್ಥಾನಮಂತ್ರವನ್ನು ಹೇಳೋಣ.

ಅಸ್ಯ ಪ್ರತ್ನಾಮನುದ್ಯುತಗ್ಂ ಶುಕ್ರಂ ದುದುಹ್ರೇ ಅಹ್ರಯಃ।

ಪಯಸ್ಸಹಸ್ರಸಾಮೃಷಿಮ್ ॥ ಅಗ್ನಿರ್ಮೂರ್ಧಾ ದಿವಃ

---

ಅಸ್ಯ । ಪ್ರತ್ನಾಮ್ । ಅನ್ವಿತಿ । ದ್ಯುತಮ್ । ಶುಕ್ರಮ್ । ದುದುಹ್ರೇ । ಅಹ್ರಯಃ ॥

ಪಯಃ । ಸಹಸ್ರಸಾಮಿತಿ ಸಹಸ್ರ - ಸಾಮ್ । ಋಷಿಮ್ ॥ ಅಗ್ನಿಃ । ಮೂರ್ಧಾ ।

ದಿವಃ ।

---

| ಮಂತ್ರ | ವಿನಿಯೋಗ |
| --- | --- |
| ಅಸ್ಯ ಪ್ರತ್ನಾಮ್... ಋಷಿಮ್ ॥ | ಆಹವನೀಯೋಪಸ್ಥಾನದ ಎರಡನೆಯ ಮಂತ್ರ |
| ಅಗ್ನಿರ್ಮೂರ್ಧಾ... ಜಿನ್ವತಿ ॥ | ಆಹವನೀಯೋಪಸ್ಥಾನದ ಮೂರನೆಯ ಮಂತ್ರ |

---

**ಅಹ್ರಯಃ** = ಲಜ್ಜೆಮಾಡಿಕೊಳ್ಳದ/ಜ್ಞಾನಿಗಳಾದ [ಋತ್ವಿಜರು]; **ಅಸ್ಯ** = ಈ ಅಗ್ನಿಯ; **ಪ್ರತ್ನಾಮ್** = ಪುರಾತನವಾದ; **ಸಹಸ್ರಸಾಮ್** = ಸಹಸ್ರ/ಬಹುಸಂಖ್ಯೆಯ ಧನವನ್ನು ಕೊಡುವ; **ಋಷಿಮ್** = ಜ್ಞಾನಪ್ರದವಾದ; **ಅನುದ್ಯುತಮ್** = ಗೋರೂಪವಾದ ಕಾಂತಿಯನ್ನು; **ಶುಕ್ರಮ್** = ಸಾರಭೂತವಾದ/ನಿರ್ಮಲವಾದ; **ಪಯಃ** = ಕ್ಷೀರಸ್ಥಾನೀಯವಾದ ನೀರನ್ನು; **ದುದುಹ್ರೇ** = ಕರೆದುಕೊಂಡರು. ✣ **ಅಹ್ರಯಃ** = ಲಜ್ಜೆಯನ್ನು ಮಾಡದ / ಸಂಕೋಚವಿಲ್ಲದ ಋತ್ವಿಜರು; **ಅಸ್ಯ** = ಈ ಅಗ್ನಿಯ; **ಪ್ರತ್ನಾಮ್** = ಪುರಾತನವಾದ; **ಅನುದ್ಯುತಮ್** = [ಗೋಸ್ಥಾನೀಯವಾದ] ಅನುಕೂಲವಾದ ದೀಪ್ತಿಯನ್ನು; **ಸಹಸ್ರಸಾಮ್** = ಬಹುಧನಪ್ರದವಾದ; **ಋಷಿಮ್** = ಕರ್ಮಪ್ರವರ್ತಕವಾದ; **ಪಯಃ** = ಕ್ಷೀರಸ್ಥಾನೀಯವಾದ; **ಶುಕ್ರಮ್** = ಜ್ಯೋತಿಯನ್ನು; **ದುದುಹ್ರೇ** = ಕರೆದುಕೊಂಡರು/ಹೊಂದಿದರು.

---

ಋತ್ವಿಜರು ಸಂಕೋಚವಿಲ್ಲದೆ/ನಾಚಿಕೆಪಡದೆ ಈ ಅಗ್ನಿಯ ಪ್ರಾಚೀನವಾದ ಅನುಕೂಲ

## ಕಕುತ್ಪತಿಃ ಪೃಥಿವ್ಯಾ ಅಯಮ್ । ಅಪಾಗ್ಂ ರೇತಾಗ್ಂಸಿ ಜಿನ್ವತಿ ॥

ಕಕುತ್ । ಪತಿಃ । ಪೃಥಿವ್ಯಾಃ । ಅಯಮ್ ॥ ಅಪಾಮ್ । ರೇತಾಗ್ಂಸಿ । ಜಿನ್ವತಿ ॥

✢ **ಅಯಮ್ ಅಗ್ನಿಃ** = ಈ ಅಗ್ನಿಯು; **ದಿವಃ ಕಕುತ್ ಮೂರ್ಧಾ** = [ಆದಿತ್ಯರೂಪದಿಂದ] ದ್ಯುಲೋಕದ ಉನ್ನತವಾದ ತಲೆಯಾಗಿರುತ್ತಾನೆ; **ಪೃಥಿವ್ಯಾಃ** = ಭೂಮಿಯ; **ಪತಿಃ** = [ದಾಹ-ಪಾಕಾದಿ ಕಾರಣನಾದುದರಿಂದ] ಪಾಲಕನಾಗಿರುತ್ತಾನೆ; [ಈ ಅಗ್ನಿಯು] **ಅಪಾಮ್ ರೇತಾಗ್ಂಸಿ** = ನೀರಿನ ಕಾರ್ಯಗಳಾದ ಸ್ಥಾವರ-ಜಂಗಮ ಶರೀರಗಳನ್ನು; **ಜಿನ್ವತಿ** =[ಜಠರಾಗ್ನಿರೂಪದಿಂದ] ಸಂತೋಷಪಡಿಸುತ್ತಾನೆ. [ಅಯಮ್ ಅಗ್ನಿಃ ಮೂರ್ಧಾ ದಿವಃ ಕಕುತ್ = ಈ ಅಗ್ನಿಯು ಪ್ರಧಾನಭೂತನಾಗಿ ದ್ಯುಲೋಕಕ್ಕೆ ಉನ್ನತನಾದ ಕಕುತ್(ಹಿಣಿಲು)ನಂತೆ ಎತ್ತರವಾಗಿರುವ ಆತ್ಮಭೂತನಾದ ಆರ್ಯಮರೂಪನಾಗಿದ್ದಾನೆ; ಪೃಥಿವ್ಯಾಃ ಪತಿಃ = ಪಾಲಕನಾಗಿರುತ್ತಾನೆ. [ಪೃಥಿವೀರೂಪನಾಗಿರುತ್ತಾನೆ.] ಅಪಾಮ್ ರೇತಾಂಸಿ ಜಿನ್ವತಿ = ಮಾಧ್ಯಮಿಕಾಗ್ನಿರೂಪದಿಂದ ನೀರಿನ ಕಾರ್ಯಗಳಾದ ಸ್ಥಾವರಜಂಗಮಗಳನ್ನು [ಮಳೆಯಿಂದ] ಸಂತೋಷಪಡಿಸುತ್ತಾನೆ.

---

ಕರವಾದ ದೀಪ್ತಿಯನ್ನು ಗೋವಾಗಿ ಮಾಡಿಕೊಂಡು ಬಹುಧನಪ್ರದವಾದ, ಕರ್ಮ ಪ್ರವರ್ತಕವಾದ ಜ್ಯೋತಿಯನ್ನೇ ಹಾಲಿನಂತೆ ಪಡೆದುಕೊಂಡರು. ನಾವೂ ಈ ಫಲಗಳನ್ನು ಪಡೆಯೋಣ.

### ಅನ್ವಯಕ್ರಮ [ಪುಟ 57]

| ಸಾಯಣಾಚಾರ್ಯರು | ಭ.ಭಾ.ಮಿಶ್ರರು |
|---|---|
| 1. ಸಹಸ್ರಸಾಮ್ ಋಷಿಮ್ | 1. ಸಹಸ್ರಸಾಮ್ ಋಷಿಮ್ ಅನುದ್ಯುತಮ್ |
| [ಋಷಿಮ್=ಕರ್ಮಪ್ರವರ್ತಕವಾದ] | [ಋಷಿಮ್= ಜ್ಞಾನದೃಷ್ಟಿಪ್ರದವಾದ] |
| 2. ಶುಕ್ರಮ್=ಜ್ಯೋತಿಯನ್ನು | 2. ಶುಕ್ರಮ್=ಸಾರವಾದ, ನಿರ್ಮಲವಾದ |
| 3. ಪಯಃ= ಕ್ಷೀರಸ್ಥಾನೀಯವಾದ; | 3. ಪಯಃ = ನೀರನ್ನು |

ಅಗ್ನಿದೀಪ್ತಿಯ ಅನುಗ್ರಹದಿಂದ ವೃಷ್ಟಿಜಲವನ್ನು ಪಡೆದರು ಎಂಬುದು ಮಿಶ್ರರ ಭಾಷ್ಯದ ತಾತ್ಪರ್ಯ.

ಅಯಮಿಹ ಪ್ರಥಮೋ ಧಾಯಿ ಧಾತೃಭಿರ್ ಹೋತಾ ಯ-
ಜಿಷ್ಠೋ ಅಧ್ವರೇಷ್ವೀಡ್ಯಃ । ಯಮಪ್ನವಾನೋ ಭೃಗವೋ

ಅಯಮ್। ಇಹ। ಪ್ರಥಮಃ। ಧಾಯಿ। ಧಾತೃಭಿರಿತಿ ಧಾತೃ-ಭಿಃ। ಹೋತಾ। ಯಜಿಷ್ಠಃ। ಅಧ್ವರೇಷು। ಈಡ್ಯಃ ॥ ಯಮ್। ಅಪ್ನವಾನಃ। ಭೃಗವಃ।

| ಮಂತ್ರ | ವಿನಿಯೋಗ |
| --- | --- |
| ಅಯಮಿಹ... ವಿಶೇ । | ಆಹವನೀಯೋಪಸ್ಥಾನದ ನಾಲ್ಕನೆಯ ಮಂತ್ರ |

✢ ಅಯಮ್ = ಈ ಅಗ್ನಿಯು; ಇಹ = ಈ ಕರ್ಮದಲ್ಲಿ; ಪ್ರಥಮಃ = ಪ್ರಧಾನ ಭೂತನಾಗಿ; ಧಾತೃಭಿಃ = ಅಗ್ನಿಧಾರಣೆ ಮಾಡಲು ಯತ್ನಿಸುತ್ತಿರುವ ನಮ್ಮಿಂದ; ಧಾಯಿ = ಧರಿಸಲ್ಪಟ್ಟಿರುತ್ತಾನೆ; [ಈ ಅಗ್ನಿಯು] ಹೋತಾ = [ದೇವತೆಗಳನ್ನು ಆಹ್ವಾನಿಸುವವನು]; ಯಜಿಷ್ಠಃ = [ಮನುಷ್ಯರಾದವರಿಗಿಂತಲೂ ಮನುಷ್ಯರಾದ ಹೋತೃಗಳಿಗಿಂತಲೂ;] ಶ್ರೇಷ್ಠನಾದ ಯಷ್ಟನಾಗಿದ್ದಾನೆ; [ಯಾಗ ಮಾಡುವವನಾಗಿದ್ದಾನೆ]; ಅಧ್ವರೇಷು = ಯಾಗಗಳಲ್ಲಿ; ಈಡ್ಯಃ = ಸ್ತುತಿಸಲ್ಪಡತಕ್ಕವನಾಗಿದ್ದಾನೆ; ಚಿತ್ರಮ್ = [ಬಹುಯಾಗಾ ಧಾರನಾದುದರಿಂದ] ಚಿತ್ರನಾಗಿರುವ; ವಿಭುವಮ್ = ಸರ್ವತ್ರ ವ್ಯಾಪಿಸಿರುವ; ಯಮ್ = ಯಾವ ಅಗ್ನಿಯನ್ನು; ಅಪ್ನವಾನಃ = ಅಪ್ನವಾನ ಎಂಬ ಹೆಸರುಳ್ಳ; ಕರ್ಮಿಷ್ಠರಾದ; ಭೃಗವಃ = ಭೃಗುವಂಶೋತ್ಪನ್ನರಾದ ಋಷಿಗಳು;

ಅಗ್ನಿಯು ದ್ಯುಲೋಕಕ್ಕೆ ಎತ್ತರವಾದ ತಲೆಯಂತಿರುವ ಆದಿತ್ಯನಾಗಿರುತ್ತಾನೆ. ದಾಹ-ಪಾಕಾದಿಗಳಿಗೆ ಕಾರಣನಾಗಿ ಭೂಮಿಯನ್ನು ಪಾಲಿಸುತ್ತಾನೆ. ನೀರಿನ ಕಾರ್ಯಗಳಾದ ಸ್ಥಾವರ-ಜಂಗಮಗಳನ್ನು ಜಠರಾಗ್ನಿರೂಪದಿಂದ ಸಂತೋಷಪಡಿಸುತ್ತಾನೆ/ ಅಗ್ನಿಯು ದ್ಯುಲೋಕಕ್ಕೆ ಪ್ರಧಾನನಾಗಿ ಉನ್ನತನಾದ ಅರ್ಯಮನಾಗಿರುತ್ತಾನೆ. ಪೃಥಿವ್ಯಾತ್ಮನೂ ಆಗಿರುತ್ತಾನೆ. ಸ್ಥಾವರ-ಜಂಗಮಗಳನ್ನು ವೃಷ್ಟಿಯಿಂದ ಮಾಧ್ಯಮಿಕಾಗ್ನಿರೂಪನಾಗಿ ಸಂತೋಷಪಡಿಸುತ್ತಾನೆ.

ವಿರುರುಚುರ್ವನೇಷು ಚಿತ್ರಂ ವಿಭುವಂ ವಿಶೇ ವಿಶೇ ॥ ಉಭಾ ವಾಮಿಂದ್ರಾಗ್ನೀ ಆಹುವಧ್ಯಾ[ಆಹುವಧ್ಯೈ(೧)ಉಭಾ] ಉಭಾ

---

ವಿರುರುಚುರಿತಿ ವಿ-ರುರುಚುಃ । ವನೇಷು । ಚಿತ್ರಮ್ । ವಿಭುವಮಿತಿ ವಿ-ಭುವಮ್। ವಿಶೇವಿಶ ಇತಿ ವಿಶೇ-ವಿಶೇ । ಉಭಾ । ವಾಮ್ । ಇಂದ್ರಾಗ್ನೀ ಇತೀಂದ್ರ - ಅಗ್ನೀ । ಆಹುವಧ್ಯೈ । ಉಭಾ ।

---

| ಮಂತ್ರ | ವಿನಿಯೋಗ |
|---|---|
| ಉಭಾ ವಾಮಿಂದ್ರಾಗ್ನಿ...ಹುವೇ ವಾಮ್ ॥ | ಆಹವನಿಯೋಪಸ್ಥಾನದ ಐದನೆಯ ಮಂತ್ರ. |

---

ವನೇಷು = ಕಾಡುಗಳಲ್ಲಿರುವ [ತಮ್ಮ ಆಶ್ರಮಗಳಲ್ಲಿ] ವಿಶೇವಿಶೇ = ತಮ್ಮ ತಮ್ಮ ಪ್ರಜೆಗಳಿಗಾಗಿ/ಪ್ರಜೆಗಳ ಶ್ರೇಯಸ್ಸಿಗಾಗಿ; ವಿರುರುಚುಃ = ವಿಶೇಷವಾಗಿ ಜ್ವಲಿಸುವಂತೆ ಮಾಡಿದರೋ, [ಆ ಅಗ್ನಿಯನ್ನು ನಾವು ಉಪಸ್ಥಾನಮಂತ್ರಗಳಿಂದ ಸ್ತೋತ್ರ ಮಾಡುತ್ತೇವೆ.] ✢ ಇಂದ್ರಾಗ್ನೀ = ಎಲೈ ಇಂದ್ರಾಗ್ನಿದೇವತೆಗಳೇ! ಉಭಾ ವಾಮ್ = ನಿಮ್ಮಿಬ್ಬರನ್ನೂ; ಆಹುವಧ್ಯೈ = ಎದುರಾಗಿ ಹೋಮ ಮಾಡುವುದಕ್ಕೆ/ ಉಪಸ್ಥಾನದಿಂದ ಆರಾಧಿಸಲು; [ಇಚ್ಛಿಸುತ್ತೇನೆ.] ಉಭಾ = ನಿಮ್ಮಿಬ್ಬರನ್ನೂ;

---

ಈ ಅಗ್ನಿದೇವನು ದೇವತೆಗಳನ್ನು ಆಹ್ವಾನಿಸುವವನು. ಮನುಷ್ಯರಿಗಿಂತಲೂ ಅಧಿಕವಾಗಿ ಯಾಗಮಾಡತಕ್ಕವನು. ಯಾಗಗಳಲ್ಲಿ ಸ್ತುತಿಸಲ್ಪಡತಕ್ಕವನು. ಈ ಅಗ್ನಿಯನ್ನು — ಅಪ್ನವಾನ ಮೊದಲಾದ ಭೃಗುವಂಶದ ಋಷಿಗಳು ತಮ್ಮ ತಮ್ಮ ಪ್ರಜೆಗಳ ಶ್ರೇಯಸ್ಸಿಗಾಗಿ ತಮ್ಮ ಕಾಡಿನ ಆಶ್ರಮಗಳಲ್ಲಿ — ಪ್ರಜ್ವಲಿಸುವಂತೆ ಮಾಡಿ ಯಾಗದಿಂದ ಆರಾಧಿಸಿದರು. ಈತನು ಯಾಗಗಳಿಗೆ ಆಧಾರನಾಗಿರುವುದರಿಂದ ಚಿತ್ರ

**ರಾಧಸಸ್ಸಹ ಮಾದಯಧ್ಯೈ । ಉಭಾ ದಾತಾರಾವಿಷಾಗ್ಂ**

**ರಯೀಣಾಮುಭಾ ವಾಜಸ್ಯ ಸಾತಯೇ ಹುವೇ ವಾಮ್ ॥**

---

ರಾಧಸಃ । ಸಹ । ಮಾದಯಧ್ಯೈ ॥ ಉಭಾ । ದಾತಾರೌ । ಇಷಾಮ್ । ರಯೀಣಾಮ್ ।

ಉಭಾ । ವಾಜಸ್ಯ । ಸಾತಯೇ । ಹುವೇ । ವಾಮ್ ॥

---

**ರಾಧಸಃ** = ಅನ್ನದಿಂದ/ಸ್ತುತಿಯಿಂದ; **ಸಹ** = ಒಟ್ಟಿಗೇ; **ಮಾದಯಧ್ಯೈ** = ತೃಪ್ತಿಪಡಿಸುವುದಕ್ಕೆ [ಇಚ್ಛಿಸುತ್ತೇನೆ]; **ಉಭಾ** = ನೀವಿಬ್ಬರೂ; **ಇಷಾಮ್** = ಅನ್ನಗಳಿಗೆ; [ಮತ್ತು]; **ರಯೀಣಾಮ್** = ಧನಗಳಿಗೆ; **ದಾತಾರೌ** = ಕೊಡತಕ್ಕವರಾಗಿದ್ದೀರಿ; [ಆದುದರಿಂದ]; **ಉಭಾ ವಾಮ್** = ನಿಮ್ಮಿಬ್ಬರನ್ನೂ; **ವಾಜಸ್ಯ** = ಅನ್ನದ; **ಸಾತಯೇ** = ಲಾಭಕ್ಕಾಗಿ; **ಹುವೇ** = ಆಹ್ವಾನಿಸುತ್ತೇನೆ/ಸ್ತುತಿಸುತ್ತೇನೆ.



---

ನಾಗಿದ್ದಾನೆ. ಈತನು ಎಲ್ಲೆಲ್ಲಿಯೂ ವ್ಯಾಪಿಸಿರುತ್ತಾನೆ. ಈ ಕರ್ಮದಲ್ಲಿ ಪ್ರಧಾನನಾಗಿರುವ ಈ ಅಗ್ನಿಯನ್ನು ಋತ್ವಿಜರಾದ ನಾವು/ಯಜಮಾನರಾದ ನಾವು ಪ್ರಯತ್ನಪೂರ್ವಕವಾಗಿ ಧಾರಣೆ ಮಾಡುತ್ತೇವೆ. ಈತನು ನಮ್ಮ ಕೋರಿಕೆಗಳನ್ನು ಈಡೇರಿಸಿಕೊಡಲಿ. [ವಿಶೇ ವಿಶೇ = ವಿಶಿ ವಿಶಿ; ವಿಭುವಮ್= ಪ್ರತಿಮನುಷ್ಯರಲ್ಲಿಯೂ ವ್ಯಾಪಿಸಿರುವ ಯಮ್ = ಯಾವ ಅಗ್ನಿಯನ್ನು.....] [ಮಿಶ್ರರು ಅನ್ವಯ ಮಾಡಿರುವ ಇನ್ನೊಂದು ರೀತಿ].

ಎಲೈ ಇಂದ್ರಾಗ್ನಿಗಳೇ! ನಿಮ್ಮಿಬ್ಬರನ್ನೂ ಎದುರಾಗಿ ಸ್ತುತಿಸುವುದಕ್ಕಾಗಿ ಆಹ್ವಾನಿಸುತ್ತೇನೆ. ನಿಮ್ಮಿಬ್ಬರನ್ನೂ ಜೊತೆಯಾಗಿಯೇ ಅನ್ನದಿಂದ/ಸ್ತುತಿಯಿಂದ ತೃಪ್ತಿಪಡಿಸಲು ಇಚ್ಛಿಸುತ್ತೇನೆ. ನೀವಿಬ್ಬರೂ ಅನ್ನವನ್ನೂ, ಕ್ಷೇತ್ರ-ಪುತ್ರ-ಪಶ್ವಾದಿಧನಗಳನ್ನೂ ಕೊಡತಕ್ಕವರು. ನಿಮ್ಮಿಬ್ಬರನ್ನೂ ಅನ್ನದ ಲಾಭಕ್ಕಾಗಿ ಆಹ್ವಾನಿಸುತ್ತೇನೆ/ಸ್ತುತಿಸುತ್ತೇನೆ.

ಅಯಂ ತೇ ಯೋನಿರ್ ಋತ್ವಿಯೋ ಯತೋ ಜಾತೋ

ಅರೋಚಥಾಃ । ತಂ ಜಾನನ್ನಗ್ನ ಆರೋಹಾಥಾ ನೋ

---

ಅಯಮ್। ತೇ । ಯೋನಿಃ । ಋತ್ವಿಯಃ। ಯತಃ । ಜಾತಃ । ಅರೋಚಥಾಃ ।। ತಮ್।

ಜಾನನ್ । ಅಗ್ನೇ । ಏತಿ । ರೋಹ । ಅಥ । ನಃ ।

---

| ಮಂತ್ರ | ವಿನಿಯೋಗ |
|---|---|
| ಅಯಂ ತೇ.... ರಯಿಮ್ । | ಆಹವನೀಯೋಪಸ್ಥಾನದ ಆರನೆಯ ಮಂತ್ರ. |

---

✣ ಅಗ್ನೇ = ಅಗ್ನಿದೇವನೇ! ಅಯಮ್ = ಈ ಆಹವನೀಯಪ್ರದೇಶವು/ಗಾರ್ಹಪತ್ಯನು; ತೇ = ನಿನ್ನ; ಋತ್ವಿಯಃ = ಎಲ್ಲ ಋತುಗಳಲ್ಲಿಯೂ ಇರುವ; ಯೋನಿಃ = ಕಾರಣವಾಗಿದೆ; ಯತಃ = ಯಾವ ಆಹವನೀಯಪ್ರದೇಶದಿಂದ/ಗಾರ್ಹಪತ್ಯದಿಂದ; ಜಾತಃ = ಉತ್ಪನ್ನನಾಗಿ; ಅರೋಚಥಾಃ = ಪ್ರಕಾಶಿಸುತ್ತಿರುವೆಯೋ; ತಮ್ = ಆ ಆಹವನೀಯಪ್ರದೇಶವನ್ನು; ಜಾನನ್ = [ನನ್ನ ಸ್ಥಾನವೆಂದು] ತಿಳಿದವನಾಗಿ; ಆರೋಹ = ಆಶ್ರಯಿಸು/ಏರು. ಅಥ = ಬಳಿಕ; ನಃ = ನಮ್ಮ;

---

ಎಲೈ! ಆಹವನೀಯಾಗ್ನಿಯೇ! ಈ ಆಹವನೀಯಪ್ರದೇಶವು *[ಗಾರ್ಹಪತ್ಯವು] ನಿನ್ನ ಉತ್ಪತ್ತಿಸ್ಥಾನವಾಗಿದೆ. ಇದು ಎಲ್ಲಾ ಋತುಗಳಲ್ಲಿಯೂ ಇರುವ ಸ್ಥಾನವಾಗಿದೆ. ಆದರಿಂದ ನೀನು ಹುಟ್ಟಿ ಜ್ವಲಿಸುತ್ತಿರುವೆ. ಅದನ್ನು ಉತ್ಪತ್ತಿಸ್ಥಾನವೆಂದು ತಿಳಿದು ನೀನು ಸನ್ನಿಹಿತನಾಗು. ಅನಂತರ ನಮ್ಮ ಹವಿಸ್ಸುಗಳನ್ನು ಸ್ವೀಕರಿಸಿ, ನಮ್ಮಿಂದ ಸ್ತುತನಾಗಿ, ನಮಗೆ ಧನಸಮೃದ್ಧಿಯನ್ನು ನೀಡು. ನಮ್ಮ ಧನವನ್ನು ವೃದ್ಧಿಗೊಳಿಸು.

---

*ಏಕಾಗ್ನಿಧಾರಣಪಕ್ಷದಲ್ಲಿ ಹೀಗೆ.

**ವರ್ಧಯಾ ರಯಿಮ್ ॥ ಅಗ್ನ ಆಯೂಗ್ಂಷಿ ಪವಸ ಆ ಸುವೋರ್ಜಮಿಷಂ ಚ ನಃ । ಆರೇ ಬಾಧಸ್ವ ದುಚ್ಛುನಾಮ್॥ ಅಗ್ನೇ ಪವಸ್ವ ಸ್ವಪಾ ಅಸ್ಮೇ ವರ್ಚಸ್ಸುವೀರ್ಯಮ್ ।**

---

ವರ್ಧಯ । ರಯಿಮ್॥ ಅಗ್ನೇ । ಆಯೂಗ್ಂಷಿ । ಪವಸೇ । ಏತಿ । ಸುವ । ಊರ್ಜಮ್। ಇಷಮ್। ಚ । ನಃ ॥ ಆರೇ । ಬಾಧಸ್ವ । ದುಚ್ಛುನಾಮ್ ॥ ಅಗ್ನೇ । ಪವಸ್ವ । ಸ್ವಪಾ ಇತಿ ಸು-ಅಪಾಃ । ಅಸ್ಮೇ ಇತಿ । ವರ್ಚಃ । ಸುವೀರ್ಯಮಿತಿ ಸು-ವೀರ್ಯಮ್॥

---

| ಮಂತ್ರ | ವಿನಿಯೋಗ |
|---|---|
| ಅಗ್ನ.....ದುಚ್ಛುನಾಮ್। | ಯಾವಾಗಲೂ, ಅಥವಾ ಪ್ರತಿಸಂವತ್ಸರದಲ್ಲಿ ಅಗ್ನ್ಯುಪಸ್ಥಾನಕ್ಕೆ ಹೇಳಿರುವ *ಆರು ಮಂತ್ರಗಳಲ್ಲಿ ಮೊದಲನೆಯ ಮಂತ್ರ. |
| ಅಗ್ನೇ ಪವಸ್ವ... ಮಯಿ । | ಸಂವತ್ಸರಾಗ್ನ್ಯುಪಸ್ಥಾನದಲ್ಲಿ ಎರಡನೆಯ ಮಂತ್ರ. |

---

**ರಯಿಮ್** = ಧನವನ್ನು; **ವರ್ಧಯ** = ಅಭಿವೃದ್ಧಿಗೊಳಿಸು; ✢ **ಅಗ್ನೇ** = ಅಗ್ನಿದೇವನೇ! **ಆಯೂಗ್ಂಷಿ** =[ನಮ್ಮ] ಜೀವನಗಳನ್ನು / ಅನ್ನಗಳನ್ನು; **ಪವಸೇ** = ಶೋಧಿಸುತ್ತೀಯೆ/ ದೋಷರಹಿತವಾಗಿ ಮಾಡುತ್ತೀಯೆ; **ನಃ**=ನಮಗೆ; **ಊರ್ಜಮ್ ಇಷಮ್ ಚ**=ಕ್ಷೀರಾದಿ ರಸಗಳನ್ನೂ, ಅನ್ನವನ್ನೂ, **ಆ ಸುವ** =[ಕ್ಷೀಣವಾಗದಂತೆ] ಮತ್ತೆ ಮತ್ತೆ ಉಂಟುಮಾಡು; **ದುಚ್ಛುನಾಮ್** = [ನಮ್ಮ] ಶತ್ರುಗಳನ್ನು / ಶತ್ರುಸೇನೆಯನ್ನು/ ಅಲಕ್ಷ್ಮಿಯನ್ನು; **ಆರೇ** =ದೂರದಲ್ಲಿಯೇ; **ಬಾಧಸ್ವ**=ಪೀಡಿಸು / ಹತ್ತಿರಕ್ಕೆ ಬರದಂತೆ ಮಾಡು. ✢ **ಅಗ್ನೇ** =ಅಗ್ನಿದೇವನೇ! **ಸ್ವಪಾಃ**=ಶುಭ್ರವಾದ ಕರ್ಮಗಳುಳ್ಳ ನೀನು; **ಅಸ್ಮೇ**=ನಮ್ಮಲ್ಲಿ/ನಮಗೆ; **ವರ್ಚಃ**=ಬ್ರಹ್ಮವರ್ಚಸ್ಸನ್ನೂ/ಬಲವನ್ನೂ, ಅನ್ನವನ್ನೂ; **ಸುವೀರ್ಯಮ್** = ಒಳ್ಳೆಯ

---

ಅಗ್ನಿದೇವನೇ! ನಮ್ಮ ಜೀವನವನ್ನು/ಜೀವನಸಾಧನವಾದ ಅನ್ನವನ್ನು ಶುದ್ಧಿಗೊಳಿಸುತ್ತೀಯೆ.

---

**ತೈ. ಸಂ. ೧.೩.೧೪ರಲ್ಲಿ ಈ ಮಂತ್ರಗಳು ವ್ಯಾಖ್ಯಾತವಾಗಿವೆ.**

ದಧತ್ಪೋಷಗ್ಂ ರಯಿಂ ಮಯಿ ॥ ಅಗ್ನೇ ಪಾವಕ ರೋಚಿಷಾ

ಮಂದ್ರಯಾ

---

ದಧತ್ । ಪೋಷಮ್ । ರಯಿಮ್ । ಮಯಿ ॥ ಅಗ್ನೇ । ಪಾವಕ । ರೋಚಿಷಾ । ಮಂದ್ರಯಾ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಪಾವಕ.....ಯಕ್ಷಿ ಚ ॥ | ಸಂವತ್ಸರಾಗ್ನ್ಯುಪಸ್ಥಾನದ ಮೂರನೆಯ ಮಂತ್ರ. |

---

ಶಕ್ತಿಯುಳ್ಳ ಪುತ್ರಾದಿಗಳನ್ನೂ ಒಳ್ಳೆಯ ಸಾಮರ್ಥ್ಯವನ್ನೂ; ಪವಸ್ವ = ಶೋಧಿಸು; ಮಯಿ = ನನ್ನಲ್ಲಿ; ಪೋಷಮ್ = ಪುಷ್ಟಿಯನ್ನೂ; ರಯಿಮ್ = ಧನವನ್ನೂ; ದಧತ್ = ಸ್ಥಾಪಿಸುತ್ತಾ; [ಪವಸ್ವ = ಶುದ್ಧಿಗೊಳಿಸು] ॥ ಪಾವಕ = ಶುದ್ಧಿಗೊಳಿಸುವವನಾದ; ಅಗ್ನೇ ದೇವ = ಪ್ರಕಾಶಮಾನವಾದ ಅಗ್ನಿಯೇ [ನೀನು] ರೋಚಿಷಾ = ದೇದೀಪ್ಯಮಾನವಾದ; ಮಂದ್ರಯಾ = ಸಂತೋಷಗೊಳಿಸುವ;

---

[ಶುದ್ಧಿಗೊಳಿಸು] ನಮಗೆ ಕ್ಷೀರಾದಿರಸಗಳನ್ನೂ, ಅನ್ನವನ್ನೂ ಕಡಿಮೆಯಾಗದಂತೆ ಮತ್ತೆ ಮತ್ತೆ ಹೆಚ್ಚಾಗಿ ಉಂಟು ಮಾಡು. ನಮ್ಮ ಶತ್ರುಸೇನೆಯನ್ನು/ಅಲಕ್ಷ್ಮಿಯನ್ನು ದೂರದಲ್ಲಿ ಪೀಡಿಸಿ ನಾಶಪಡಿಸು, ಹತ್ತಿರಕ್ಕೆ ಬರದಂತೆ ಮಾಡು.

ಅಗ್ನಿದೇವನೇ! ನೀನು ಶುಭವಾದ ಕರ್ಮಗಳುಳ್ಳವನು. ನನ್ನಲ್ಲಿ ಪುಷ್ಟಿಯನ್ನೂ, ಗವಾದಿಧನಸಮೃದ್ಧಿಯನ್ನೂ ಸ್ಥಿರವಾಗಿರುವಂತೆ ಮಾಡುತ್ತಾ, ನಮ್ಮಲ್ಲಿ [ನಮಗೆ] ಒಳ್ಳೆಯ ಸಾಮರ್ಥ್ಯವನ್ನೂ [ಒಳ್ಳೆಯ ಸಾಮರ್ಥ್ಯವುಳ್ಳ ಪುತ್ರಾದಿಗಳನ್ನೂ] ಬ್ರಹ್ಮವರ್ಚಸವನ್ನೂ [ಬಲವನ್ನೂ] ಶೋಧಿಸಿ ವೃದ್ಧಿಗೊಳಿಸು.

ಅಗ್ನಿದೇವನೇ! ನೀನು ಶೋಧಕನು. ನಿನ್ನ ಬೆಳಗುತ್ತಿರುವ ಹರ್ಷಜನಕವಾದ,

**ದೇವ ಜಿಹ್ವಯಾ । ಆ ದೇವಾನ್ ವಕ್ಷಿ ಯಕ್ಷಿ ಚ ॥ ಸ ನಃ ಪಾವಕ ದೀದಿವೋಽಗ್ನೇ ದೇವಾಗ್ಂ ಇಹಾಽಽವಹ। ಉಪ ಯಜ್ಞಗ್ಂ ಹವಿಶ್ಚ ನಃ ।**

---

ದೇವ । ಜಿಹ್ವಯಾ ॥ ಏತಿ । ದೇವಾನ್ । ವಕ್ಷಿ । ಯಕ್ಷಿ । ಚ । । ಸಃ । ನಃ । ಪಾವಕ। ದೀದಿವಃ । ಅಗ್ನೇ । ದೇವಾನ್ । ಇಹ । ಏತಿ । ವಹ ॥ ಉಪೇತಿ । ಯಜ್ಞಮ್ । ಹವಿಃ। ಚ । ನಃ ॥

---



| ಮಂತ್ರ | ವಿನಿಯೋಗ |
|---|---|
| ಸ ನಃ ಪಾವಕ.... ನಃ । | ಸಂವತ್ಸರಉಪಸ್ಥಾನದ ನಾಲ್ಕನೆಯ ಮಂತ್ರ. |

---

ಜಿಹ್ವಯಾ = [ಜ್ವಾಲೆಯೆಂಬ] ನಾಲಿಗೆಯಿಂದ; ದೇವಾನ್ = ದೇವತೆಗಳನ್ನು; ಆ ವಕ್ಷಿ = ಆಹ್ವಾನಿಸು; ಚ = ಮತ್ತು, ಯಕ್ಷಿ=ಯಾಗದ್ದ ಮಾಡಿಲಿಕೆ ಪೂಜಿಸು. + ದೀದಿವಃ =[ನಮಗಾಗಿ] ಪ್ರಕಾಶಿಸುತ್ತಿರುವವನೇ! ಪಾವಕ=ಶೋಧಕನೇ; ಅಗ್ನೇ = ಅಗ್ನಿದೇವನೇ! ಸಃ = ಆ [ನೀನು]; ದೇವಾನ್=ದೇವತೆಗಳನ್ನು; ನಃ = ನಮ್ಮ[ನಮಗಾಗಿ]; ಇಹ = ಈ ಕರ್ಮದಲ್ಲಿ; ಆ ವಹ = ಕರೆದುಕೊಂಡು ಬಾ; ಆಹ್ವಾನಿಸು; ನಃ = ನಮ್ಮ; ಯಜ್ಞಮ್ = ಯಜ್ಞವನ್ನೂ; ಚ=ಮತ್ತು ; ಹವಿಃ = ಹವಿಸ್ಸನ್ನೂ; ಉಪ [ವಹ] = [ದೇವತೆಗಳಿಗೆ ಸಮರ್ಪಿಸು]

---

ಜ್ವಾಲಾರೂಪವಾದ ನಾಲಗೆಯಿಂದ ದೇವತೆಗಳಿಗೆ ಯಾಗಕ್ಕೆ ಬರುವಂತೆ ಆಹ್ವಾನವನ್ನು ಕೊಡು. ಅವರನ್ನು ಹವಿಸ್ಸುಗಳ ಮೂಲಕ ಆರಾಧಿಸಿ ತೃಪ್ತಿಪಡಿಸು.

ಎಲೈ! ಅಗ್ನಿದೇವನೇ! ನೀನು ಪ್ರಕಾಶಮಾನನಾಗಿರುವೆ. ಶುದ್ಧಿಗೊಳಿಸುವವನಾಗಿ ರುವೆ. ನೀನು ನಮಗಾಗಿ ಈ ಕರ್ಮದಲ್ಲಿ ದೇವತೆಗಳನ್ನು ಆಹ್ವಾನಿಸು. ನಮ್ಮ ಯಜ್ಞವನ್ನೂ, ಹವಿಸ್ಸನ್ನೂ ದೇವತೆಗಳಿಗೆ ಒಯ್ಯು, ಅವರನ್ನು ತೃಪ್ತಿಪಡಿಸು/ ನಮ್ಮ ಯಜ್ಞವನ್ನು ಯಜ್ಞದ ಸಮೀಪದಲ್ಲಿ ಸ್ಥಾಪಿಸು.

## ಅಗ್ನಿಶ್ಶುಚಿವ್ರತತಮಶ್ಶುಚಿರ್ವಿಪ್ರಶ್ಶುಚಿಃ ಕವಿಃ । ಶುಚೀ ರೋಚತ ಆಹುತಃ ॥ ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ ।

---

ಅಗ್ನಿಃ । ಶುಚಿವ್ರತತಮ ಇತಿ ಶುಚಿವ್ರತ-ತಮಃ । ಶುಚಿಃ । ವಿಪ್ರಃ । ಶುಚಿಃ । ಕವಿಃ । ಶುಚಿಃ । ರೋಚತೇ । ಆಹುತ ಇತ್ಯಾ-ಹುತಃ ॥ ಉದಿತಿ । ಅಗ್ನೇ । ಶುಚಯಃ । ತವ ಶುಕ್ರಾಃ । ಭ್ರಾಜಂತಃ । ಈರತೇ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿಃ ಶುಚಿ... ಆಹುತಃ । | ಸಂವತ್ಸರಾಗ್ನ್ಯುಪಸ್ಥಾನದ ಐದನೆಯ ಮಂತ್ರ. |
| ಉದಗ್ನೇ..ಜ್ಯೋತೀಗ್‌ಷ್ಯುರ್ಚಯಃ। | ಸಂವತ್ಸರಾಗ್ನ್ಯುಪಸ್ಥಾನದ ಆರನೆಯ ಮಂತ್ರ. |

---

✢ ಅಗ್ನಿಃ = ಅಗ್ನಿದೇವನು; **ಶುಚಿವ್ರತತಮಃ** = [ತಾನಾಗಿಯೇ] ಶುದ್ಧವಾದ ಸತ್ಕರ್ಮಗಳನ್ನು ಮಾಡುವವರಲ್ಲಿ ಶ್ರೇಷ್ಠನು; **ವಿಪ್ರಃ** = ಬ್ರಾಹ್ಮಣಾಭಿಮಾನಿಯಾದುದರಿಂದ/ಬ್ರಾಹ್ಮಣನಾದುದರಿಂದ; **ಶುಚಿಃ** = ಮತ್ತಷ್ಟು ಶುದ್ಧನು. **ಕವಿಃ** = ವಿದ್ವದಭಿಮಾನಿಯಾದುದರಿಂದ/ವಿದ್ವಾಂಸನಾದುದರಿಂದ; **ಶುಚಿಃ**=ಇನ್ನಷ್ಟು ಶುದ್ಧನು. **ಶುಚಿಃ** = [ಹೀಗೆ ಸರ್ವಪ್ರಕಾರಗಳಿಂದಲೂ] ಶುಚಿಯಾದ ಅಗ್ನಿಯು; **ಆಹುತಃ** = [ನಮ್ಮಿಂದ ಶಾಸ್ತ್ರಾನುಸಾರವಾಗಿ ಯಜ್ಞದಲ್ಲಿ] ಹೋಮ ಮಾಡಲ್ಪಟ್ಟವನಾಗಿ, **ರೋಚತೇ**= ಪ್ರಜ್ವಲಿಸುತ್ತಾನೆ / ನಮ್ಮಿಂದ ಹೋಮ ಮಾಡಲ್ಪಟ್ಟು ಶುದ್ಧನಾಗಿ ಪ್ರಕಾಶಿಸುತ್ತಾನೆ. ✢ **ಅಗ್ನೇ**=ಅಗ್ನಿದೇವನೇ! **ತವ** = ನಿನ್ನ; **ಶುಚಯಃ** = ಶುದ್ಧವಾದ; **ಶುಕ್ರಾಃ** = ಕಿರಣಗಳು/ಜ್ವಾಲೆಗಳು [ಶುಕ್ರಾಃ= ನಿರ್ಮಲವಾದ; ಶುಚಯಃ=ತೇಜಸ್ಸುಗಳು] **ಭ್ರಾಜಂತಃ** = ದೀಪ್ಯಮಾನವಾಗಿ

---

ಈ ಅಗ್ನಿದೇವನು ತಾನೇ ಅತ್ಯಂತ ಶುದ್ಧಕರ್ಮವುಳ್ಳವರಲ್ಲಿ ಶ್ರೇಷ್ಠನಾಗಿದ್ದಾನೆ. ಬ್ರಾಹ್ಮಣಾಭಿಮಾನಿಯೂ, ಬ್ರಾಹ್ಮಣನೂ ಆದುದರಿಂದ ಮತ್ತೂ ಶುಚಿಯಾಗಿದ್ದಾನೆ. ವಿದ್ವದಭಿಮಾನಿಯೂ, ವಿದ್ವಾಂಸನೂ ಆಗಿರುವುದರಿಂದ ಇನ್ನಷ್ಟು ಶುದ್ಧನಾಗಿದ್ದಾನೆ

ತವ ಜ್ಯೋತೀಗ್ಂಷ್ಯರ್ಚಯಃ ॥ ಆಯುರ್ದಾ ಅಗ್ನೇಽಸ್ಯಾಯುರ್ಮೇ [........ಮೇ (೩) ದೇಹಿ] ದೇಹಿ ವರ್ಚೋದಾ ಅಗ್ನೇಽಸಿ ವರ್ಚೋ ಮೇ ದೇಹಿ ತನೂಪಾ ಅಗ್ನೇಽಸಿ

---

ತವ । ಜ್ಯೋತೀಗ್ಂಷಿ । ಅರ್ಚಯಃ॥ ಆಯುರ್ದಾ ಇತ್ಯಾಯುಃ-ದಾಃ । ಅಗ್ನೇ । ಅಸಿ। ಆಯುಃ । ಮೇ । ದೇಹಿ । ವರ್ಚೋದಾ ಇತಿ ವರ್ಚಃ-ದಾಃ । ಅಗ್ನೇ । ಅಸಿ । ವರ್ಚಃ। ಮೇ । ದೇಹಿ । ತನೂಪಾ ಇತಿ ತನೂ- ಪಾಃ । ಅಗ್ನೇ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಆಯುರ್ದಾ... ಆಪೃಣ । | ಆಹವನೀಯೋಪಸ್ಥಾನವನ್ನು ಮಾಡಲು [ಯಜುಃ] |

---

**ಉತ್ ಈರತೇ**= ಮೇಲಕ್ಕೆ ಹೋಗುತ್ತವೆ; **ಅರ್ಚಯಃ** = [ದೇವನಾದ ನಿನ್ನನ್ನು] ಪೂಜಿಸುವವರು; **ತವ**= ನಿನ್ನ; **ಜ್ಯೋತೀಗ್ಂಷಿ** = ಜ್ಯೋತಿಗಳನ್ನು [ಹೊಂದುತ್ತಾರೆ]. [ಜ್ಯೋತೀಗ್ಂಷಿ ಭವಂತಿ=ಜ್ಯೋತೀರೂಪರೇ ಆಗುತ್ತಾರೆ.]; [ತವ ಜ್ಯೋತೀಗ್ಂಷಿ = ಆದಿತ್ಯಾದಿಜ್ಯೋತಿಗಳೂ ನಿನ್ನವೇ ಆಗಿವೆ.] + **ಅಗ್ನೇ** = ಅಗ್ನಿಯೇ! [ನೀನು]; **ಆಯುರ್ದಾಃ** = ಆಯುಸ್ಸನ್ನು ಕೊಡುವವನು / ಆಯುಸ್ಸಿಗೆ ಕಾರಣವಾದ ಅನ್ನವನ್ನು ಕೊಡುವವನು; **ಅಸಿ** = ಆಗಿರುತ್ತೀಯೆ; **ಮೇ**=ನನಗೆ; **ಆಯುಃ** = ಆಯುಸ್ಸನ್ನು [ಅನ್ನವನ್ನು] **ದೇಹಿ** = ಕೊಡು; **ಅಗ್ನೇ** = ಅಗ್ನಿದೇವನೇ! **ವರ್ಚೋದಾಃ** = ಬಲವನ್ನು/ ಕಾಂತಿಯನ್ನು ಕೊಡುವವನು; **ಅಸಿ** = ಆಗಿರುತ್ತೀಯೆ; **ಮೇ** = ನನಗೆ; **ವರ್ಚಃ** = ಬಲವನ್ನು / ಕಾಂತಿಯನ್ನು; **ದೇಹಿ**=ಕೊಡು; **ಅಗ್ನೇ** =ಅಗ್ನಿದೇವನೇ!

---

ಇಂತಹ ಅಗ್ನಿಯು ನಾವು ಹವಿಸ್ಸುಗಳನ್ನು ಕೊಡುವುದರಿಂದ ಮತ್ತಷ್ಟು ಶುದ್ಧನಾಗಿ ಜ್ವಲಿಸುತ್ತಾನೆ/ಶುದ್ಧನಾದ ಅಗ್ನಿಯು ಆಹುತಿಗಳನ್ನು ಸ್ವೀಕರಿಸಿ ಜ್ವಲಿಸುತ್ತಾನೆ.

ಅಗ್ನಿಯೇ! ನಿನ್ನ ನಿರ್ಮಲವಾದ ತೇಜಸ್ಸುಗಳು ಬೆಳಗುತ್ತಾ ಮೇಲಕ್ಕೆ ಹೋಗುತ್ತವೆ/ಎಲ್ಲ ಜ್ಯೋತಿಗಳೂ ನಿನ್ನವೇ ಆಗಿವೆ.

ತನುವಂ ಮೇ ಪಾಹ್ಯಗ್ನೇ ಯನ್ಮೇ ತನುವಾ ಊನಂ ತನ್ಮ

ಆ ಪೃಣ ಚಿತ್ರಾವಸೋ ಸ್ವಸ್ತಿ ತೇ

---

ತನುವಮ್ ಮೇ । ಪಾಹಿ । ಅಗ್ನೇ । ಯತ್ । ಮೇ । ತನುವಾಃ । ಊನಮ್ । ತತ್ । ಮೇ । ಏತಿ । ಪೃಣ । ಚಿತ್ರಾವಸೋ ಇತಿ ಚಿತ್ರ-ವಸೋ । ಸ್ವಸ್ತಿ । ತೇ ।

---

| ಮಂತ್ರ | ವಿನಿಯೋಗ |
|---|---|
| ಚಿತ್ರಾವಸೋ....ಪಾರಮಶೀಯ । | ರಾತ್ರಿಯಲ್ಲಿ ಆಹವನೀಯೋಪಸ್ಥಾನದ ಮಂತ್ರ. |

---

[ನೀನು] ತನೂಪಾಃ = ಶರೀರವನ್ನು ರಕ್ಷಿಸುವವನು; ಅಸಿ= ಆಗಿರುತ್ತೀಯೆ; ಮೇ = ನನ್ನ; ತನುವಮ್ = ಶರೀರವನ್ನು; ಪಾಹಿ = [ರೋಗಾದಿಗಳಿಂದ] ರಕ್ಷಿಸು; ಅಗ್ನೇ = ಅಗ್ನಿದೇವನೇ! ಯತ್ = ಯಾವುದು; ಮೇ = ನನ್ನ; ತನುವಾಃ = ಶರೀರದ; ಊನಮ್ = ಕೊರತೆಯಾಗಿದೆಯೋ; ಮೇ = ನನ್ನ; ತತ್ = ಆ ಕೊರತೆಯನ್ನು; ಆ ಪೃಣ = ತುಂಬಿಕೊಡು; + ಚಿತ್ರಾವಸೋ= ನಾನಾವಿಧವಾದ ವಾಸಸ್ಥಾನಗಳುಳ್ಳ ರಾತ್ರಿಯೇ! [ನಾನು] ತೇ = ನಿನ್ನ; ಪಾರಮ್ = ಕೊನೆಯನ್ನು; ಸ್ವಸ್ತಿ= ಕ್ಷೇಮವಾಗಿ;

---

ಅಗ್ನಿಯೇ! ಆಯುಸ್ಸನ್ನು/ಆಯುಸ್ಸಿಗೆ ಕಾರಣವಾದ ಅನ್ನವನ್ನು ಕೊಡುವವನು ನೀನು. ನನಗೆ ಆಯುಸ್ಸನ್ನು ಕೊಡು. ಬಲವನ್ನೂ ಕಾಂತಿಯನ್ನೂ ಕೊಡುವವನೂ ನೀನೇ. ನನಗೆ ಬಲವನ್ನೂ ಕಾಂತಿಯನ್ನೂ ಕೊಡು. ಎಲ್ಲಾ ಶರೀರಗಳನ್ನು ರಕ್ಷಿಸುವವನು ನೀನೇ. ನನ್ನ ಶರೀರವನ್ನು ರಕ್ಷಿಸು. ನನ್ನ ದೇಹದಲ್ಲಿರುವ ಊನವಾದ ಅಂಶವನ್ನು ಸರಿಪಡಿಸಿ ದೇಹವನ್ನು ಪೂರ್ಣವಾಗುವಂತೆ ಮಾಡು.

ರಾತ್ರಿಯೇ! ನೀನು ನಾನಾ ವಿಧವಾದ ವಾಸಸ್ಥಾನಗಳುಳ್ಳ ಚಿತ್ರಾವಸುವಾಗಿರುವೆ.

ಪಾರಮಶೀಯೇಂಧಾನಾಸ್ತ್ವಾ ಶತಗ್ಂ ಹಿಮಾ ದ್ಯುಮಂತಸ್ಸಮಿ

ಧೀಮಹಿ ವಯಸ್ವಂತೋ ವಯಸ್ಕೃತಂ ಯಶಸ್ವಂತೋ

ಯಶಸ್ಕೃತಗ್ಂ ಸುವೀರಾಸೋ ಅದಾಭ್ಯಮ್ ।

---

ಪಾರಮ್ । ಅಶೀಯ । ಇಂಧಾನಾಃ ॥ ತ್ವಾ । ಶತಮ್ । ಹಿಮಾಃ । ದ್ಯುಮಂತ ಇತಿ ದ್ಯು-ಮಂತಃ । ಸಮಿತಿ । ಇಧೀಮಹಿ । ವಯಸ್ವಂತಃ । ವಯಸ್ಕೃತಮಿತಿ ವಯಃ-ಕೃತಮ್। ಯಶಸ್ವಂತಃ । ಯಶಸ್ಕೃತಮಿತಿ ಯಶಃ-ಕೃತಮ್ । ಸುವೀರಾಸ ಇತಿ ಸು - ವೀರಾಸಃ । ಅದಾಭ್ಯಮ್ ॥

---

| ಮಂತ್ರ | ವಿನಿಯೋಗ |
|---|---|
| ಇಂಧಾನಾಸ್ತ್ವಾ.....ಅಧಿ ನಾಕೇ । | ಬೆಳಗಿನ ವೇಳೆಯಲ್ಲಿ ಆಹವನೀಯೋಪಸ್ಥಾನವನ್ನು ಮಾಡಲು (ಸಾ) ಸಮಿದಾಧಾನವನ್ನು ಮಾಡಲು [ಭ.ಭಾ.]* |

---

ಅಶೀಯ =[ನಿನ್ನ ಅನುಗ್ರಹದಿಂದ] ಹೊಂದುವಂತಾಗಲಿ; ✢ ಅಗ್ನೇ = ಅಗ್ನಿದೇವನೇ! [ನಾವು]; ವಯಸ್ಕೃತಮ್ = ಅನ್ನವನ್ನುಂಟುಮಾಡುವ / ಆಯುರ್ಭಾಗಗಳನ್ನುಂಟು ಮಾಡುವ; ಯಶಸ್ಕೃತಮ್ = ಕೀರ್ತಿಯನ್ನುಂಟುಮಾಡುವ; ಅದಾಭ್ಯಮ್ = ಯಾರಿಂದಲೂ ತಿರಸ್ಕರಿಸಲಶಕ್ಯವಾದ;

---

ನಾವು ನಿನ್ನ ಅನುಗ್ರಹದಿಂದ ರಾತ್ರಿಯ ಕೊನೆಯನ್ನು ಕ್ಷೇಮವಾಗಿ ಮುಟ್ಟುವಂತಾಗಲಿ.

ಎಲೈ! ಅಗ್ನಿಯೇ! ನಾವು ನಿನ್ನನ್ನು ನೂರು ವರ್ಷಗಳ ಕಾಲ ಸಮಿತ್ತುಗಳಿಂದ

---

* 'ಅರ್ವಾಗ್ವಸೋ ಸ್ವಸ್ತಿ ತೇ ಪಾರಮಶೀಯ' ಎಂಬ ಶಾಖಾಂತರದ ಮಂತ್ರವನ್ನೂ ಆಪಸ್ತಂಬರು ವಿನಿಯೋಗಿಸಿರುತ್ತಾರೆ. [ಮೈ. ಸಂ. 1-5.2 ಕಾ. ಸಂ. 6.9.]

ಅಗ್ನೇ ಸಪತ್ನದಂಭನಂ ವರ್ಷಿಷ್ಠೇ ಅಧಿ ನಾಕೇ ।

ಸಂ ತ್ವಮಗ್ನೇ ಸೂರ್ಯಸ್ಯ ವರ್ಚಸಾऽಗಥಾಸ್ಸಮೃಷೀಣಾಗ್ಂ

---

ಅಗ್ನೇ । ಸಪತ್ನದಂಭನಮಿತಿ ಸಪತ್ನ-ದಂಭನಮ್ । ವರ್ಷಿಷ್ಠೇ । ಅಧೀತಿ । ನಾಕೇ॥

ಸಮಿತಿ। ತ್ವಮ್ । ಅಗ್ನೇ । ಸೂರ್ಯಸ್ಯ । ವರ್ಚಸಾ । ಅಗಥಾಃ । ಸಮಿತಿ । ಋಷೀಣಾಮ್।

---

**ವರ್ಷಿಷ್ಠೇ** = ಎಲ್ಲಕ್ಕಿಂತಲೂ ಶ್ರೇಷ್ಠವಾದ; **ಅಧಿ ನಾಕೇ** = ಸ್ವರ್ಗದ ವಿಷಯದಲ್ಲಿ; **ಸಪತ್ನದಂಭನಮ್** = ಶತ್ರುಗಳನ್ನು ನಾಶಪಡಿಸುವ; **ತ್ವಾ** = ನಿನ್ನನ್ನು; **ಶತಮ್ ಹಿಮಾಃ** = ನೂರು ಹೇಮಂತರ್ತುಗಳ ಕಾಲ / ನೂರು ಸಂವತ್ಸರಗಳ ಕಾಲ; **ಇಂಧಾನಾಃ** = [ಸಮಿತ್ತುಗಳಿಂದ] ಪ್ರಜ್ವಲಗೊಳಿಸುತ್ತಾ; **ದ್ಯುಮಂತಃ** = ದೀಪ್ತಿಯುಳ್ಳವರಾಗಿ; **ವಯಸ್ವಂತಃ** = ಅನ್ನವುಳ್ಳವರಾಗಿ / ಆಯುಸ್ಸುಳ್ಳವರಾಗಿ; **ಯಶಸ್ವಂತಃ** = ಯಶಸ್ಸುಳ್ಳವರಾಗಿ; **ಸುವೀರಾಸಃ** = ಒಳ್ಳೆಯ ಮಕ್ಕಳುಳ್ಳವರಾಗಿ; **ಸಮ್ ಇಧೀಮಹಿ** = ಪ್ರಜ್ವಲಿಸುವಂತೆ ಮಾಡುತ್ತೇವೆ. [ವರ್ಷಿಷ್ಠೇ ಅಧಿನಾಕೇ=ಸ್ವರ್ಗಸದೃಶವಾದ ಈ ಆಹವನೀಯಸ್ಥಾನದ ಮೇಲೆ ಪ್ರಜ್ವಲಿಸುವಂತೆ ಮಾಡುತ್ತೇವೆ.] ☩ **ಅಗ್ನೇ!** = ಅಗ್ನಿಯೇ! **ತ್ವಮ್** = ನೀನು; **ಸೂರ್ಯಸ್ಯ ವರ್ಚಸಾ** = ಸೂರ್ಯನ ದೀಪ್ತಿಯೊಡನೆ; **ಸಮ್ ಅಗಥಾಃ** = ಸೇರಿದ್ದೀಯೆ; **ಋಷೀಣಾಮ್** = ಋಷಿಗಳ

---

ಪ್ರಜ್ವಲಗೊಳಿಸುತ್ತಾ, ನಾವೂ ನಿನ್ನ ಅನುಗ್ರಹದಿಂದ ದೀಪ್ತಿಮಂತರಾಗೋಣ. ನೀನು ಅನ್ನಕರ್ತನು. ಯಶಸ್ಕರ್ತನು. ನಿನ್ನ ಅನುಗ್ರಹದಿಂದ ನಾವೂ ಅನ್ನವಂತರೂ, ಯಶಸ್ವಿಗಳೂ ಆಗೋಣ. ನೀನು ಯಾರಿಂದಲೂ ತಿರಸ್ಕರಿಸಲು ಅಸಾಧ್ಯನು. ಸ್ವರ್ಗ ಪ್ರಾಪ್ತಿಗೆ ವಿರೋಧಿಗಳಾದವರನ್ನು ನಾಶಪಡಿಸುವವನು. ನಿನ್ನ ಅನುಗ್ರಹದಿಂದ ಒಳ್ಳೆಯ ಮಕ್ಕಳುಳ್ಳವರೂ, ಸ್ವರ್ಗವನ್ನು ಹೊಂದುವರೂ ಆಗೋಣ. ಸ್ವರ್ಗಸದೃಶವಾದ ಈ ಯಜ್ಞಶಾಲೆಯಲ್ಲಿ ನಿನ್ನನ್ನು ಆರಾಧಿಸುತ್ತೇವೆ. ನಿನ್ನ ಅನುಗ್ರಹದಿಂದ ನಾವು ಲೋಕದಲ್ಲಿ ಪ್ರಕಾಶಮಾನರಾಗೋಣ.

ಸ್ತುತೇನ ಸಂ ಪ್ರಿಯೇಣ ಧಾಮ್ನಾ। ತ್ವಮಗ್ನೇ ಸೂರ್ಯವರ್ಚಾ

ಅಸಿ ಸಂ ಮಾಮಾಯುಷಾ ವರ್ಚಸಾ ಪ್ರಜಯಾ ಸೃಜ ॥೫-20॥

[ಆಹುವದ್ಧ್ಯೈ ಪೋಷಗ್ಂ ರಯಿಂ ಮೇ ವರ್ಚಸಾ ಸಪ್ತದಶ ಚ ॥]

---

ಸ್ತುತೇನ । ಸಮಿತಿ । ಪ್ರಿಯೇಣ । ಧಾಮ್ನಾ ॥ ತ್ವಮ್ । ಅಗ್ನೇ । ಸೂರ್ಯವರ್ಚಾ ಇತಿ ಸೂರ್ಯ- ವರ್ಚಾಃ । ಅಸಿ । ಸಮಿತಿ । ಮಾಮ್ । ಆಯುಷಾ । ವರ್ಚಸಾ । ಪ್ರಜಯೇತಿ ಪ್ರ-ಜಯಾ । ಸೃಜ ॥ ೫ ॥

---

| ಮಂತ್ರ | ವಿನಿಯೋಗ |
|---|---|
| ಸಂ ತ್ವಮಗ್ನೇ.... ಸೃಜ ॥ | ಒಂದೊಂದು ಅಗ್ನಿಯಲ್ಲಿಯೂ ನಾಲ್ಕು ಸಮಿತ್ತುಗಳನ್ನು ಹಾಕಿ, ಉಪಸ್ಥಾನವನ್ನು ಮಾಡಲು. |

---

**ಸ್ತುತೇನ** = ಸ್ತೋತ್ರದಿಂದ; **ಸಮ್ ಅಗಥಾಃ** = ಕೂಡಿದ್ದೀಯೆ; **ಪ್ರಿಯೇಣ ಧಾಮ್ನಾ** = ಪ್ರಿಯವಾದ ಆಹವನೀಯಸ್ಥಾನದಿಂದ; **ಸಮ್ ಅಗಥಾಃ** = ಸೇರಿದ್ದೀಯೆ; **ಅಗ್ನೇ** = ಅಗ್ನಿಯೇ! **ತ್ವಮ್** = ನೀನು; **ಸೂರ್ಯವರ್ಚಾಃ ಅಸಿ** = ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನಾಗಿರುವೆ; **ಮಾಮ್** = ನನ್ನನ್ನು; **ಆಯುಷಾ ವರ್ಚಸಾ ಪ್ರಜಯಾ** = ಆಯುಸ್ಸು, ವರ್ಚಸ್ಸು [ಮತ್ತು] ಪ್ರಜೆಗಳೊಡನೆ; **ಸಮ್ ಸೃಜ** = ಕೂಡಿರುವಂತೆ ಮಾಡು.

---

ಅಗ್ನಿಯೇ! ನೀನು ಸೂರ್ಯನ ತೇಜಸ್ಸಿನಿಂದ ಕೂಡಿರುವೆ. ಋಷಿಗಳ ಸ್ತೋತ್ರಗಳಿಂದಲೂ ಕೂಡಿರುವೆ. ಪ್ರಿಯವಾದ ಆಹವನೀಯಪ್ರದೇಶದಿಂದಲೂ ಕೂಡಿರುವೆ. ನೀನು ಸೂರ್ಯನಂತೆ ತೇಜಸ್ವಿಯು. ನನಗೂ ಆಯುಸ್ಸು, ವರ್ಚಸ್ಸು ಪ್ರಜೆ-ಇವೆಲ್ಲವೂ ಒದಗುವಂತೆ ಮಾಡು.

## ವಿನಿಯೋಗ ಸಂಗ್ರಹ

ಪೂರ್ವಸ್ಯಾಗ್ನೇರುಪಸ್ಥಾನಮುಪ ಪ್ರೇತ್ಯನುವಾಕತಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ 16

---



## ॥ ಷಷ್ಠೋऽನುವಾಕಃ ॥

ಸಂ ಪಶ್ಯಾಮಿ ಪ್ರಜಾ ಅಹಮಿಡಪ್ರಜಸೋ ಮಾನವೀಃ । ಸರ್ವಾ ಭವಂತು ನೋ ಗೃಹೇ ॥

---

ಸಮಿತಿ । ಪಶ್ಯಾಮಿ । ಪ್ರಜಾ ಇತಿ ಪ್ರ-ಜಾಃ । ಅಹಮ್ । ಇಡಪ್ರಜಸ ಇತೀಡ-ಪ್ರಜಸಃ। ಮಾನವೀಃ ॥ ಸರ್ವಾಃ । ಭವಂತು । ನಃ । ಗೃಹೇ ॥

---

ಈ ಆರನೆಯ ಅನುವಾಕದಲ್ಲಿ ಗಾರ್ಹಪತ್ಯೋಪಸ್ಥಾನ, ಮತ್ತೆ ಆಹವನೀಯೋಪಸ್ಥಾನ-ಅವುಗಳಿಗೆ ಸಂಬಂಧಿಸಿದ ಇತರ ವಿಷಯಗಳು ಹೇಳಲ್ಪಟ್ಟಿವೆ.

| ಮಂತ್ರ | ವಿನಿಯೋಗ |
|---|---|
| ಸಂ ಪಶ್ಯಾಮಿ... ಗೃಹೇ । | ಪ್ರವಾಸದಿಂದ ಹಿಂದಿರುಗಿದ ಯಜಮಾನನು ಮನೆಯನ್ನು ನೋಡುತ್ತಾ ಹೇಳಲು. |

---

ಅಹಮ್ = ನಾನು; ಇಡಪ್ರಜಸಃ = [ಮನೆಯಲ್ಲಿರುವ] ಗವಾದಿಪಶುರೂಪವಾದ; [ಮತ್ತು] 'ಮಾನವೀಃ = ಪುತ್ರಾದಿಮನುಷ್ಯರೂಪರಾದ; ಪ್ರಜಾಃ = ಪ್ರಜೆಗಳನ್ನು [ಪ್ರಾಣಿಗಳನ್ನು]; ಸಂ ಪಶ್ಯಾಮಿ = ಚೆನ್ನಾಗಿ ನೋಡುತ್ತೇನೆ; ನಃ = ನಮ್ಮ; ಗೃಹೇ = ಮನೆಯಲ್ಲಿ; ಸರ್ವಾಃ = ಆ ಪಶು, ಮನುಷ್ಯಪ್ರಜೆಗಳೆಲ್ಲವೂ [ಸರ್ವ ಸಂಪತ್ತುಗಳೆಲ್ಲವೂ] ಭವಂತು = ಇರಲಿ. [ಇಡಪ್ರಜಸಃ ಮಾನವೀಃ ಪ್ರಜಾಃ = ಮನುವಿನ ಪುತ್ರಿಯಾದ ಇಡಾದೇವಿಯ ಸಂತತಿಯಾದ ಗ್ರಾಮ್ಯಪಶುಗಳು]

---

ನಾನು ಮನೆಯಲ್ಲಿರುವ ಗವಾದಿಗ್ರಾಮ್ಯಪಶುಗಳನ್ನೂ, ಪುತ್ರಮಿತ್ರಾದಿಮನುಷ್ಯ ಪ್ರಜೆಗಳನ್ನೂ ಚೆನ್ನಾಗಿ ನೋಡುತ್ತೇನೆ. ನಮ್ಮ ಮನೆಯಲ್ಲಿ ಆ ಪಶು, ಪುತ್ರಧನಾದಿ ಸಂಪತ್ತೆಲ್ಲವೂ ಚೆನ್ನಾಗಿ ಇರಲಿ.

ಅಂಭ॒ಸ್ಸ್ಥಾಂಭೋ ವೋ॒ ಭಕ್ಷೀ॒ಯ॒ ಮಹಃ ಸ್ಥ॒ ಮಹೋ ವೋ॒

ಭಕ್ಷೀ॒ಯ॒ ಸಹಃ ಸ್ಥ॒ ಸಹೋ ವೋ॒ ಭಕ್ಷೀ॒ಯೋರ್ಜ॒ಃ

---

ಅಂಭಃ । ಸ್ಥ॒ । ಅಂಭಃ । ವ॒ಃ । ಭ॒ಕ್ಷೀ॒ಯ॒ । ಮಹಃ । ಸ್ಥ॒ । ಮಹಃ । ವ॒ಃ । ಭ॒ಕ್ಷೀ॒ಯ॒।

ಸಹಃ । ಸ್ಥ॒ । ಸಹಃ । ವ॒ಃ । ಭ॒ಕ್ಷೀ॒ಯ॒ । ಊರ್ಜಃ ।

---

| ಮಂತ್ರ | ವಿನಿಯೋಗ |
|---|---|
| ಅಂಭ॒ಃ....ಊರ್ಜಂ ವೋ ಭಕ್ಷೀಯ । | ಗೋಷ್ಠ [ಕೊಟ್ಟಿಗೆ]ದ ಉಪಸ್ಥಾನವನ್ನು ಮಾಡಲು. |

---

† [ಎಲೈ ಪಶುಗಳೇ! ನೀವು] **ಅಂಭಃ ಸ್ಥ** =[ಕುಡಿದ ನೀರಿನ ಸಾರಭೂತವಾದ ಕ್ಷೀರವನ್ನು ಕೊಡುವುದರಿಂದ] ಜಲಸ್ವರೂಪರಾಗಿದ್ದೀರಿ. / ಅನ್ನಸ್ವರೂಪರಾಗಿದ್ದೀರಿ; **ವಃ** = ನಿಮ್ಮ; **ಅಂಭಃ** = ನೀರಿನ ಸಾರಭೂತವಾದ ಹಾಲನ್ನು; **ಭಕ್ಷೀಯ** = ಕುಡಿಯೋಣ; **ಮಹಃ ಸ್ಥ** = [ಎಲ್ಲರೂ ಆದರಿಸುವ ಕ್ಷೀರಾದಿಗಳಿಗೆ ಕಾರಣರಾಗಿ] ಮಹಸ್ಸ್ವರೂಪರಾಗಿದ್ದೀರಿ; [ಮಹಃ = ಪೂಜಾ, ಬ್ರಹ್ಮವಾ/ಯಾಗದ ಮೂಲಕವಾಗಿ ಅವಕ್ಕೆ ಕಾರಣರು] **ವಃ** = ನಿಮ್ಮ; ಮಹಃ=ಆದರಣೀಯವಾದ ಕ್ಷೀರಾದಿಗಳನ್ನು; **ಭಕ್ಷೀಯ** = ಭಕ್ಷಿಸೋಣ; **ಸಹಃ ಸ್ಥ**=[ಬಲಕರವಾದ ಘೃತಾದಿಗಳಿಗೆ ಕಾರಣರಾಗಿ] ಸಹಸ್ಸ್ವರೂಪರಾಗಿದ್ದೀರಿ; **ವಃ**=ನಿಮ್ಮ; **ಸಹಃ** = ಬಲಕರವಾದ ಘೃತಾದಿಗಳನ್ನು; **ಭಕ್ಷೀಯ** = ಸವಿಯೋಣ; **ಊರ್ಜಃ ಸ್ಥ** = [ರುಚಿಕರವಾದ ಕ್ಷೀರರೂಪರಸಕ್ಕೆ ಕಾರಣರಾದುದರಿಂದ] ಊರ್ಜಸ್ಸ್ವರೂಪ

---

ಎಲೈ! ಪಶುಗಳೇ! ಕುಡಿದ ನೀರಿನ ಸಾರರೂಪವಾದ, [ಅನ್ನರೂಪವಾದ] ಎಲ್ಲರಿಗೂ ಆದರಣೀಯವಾಗಿರುವ, ಬಲಕಾರಣವಾದ, ರುಚಿಕರವಾದ ಕ್ಷೀರಾದಿಗಳಿಗೆ ಕಾರಣರಾಗಿ ಅಂಭಸ್ಸ್ವರೂಪರಾಗಿ, ಮಹಸ್ಸ್ವರೂಪರಾಗಿ, ಸಹಸ್ಸ್ವರೂಪರಾಗಿ, ಊರ್ಜಸ್ಸ್ವರೂಪರಾಗಿಯೂ ಇರುತ್ತೀರಿ. ನಿಮ್ಮ ಆ ಕ್ಷೀರಾದಿಗಳನ್ನು ನಾವು ಯಾವಾಗಲೂ

ಸ್ಥೋರ್ಜಂ ವೋ ಭಕ್ಷೀಯ ರೇವತೀ ರಮಧ್ವಮಸ್ಮಿ

ನ್ಲೋಕೇಽಸ್ಮಿನ್ಗೋಷ್ಠೇಽಸ್ಮಿನ್ಕ್ಷಯೇಽಸ್ಮಿನ್, ಯೋನಾವಿಹೈವ

---

ಸ್ಥ । ಊರ್ಜಮ್ । ವಃ । ಭಕ್ಷೀಯ। ರೇವತೀಃ । ರಮಧ್ವಮ್। ಅಸ್ಮಿನ್ । ಲೋಕೇ

ಅಸ್ಮಿನ್ । ಗೋಷ್ಠ ಇತಿ ಗೋ-ಸ್ಥೇ । ಅಸ್ಮಿನ್ । ಕ್ಷಯೇ । ಅಸ್ಮಿನ್ । ಯೋನೌ

ಇಹ । ಏವ ।

---

| ಮಂತ್ರ | ವಿನಿಯೋಗ |
| --- | --- |
| ರೇವತೀಃ..... ಭೂಯಾಸ್ತ । | ಅಗ್ನಿಗಳ ಮಧ್ಯದಲ್ಲಿ ನಿಂತು ಜಪಿಸಲು |

---

ರಾಗಿದ್ದೀರಿ; ವಃ = ನಿಮ್ಮ; ಊರ್ಜಮ್ = ರುಚಿಕರವಾದ ಸಿಹಿಯಾದ ಹಾಲನ್ನು ಭಕ್ಷೀಯ = ಕುಡಿಯೋಣ. । ರೇವತೀಃ = ಧನಸಾಧನವಾದ ಪಶುಗಳೇ! ಅಸ್ಮಿನ್ ಲೋಕೇ = ಈ ಭೂಲೋಕದಲ್ಲಿ; ಅಸ್ಮಿನ್ ಗೋಷ್ಠೇ = ಈ ಕೊಟ್ಟಿಗೆಯಲ್ಲಿ; ಅಸ್ಮಿನ್ ಕ್ಷಯೇ = [ನಮ್ಮ] ಈ ಮನೆಯಲ್ಲಿ; ಅಸ್ಮಿನ್ ಯೋನೌ = ಈ ಸ್ಥಾನವಿಶೇಷದಲ್ಲಿ ರಮಧ್ವಮ್ = ಸಂತೋಷವಾಗಿ ಆಟವಾಡಿಕೊಂಡಿರಿ; ಇಹ ಏವ = ಈ ಲೋಕಾದಿಗಳಲ್ಲಿಯೇ [ಇಲ್ಲಿಯೇ]

---

ಸವಿಯುವಂತಾಗಲಿ.

ಎಲೈ! ಪಶುಗಳೇ! ನೀವು ಕ್ಷೀರಾದಿರೂಪವಾದ ಧನವುಳ್ಳ ರೇವತಿಯಾಗಿರುತ್ತೀರಿ. ನೀವು ಈ ಭೂಲೋಕದಲ್ಲಿ, ಈ ಕೊಟ್ಟಿಗೆಯಲ್ಲಿ, ಈ ಮನೆಯಲ್ಲಿ, ಈ ಪ್ರದೇಶ ವಿಶೇಷದಲ್ಲಿ ಯಾವ ತೊಂದರೆಯೂ ಇಲ್ಲದೆ ಸುಖವಾಗಿ ಆಟವಾಡಿಕೊಂಡು ಇರಿ. ನೀವು ಇಲ್ಲಿಯೇ ಇರಿ. ಇಲ್ಲಿಂದ ಹೊರಗೆ ಬಿಟ್ಟು ಹೋಗದಿರಿ.

**ಸ್ತ್ರೇತೋ ಮಾಽಪಗಾತ ಬಹ್ವೀರ್ಮೇ ಭೂಯಾಸ್ತ**

**[ಭೂಯಾಸ್ತ [೧] ಸಗ್ಂಹಿತಾಽಸಿ] ಸಗ್ಂಹಿತಾಽಸಿ**

**ವಿಶ್ವರೂಪೀರಾಮೋ**

---

ಸ್ತ । ಇತಃ । ಮಾ । ಅಪೇತಿ । ಗಾತ । ಬಹ್ವೀಃ । ಮೇ । ಭೂಯಾಸ್ತ । ಸಗ್ಂಹಿತೇತಿ ಸಮ್-ಹಿತಾ । ಅಸಿ । ವಿಶ್ವರೂಪೀರಿತಿ ವಿಶ್ವ-ರೂಪೀಃ । ಏತಿ । ಮಾ ।

---

| ಮಂತ್ರ | ವಿನಿಯೋಗ |
|---|---|
| ಸಗ್ಂಹಿತಾಸಿ... ಶ್ರಯಂತಾಮ್। | ಕರುವನ್ನು ಮುಟ್ಟಲು |

---

ಸ್ತ = ಇರಿ; ಇತಃ = ಇಲ್ಲಿಂದ; ಮಾ ಅಪಗಾತ = ಹೊರಗೆ ಹೊರಟು ಹೋಗಬೇಡಿ; ಮೇ = ನನಗೆ; ಬಹ್ವೀಃ = [ಪುತ್ರಪೌತ್ರಾದಿರೂಪದಿಂದ] ಬಹುಸಂಖ್ಯೆಯುಳ್ಳವರಾಗಿ; ಭೂಯಾಸ್ತ = ವೃದ್ಧಿಹೊಂದಿದವರಾಗಿರಿ; * [ಎಲೈ ಕರುವೇ!] ಸಗ್ಂಹಿತಾ ಅಸಿ = ತಾಯಿಯೊಡನೆ ಕೂಡಿಕೊಂಡವನು/ಕೂಡಿಕೊಂಡವಳು ಆಗಿರುವೆ [ತಾಯಿಯ ವಿಯೋಗ ವನ್ನು ಹೊಂದಬೇಡ]; ವಿಶ್ವರೂಪೀಃ = [ತಾಯಿಯ ಸುತ್ತಲೂ ನೆಗೆದಾಡುವುದರಿಂದ] ಬಹುರೂಪವುಳ್ಳವನಂತೆ/ಹಲವು ರೂಪವುಳ್ಳವನು [ಆಗಿದ್ದೀಯೆ] ಮಾ = ನನ್ನನ್ನು

---

ಕರುಗಳ ವೃದ್ಧಿಯಿಂದ ಅಧಿಕಸಂಖ್ಯೆಯಲ್ಲಿ ವೃದ್ಧಿಹೊಂದಿರಿ. ನನಗೆ ಬಹುಸಂಖ್ಯೆಯಲ್ಲಿ ಪಶುಗಳ ಸಮೃದ್ಧಿಯುಂಟಾಗಲಿ.

ಎಲೈ! ಕರುವೇ ! ನೀನು ತಾಯಿಯೊಡನೆ ಇರುವೆ / ಇರು. ತಾಯಿಯ ಸುತ್ತಲೂ ಪ್ರೀತಿಯಿಂದ ಓಡಾಡುವುದರಿಂದ ಬಹುರೂಪವುಳ್ಳವನಂತೆ ತೋರುತ್ತೀಯೆ/ಬಹುರೂಪ ವುಳ್ಳವನಾಗಿರುವೆ. ನನ್ನನ್ನು ಕ್ಷೀರಾದಿರಸನಿಮಿತ್ತದಿಂದ ಆಶ್ರಯಿಸು. ಗೋಸ್ವಾಮಿಯಂತೆ

-ರ್ಜಾ ವಿಶಾ ಗೌಪತ್ಯೇನಾ ರಾಯಸ್ಪೋಷೇಣ ಸಹಸ್ರಪೋಷಂ

ವಃ ಪುಷ್ಯಾಸಂ ಮಯಿ ವೋ ರಾಯಶ್ಶ್ರಯಂತಾಮ್ ॥

ಉಪ ತ್ವಾಽಗ್ನೇ ದಿವೇದಿವೇ

---

ಊರ್ಜಾ। ವಿಶ। ಏತಿ । ಗೌಪತ್ಯೇನ । ಏತಿ । ರಾಯಃ । ಪೋಷೇಣ । ಸಹಸ್ರಪೋಷಮಿತಿ

ಸಹಸ್ರ-ಪೋಷಮ್ । ವಃ । ಪುಷ್ಯಾಸಮ್ । ಮಯಿ । ವಃ । ರಾಯಃ । ಶ್ರಯಂತಾಮ್॥

ಉಪೇತಿ । ತ್ವಾ । ಅಗ್ನೇ । ದಿವೇದಿವ ಇತಿ ದಿವೇ-ದಿವೇ ।

---

ಮಂತ್ರ ವಿನಿಯೋಗ



ಉಪತ್ವಾಽಗ್ನೇ .... ವಿಮಸ । ಗಾರ್ಹಪತ್ಯೋಪಸ್ಥಾನದಲ್ಲಿ ವಿಹಿತವಾದ ಗಾಯತ್ರೀಛಂದಸ್ಸಿನ ಮಂತ್ರಗಳಲ್ಲಿ ಮೊದಲನೆಯದು.

---

**ಊರ್ಜಾ** = ಕ್ಷೀರಾದಿರಸಗಳಿಂದ; ಆ ಏತ = ಹೊಂದು; **ಗೌಪತ್ಯೇನ** = [ನನ್ನ] ಪಶುಸ್ವಾಮಿತ್ವದ ನಿಮಿತ್ತದಿಂದ; ಆ ವಿಶ = [ನನ್ನನ್ನು] ಆಶ್ರಯಿಸು/ನಾನು ನಿಮ್ಮ ಒಡೆಯನಾಗಿರುವಂತೆ ನನ್ನಲ್ಲಿ ನಡೆದುಕೋ; **ರಾಯಃ ಪೋಷೇಣ** = ಧನಪುಷ್ಟಿಯ ನಿಮಿತ್ತದಿಂದಲೂ; ಆ ವಿಶ = [ನನ್ನನ್ನು] ಆಶ್ರಯಿಸು; [ನಮ್ಮ ಧನವು ವೃದ್ಧಿ ಹೊಂದುವಂತೆ ಮಾಡು] **ವಃ** = ನಿಮ್ಮ; **ಸಹಸ್ರಪೋಷಮ್** = ಸಂಖ್ಯೆಯು ಬಹು ಸಂಖ್ಯೆಯಲ್ಲಿ ವೃದ್ಧಿ ಹೊಂದುವಂತೆ; **ಪುಷ್ಯಾಸಮ್** = [ನಿಮ್ಮನ್ನು] ಸಾಕುವೆನು; **ಮಯಿ** = ನನ್ನಲ್ಲಿ; **ವಃ** = ನಿಮ್ಮ; **ರಾಯಃ** = ಕ್ಷೀರಘೃತಾದಿಧನಗಳು; **ಶ್ರಯಂತಾಮ್** = ಆಶ್ರಯ ಹೊಂದಲಿ. ✢ **ಅಗ್ನೇ** = ಎಲೈ! ಅಗ್ನಿದೇವನೇ! **ತ್ವಾ** = ನಿನ್ನನ್ನು; **ವಯಮ್** = ನಾವು; **ದಿವೇ ದಿವೇ** = ಪ್ರತಿದಿನದಲ್ಲಿಯೂ;

---

ಆಶ್ರಯಿಸು. ಧನವೃದ್ಧಿಯ ನಿಮಿತ್ತದಿಂದ ಆಶ್ರಯಿಸು. ನೀವು ಸಾವಿರಾರು ಸಂಖ್ಯೆಯಲ್ಲಿ ವೃದ್ಧಿ ಹೊಂದುವಂತೆ ಸಾಕುತ್ತೇವೆ. ನಿಮ್ಮ ಕ್ಷೀರಾದಿಧನಗಳು ಯಾವಾಗಲೂ ನನ್ನಲ್ಲಿರಲಿ

**ದೋಷಾವಸ್ತರ್ಧಿಯಾ ವಯಮ್ । ನಮೋ ಭರಂತ ಏಮಸಿ॥**

**ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಮ್ ।**

---

**ದೋಷಾವಸ್ತರಿತಿ ದೋಷಾ-ವಸ್ತಃ । ಧಿಯಾ । ವಯಮ್ ॥ ನಮಃ । ಭರಂತಃ । ಏತಿ ಇಮಸಿ ॥ ರಾಜಂತಮ್ । ಅಧ್ವರಾಣಾಮ್ । ಗೋಪಾಮಿತಿ ಗೋ-ಪಾಮ್ । ಋತಸ್ಯ ದೀದಿವಿಮ್ ॥**

---

| ಮಂತ್ರ | ವಿನಿಯೋಗ |
|---|---|
| **ರಾಜಂತಮಧ್ವರಾಣಾಂ... ಸ್ವೇ ದಮೇ ।** | ಗಾರ್ಹಪತ್ಯೋಪಸ್ಥಾನದ ಎರಡನೆಯ ಮಂತ್ರ. |

---

**ದೋಷಾವಸ್ತಃ** = ರಾತ್ರಿಯಲ್ಲಿಯೂ, ಹಗಲಿನಲ್ಲಿಯೂ; **ಧಿಯಾ** = ಬುದ್ಧಿಯಿಂದ/ಕರ್ಮದಿಂದ; **ನಮಃ ಭರಂತಃ** = ನಮಸ್ಕರಿಸುತ್ತಾ; **ಉಪ ಆ ಇಮಸಿ** = ಸಮೀಪಿಸುತ್ತೇವೆ. ∴ **ಅಧ್ವರಾಣಾಮ್** = ಯಜ್ಞಗಳಿಗೆ; **ರಾಜಂತಮ್** = ರಾಜನಾಗಿರುವ/ಪ್ರಕಾಶಕನಾಗಿರುವ; **ಗೋಪಾಮ್** = [ಗವಾದಿಪಶುಗಳಿಗೆ] ರಕ್ಷಕನಾಗಿರುವ; **ಋತಸ್ಯ** = ಸತ್ಯದಿಂದ/ಯಜ್ಞದಿಂದ; **ದೀದಿವಿಮ್** = ಪ್ರಕಾಶಿಸುತ್ತಿರುವ;

---

ಅಗ್ನಿದೇವನೇ! ನಿನ್ನನ್ನು ನಾವು ಪ್ರತಿನಿತ್ಯವೂ ರಾತ್ರಿಯಲ್ಲಿಯೂ, ಹಗಲಿನಲ್ಲಿಯೂ ಬುದ್ಧಿಪೂರ್ವಕವಾಗಿ ನಮಸ್ಕರಿಸುತ್ತಾ, ನಿನ್ನ ಸಮೀಪದಲ್ಲಿಯೇ ಇರುತ್ತೇವೆ. ಇಂತಹ ನಮ್ಮನ್ನು ಅನುಗ್ರಹಿಸು.

ಅಗ್ನಿಯೇ ! ನೀನು ಯಜ್ಞಗಳಿಗೆ ರಾಜನಾಗಿರುವೆ. ಗೋವುಗಳ ರಕ್ಷಕನಾಗಿರುವೆ. ಸತ್ಯದಿಂದ ಪ್ರಕಾಶಿಸುತ್ತಿರುವೆ.

**ವರ್ಧಮಾನಗ್ಂ ಸ್ವೇ ದಮೇ ॥ ಸ ನಃ ಪಿತೇವ ಸೂನವೇಽಗ್ನೇ**

**ಸೂಪಾಯನೋ ಭವ । ಸಚಸ್ವಾ ನಸ್ಸ್ವಸ್ತಯೇ ॥**

---

ವರ್ಧಮಾನಮ್ । ಸ್ವೇ । ದಮೇ ॥ ಸಃ । ನಃ । ಪಿತಾ । ಇವ । ಸೂನವೇ । ಅಗ್ನೇ।

ಸೂಪಾಯನ ಇತಿ ಸು-ಉಪಾಯನಃ । ಭವ ॥ ಸಚಸ್ವ । ನಃ । ಸ್ವಸ್ತಯೇ ॥

---

| ಮಂತ್ರ | ವಿನಿಯೋಗ |
| --- | --- |
| ಸ ನಃ.... ಸ್ವಸ್ತಯೇ ॥ | ಗಾರ್ಹಪತ್ಯೋಪಸ್ಥಾನದ ಮೂರನೆಯ ಮಂತ್ರ. |

---

**ಸ್ವೇ ದಮೇ** = ನಮ್ಮ ಸ್ವಗೃಹದಲ್ಲಿ; **ವರ್ಧಮಾನಮ್** = [ಹವಿಸ್ಸುಗಳಿಂದ] ವೃದ್ಧಿಹೊಂದುವ ನಿನ್ನನ್ನು [ಸಮೀಪಿಸುತ್ತೇವೆ.] [ಅಧ್ವರಾಣಾಮ್ ಗೋಪಾಮ್ = ಯಜ್ಞಾನಾಮ್ ರಕ್ಷಿತಾರಮ್ = ಯಜ್ಞಗಳನ್ನು ರಕ್ಷಿಸುವ; ಋತಸ್ಯ ಗೋಪಾಮ್ = ಯಜ್ಞಸ್ಯ ಸತ್ಯಸ್ಯ ಚ ರಕ್ಷಿತಾರಮ್ = ಯಜ್ಞ-ಸತ್ಯಗಳನ್ನು ರಕ್ಷಿಸುವ ನಿನ್ನನ್ನು ಸಮೀಪಿಸುತ್ತೇವೆ] ✢ **ಅಗ್ನೇ** = ಗಾರ್ಹಪತ್ಯಾಗ್ನಿಯೇ! **ಸಃ** = ಅಂತಹ [ನೀನು]; **ನಃ** = ನಮಗೆ; **ಸೂನವೇ** = ಮಗನಿಗೆ; **ಪಿತಾ ಇವ** = ತಂದೆಯಂತೆ; **ಸೂಪಾಯನಃ** = ಸುಖವಾಗಿ ಹೊಂದಲು/ಸೇವಿಸಲು ಶಕ್ಯನಾಗಿ/ಒಳ್ಳೆಯ ಉಪಾಯನ [ಪ್ರೀತಿಯಿಂದ ಕೊಡುವ ವಸ್ತು] ಉಳ್ಳವನಾಗಿ; **ಭವ** = ಆಗು; **ನಃ** = ನಮ್ಮ; **ಸ್ವಸ್ತಯೇ** = ಕ್ಷೇಮಕ್ಕಾಗಿ; **ಸಚಸ್ವ** = ಸದಾ ಸನ್ನಿಹಿತನಾಗಿರು.

---

ನಮ್ಮ ಮನೆಯಲ್ಲಿ ಅಗ್ನಿಹೋತ್ರಗೃಹದಲ್ಲಿ ಹವಿಸ್ಸುಗಳಿಂದ ವೃದ್ಧಿ ಹೊಂದುತ್ತಿರುವೆ. ನಿನ್ನನ್ನು ನಮಸ್ಕರಿಸುತ್ತಾ ಸಮೀಪಿಸುತ್ತೇವೆ. ನೀನು ಯಜ್ಞ ಮತ್ತು ಸತ್ಯಗಳ ರಕ್ಷಕನಾಗಿರುವೆ.

ಎಲೈ ಗಾರ್ಹಪತ್ಯಾಗ್ನಿಯೇ! [illegible] ತಂದೆಯು ಮಗನಿಗೆ ಹೇಗೋ ಹಾಗೆ ಸಮೀಪಿಸಲು,

**ಅಗ್ನೇ [ಅಗ್ನೇ (೨) ತ್ವಂ ನೋ] ತ್ವಂ ನೋ ಅಂತಮಃ । ಉತ ತ್ರಾತಾ ಶಿವೋ ಭವ ವರೂಥ್ಯಃ ॥ ತಂ ತ್ವಾ ಶೋಚಿಷ್ಠ ದೀದಿವಃ ।**

---

ಅಗ್ನೇ । ತ್ವಮ್ । ನಃ । ಅಂತಮಃ ॥ ಉತ । ತ್ರಾತಾ । ಶಿವಃ । ಭವ । ವರೂಥ್ಯಃ॥ ತಮ್ । ತ್ವಾ । ಶೋಚಿಷ್ಠ । ದೀದಿವಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ.....ವರೂಥ್ಯಃ । | ಗಾರ್ಹಪತ್ಯೋಪಸ್ಥಾನದಲ್ಲಿ ವಿಹಿತವಾದ ನಾಲ್ಕು ದ್ವಿಪದೆಗಳಲ್ಲಿ ಮೊದಲನೆಯದು. |
| ತಮ್.... ಸಖಿಭ್ಯಃ । | ಗಾರ್ಹಪತ್ಯೋಪಸ್ಥಾನದ ಎರಡನೆಯ ದ್ವಿಪದೆ. |

---

✢ ಅಗ್ನೇ = ಅಗ್ನಿಯೇ ! ತ್ವಮ್ = ನೀನು; ನಃ = ನಮಗೆ; ಅಂತಮಃ = ತೀರ ಹತ್ತಿರದವನು; ಉತ = ಮತ್ತು; ತ್ರಾತಾ = ರಕ್ಷಕನಾಗಿ; ಶಿವಃ = ಮಂಗಳಕರನಾಗಿ; ವರೂಥ್ಯಃ = ಮನೆಯಲ್ಲಿ ಸದಾ ಇರುವವನೂ; ಭವ = ಆಗು; ✢ ಶೋಚಿಷ್ಠ = ಅತ್ಯಂತ ಶುದ್ಧನಾದವನೇ/ಅತ್ಯಂತ ಪ್ರಕಾಶಮಾನನಾದವನೇ! ದೀದಿವಃ = ದೇದೀಪ್ಯಮಾನನೇ/ಜಯವನ್ನು ಬಯಸುವವನೇ! ತಮ್ ತ್ವಾ = ಅಂತಹ ಗುಣಯುಕ್ತನಾದ ನಿನ್ನನ್ನು;

---

ಸೇವಿಸಲು ಸುಲಭನಾಗಿರು. ನಮ್ಮ ಕ್ಷೇಮಕ್ಕಾಗಿ ನಮ್ಮೊಡನೆ ಯಾವಾಗಲೂ ಕೂಡಿಕೊಂಡಿರು. ನಮ್ಮನ್ನು ಬಿಡಬೇಡ.

ಎಲೈ ಗಾರ್ಹಪತ್ಯಾಗ್ನಿಯೇ! ನೀನು ನಮಗೆ ಅತ್ಯಂತ ಸಮೀಪದ ಬಂಧುವಾಗಿರುವೆ. ನಮ್ಮನ್ನು ರಕ್ಷಿಸು. ನಮಗೆ ಸುಖವನ್ನುಂಟುಮಾಡು. ನಮ್ಮ ಮನೆಯಲ್ಲಿ ಯಾವಾಗಲೂ ಇರುವವನಾಗು.

ಎಲೈ! ಗಾರ್ಹಪತ್ಯನೇ! ನೀನು ಅತ್ಯಂತ ಶುದ್ಧನಾಗಿರುವೆ. ಪ್ರಕಾಶಮಾನನಾಗಿ ರುವೆ. ಇಂತಹ ಗುಣಯುಕ್ತನಾದ ನಿನ್ನನ್ನು–ನಿನ್ನ ಸಹೃದಯರಾದ ನಮ್ಮ ಸುಖಕ್ಕಾಗಿ

ಸುಮ್ನಾಯ ನೂನಮೀಮಹೇ ಸಖಿಭ್ಯಃ ॥ ವಸುರಗ್ನಿರ್ವಸು-
ಶ್ರವಾಃ । ಅಚ್ಛಾ ನಕ್ಷಿ ದ್ಯುಮತ್ತಮೋ ರಯಿಂ ದಾಃ ॥

---

ಸುಮ್ನಾಯ । ನೂನಮ್ । ಈ ಮಹೇ । ಸಖಿಭ್ಯ ಇತಿ ಸಖಿ-ಭ್ಯಃ ॥ ವಸುಃ । ಅಗ್ನಿಃ।
ವಸುಶ್ರವಾ ಇತಿ ವಸು-ಶ್ರವಾಃ ॥ ಅಚ್ಛ । ನಕ್ಷಿ । ದ್ಯುಮತ್ತಮ ಇತಿ ದ್ಯುಮತ್-ತಮಃ।
ರಯಿಮ್ । ದಾಃ ॥

---

| ಮಂತ್ರ | ವಿನಿಯೋಗ |
|---|---|
| ವಸುರಗ್ನಿಃ..... ದಾಃ। | ಗಾರ್ಹಪತ್ಯೋಪಸ್ಥಾನದ ಮೂರನೆಯ ದ್ವಿಪದೆ.* |

---

**ಸಖಿಭ್ಯಃ** = ಸ್ನೇಹಿತರಾದ ನಮಗೆ; **ಸುಮ್ನಾಯ** = ಸುಖಕ್ಕಾಗಿ/ಧನಕ್ಕಾಗಿ; **ನೂನಮ್** = ನಿಶ್ಚಯವಾಗಿ; **ಈಮಹೇ** = ಹೊಂದುತ್ತೇವೆ/ಬೇಡುತ್ತೇವೆ; ✢ **ಅಗ್ನಿಃ** = ಈ ಗಾರ್ಹಪತ್ಯಾಗ್ನಿಯು; **ವಸುಃ** = ಧನವಂತನು. **ವಸುಶ್ರವಾಃ** = ವಸು, ರುದ್ರ, ಆದಿತ್ಯಾದಿಗಳಿಂದ ಆದರದಿಂದ ಕೇಳಲ್ಪಡುವವನೂ [ಆಗಿದ್ದಾನೆ.] [ಶ್ರವಣ ಮಾತ್ರದಿಂದಲೇ ವಾಸಸ್ಥಾನವನ್ನು ಕೊಡುವವನಾಗಿದ್ದಾನೆ.] [ಎಲೈ! ಅಗ್ನಿಯೇ!] **ಅಚ್ಛ ನಕ್ಷಿ** = [ನಮಗೆ] ಅಭಿಮುಖನಾಗಿ ಬಾ; **ದ್ಯುಮತ್ತಮಃ** = ಹೆಚ್ಚಾಗಿ ಬೆಳಗುವವನಾದ ನೀನು; **ರಯಿಮ್ ದಾಃ** = ಧನವನ್ನು ಕೊಡು.

---

ನಿಶ್ಚಯವಾಗಿಯೂ–ಹೊಂದುತ್ತೇವೆ. ನಿನ್ನನ್ನು ಪ್ರಾರ್ಥಿಸುತ್ತೇವೆ.

ಈ ಗಾರ್ಹಪತ್ಯಾಗ್ನಿಯು ಧನವಂತನಾಗಿದ್ದಾನೆ. ವಸುವೇ ಮೊದಲಾದ ದೇವತೆಗಳಿಂದ ಆದರದಿಂದ ಕೇಳಲ್ಪಡುವವನಾಗಿದ್ದಾನೆ. ಓ! ಅಗ್ನಿಯೇ! ನಮ್ಮ ಎದುರಾಗಿ ಬಾ. ದೇದೀಪ್ಯಮಾನನಾದ ನೀನು ನಮಗೆ ಧನವನ್ನು ಕೊಡು.

---

*'**ಸ ನೋ ಬೋಧಿ.....**' ಎಂಬುದು ನಾಲ್ಕನೆಯ ಮಂತ್ರ. ಇದು ಶಾಖಾಂತರದ ಮಂತ್ರ.
**[ಮೈ. ಸಂ. 1.5.3.]**

ಊರ್ಜಾ ವಃ ಪಶ್ಯಾಮ್ಯೂರ್ಜಾ ಮಾ ಪಶ್ಯತ ರಾಯಸ್ಪೋಷೇಣ ವಃ ಪಶ್ಯಾಮಿ ರಾಯಸ್ಪೋಷೇಣ ಮಾ ಪಶ್ಯತೇಡಾಃ

---

ಊರ್ಜಾ । ವಃ । ಪಶ್ಯಾಮಿ । ಊರ್ಜಾ । ಮಾ । ಪಶ್ಯತ । ರಾಯಃ । ಪೋಷೇಣ। ವಃ । ಪಶ್ಯಾಮಿ । ರಾಯಃ । ಪೋಷೇಣ । ಮಾ । ಪಶ್ಯತ । ಇಡಾಃ ।

---

| ಮಂತ್ರ | ವಿನಿಯೋಗ |
|---|---|
| ಊರ್ಜಾ....ಶ್ರಯಂತಾಮ್ । | ಮನೆಯನ್ನು ಅಥವಾ ಪಶುಗಳನ್ನು ನೋಡಲು ಅವುಗಳ ಉಪಸ್ಥಾನಕ್ಕಾಗಿ |

---

✣ [ಎಲೈ! ಮನೆಯಲ್ಲಿರುವ ಪಶುಗಳೇ!] **ಊರ್ಜಾ** = ಕ್ಷೀರಾದಿರಸ ನಿಮಿತ್ತದಿಂದ/ಕ್ಷೀರಾದಿರಸದಿಂದ ಕೂಡಿದ; **ವಃ** = ನಿಮ್ಮನ್ನು; **ಪಶ್ಯಾಮಿ** = ನೋಡುತ್ತೇನೆ; [ನೀವು] **ಊರ್ಜಾ** = ರಸನಿಮಿತ್ತದಿಂದ/ಸ್ನೇಹದಿಂದ ಅಥವಾ ಬಲದಿಂದ ಕೂಡಿರುವ; **ಮಾ** = ನನ್ನನ್ನು; **ಪಶ್ಯತ** = ನೋಡಿರಿ; [ನಾನು] **ರಾಯಃ ಪೋಷೇಣ** = ಧನವೃದ್ಧಿಯ ನಿಮಿತ್ತದಿಂದ/ತೃಣಾದಿವೃದ್ಧಿಯಿಂದ/ಪುತ್ರಾದಿವೃದ್ಧಿಯಿಂದ; **ವಃ** = ನಿಮ್ಮನ್ನು; **ಪಶ್ಯಾಮಿ** = ನೋಡುತ್ತೇನೆ; [ನೀವು] **ರಾಯಃ ಪೋಷೇಣ** = ಧನ-ಹಿರಣ್ಯಾದಿವೃದ್ಧಿನಿಮಿತ್ತದಿಂದ; **ಮಾ** = ನನ್ನನ್ನು; **ಪಶ್ಯತ** = ನೋಡಿರಿ; **ಇಡಾಃ** = ಅನ್ನಕಾರಣರಾದ ಗೋವುಗಳೇ!

---

ಎಲೈ ಮನೆಯಲ್ಲಿರುವ ಪಶುಗಳೇ! ನಾನು ಕ್ಷೀರಾದಿರಸನಿಮಿತ್ತದಿಂದ ನಿಮ್ಮನ್ನು ನೋಡುತ್ತೇನೆ. ನೀವೂ ರಸನಿಮಿತ್ತದಿಂದ ನನ್ನನ್ನು ನೋಡಿ. ಧನಸಮೃದ್ಧಿನಿಮಿತ್ತದಿಂದ / ತೃಣಸಮೃದ್ಧಿನಿಮಿತ್ತದಿಂದ ನಿಮ್ಮನ್ನು ನೋಡುತ್ತೇನೆ. ನೀವೂ ಧನನಿಮಿತ್ತದಿಂದ ನನ್ನನ್ನು ನೋಡಿರಿ. ನೀವು ಅನ್ನವನ್ನು ಕೊಡುವ ಇಡೆ[ಗೋವು]ಯಾಗಿದ್ದೀರಿ.

ಸ್ಥ ಮಧುಕೃತಸ್ಸ್ಯೋನಾ ಮಾಽಽವಿಶತೇರಾ ಮದಃ ॥

ಸಹಸ್ರಪೋಷಂ ವಃ ಪುಷ್ಯಾಸಂ[ಪುಷ್ಯಾಸಮ್ (೩) ಮಯಿ]

ಮಯಿ ವೋ ರಾಯಶ್ಶ್ರಯಂತಾಮ್ ॥ ತತ್ಸವಿತುರ್ವರೇಣ್ಯಂ

---

ಸ್ಥ । ಮಧುಕೃತ ಇತಿ ಮಧು-ಕೃತಃ । ಸ್ಯೋನಾಃ । ಮಾ । ಏತಿ । ವಿಶತ । ಇರಾಃ । ಮದಃ ॥ ಸಹಸ್ರಪೋಷಮಿತಿ ಸಹಸ್ರ-ಪೋಷಮ್ । ವಃ । ಪುಷ್ಯಾಸಮ್ । ಮಯಿ । ವಃ । ರಾಯಃ । ಶ್ರಯಂತಾಮ್ ॥ ತತ್ । ಸವಿತುಃ । ವರೇಣ್ಯಮ್।

---

| ಮಂತ್ರ | ವಿನಿಯೋಗ |
|---|---|
| ತತ್ಸವಿತುಃ...ಪ್ರಚೋದಯಾತ್ ॥ | ಆಹವನೀಯೋಪಸ್ಥಾನದ ಮೊದಲನೆಯ ಮಂತ್ರ. |



---

**ಮಧುಕೃತಃ** = ಮಧುರವಾದ /ದೇವತೆಗಳ ಮಧುವಾದ ಘೃತಕ್ಕೆ ಕಾರಣರಾಗಿ; **ಸ್ಥ** = ಇದ್ದೀರಿ; **ಸ್ಯೋನಾಃ** = ಸುಖವನ್ನು ಉಂಟುಮಾಡುವವರಾಗಿಯೂ; **ಇರಾಃ** = ಅನ್ನವನ್ನು ಕೊಡುವವರಾಗಿಯೂ; **ಮದಃ** = [ದೇವತೆಗಳಿಗೂ, ಮನುಷ್ಯರಿಗೂ] ಸಂತೋಷವನ್ನುಂಟುಮಾಡುವವರಾಗಿಯೂ; **ಮಾ** = ನನ್ನನ್ನು; **ಆ ವಿಶತ** = ಆಶ್ರಯಿಸಿರಿ; **ವಃ** = ನಿಮ್ಮನ್ನು; **ಸಹಸ್ರಪೋಷಮ್** = ಸಹಸ್ರಸಂಖ್ಯೆಯಲ್ಲಿ ವೃದ್ಧಿಹೊಂದುವಂತೆ; **ಪುಷ್ಯಾಸಮ್** = ಸಾಕುತ್ತೇನೆ; **ಮಯಿ** = ನನ್ನಲ್ಲಿ; **ವಃ** = ನಿಮ್ಮ; **ರಾಯಃ** = ಕ್ಷೀರಾದಿಧನಗಳು; **ಶ್ರಯಂತಾಮ್** = ಸ್ಥಿರವಾಗಿರಲಿ.

---

ಮಧುರವಾದ ತುಪ್ಪವನ್ನು ಕೊಡುತ್ತೀರಿ. ಅನ್ನರೂಪವಾದ ಕ್ಷೀರಾದಿಗಳನ್ನು ಕೊಡುತ್ತೀರಿ. ದೇವತೆಗಳಿಗೂ, ಮನುಷ್ಯರಿಗೂ ಸಂತೋಷವನ್ನುಂಟುಮಾಡುತ್ತೀರಿ. ನೀವು ನನಗೆ ಸುಖವನ್ನು ಕೊಡುವವರಾಗಿ ನನ್ನನ್ನು ಆಶ್ರಯಿಸಿರಿ. ನಿಮ್ಮನ್ನು ಅಧಿಕಸಂಖ್ಯೆಯಲ್ಲಿ ವೃದ್ಧಿಹೊಂದುವಂತೆ ಪೋಷಿಸುತ್ತೇನೆ. ನಿಮ್ಮ ಕ್ಷೀರಾದಿಧನಗಳು ನಿಮ್ಮನ್ನು ಆಶ್ರಯಿಸಿರಲಿ.

**ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಸೋಮಾನಗ್ಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ।**

ಭರ್ಗಃ । ದೇವಸ್ಯ । ಧೀಮಹಿ ॥ ಧಿಯಃ । ಯಃ । ನಃ । ಪ್ರಚೋದಯಾದಿತಿ ಪ್ರ-ಚೋದಯಾತ್ ॥ ಸೋಮಾನಮ್ । ಸ್ವರಣಮ್। ಕೃಣುಹಿ । ಬ್ರಹ್ಮಣಃ । ಪತೇ ॥

| ಮಂತ್ರ | ವಿನಿಯೋಗ |
|---|---|
| ಸೋಮಾನಮ್...ಔಶಿಜಮ್ ॥ | ಆಹವನೀಯೋಪಸ್ಥಾನದ ಎರಡನೆಯ ಮಂತ್ರ. |

✣ **ಯಃ** = ಯಾವ ಸವಿತೃದೇವನು; **ನಃ** = ನಮ್ಮ; **ಧಿಯಃ** = ಬುದ್ಧಿಗಳನ್ನು; **ಪ್ರಚೋದಯಾತ್** = ಪ್ರೇರಿಸುತ್ತಾನೆಯೋ; **ಸವಿತುಃ** =[ಆ] ಸವಿತೃದೇವನ; **ವರೇಣ್ಯಮ್** = ಪ್ರಾರ್ಥನೀಯವಾದ; **ತತ್ ಭರ್ಗಃ** = ಆ ತೇಜಸ್ಸನ್ನು; **ಧೀಮಹಿ** = ಧ್ಯಾನಿಸೋಣ. [ತತ್=ತಸ್ಯ=ಆ ಸವಿತೃದೇವನ; ವರೇಣ್ಯಮ್ ಭರ್ಗಃ... ಧೀಮಹಿ] [ಸೂರ್ಯರೂಪದಿಂದಿರುವ ಪರಮೇಶ್ವರನ ತೇಜಸ್ಸನ್ನು ಧ್ಯಾನಿಸೋಣ/ಧರಿಸೋಣ] ✣ **ಬ್ರಹ್ಮಣಃ ಪತೇ**= ಬೃಹತ್ತರವಾದ ಕರ್ಮಗಳ ಒಡೆಯನಾದ ಅಗ್ನಿಯೇ! [ನನ್ನನ್ನು] **ಯಃ** = ಯಾವ ನೀನು; ***ಔಶಿಜಮ್** = ಉಶಿಜನ ಮಗನಾದ; ***ಕಕ್ಷೀವಂತಮ್** = ಕಕ್ಷೀವಂತನೆಂಬ ಮುನಿಯನ್ನು [ಕರ್ಮಪ್ರವರ್ತಕನನ್ನಾಗಿ ಮಾಡಿದೆಯೋ] [ಅಂತಹ ನೀನು] **ಸೋಮಾನಮ್** = ಸೋಮಯಾಗಗಳ; **ಸ್ವರಣಮ್** = ಉಪದೇಶಕನನ್ನಾಗಿ/ ಕರ್ತೃವನ್ನಾಗಿ; **ಕೃಣುಹಿ** = ಮಾಡು; [ಸೋಮಾನಮ್ = ಸೋಮಾಭಿಷವವನ್ನು ಮಾಡಿದವನನ್ನಾಗಿಯೂ;

---

ಯಾವ ಸವಿತೃದೇವನು ನಮ್ಮ ಬುದ್ಧಿಗಳನ್ನೂ/ಕರ್ಮಗಳನ್ನೂ ಪ್ರೇರಿಸುತ್ತಾನೆಯೋ, ಆ ಸವಿತೃದೇವನ— ಎಲ್ಲರಿಂದಲೂ ಕೋರಲ್ಪಡುವ ಆ ಶ್ರೇಷ್ಠವಾದ — ತೇಜಸ್ಸನ್ನು ಧ್ಯಾನಿಸೋಣ. [ಆ ಸವಿತೃದೇವನು ಜ್ಞಾನ-ಪ್ರಕಾಶಗಳ ಮೂಲಕ ಸರ್ವರಿಗೂ ಉಪಕಾರವನ್ನು ಮಾಡುತ್ತಾನೆ. ಶ್ರೇಯಸ್ಸನ್ನು ಅಪೇಕ್ಷಿಸುವವರು ಅವನನ್ನು ಭಜಿಸುತ್ತಾರೆ. ಅಂತಹ ಸೂರ್ಯರೂಪದಿಂದ ಇರುವ ಪರಮೇಶ್ವರನಿಗೆ ಸಂಬಂಧಿಸಿದ ತೇಜಸ್ಸನ್ನು ಧ್ಯಾನಿಸೋಣ.]

---

** **'ಕಕ್ಷೀವಾಗ್ಂ ಔಶಿಜೋ.... ಪ್ರಜಾಕಾಮಾ ಅಚನ್ವತ' [ತೈ. ಸಂ. 5.6.5.] ಎಂಬ ಶ್ರುತಿಯೂ ಇದೆ.**

**ಕಕ್ಷೀವಂತಂ ಯ ಔಶಿಜಮ್ ॥ ಕದಾ ಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ ॥ ಉಪೋಪೇನ್ನು ಮಘವನ್ಭೂಯ ಇನ್ನು**

---

ಕಕ್ಷೀವಂತಮಿತಿ ಕಕ್ಷೀ-ವಂತಮ್ । ಯಃ । ಔಶಿಜಮ್ ॥ ಕದಾ । ಚನ । ಸ್ತರೀಃ । ಅಸಿ ।ನ । ಇಂದ್ರ । ಸಶ್ಚಸಿ । ದಾಶುಷೇ ॥ ಉಪೋಪೇತ್ಯುಪ-ಉಪ । ಇತ್। ನು । ಮಘವನ್ನಿತಿ ಮಘ-ವನ್ । ಭೂಯಃ । ಇತ್ । ನು ।

---

| ಮಂತ್ರ | ವಿನಿಯೋಗ |
|---|---|
| ಕದಾ ಚನ.... ಪೃಚ್ಯತೇ॥ | *ಆಹವನೀಯೋಪಸ್ಥಾನವನ್ನು ಮಾಡಲು. ರಾತ್ರಿಯ ಉಪಸ್ಥಾನವನ್ನು ಮಾಡಲು [ಭ.ಭಾ.] |

---

ಸ್ವರಣಮ್= ಸೋಮಯಾಜಿಯೆಂದು ಹೇಳಲ್ಪಡುವವನನ್ನಾಗಿಯೂ ಮಾಡು] [ಕಕ್ಷೀ ವಂತಮ್=ಹಸ್ತಿ ಮುಂತಾದವುಗಳನ್ನುಳ್ಳವನನ್ನಾಗಿ, ಔಶಿಜಮ್ = ಅತಿಶಯಕಾಂತಿ ಯುಳ್ಳವನನ್ನಾಗಿ ಮಾಡು] ; ಇಂದ್ರ = ಪರಮೈಶ್ವರ್ಯ ಯುಕ್ತನಾದ* ಅಗ್ನಿಯೇ! [ನೀನು]; ಕದಾ ಚನ=ಯಾವಾಗಲೂ; ಸ್ತರೀಃ ನ ಅಸಿ = ಹಿಂಸಕನಾಗುವುದಿಲ್ಲ; ದಾಶುಷೇ = [ಹವಿಸ್ಸನ್ನು ಕೊಟ್ಟ] ಯಜಮಾನನಿಗೆ, ಉಪೋಪ ಇತ್ ನು = ಅತ್ಯಂತ ಸಮೀಪ ದಲ್ಲಿಯೇ; ಸಶ್ಚಸಿ = ಸೇರಿಕೊಂಡಿರುವೆ; ಮಘವನ್ = ಧನವಂತನಾದ ಇಂದ್ರಸದೃಶನಾದ ಅಗ್ನಿಯೇ! ಭೂಯಃ ಇತ್ ನು = ಮತ್ತೆಮತ್ತೆಯೂ;

---

ಎಲೈ! ಅಗ್ನಿದೇವನೇ ! ನೀನು ದೊಡ್ಡ ದೊಡ್ಡ ಕರ್ಮಗಳಿಗೆ ಒಡೆಯನು. ನೀನು ಉಶಿಜನ ಮಗನಾದ ಕಕ್ಷೀವಂತನನ್ನು ಕರ್ಮಪ್ರವರ್ತಕನಾದ ಋಷಿಯನ್ನಾಗಿ ಮಾಡಿ ದ್ದೀಯೆ. ನೀನು ನನ್ನನ್ನು ಸೋಮಯಾಗಗಳ ಉಪದೇಶಕನನ್ನಾಗಿ/ಸೋಮಯಾಜಿ ಯನ್ನಾಗಿ

---

* 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬ ಶ್ರುತಿಯನ್ನು ಅನುಸರಿಸಿ ಈ ಅರ್ಥ.
೧) 'ಮಿತ್ರಸ್ಯ'... ತೈ. ಸಂ. 3.4.11. ೨) 'ಪ್ರಸ ಮಿತ್ರ'... ತೈ. ಸಂ. 3.4.11.
೩) ಕದಾ ಚನ ಪ್ರಯುಚ್ಛಸಿ... । ತೈ.ಸಂ. 1.4.22. ಈ ಮಂತ್ರಗಳನ್ನೂ ಉಪಸ್ಥಾನಕ್ಕೆ ವಿನಿಯೋಗಿಸಿರುತ್ತಾರೆ. ಆಪ ಶ್ರೌ... 6.18.1

ತೇ ದಾನಂ ದೇವಸ್ಯ ಪೃಚ್ಯತೇ ॥ ಪರಿ ತ್ವಾಽಗ್ನೇ ಪುರಂ ವಯಂ

ವಿಪ್ರಗ್ಂ ಸಹಸ್ಯ ಧೀಮಹಿ । ಧೃಷದ್ವರ್ಣಂ ದಿವೇದಿವೇ

---

ತೇ । ದಾನಮ್। ದೇವಸ್ಯ। ಪೃಚ್ಯತೇ ॥ ಪರೀತಿ । ತ್ವಾ । ಅಗ್ನೇ। ಪುರಮ್। ವಯಮ್।

ವಿಪ್ರಮ್ । ಸಹಸ್ಯ । ಧೀಮಹಿ ॥ ಧೃಷದ್ವರ್ಣಮಿತಿ ಧೃಷತ್ - ವರ್ಣಮ್ । ದಿವೇ

ದಿವ ಇತಿ ದಿವೇ - ದಿವೇ ।

---

ಮಂತ್ರ | ವಿನಿಯೋಗ
---|---
ಪರಿ ತ್ವಾಗ್ನೇ......ಭಂಗುರಾವತಃ ॥ | ಆಹವನೀಯೋಪಸ್ಥಾನ ಮಾಡಲು<br>ಗಾರ್ಹಪತ್ಯೋಪಸ್ಥಾನ ಮಾಡಲು [ಭ.ಭಾ.]

---

**ದೇವಸ್ಯ ತೇ** = ದೇವನಾದ / ಕಾಂತಿಯುಕ್ತವಾದ ನಿನ್ನ, **ದಾನಮ್** = ದಾನವು; **ಪೃಚ್ಯತೇ** = [ನಮ್ಮಲ್ಲಿ] ಸೇರಿಯುತ್ತದೆ, **ಹೇ ಸಹಸ್ಯ** = ಓ! ಬಲವಂತನೇ! **ಅಗ್ನೇ** = ಅಗ್ನಿಯೇ! **ವಯಮ್** = ನಾವು; **ಪುರಮ್** = [ನಮ್ಮ ಇಷ್ಟಾರ್ಥಗಳನ್ನು] ಪೂರೈಸುವ; **ವಿಪ್ರಮ್** = ಬ್ರಾಹ್ಮಣಾಭಿಮಾನಿಯಾದ [ಮೇಧಾವಿ ಯಾದ] **ಧೃಷದ್ವರ್ಣಮ್** = ಆಕಾರದಿಂದಲೇ ಶತ್ರುಗಳನ್ನು ಸೋಲಿಸುವಂತಹ ಆಕಾರವುಳ್ಳ; **ಭಂಗುರಾವತಃ** = ಬೇರೆಯವರ ನಾಶವನ್ನು ಮಾಡುವ ಸ್ವಭಾವವುಳ್ಳ ರಾಕ್ಷಸರನ್ನು; **ಭೇತ್ತಾರಮ್** = ಭೇದಿಸುವ; **ತ್ವಾ** = ನಿನ್ನನ್ನು; **ದಿವೇ ದಿವೇ** = ಪ್ರತಿದಿನವೂ; **ಪರಿ ಧೀಮಹಿ** = ಸುತ್ತಲೂ ಧರಿಸುತ್ತೇವೆ/ ಧರಿಸೋಣ.

---

ಮಾಡು. [ನನ್ನನ್ನು ಹಸ್ತಿ ಮುಂತಾದವುಗಳನ್ನು ಹೊಂದಿದವನನ್ನಾಗಿಯೂ, ಕಾಂತಿಯುಕ್ತನನ್ನಾಗಿಯೂ ಮಾಡು.]

ಎಲೈ! ಪರಮೈಶ್ವರ್ಯಯುಕ್ತವಾದ ಅಗ್ನಿದೇವನೇ! ನೀನು ಯಾವಾಗಲೂ ಹಿಂಸೆ ಮಾಡುವವನಲ್ಲ. ಪ್ರತಿಯಾಗಿ-ಹವಿಸ್ಸನ್ನು ಸಮರ್ಪಿಸುವ ಯಜಮಾನನಿಗೆ ಫಲವನ್ನು ನೀಡಲು-ಅತ್ಯಂತ ಸಮೀಪದಲ್ಲಿಯೇ ಇರುವೆ. ಎಲೈ! ಧನವಂತನಾದ ಇಂದ್ರಸದೃಶ

ಭೇತ್ತಾರಂ ಭಂಗುರಾವತಃ ॥ ಅಗ್ನೇ ಗೃಹಪತೇ ಸುಗೃಹಪತಿರಹಂ ತ್ವಯಾ ಗೃಹಪತಿನಾ ಭೂಯಾಸಗ್‌ಂ ಸುಗೃಹಪತಿರ್ಮಯಾ

---

ಭೇತ್ತಾರಮ್ । ಭಂಗುರಾವತ ಇತಿ ಭಂಗುರ-ವತಃ ॥ ಅಗ್ನೇ । ಗೃಹಪತ ಇತಿ ಗೃಹ-ಪತೇ । ಸುಗೃಹಪತಿರಿತಿ ಸು-ಗೃಹಪತಿಃ । ಅಹಮ್ । ತ್ವಯಾ । ಗೃಹಪತಿನೇತಿ ಗೃಹ-ಪತಿನಾ । ಭೂಯಾಸಮ್ । ಸುಗೃಹಪತಿರಿತಿ ಸು-ಗೃಹಪತಿಃ । ಮಯಾ ।

---



| ಮಂತ್ರ | ವಿನಿಯೋಗ |
|---|---|
| ಅಗ್ನೇ ಗೃಹಪತೇ... ಜ್ಯೋತಿಷ್ಮತೀಮ್ । | ಗಾರ್ಹಪತ್ಯೋಪಸ್ಥಾನದಲ್ಲಿ *ಅಗ್ನಿಪಾವಮಾನಿಗಳಾದ ಋಕ್ಕುಗಳೊಡನೆ ಹೇಳಲು |

---

☩ ಗೃಹಪತೇ = ಗೃಹಪಾಲಕನೇ! ಅಗ್ನೇ = ಅಗ್ನಿಯೇ! ಅಹಮ್ = ನಾನು ; ಗೃಹಪತಿನಾ = ಗೃಹಸ್ವಾಮಿಯಾದ/ಗಾರ್ಹಪತ್ಯನಾದ; ತ್ವಯಾ = ನಿನ್ನಿಂದ/ನಿನ್ನ ಅನುಗ್ರಹದಿಂದ; ಶತಂ ಹಿಮಾಃ = ನೂರು ಹೇಮಂತ ಋತುಗಳ [ಸಂವತ್ಸರಗಳ] ಕಾಲ; ಸುಗೃಹಪತಿಃ = ಒಳ್ಳೆಯ ಗೃಹಪತಿ/ಮನೆಯ ಒಡೆಯನಾಗಿ; ಭೂಯಾಸಮ್ = ಆಗುವೆನು.

---

ನಾದ ಅಗ್ನಿಯೇ! ಮತ್ತೆ ಮತ್ತೆ ನೀನು ಕೊಡುವ ದಾನವು ನಮ್ಮನ್ನು ಸೇರುತ್ತದೆ. ಅಂತಹ ದಾನಶೀಲನು ನೀನು. [ಇಲ್ಲಿ ರಾತ್ರಿಯನ್ನು ಇಂದ್ರನಂತೆ ಸ್ತುತಿಸುತ್ತಾರೆ.]

ಅಗ್ನಿಯೇ! ನೀನು ಬಲವಂತನೂ, ಆರಾಧಕರ ಇಷ್ಟಾರ್ಥಗಳನ್ನು ಪೂರೈಸಿಕೊಡುವವನೂ, ಬ್ರಾಹ್ಮಣಾಭಿಮಾನಿಯೂ, ಮೇಧಾವಿಯೂ, ಆಕಾರಮಾತ್ರದಿಂದಲೇ ಶತ್ರುಗಳನ್ನು ನಿಗ್ರಹಿಸುವಂತಹ ಆಕಾರವುಳ್ಳವನು/ ವರ್ಣವುಳ್ಳವನು. ಬೇರೆಯವರನ್ನು

---

*೧) ಅಗ್ನ ಆಯೂಗ್‌ಂಷಿ... ದುಚ್ಛುನಾಮ್ ।

೨) ಅಗ್ನೇ ಪವಸ್ವ.... ಮಯಿ। ಇವು ಅಗ್ನಿಪಾವಮಾನಿಋಕ್‌ಗಳು.

**ತ್ವಂ ಗೃಹಪತಿನಾ ಭೂಯಾಶ್ಶತಗ್ಂ ಹಿಮಾಸ್ತಾಮಾಶಿಷಮಾ**

**ಶಾಸೇ ತಂತವೇ ಜ್ಯೋತಿಷ್ಮತೀಂ ತಾಮಾಶಿಷಮಾ**

**ಶಾಸೇಽಮುಷ್ಮೈ ಜ್ಯೋತಿಷ್ಮತೀಮ್ ॥ ೬-24 ॥**

**[ಭೂಯಾಸ್ತ ಸ್ವಸ್ತಯೇಽಗ್ನೇ ಪುಷ್ಯಾಸಂ ಧೃಷದ್ವರ್ಣಮೇಕಾನ್ನ ತ್ರಿಗ್ಂಶಚ್ಚ।]**

---

**ತ್ವಮ್ । ಗೃಹಪತಿನೇತಿ ಗೃಹ-ಪತಿನಾ । ಭೂಯಾಃ । ಶತಮ್ । ಹಿಮಾಃ । ತಾಮ್।**

**ಆಶಿಷಮಿತ್ಯಾ-ಶಿಷಮ್ । ಏತಿ । ಶಾಸೇ । ತಂತವೇ । ಜ್ಯೋತಿಷ್ಮತೀಮ್ । ತಾಮ್।**

**ಆಶಿಷಮಿತ್ಯಾ-ಶಿಷಮ್ । ಏತಿ । ಶಾಸೇ । ಅಮುಷ್ಮೈ । ಜ್ಯೋತಿಷ್ಮತೀಮ್ ॥ ೬ ॥**

---

**ತ್ವಮ್** = ನೀನು ; **ಗೃಹಪತಿನಾ** ಮಯಾ = ಗೃಹಸ್ವಾಮಿಯಾದ ನನ್ನಿಂದ; **ಶತಂ ಹಿಮಾಃ** = ನೂರು ಸಂವತ್ಸರಗಳ ಕಾಲ; **ಸುಗೃಹಪತಿಃ ಭೂಯಾಃ** = ಒಳ್ಳೆಯ ಗೃಹಪತಿಯಾಗು; **ತಂತವೇ** = ಹುಟ್ಟುವ ಸಂತಾನಕ್ಕಾಗಿ; **ಜ್ಯೋತಿಷ್ಮತೀಮ್** = ಬ್ರಹ್ಮವರ್ಚಸಾದಿಯುಕ್ತನಾದ; **ತಾಮ್ ಆಶಿಷಮ್*** = ಆ ಶುಭಾಶಂಸನೆಯನ್ನು; **ಆ ಶಾಸೇ** = ಹಾರೈಸುತ್ತೇನೆ. **ಅಮುಷ್ಮೈ** = [ದೇವದತ್ತನೇ ಮೊದಲಾದ ಹೆಸರುಳ್ಳ] ಈ ಮಗನಿಗೆ; **ಜ್ಯೋತಿಷ್ಮತೀಮ್** = ಬ್ರಹ್ಮವರ್ಚಸಾದಿಯುಕ್ತವಾದ; **ತಾಮ್ ಆಶಿಷಮ್** = ಆ ಶುಭಾಶಂಸನೆಯನ್ನು; **ಆ ಶಾಸೇ** = ಹಾರೈಸುತ್ತೇನೆ.

---

ನಾಶಪಡಿಸುವ ಸ್ವಭಾವವುಳ್ಳ ರಾಕ್ಷಸಾದಿಗಳನ್ನು ಧ್ವಂಸ ಮಾಡತಕ್ಕವನು. ನಿನ್ನನ್ನು ನಾವು ಪ್ರತಿದಿನವೂ ಸುತ್ತಲೂ ಧರಿಸೋಣ.

ಅಗ್ನಿಯೇ! ನೀನು ಗೃಹಸ್ವಾಮಿ; ಆದರಿಂದಲೇ ಗಾರ್ಹಪತ್ಯನಾಗಿರುವೆ.

---

*ಅನಾಗತಾಭಿಪ್ರೇತಾರ್ಥಪ್ರಾರ್ಥನಮ್ ಆಶೀಃ = ಮುಂದೆ ಬರಬೇಕಾದ ಇಷ್ಟಾರ್ಥದ ಆಶಂಸನೆಯೇ ಆಶೀಃ । [ಭ. ಭಾ.]

ಗೃಹಪತಿಯಾದ ನಿನ್ನ ಅನುಗ್ರಹದಿಂದ ನಾನು ನೂರು ಸಂವತ್ಸರಗಳ ಕಾಲ ಒಳ್ಳೆಯ ಗೃಹಪತಿಯಾಗಿ ಆಗುವೆನು. ಗೃಹಪತಿಯಾದ ನನ್ನಿಂದ ಸರ್ವಪ್ರಕಾರಗಳಿಂದಲೂ ಪೂಜಿತನಾದ ನೀನೂ ಒಳ್ಳೆಯ ಗೃಹಪತಿಯಾಗು. ಮುಂದೆ ಹುಟ್ಟುವ ಪುತ್ರನಿಗೆ ಬ್ರಹ್ಮವರ್ಚಸಾದಿಯುಕ್ತವಾದ ಆಯುರಾದಿಶುಭಾಶಂಸನೆಯನ್ನು ಮಾಡುತ್ತೇನೆ. ಹುಟ್ಟಿರುವ ದೇವದತ್ತ ಮುಂತಾದ ಮಕ್ಕಳಿಗೂ ಅಂತಹ ಬ್ರಹ್ಮವರ್ಚಸಾದಿಫಲಗಳ ಹಾರೈಕೆಯನ್ನು ಮಾಡುತ್ತೇನೆ.

## ವಿನಿಯೋಗಸಂಗ್ರಹ

[1]ಸಂ ಪ ಪ್ರೇಕ್ಷ್ಯ ಗೃಹಾನಂಭಃ ಸ್ಥ[2] ಗೋಷ್ಠಮುಪತಿಷ್ಠತೇ ।
[3]ರೇವಾಂತರಾಗ್ನೀ ಜಪತಿ ಸಂಹಿತಾ[4] ವತ್ಸಕಂ ಸ್ಪೃಶೇತ್ ॥
[5-10]ಉಪ ತ್ವಾ ಪಶ್ಚಿಮಂ ವಹ್ನಿಂ ಷಣ್ಮಂತ್ರೈರುಪತಿಷ್ಠತೇ ।
[11]ಊರ್ಜಾ ಪ್ರೇಕ್ಷ್ಯ ಗೃಹಾನ್ [12-15]ತತ್ಸ ಚತುರ್ಭಿಃ ಪೂರ್ವಪಾವಕಮ್ ॥
ಉಪಸ್ಥಾಯಾಗ್ನ[16] ಇತ್ಯಸ್ಮಾತ್ಪಶ್ಚಿಮಂ ಚೋಪತಿಷ್ಠತೇ।

ಅನುವಾಕದ ಮಂತ್ರಗಳ ಸಂಖ್ಯೆ – 16



---

## ॥ ಸಪ್ತಮೋಽನುವಾಕಃ ॥

ಅಯಜ್ಞೋ ವಾ ಏಷ ಯೋಽಸಾಮೋಪ ಪ್ರಯಂತೋ

ಅಧ್ವರಮಿತ್ಯಾಹ ಸ್ತೋಮಮೇವಾಸ್ಮೈ ಯುನಕ್ತ್ಯುಪೇತ್ಯಾಹ

ಅಯಜ್ಞಃ । ವೈ । ಏಷಃ । ಯಃ । ಅಸಾಮಾ । ಉಪಪ್ರಯಂತ ಇತ್ಯುಪ-ಪ್ರಯಂತಃ।

ಅಧ್ವರಮ್। ಇತಿ। ಆಹ। ಸ್ತೋಮಮ್। ಏವ। ಅಸ್ಮೈ। ಯುನಕ್ತಿ । ಉಪೇತಿ।ಇತಿ। ಆಹ।

ಈ ಏಳನೆಯ ಅನುವಾಕದಲ್ಲಿ 5ನೆಯ ಅನುವಾಕದ 'ಉಪಪ್ರಯಂತಃ' ಎಂಬಲ್ಲಿರುವ ಮಂತ್ರಗಳ ವಿವರಣೆಯಿದೆ.

**ಸಾಮಪ್ರಶಂಸೆ**

| | |
|---|---|
| ಯಃ ಅಸಾಮಾ ಏಷಃ ಅಯಜ್ಞಃ ವೈ | ಯಾವುದು ಸಾಮವಿಲ್ಲದುದೋ, ಇದು ಯಜ್ಞವೇ ಅಲ್ಲವಷ್ಟೆ. |
| ಉಪಪ್ರಯಂತಃ ಅಧ್ವರಮ್ ಇತಿ ಆಹ ಸ್ತೋಮಮ್ ಏವ ಅಸ್ಮೈ ಯುನಕ್ತಿ | [ಅಗ್ನಿಯ ಉಪಸ್ಥಾನಕ್ಕಾಗಿ] 'ಉಪಪ್ರಯಂತಃ' ಮೊದಲಾದ ಮಂತ್ರಗಳನ್ನು ಹೇಳುವುದರಿಂದ [ಸಾಮಸಂಬಂಧಿಯಾದ ತ್ರಿವೃದಾದಿ] ✢ ಸ್ತೋಮಗಳ ಸಂಬಂಧವನ್ನು ಉಂಟುಮಾಡಿದಂತೆ ಆಗುತ್ತದೆ. ಇದರಿಂದ ಯಜ್ಞವನ್ನು ಸಾಮಸಹಿತವನ್ನಾಗಿ ಮಾಡಿದಂತೆ ಆಗುತ್ತದೆ. |

**'ಉಪ ಪ್ರಯಂತಃ' ಎಂಬಲ್ಲಿರುವ 'ಉಪ' ಪದದ ಸ್ವಾರಸ್ಯ**

| | |
|---|---|
| ಉಪ ಇತಿ ಆಹ | ಉಪ ಎಂಬ ಶಬ್ದವು ಹೀಗೆ ಹೇಳುತ್ತದೆ:- |

✢ಸಾಮಗಳ ಋಕ್‌ಗಳನ್ನು ಮತ್ತೆ ಮತ್ತೆ ಆವೃತ್ತಿ ಮಾಡಿ ಗಾನ ಮಾಡುವುದರಿಂದ ತ್ರಿವೃತ್ [9], ಪಂಚದಶ [15], ಸಪ್ತದಶ [17], ಏಕವಿಂಶ [21], ತ್ರಿಣವ[9x3=27], ತ್ರಯಸ್ತ್ರಿಂಶ [33],—ಹೀಗೆ ಸ್ತೋಮ ಸಂಪತ್ತಿಯಾಗುತ್ತದೆ. ಇವುಗಳಲ್ಲದೆ ಚತುಷ್ಟೋಮಾದಿ ವಿಶೇಷಸ್ತೋಮಗಳೂ ಉಂಟು. ಇಂತಹ ಸಂಖ್ಯಾಸಂಪತ್ತಿಯು ಸಾಮವೇದದ ಬ್ರಾಹ್ಮಣಗಳಲ್ಲಿ ಹೇಳಲ್ಪಟ್ಟಿದೆ.

ಯಾಗದೇವತೆಯ ಗುಣಗೀತರೂಪವಾದುದೇ ಸ್ತೋತ್ರ. 'ಮಂತ್ರಂ ವೋಚೇಮಾಗ್ನಯೇ' ಮೊದಲಾದುದು ಅಗ್ನಿಯ ಗುಣಗಾನವೇ ಆಗಿದೆ.

ಪ್ರಜಾ ವೈ ಪಶವ ಉಪೇಮಂ ಲೋಕಂ ಪ್ರಜಾಮೇವ ಪಶೂ

ನಿಮಂ ಲೋಕಮುಪೈತ್ಯಸ್ಯ ಪ್ರತ್ನಾಮನುದ್ಯುತಮಿತ್ಯಾಹ

---

ಪ್ರಜೇತಿ ಪ್ರ-ಜಾ । ವೈ । ಪಶವಃ । ಉಪೇತಿ । ಇಮಮ್ । ಲೋಕಮ್ । ಪ್ರಜಾಮಿತಿ

ಪ್ರ-ಜಾಮ್ । ಏವ । ಪಶೂನ್ । ಇಮಮ್ । ಲೋಕಮ್। ಉಪೇತಿ । ಏತಿ । ಅಸ್ಯ।

ಪ್ರತ್ನಾಮ್ । ಅನ್ವಿತಿ । ದ್ಯುತಮ್ । ಇತಿ । ಆಹ ।



---

| | |
|---|---|
| ಪ್ರಜಾ ವೈ ಪಶವಃ ಇಮಮ್ ಲೋಕಮ್ ಉಪ [ಉಪೇತ್ಯ ವರ್ತಂತೇ] | 'ಪ್ರಜೆಗಳೂ, ಪಶುಗಳೂ ಈ ಲೋಕವನ್ನು ಸೇರಿ [ಇರುತ್ತವೆ]. |
| ಪ್ರಜಾಮ್ ಏವ ಪಶೂನ್ [ಉಪೇತ್ಯ] ಇಮಮ್ ಲೋಕಮ್ ಉಪ ಏತಿ | [ಯಜಮಾನನು] ಪ್ರಜೆಗಳನ್ನೂ, ಪಶುಗಳನ್ನೂ [ಹೊಂದಿ] ಈ ಭೂಲೋಕವನ್ನು ಹೊಂದುತ್ತಾನೆ' [ಈ ಮಂತ್ರೋಚ್ಚಾರಣೆಯಿಂದ ಪ್ರಜಾ –ಪಶು ಪ್ರಾಪ್ತಿಯೂ ಭೂಲೋಕದಲ್ಲಿ ಸುಖವಾಸವೂ ಆಗುತ್ತದೆ.] |

**'ಅಸ್ಯ ಪ್ರತ್ನಾಮ್...' ಎಂಬಲ್ಲಿನ 'ಪ್ರತ್ನ' ಶಬ್ದದ ಪ್ರಯೋಜನ**

| | |
|---|---|
| ಅಸ್ಯ ಪ್ರತ್ನಾಮ್ ಅನು ದ್ಯುತಮ್ ಇತಿ ಆಹ | 'ಅಸ್ಯ ಪ್ರತ್ನಾಮ್ ಅನುದ್ಯುತಮ್' ಎಂಬ ಪ್ರತ್ನ ಶಬ್ದದಿಂದ ಕೂಡಿದ ಮಂತ್ರವು ಹೀಗೆ ಹೇಳುತ್ತದೆ:— |

**ಸುವರ್ಗೋ ವೈ ಲೋಕಃ ಪ್ರತ್ನಸ್ಸುವರ್ಗಮೇವ ಲೋಕಗ್ಂ ಸಮಾರೋಹತ್ಯಗ್ನಿರ್ಮೂರ್ಧಾ ದಿವಃ ಕಕುದಿತ್ಯಾಹ ಮೂರ್ಧಾನ [ಮೂರ್ಧಾನಮ್(೧) ಏವೈನಗ್ಂ..] ಮೇವೈನಗ್ಂ**

---

ಸುವರ್ಗ ಇತಿ ಸುವಃ-ಗಃ । ವೈ । ಲೋಕಃ । ಪ್ರತ್ನಃ। ಸುವರ್ಗಮಿತಿ ಸುವಃ-ಗಮ್ । ಏವ । ಲೋಕಮ್ । ಸಮಾರೋಹತೀತಿ ಸಮ್ - ಆರೋಹತಿ । ಅಗ್ನಿಃ । ಮೂರ್ಧಾ। ದಿವಃ । ಕಕುತ್ । ಇತಿ । ಆಹ । ಮೂರ್ಧಾನಮ್ (೧) । ಏವ । ಏನಮ್ ।

---

| | |
|---|---|
| ಸುವರ್ಗಃ ವೈ ಲೋಕಃ ಪ್ರತ್ನಃ | 'ಸ್ವರ್ಗಲೋಕವು ಪುರಾತನವೇ ಆದುದರಿಂದ ಪ್ರತ್ನಶಬ್ದವಾಚ್ಯವೇ ಆಗಿದೆ. |
| ಸುವರ್ಗಮ್ ಏವ ಲೋಕಮ್ ಸಮಾರೋಹತಿ | [ಈ ಮಂತ್ರಪ್ರಭಾವದಿಂದ] ಯಜಮಾನನು ಸ್ವರ್ಗ ಲೋಕಕ್ಕೆ ಏರುತ್ತಾನೆ. [ಈ ಮಂತ್ರಪ್ರಭಾವದಿಂದ ಯಜಮಾನನಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ] |

### 'ಅಗ್ನಿರ್ಮೂರ್ಧಾ...' ಮಂತ್ರದ ವಿವರಣೆ

| | |
|---|---|
| ಅಗ್ನಿಃ ಮೂರ್ಧಾ ಕಕುತ್ ಇತಿ ಆಹ | 'ಅಗ್ನಿರ್ಮೂರ್ಧಾ' [ಎಂಬ ಮಂತ್ರದ ಪ್ರಯೋಜನವು ಹೀಗಿದೆಯೆಂದು] ಶ್ರುತಿಯು ಹೇಳುತ್ತದೆ:— |
| ಮೂರ್ಧಾನಮ್ ಏವ ಏನಮ್ | ['ಮೂರ್ಧನ್' ಶಬ್ದಯುಕ್ತವಾದ ಈ ಮಂತ್ರದಿಂದ ಉಪಸ್ಥಾನವನ್ನು ಮಾಡುವುದು] |

ಸಮಾನಾನಾಂ ಕರೋತ್ಯಥೋ ದೇವಲೋಕಾದೇವ ಮನುಷ್ಯ ಲೋಕೇ ಪ್ರತಿತಿಷ್ಠತ್ಯಯಮಿಹ ಪ್ರಥಮೋ ಧಾಯಿ ಧಾತೃಭಿರಿ ತ್ಯಾಹ ಮುಖ್ಯಮೇವೈನಂ ಕರೋತ್ಯುಭಾ ವಾಮಿಂದ್ರಾಗ್ನೀ

---

ಸಮಾನಾನಾಮ್ । ಕರೋತಿ । ಅಥೋ ಇತಿ । ದೇವಲೋಕಾದಿತಿ ದೇವ-ಲೋಕಾತ್। ಏವ । ಮನುಷ್ಯಲೋಕ ಇತಿ ಮನುಷ್ಯ-ಲೋಕೇ । ಪ್ರತೀತಿ । ತಿಷ್ಠತಿ । ಅಯಮ್ । ಇಹ । ಪ್ರಥಮಃ । ಧಾಯಿ । ಧಾತೃಭಿರಿತಿ ಧಾತೃ-ಭಿಃ । ಇತಿ । ಆಹ । ಮುಖ್ಯಮ್। ಏವ । ಏನಮ್ । ಕರೋತಿ । ಉಭಾ । ವಾಮ್ । ಇಂದ್ರಾಗ್ನೀ ಇತೀಂದ್ರ-ಅಗ್ನೀ ।

---

| | |
|---|---|
| ಸಮಾನಾನಾಮ್ ಕರೋತಿ | ಯಜಮಾನನನ್ನು ಸಮಾನರ ಮಧ್ಯದಲ್ಲಿ ತಲೆ [ಶ್ರೇಷ್ಠ]ಯನ್ನಾಗಿ ಮಾಡುತ್ತದೆ. |
| ಅಥೋ ದೇವಲೋಕಾತ್ ಏವ ಮನುಷ್ಯಲೋಕೇ ಪ್ರತಿತಿಷ್ಠತಿ | ಮತ್ತು ['ಹೇತಿಃ ಪೃಥಿವ್ಯಾ ಅಯಮ್' ಎಂದು ಪೃಥಿವೀಶಬ್ದದಿಂದ ಕೂಡಿದ ಈ ಮಂತ್ರದಿಂದ ಉಪಸ್ಥಾನ ಮಾಡುವುದರಿಂದ] 'ಯಜಮಾನನು ದೇವಲೋಕದಿಂದ ಇಳಿದು ಭೂಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ. |

**'ಅಯಮಿಹ....' ಎಂಬಲ್ಲಿಯ ಪ್ರಥಮಶಬ್ದದ ಸ್ವಾರಸ್ಯ**

| | |
|---|---|
| ಅಯಮ್ ಇಹ ಪ್ರಥಮಃ ಧಾಯಿ ಧಾತೃಭಿಃ ಇತಿ ಆಹ ಮುಖ್ಯಮ್ ಏವ ಏನಮ್ ಕರೋತಿ | 'ಪ್ರಥಮಶಬ್ದಯುಕ್ತವಾದ ಈ ಮಂತ್ರದಿಂದ ಅಗ್ನ್ಯುಪಸ್ಥಾನ ಮಾಡುವುದು ಅಗ್ನಿಯು ದೇವತೆಗಳಲ್ಲಿ ಮುಖ್ಯನಾಗಿರುವಂತೆ ಯಜಮಾನನನ್ನು ಮನುಷ್ಯರಲ್ಲಿ ಮುಖ್ಯನನ್ನಾಗಿ ಮಾಡುತ್ತದೆ' ಎಂದು ಶ್ರುತಿಯು ಹೇಳುತ್ತದೆ. |

ಆಹುವದ್ಧ್ಯಾ ಇತ್ಯಾಹೌಜೋ ಬಲಮೇವಾವರುಂಧೇಽಯಂ ತೇ ಯೋನಿರ್ ಋತ್ವಿಯ ಇತ್ಯಾಹ ಪಶವೋ ವೈ ರಯಿಃ ಪಶೂನೇವಾವರುಂಧೇ

---

ಆಹುವಧ್ಯೈ । ಇತಿ । ಆಹ । ಓಜಃ । ಬಲಮ್ । ಏವ । ಅವೇತಿ । ರುಂಧೇ । ಅಯಮ್ । ತೇ । ಯೋನಿಃ । ಋತ್ವಿಯಃ । ಇತಿ । ಆಹ । ಪಶವಃ । ವೈ । ರಯಿಃ। ಪಶೂನ್ । ಏವ । ಅವೇತಿ । ರುಂಧೇ ।



---

### 'ಉಭಾ ವಾಮ್...' ಎಂಬ ಮಂತ್ರದಿಂದ ಉಪಸ್ಥಾನದ ಫಲ

| | |
|---|---|
| ಉಭಾ ವಾಮ್ ಇಂದ್ರಾಗ್ನೀ ಆಹುವಧ್ಯೈ ಇತಿ ಆಹ ಓಜಃ ಬಲಮ್ ಏವ ಅವರುಂಧೇ | [ಬಲಾಧಿಪತಿಯಾದ ಇಂದ್ರನ ಮತ್ತು ತೇಜೋಧಿಪತಿಯಾದ ಅಗ್ನಿಯ ಸಂಬೋಧನೆಯಿರುವ] ಈ ಮಂತ್ರದಿಂದ ಉಪಸ್ಥಾನ ಮಾಡುವುದರಿಂದ ಯಜಮಾನನು ಓಜಸ್ಸನ್ನೂ, ಬಲವನ್ನೂ ಹೊಂದುತ್ತಾನೆಂದು ಶ್ರುತಿಯು ಹೇಳುತ್ತದೆ. |

### 'ರಯಿ' ಶಬ್ದಯುಕ್ತವಾದ 'ಅಯಂ ತೇ...' ಮಂತ್ರದ ಪ್ರಯೋಜನ

| | |
|---|---|
| ಅಯಮ್ ತೇ ಯೋನಿಃ ಋತ್ವಿಯ ಇತಿ ಆಹ ಪಶವಃ ವೈ ರಯಿಃ ಪಶೂನ್ ಏವ ಅವರುಂಧೇ | ['ಅಥಾ ನೋ ವರ್ಧಯಾ ರಯಿಮ್' ಎಂದು ರಯಿಶಬ್ದದಿಂದ ಕೂಡಿದ ಮಂತ್ರದಿಂದ ಅಗ್ನಿಯ ಉಪಸ್ಥಾನವನ್ನು ಮಾಡುವುದರಿಂದ] ಪಶುಗಳೇ ರಯಿಗಳಾದುದರಿಂದ ರಯಿಸ್ವರೂಪವಾದ ಪಶುಗಳನ್ನು ಪಡೆದುಕೊಳ್ಳುತ್ತಾನೆ. |

ಷಡ್ಭಿರುಪತಿಷ್ಠತೇ ಷಡ್ವಾ [ಷಡ್ವೈ (೨) ಋತವ] ಋತವ
ಋತುಷ್ವೇವ ಪ್ರತಿತಿಷ್ಠತಿ ಷಡ್ಭಿರುತ್ತರಾಭಿರುಪತಿಷ್ಠತೇ ದ್ವಾದ
ಶ ಸಂಪದ್ಯಂತೇ ದ್ವಾದಶ ಮಾಸಾಸ್ಸಂವತ್ಸರಸ್ಸಂವತ್ಸರ ಏವ
ಪ್ರತಿತಿಷ್ಠತಿ

---

ಷಡ್ಭಿರಿತಿ ಷಟ್-ಭಿಃ । ಉಪೇತಿ । ತಿಷ್ಠತೇ । ಷಟ್ । ವೈ । ಋತವಃ । ಋತುಷು । ಏವ । ಪ್ರತೀತಿ । ತಿಷ್ಠತಿ । ಷಡ್ಭಿರಿತಿ ಷಟ್-ಭಿಃ । ಉತ್ತರಾಭಿರಿತ್ಯುತ್-ತರಾಭಿಃ। ಉಪೇತಿ। ತಿಷ್ಠತೇ । ದ್ವಾದಶ । ಸಮಿತಿ । ಪದ್ಯಂತೇ । ದ್ವಾದಶ । ಮಾಸಾಃ । ಸಂವತ್ಸರ ಇತಿ ಸಮ್-ವತ್ಸರಃ । ಸಂವತ್ಸರ ಇತಿ ಸಮ್-ವತ್ಸರೇ । ಏವ । ಪ್ರತೀತಿ । ತಿಷ್ಠತಿ ।

---

**ಆರು ಆರು ಮಂತ್ರಗಳಿಂದ ಅಗ್ನ್ಯುಪಸ್ಥಾನದ ವಿಧಿ ಮತ್ತು ಫಲ**

| | |
|---|---|
| ಷಡ್ಭಿಃ ಉಪ ತಿಷ್ಠತೇ ಷಟ್ ವೈ ಋತವಃ ಋತುಷು ಏವ ಪ್ರತಿ ತಿಷ್ಠತಿ | ['ಉಪ ಪ್ರಯಂತಃ...' ಮೊದಲಾದ] ಆರು ಮಂತ್ರಗಳಿಂದ ಅಗ್ನ್ಯುಪಸ್ಥಾನವನ್ನು ಮಾಡಬೇಕು. ಋತುಗಳೂ ಆರು. ಆದುದರಿಂದ ಯಜಮಾನನು ಆರು ಋತುಗಳಲ್ಲಿಯೂ ಪ್ರತಿಷ್ಠಿತನಾಗುವನು. |
| ಷಡ್ಭಿಃ ಉತ್ತರಾಭಿಃ ಉಪತಿಷ್ಠತೇ, | ['ಅಗ್ನ ಆಯೂಗ್ಂಷಿ' ಮೊದಲಾದ] ಅನಂತರ ಹೇಳಿರುವ ಆರು ಮಂತ್ರಗಳಿಂದ ಉಪಸ್ಥಾನವನ್ನು ಮಾಡಬೇಕು. |
| ದ್ವಾದಶ ಸಮ್ ಪದ್ಯಂತೇ ದ್ವಾದಶ ಮಾಸಾಃ ಸಂವತ್ಸರಃ ಸಂವತ್ಸರೇ ಏವ ಪ್ರತಿ ತಿಷ್ಠತಿ | [ಉಪ ಪ್ರಯಂತಃ. ಮೊದಲಾದ ಆರು ಮಂತ್ರಗಳು ಪೂರ್ವಷಟ್ಕ. ಅಗ್ನ ಆಯೂಗ್ಂಷಿ... ಮೊದಲಾದ ಆರುಮಂತ್ರಗಳು ಉತ್ತರಷಟ್ಕ. ಹೀಗೆ] ಮಂತ್ರಗಳ |

ಯಥಾ ವೈ ಪುರುಷೋಽಶ್ವೋ ಗೌರ್ಜೀರ್ಯತ್ಯೇವಮಗ್ನಿರಾ ಹಿತೋ ಜೀರ್ಯತಿ ಸಂವತ್ಸರಸ್ಯ ಪರಸ್ತಾದಾಗ್ನಿಪಾವಮಾ-ನೀಭಿರುಪತಿಷ್ಠತೇ

---

ಯಥಾ । ವೈ । ಪುರುಷಃ । ಅಶ್ವಃ । ಗೌಃ । ಜೀರ್ಯತಿ । ಏವಮ್ । ಅಗ್ನಿಃ। ಆಹಿತ ಇತ್ಯಾ-ಹಿತಃ । ಜೀರ್ಯತಿ । ಸಂವತ್ಸರಸ್ಯೇತಿ ಸಮ್-ವತ್ಸರಸ್ಯ । ಪರಸ್ತಾತ್ । ಆಗ್ನಿ ಪಾವಮಾನೀಭಿರಿತ್ಯಾಗ್ನಿ-ಪಾವಮಾನೀಭಿಃ । ಉಪೇತಿ । ತಿಷ್ಠತೇ ।

---

ಸಂಖ್ಯೆಯು ಹನ್ನೆರಡಾಗುತ್ತದೆ. ಸಂವತ್ಸರದಲ್ಲಿಯ ಮಾಸಗಳೂ ಹನ್ನೆರಡು. ಆದುದರಿಂದ ಇಂತಹ ಹನ್ನೆರಡು ಮಂತ್ರಗಳಿಂದ ಅಗ್ನ್ಯುಪಸ್ಥಾನ ಮಾಡುವುದರಿಂದ ಯಜಮಾನನು ಸಂವತ್ಸರದಲ್ಲಿ ಪ್ರತಿಷ್ಠಿತನಾಗುತ್ತಾನೆ.

**'ಅಗ್ನ ಆಯೂಗ್‌ಂಷಿ' ಮುಂತಾದ ಆರು ಮಂತ್ರಗಳಿಂದ ಮಾಡುವ ಉಪಸ್ಥಾನಕಾಲದ ವಿಧಿ.**

**ಸಂವತ್ಸರ ಕಾಲದ ಅನಂತರ ಅಗ್ನ್ಯುಪಸ್ಥಾನ**

| | |
|---|---|
| ಯಥಾ ವೈ ಪುರುಷಃ ಅಶ್ವಃ ಗೌಃ ಜೀರ್ಯತಿ, ಏವಮ್ ಆಹಿತಃ ಅಗ್ನಿಃ ಜೀರ್ಯತಿ | ಹೇಗೆ ಪುರುಷನೂ, ಕುದುರೆಯೂ, ಹಸುವೂ ಮುಪ್ಪನ್ನು ಹೊಂದಿ ಜೀರ್ಣ[ಕೃಶ]ರಾಗುತ್ತಾರೆಯೋ, ಹೀಗೆಯೇ ಆಧಾನದಿಂದ ಉತ್ಪನ್ನನಾದ ಅಗ್ನಿಯು ಮುಪ್ಪನ್ನು ಹೊಂದಿ ಜೀರ್ಣನಾಗುತ್ತಾನೆ. |
| ಸಂವತ್ಸರಸ್ಯ ಪರಸ್ತಾತ್ ಆಗ್ನಿಪಾವಮಾನೀಭಿಃ ಉಪತಿಷ್ಠತೇ | ಸಂವತ್ಸರವು ಕಳೆದ ಅನಂತರದಲ್ಲಿ ಪ್ರತಿ ಸಂವತ್ಸರದಲ್ಲಿಯೂ ✣ ಅಗ್ನಿಪವಮಾನದೇವತಾಕವಾದ 'ಅಗ್ನ ಆಯೂಗ್‌ಂಷಿ' ಮೊದಲಾದ ಆರು ಋಕ್‌ಗಳಿಂದ ಅಗ್ನ್ಯುಪಸ್ಥಾನವನ್ನು ಮಾಡಬೇಕು. |

---

✣ ಇಲ್ಲಿ ಪವಮಾನನು ಅಗ್ನಿಯೇ. ಆದರೂ ಶೋಧಕತ್ವ-ತೇಜಸ್ವಿತ್ವಗಳೆಂಬ ಉಪಾಧಿಭೇದದಿಂದ ಅಗ್ನಿಪವಮಾನದೇವತಾಕಗಳಾದ ಮಂತ್ರಗಳೆಂದು ಶ್ರುತಿಯು ನಿರ್ದೇಶಿಸಿದೆ.

ಪುನರ್ನವಮೇವೈನಮಜರಂ ಕರೋತ್ಯಥೋ ಪುನಾತ್ಯೇವೋ ಪತಿಷ್ಠತೇ ಯೋಗ ಏವಾಸ್ಯೈಷ ಉಪತಿಷ್ಠತೇ [ತಿಷ್ಠತೇ (೩) ದಮ] ದಮ ಏವಾಸ್ಯೈಷ ಉಪತಿಷ್ಠತೇ

---

ಪುನರ್ನವಮಿತಿ ಪುನಃ-ನವಮ್ । ಏವ । ಏನಮ್ । ಅಜರಮ್ । ಕರೋತಿ । ಅಥೋ ಇತಿ । ಪುನಾತಿ । ಏವ। ಉಪೇತಿ । ತಿಷ್ಠತೇ । ಯೋಗಃ । ಏವ । ಅಸ್ಯ । ಏಷಃ । ಉಪೇತಿ । ತಿಷ್ಠತೇ [೩] । ದಮಃ । ಏವ । ಅಸ್ಯ । ಏಷಃ । ಉಪೇತಿ । ತಿಷ್ಠತೇ ।

---

| | |
|---|---|
| ಪುನರ್ನವಮ್ ಏವ ಏನಮ್ ಅಜರಮ್ ಕರೋತಿ | [ಈ ಉಪಸ್ಥಾನದಿಂದ ಯಜಮಾನನು] ಈ ಅಗ್ನಿಯನ್ನೇ ಮತ್ತೆ ಹೊಸದಾದ ಶರೀರವುಳ್ಳವನನ್ನಾಗಿಯೂ ಮುಪ್ಪಿಲ್ಲದವನನ್ನಾಗಿಯೂ ಮಾಡುತ್ತಾನೆ. |
| ಅಥೋ ಪುನಾತಿ ಏವ | ಪವಿತ್ರನನ್ನಾಗಿಯೇ ಮಾಡುತ್ತಾನೆ. |

**ಉಪಸ್ಥಾನದ ನಾಲ್ಕು ಬಗೆಯ ಪ್ರಶಂಸೆ**

| | |
|---|---|
| ಉಪತಿಷ್ಠತೇ ಯೋಗಃ ಏವ ಅಸ್ಯ ಏಷಃ | (1) ಉಪಸ್ಥಾನ ಮಾಡುತ್ತಾನೆ [ಎಂಬುದು ಯಾವುದು ಉಂಟೋ ಇದು] ಅಗ್ನಿಗೆ ಯಜಮಾನನೊಡನೆ ಅನುಗ್ರಾಹ್ಯ-ಅನುಗ್ರಾಹಕರೂಪ ಸಂಬಂಧವಾಗುತ್ತದೆ. |
| ಉಪತಿಷ್ಠತೇ ದಮಃ ಏವ ಅಸ್ಯ ಏಷಃ | (2) ಉಪಸ್ಥಾನವು ಯಾವುದುಂಟೋ ಇದು ಅಗ್ನಿಗೆ ದಾಹಾದ್ಯುಪದ್ರವಪರಿಹಾರದಂತೆ ಆಗುತ್ತದೆ./ ಅಗ್ನಿಯನ್ನು ಯಜಮಾನನ ಇಷ್ಟಾರ್ಥಗಳನ್ನು ಕೊಡುವಂತೆ ಒತ್ತಾಯ ಮಾಡುತ್ತದೆ. |

ಯಾಚ್ಞೈವಾಸ್ಯೈಷೋಪತಿಷ್ಠತೇ ಯಥಾ ಪಾಪೀಯಾಞ್ಛ್ರೇಯ

-ಸ ಆಹೃತ್ಯ ನಮಸ್ಯತಿ ತಾದೃಗೇವ ತದಾಯುರ್ದಾ

ಅಗ್ನೇऽಸ್ಯಾಯುರ್ಮೇ ದೇಹಿತ್ಯಾಹಾಯುರ್ದಾ ಹ್ಯೇಷ

---

ಯಾಚ್ಞಾ । ಏವ । ಅಸ್ಯ । ಏಷಾ । ಉಪೇತಿ । ತಿಷ್ಠತೇ । ಯಥಾ । ಪಾಪೀಯಾನ್।

ಶ್ರೇಯಸೇ । ಆಹೃತ್ಯೇತ್ಯಾ-ಹೃತ್ಯ । ನಮಸ್ಯತಿ । ತಾದೃಕ್ । ಏವ । ತತ್ । ಆಯುರ್ದಾ

ಇತ್ಯಾಯುಃ-ದಾಃ। ಅಗ್ನೇ । ಅಸಿ । ಆಯುಃ। ಮೇ । ದೇಹಿ । ಇತಿ । ಆಹ । ಆಯುರ್ದಾ

ಇತ್ಯಾಯುಃ-ದಾಃ । ಹಿ । ಏಷಃ ।

---



ಉಪತಿಷ್ಠತೇ ಯಾಚ್ಞಾ ಏವ ಅಸ್ಯ ಏಷಾ — (3) ಈ ಉಪಸ್ಥಾನವು ಅಗ್ನಿಗೆ ಸಂಬಂಧಿಸಿದ [ಅಗ್ನಿಯ ಬಳಿ] ಇಷ್ಟಾರ್ಥಗಳ ಯಾಚನೆಯಾಗುತ್ತದೆ.

ಉಪತಿಷ್ಠತೇ ಯಥಾ ಪಾಪೀಯಾನ್ ಶ್ರೇಯಸೇ ಆಹೃತ್ಯ ನಮಸ್ಯತಿ ತಾದೃಕ್ ಏವ ತತ್ — (4) ಲೋಕದಲ್ಲಿ] ಹೇಗೆ ದರಿದ್ರನು ಶ್ರೀಮಂತನಿಗೆ ಅಲ್ಪವಾದ ಕಾಣಿಕೆಯನ್ನು ತಂದು ಕೊಟ್ಟು ನಮಸ್ಕಾರ ಮಾಡುತ್ತಾನೆಯೋ, ಹಾಗೆಯೇ ಈ ಉಪಸ್ಥಾನವೂ ಆಗುತ್ತದೆ. ✢

**'ಆಯುರ್ದಾ ಅಗ್ನೇऽಸಿ...' ಮುಂತಾದ ಯಜುಸ್ಸುಗಳ ವಿವರಣೆ**

ಆಯುರ್ದಾ ಅಗ್ನೇ ಅಸಿ ಆಯುಃ ಮೇ ದೇಹಿ ಇತಿ ಆಹ — 'ಆಯುರ್ದಾ ಅಗ್ನೇऽಸಿ' ಎಂದು ಉಪಸ್ಥಾನ ಮಾಡಬೇಕು.

---

✢ ೧) ಆಯಮಿಹ ಪ್ರಥಮೋ ಧಾಯಿ.....' ಎಂಬ ಮಂತ್ರದಿಂದ ಯೋಗವನ್ನೂ,
೨) 'ಆರೇ ಬಾಧಸ್ವ ದುಚ್ಛುನಾಮ್' ಎಂಬ ಮಂತ್ರದಿಂದ ದಮ [ಉಪದ್ರವಪರಿಹಾರ]ವನ್ನೂ
೩) 'ಅಥಾ ನೋ ವರ್ಧಯಾ ರಯಿಮ್' ಎಂದು ಯಾಚನೆಯನ್ನೂ,
೪) 'ಮಂತ್ರಂ ವೋಚೇಮಾಗ್ನಯೇ' ಎಂಬುದರಿಂದ ಉಪಾಯನ (ಕಾಣಿಕೆ)ವನ್ನು ಹೇಳಿದಂತಾಯಿತು.

ವರ್ಚೋದಾ ಅಗ್ನೇಽಸಿ ವರ್ಚೋ ಮೇ ದೇಹೀತ್ಯಾಹ ವರ್ಚೋದಾ ಹ್ಯೇಷ ತನೂಪಾ ಅಗ್ನೇಽಸಿ ತನುವಂ ಮೇ ಪಾಹೀತ್ಯಾಹ [೪] ತನೂಪಾ ಹ್ಯೇಷೋಽಗ್ನೇ ಯನ್ಮೇ

---

ವರ್ಚೋದಾ ಇತಿ ವರ್ಚಃ-ದಾಃ । ಅಗ್ನೇ । ಅಸಿ । ವರ್ಚಃ । ಮೇ । ದೇಹಿ । ಇತಿ । ಆಹ । ವರ್ಚೋದಾ ಇತಿ ವರ್ಚಃ-ದಾಃ । ಹಿ । ಏಷಃ । ತನೂಪಾ ಇತಿ ತನೂ-ಪಾಃ । ಅಗ್ನೇ । ಅಸಿ । ತನುವಮ್ । ಮೇ । ಪಾಹಿ । ಇತಿ । ಆಹ [೪] ತನೂಪಾ ಇತಿ ತನೂ-ಪಾಃ । ಹಿ । ಏಷಃ । ಅಗ್ನೇ । ಯತ್ । ಮೇ ।

---



| | |
|---|---|
| ಆಯುರ್ದಾಃ ಹಿ ಏಷಃ | 'ಈ ಅಗ್ನಿಯು ಆಯುಸ್ಸನ್ನು ಕೊಡತಕ್ಕವನೆಂದು ಪ್ರಸಿದ್ಧವಾಗಿದೆಯಷ್ಟೆ' ಎಂದು ಶ್ರುತಿಯು ಹೇಳುತ್ತದೆ. |
| ವರ್ಚೋದಾಃ ಅಗ್ನೇ ಅಸಿ ವರ್ಚಃ ಮೇ ದೇಹಿ ಇತಿ ಆಹ ವರ್ಚೋದಾಃ ಹಿ ಏಷಃ | 'ವರ್ಚೋದಾಃ' ಎಂಬುದೂ ಉಪಸ್ಥಾನಾಂಗವಾಗಿದೆ. 'ಈ ಅಗ್ನಿಯು ವರ್ಚಸ್ಸನ್ನು ಕೊಡತಕ್ಕವನೆಂಬುದು ಪ್ರಸಿದ್ಧವಾಗಿದೆಯಷ್ಟೆ' ಎಂದು ಶ್ರುತಿಯು ಹೇಳುತ್ತದೆ. |
| ತನೂಪಾಃ ಅಗ್ನೇ ಅಸಿ ತನುವಮ್ ಮೇ ಪಾಹಿ ಇತಿ ಆಹ ತನೂಪಾಃ ಹಿ ಏಷಃ | 'ತನೂಪಾಃ' ಎಂಬುದೂ ಉಪಸ್ಥಾನಾಂಗವಾಗಿದೆ. 'ಈ ಅಗ್ನಿಯು ಶರೀರವನ್ನು ರಕ್ಷಿಸತಕ್ಕವನೆಂಬುದು ಪ್ರಸಿದ್ಧವಾಗಿದೆಯಷ್ಟೆ' ಎಂದು ಶ್ರುತಿಯು ಹೇಳುತ್ತದೆ. |

'ಅಗ್ನೇ ಯನ್ಮೇ' ಎಂಬ ಮಂತ್ರದಲ್ಲಿನ 'ತನುವಾ ಊನಮ್' ಎಂಬುದರ ಅಭಿಪ್ರಾಯ

| | |
|---|---|
| ಅಗ್ನೇ ಯತ್ ಮೇ | 'ಅಗ್ನಿಯೇ! ನನ್ನ |

ತನುವಾ ಊನಂ ತನ್ಮ ಆ ಪೃಣೇತ್ಯಾಹ ಯನ್ಮೇ ಪ್ರಜಾಯೈ ಪಶೂನಾಮೂನಂ ತನ್ಮ ಆ ಪೂರಯೇತಿ ವಾವೈತದಾಹ ಚಿತ್ರಾವಸೋ ಸ್ವಸ್ತಿ ತೇ ಪಾರಮಶೀಯೇತ್ಯಾಹ

---

ತನುವಾಃ । ಊನಮ್ । ತತ್ । ಮೇ । ಏತಿ । ಪೃಣ । ಇತಿ । ಆಹ । ಯತ್ । ಮೇ । ಪ್ರಜಾಯಾ ಇತಿ ಪ್ರ-ಜಾಯೈ । ಪಶೂನಾಮ್ । ಊನಮ್ । ತತ್ । ಮೇ। ಏತಿ । ಪೂರಯ । ಇತಿ । ವಾವ । ಏತತ್ । ಆಹ । ಚಿತ್ರಾವಸೋ ಇತಿ ಚಿತ್ರ-ವಸೋ। ಸ್ವಸ್ತಿ । ತೇ । ಪಾರಮ್ । ಆಶೀಯ । ಇತಿ । ಆಹ ।

---

ತನುವಾಃ ಊನಮ್ ತತ್ ಮೇ ಆ ಪೃಣ ಇತಿ ಆಹ ಯತ್ ಮೇ ಪ್ರಜಾಯೈ ಪಶೂನಾಮ್ ಊನಮ್ ತತ್ ಮೇ ಆ ಪೂರಯ ಇತಿ ವಾವ ಏತತ್ ಆಹ

'ತನುವಿನ ಊನವು' ಎಂಬುದರ ಅಭಿಪ್ರಾಯವು 'ನನ್ನ ಪ್ರಜೆಯ ಮತ್ತು ಪಶುಗಳ ಕೊರತೆಯು [ನ್ಯೂನತೆ] ಯಾವುದುಂಟೋ, ಅದನ್ನು ಪರಿಹರಿಸಿ ಪೂರಣಗೊಳಿಸು ಎಂಬುದೇ ಆಗಿದೆ' ಎಂದು [ತನುವಾ ಊನಮ್ ಎಂಬುದರ] ಅಭಿಪ್ರಾಯ ಎಂದು ಶ್ರುತಿಯು ವಿವರಿಸುತ್ತದೆ.

**'ಚಿತ್ರಾವಸೋ... ಆಶೀಯ' ಎಂಬ ಯಜುರ್ಮಂತ್ರದ ವಿವರಣೆ**

ಚಿತ್ರಾವಸೋ ಸ್ವಸ್ತಿ ತೇ ಪಾರಮ್ ಆಶೀಯ ಇತಿ ಆಹ

**'ಚಿತ್ರಾವಸೋ ಸ್ವಸ್ತಿ ತೇ ಪಾರಮ್ ಆಶೀಯ'** ಎಂಬ ಶ್ರುತಿಯು ಹೀಗೆ ಹೇಳುತ್ತದೆ :-

ರಾತ್ರಿರ್ವೈ ಚಿತ್ರಾವಸುರವ್ಯುಷ್ಟ್ಯೈ ವಾ ಏತಸ್ಯೈ ಪುರಾ

ಬ್ರಾಹ್ಮಣಾ ಅಭೈಷುರ್ವ್ಯುಷ್ಟಿಮೇವಾವರುಂಧೇ

---

ರಾತ್ರಿಃ । ವೈ । ಚಿತ್ರಾವಸುರಿತಿ ಚಿತ್ರ-ವಸುಃ । ಅವ್ಯುಷ್ಟ್ಯಾ ಇತ್ಯವಿ–ಉಷ್ಟ್ಯೈ । ವೈ ।

ಏತಸ್ಯೈ । ಪುರಾ । ಬ್ರಾಹ್ಮಣಾಃ । ಅಭೈಷುಃ । ವ್ಯುಷ್ಟಿಮಿತಿ ವಿ-ಉಷ್ಟಿಮ್ । ಏವ ।

ಅವೇತಿ । ರುಂಧೇ ।

---



| | |
|---|---|
| ರಾತ್ರಿಃ ವೈ ಚಿತ್ರಾವಸುಃ | ನಕ್ಷತ್ರಾದಿಗಳು ಅಭಿವ್ಯಕ್ತವಾಗಿ ಈ ರಾತ್ರಿಯಲ್ಲಿ ವಾಸಿಸುತ್ತವೆಯಾದುದರಿಂದ ರಾತ್ರಿಯೇ ಚಿತ್ರಾವಸುವಾಗಿದೆ. |
| ಅವ್ಯುಷ್ಟ್ಯೈ ವಾ ಏತಸ್ಯೈ ಪುರಾ ಬ್ರಾಹ್ಮಣಾಃ ಅಭೈಷುಃ | [ಹೇಮಂತರ್ತುವಿನಲ್ಲಿ ರಾತ್ರಿಯು ದೀರ್ಘವಾದುದರಿಂದ] ಈ ರಾತ್ರಿಯು ಕಳೆದು ಬೆಳಗಾಗುತ್ತದೆಯೋ ಇಲ್ಲವೋ ಎಂದು ಹಿಂದಿನ ಕಾಲದಲ್ಲಿ ಬ್ರಾಹ್ಮಣರು ಹೆದರಿದರು. |
| ವ್ಯುಷ್ಟಿಮ್ ಏವ ಅವರುಂಧೇ | ['ಚಿತ್ರಾವಸೋ.....' ಎಂಬ ಈ ಮಂತ್ರದಿಂದ ಉಪಸ್ಥಾನ ಮಾಡುವುದರಿಂದ] ಕ್ಷೇಮವಾಗಿ ರಾತ್ರಿಯು ಕಳೆದು ಪ್ರಭಾತಕಾಲವನ್ನು ಯಜಮಾನನು ಹೊಂದುತ್ತಾನೆ.' ಎಂದು ಶ್ರುತಿಯು ಹೇಳುತ್ತದೆ. |

ಇಂಧಾನಾಸ್ತ್ವಾ ಶತಗ್ಂ[ಶತಮ್ (೫)] ಹಿಮಾ ಇತ್ಯಾಹ ಶತಾಯುಃ ಪುರುಷಶ್ಶತೇಂದ್ರಿಯ ಆಯುಷ್ಯೇವೇಂದ್ರಿಯೇ ಪ್ರತಿತಿಷ್ಠತ್ಯೇಷಾ ವೈ ಸೂರ್ಮೀ ಕರ್ಣಕಾವತ್ಯೇತಯಾ ಹ ಸ್ಮ ವೈ

---

ಇಂಧಾನಾಃ । ತ್ವಾ । ಶತಮ್ । ಹಿಮಾಃ । ಇತಿ । ಆಹ । ಶತಾಯುರಿತಿ ಶತ-ಆಯುಃ। ಪುರುಷಃ। ಶತೇಂದ್ರಿಯ ಇತಿ ಶತ-ಇಂದ್ರಿಯಃ। ಆಯುಷಿ ಏವ । ಇಂದ್ರಿಯೇ । ಪ್ರತೀತಿ। ತಿಷ್ಠತಿ ಏಷಾ। ವೈ। ಸೂರ್ಮೀ। ಕರ್ಣಕಾವತೀತಿ ಕರ್ಣಕ-ವತೀ। ಏತಯಾ। ಹ। ಸ್ಮ। ವೈ।

---

### ಉಪಸ್ಥಾನ-ಪ್ರಯೋಜನ

| | |
|---|---|
| ಇಂಧಾನಾಃ ತ್ವಾ ಶತಮ್ ಹಿಮಾಃ ಇತಿ ಆಹ ಶತಾಯುಃ ಪುರುಷಃ ಶತೇಂದ್ರಿಯಃ ಆಯುಷಿ ಏವ ಇಂದ್ರಿಯೇ ಪ್ರತಿತಿಷ್ಠತಿ | 'ಇಂಧಾನಾಃ... ಹಿಮಾಃ' ಎಂಬ ಮಂತ್ರಭಾಗವು ಹೀಗೆ ಹೇಳುತ್ತದೆ— ಮಂತ್ರದಲ್ಲಿ 'ಶತಗ್ಂ ಹಿಮಾಃ' ಎಂದಿದೆ. ಪುರುಷನ ಆಯುಸ್ಸು ನೂರು ವರ್ಷಗಳು. [ಮನುಷ್ಯನ ಐದು ಕರ್ಮೇಂದ್ರಿಯಗಳು ಮತ್ತು ಐದು ಜ್ಞಾನೇಂದ್ರಿಯಗಳು ಹತ್ತು ನಾಡಿಗಳಲ್ಲಿ ಸಂಚರಿಸುವುದರಿಂದ] ಪುರುಷನು ಶತೇಂದ್ರಿಯನು. ✢ [ಈ ಮಂತ್ರದಿಂದ ಮಾಡುವ ಉಪಸ್ಥಾನದಿಂದ] 'ಯಜಮಾನನು ಆಯುಸ್ಸಿನಲ್ಲಿಯೂ, ಇಂದ್ರಿಯದಲ್ಲಿಯೂ ಪ್ರತಿಷ್ಠಿತನಾಗುತ್ತಾನೆ' ಎಂದು ಶ್ರುತಿಯು ಹೇಳುತ್ತದೆ. |

### ಮೇಲಿನ ಮಂತ್ರದಿಂದ ಸಮಿದಾಧಾನ— ಅದರ ವಿಧಿ—ಉಪಾಖ್ಯಾನ—ಪ್ರಯೋಜನ

| | |
|---|---|
| ಏಷಾ ವೈ ಸೂರ್ಮೀ ಕರ್ಣಕಾವತೀ ಏತಯಾ ಹ ಸ್ಮ ವೈ | ಈ ['ಇಂಧಾನಾಃ' ಎಂಬ] ಋಕ್ಕು ಒಳಗೂ ಹೊರಗೂ ಉರಿಯುತ್ತಿರುವ [ಕೆಂಪಾಗಿ ಕಾದಿರುವ] ಒಳಗೆ ಟೊಳ್ಳಾಗಿರುವ ಲೋಹಮಯ ಸ್ತಂಭದಂತಿದೆ. ಈ ಋಕ್ಕಿನಿಂದಲೇ |

---

✢ 'ಇಂಧಾನಾಸ್ತ್ವಾ.....' 'ಅಗ್ನೇಃ ಸಮಿತ್......' 'ಸೋಮಸ್ಯ ಸಮಿತ್......' 'ಯಮಸ್ಯ ಸಮಿತ್.....' ಎಂಬ ಈ ನಾಲ್ಕು ಮಂತ್ರಗಳಿಂದ ನಾಲ್ಕು ನಾಲ್ಕು ಸಮಿತ್ತುಗಳನ್ನು ಅಗ್ನಿಗಳಲ್ಲಿ ಹಾಕಬೇಕೆಂಬ ಇನ್ನೊಂದು ವಿನಿಯೋಗವಿದೆ. [ಆಪ.ಶ್ರೌ. 6.16.12]

ದೇವಾ ಅಸುರಾಣಾಗ್ಂ ಶತತರ್ಹಾಗ್ಂಸ್ತೃಗ್ಂಹಂತಿ

ಯದೇತಯಾ ಸಮಿಧಮಾದಧಾತಿ ವಜ್ರಮೇವೈತಚ್ಛತಘ್ನೀಂ

---

ದೇವಾಃ । ಅಸುರಾಣಾಮ್ । ಶತತರ್ಹಾನಿತಿ ಶತ-ತರ್ಹಾನ್। ತೃಗ್ಂಹಂತಿ । ಯತ್।

ಏತಯಾ । ಸಮಿಧಮಿತಿ ಸಮ್-ಇಧಮ್ । ಆದಧಾತೀತ್ಯಾ - ದಧಾತಿ । ವಜ್ರಮ್।

ಏವ । ಏತತ್ । ಶತಘ್ನೀಮಿತಿ ಶತ-ಘ್ನೀಮ್ ।



---

| | |
|---|---|
| ದೇವಾಃ ಅಸುರಾಣಾಮ್ ಶತತರ್ಹಾನ್ ತೃಗ್ಂಹಂತಿ | ದೇವತೆಗಳು—ರಾಕ್ಷಸರ ಪೈಕಿ ಒಂದೇಟಿನಿಂದಲೇ ನೂರು ಜನರನ್ನು ಕೊಲ್ಲುವಂತಹ ವೀರರಾದ ಅಸುರರನ್ನೂ —ಸಂಹರಿಸಿದರು. |
| ಯತ್ ಏತಯಾ ಸಮಿಧಮ್ ಆ ದಧಾತಿ | [ಇದು ಸಮಿದಾಧಾನವಿಧಿ] ಈ ಋಕ್ಕಿನಿಂದ ಸಮಿದಾಧಾನವನ್ನು ಮಾಡಿದರೆ, |
| ವಜ್ರಮ್ ಏವ ಏತತ್ ಶತ ಘ್ನೀಮ್ | ನೂರಾರು ಜನರನ್ನು ಸಂಹರಿಸಬಲ್ಲ ಈ ಮಂತ್ರ ವನ್ನೇ ಇಂದ್ರನ ವಜ್ರಾಯುಧಸದೃಶವನ್ನಾಗಿ ಮಾಡಿ |

ಯಜಮಾನೋ ಭ್ರಾತೃವ್ಯಾಯ ಪ್ರಹರತಿ ಸ್ತೃತ್ಯಾ ಅಛಂಬಟ್ಕಾ

ರಗ್ಂ ಸಂ ತ್ವಮಗ್ನೇ ಸೂರ್ಯಸ್ಯ ವರ್ಚಸಾಽಗಥಾ ಇತ್ಯಾಹೈ

---

ಯಜಮಾನಃ । ಭ್ರಾತೃವ್ಯಾಯ । ಪ್ರೇತಿ । ಹರತಿ । ಸ್ತೃತ್ಯೈ । ಅಛಂಬಟ್ಕಾರಮಿತ್ಯ

ಛಂಬಟ್-ಕಾರಮ್। ಸಮಿತಿ । ತ್ವಮ್ । ಅಗ್ನೇ । ಸೂರ್ಯಸ್ಯ । ವರ್ಚಸಾ । ಅಗಥಾಃ।

ಇತಿ । ಆಹ ।

---

| | |
|---|---|
| ಯಜಮಾನಃ ಭ್ರಾತೃವ್ಯಾಯ ಪ್ರ ಹರತಿ | ಯಜಮಾನನು ಶತ್ರುಗಳ ಮೇಲೆ ಪ್ರಹರಿಸಿದಂತೆ ಆಗುತ್ತದೆ. [ಇದರಿಂದ ಸಮಿದಾಧಾನ ಮಾಡಿದರೆ ಶತ್ರುಸಂಹಾರವಾಗುತ್ತದೆ.] |
| ಸ್ತೃತ್ಯೈ ಅಛಂಬಟ್ಕಾರಮ್ | ಯಜಮಾನನು ತನಗೆ ತೊಂದರೆಯಾಗದಿರಲು ಪ್ರಹರಿಸುತ್ತಾನೆ. ಮತ್ತು ನಾಶವಿಲ್ಲದುದರಿಂದ ಯಜಮಾನನು ವಿಸ್ತೃತವಾದ ಸಂಪತ್ತನ್ನು ಪಡೆಯುತ್ತಾನೆ./ಸ್ತೃತ್ಯೈ = ಶತ್ರುಗಳ ವಿನಾಶಕ್ಕಾಗಿ ವಜ್ರವನ್ನು ಪ್ರಹರಿಸಿದಂತೆ ಆಗುತ್ತದೆ. [ಭ.ಭಾ.] |

**'ಸ್ವಂ ತವಾಗ್ನೇ....' ಎಂಬ ಮಂತ್ರದ ಅರ್ಧಭಾಗದ ವಿವರಣೆ**

| | |
|---|---|
| ಸಮ್ ತ್ವಮ್ ಅಗ್ನೇ ಸೂರ್ಯಸ್ಯ ವರ್ಚಸಾ ಅಗಥಾಃ ಇತಿ ಆಹ | ಉಪಸ್ಥಾನದಲ್ಲಿ ವಿನಿಯುಕ್ತವಾದ ಈ ಮಂತ್ರ ಭಾಗದ [ಸಮ್... ಅಗಥಾಃ] ವಿವರಣೆಯನ್ನು ಶ್ರುತಿಯು ಹೀಗೆ ಮಾಡುತ್ತದೆ:- |

ತತ್ತ್ವಮಸೀದಮಹಂ ಭೂಯಾಸಮಿತಿ ವಾವೈತದಾಹ ತ್ವಮಗ್ನೇ

ಸೂರ್ಯವರ್ಚಾ ಅಸೀತ್ಯಾಹಾಶಿಷಮೇವೈತಾಮಾಶಾಸ್ತೇ॥೭-30॥

[ಮೂರ್ಧಾನಗ್ಂ ಷಡ್ವಾ ಏಷ ಉಪತಿಷ್ಠತೇ ಶತಮಹಗ್ಂ ಷೋಡಶ ಚ]

---

ಏತತ್ । ತ್ವಮ್ । ಅಸಿ । ಇದಮ್ । ಅಹಮ್ । ಭೂಯಾಸಮ್ । ಇತಿ । ವಾವ।

ಏತತ್। ಆಹ । ತ್ವಮ್। ಅಗ್ನೇ । ಸೂರ್ಯವರ್ಚಾ ಇತಿ ಸೂರ್ಯ-ವರ್ಚಾಃ । ಅಸಿ।

ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ। ಏತಾಮ್ । ಏತಿ । ಶಾಸ್ತೇ ॥ ೭ ॥

---

ಏತತ್ ತ್ವಮ್ ಅಸಿ ಇದಮ್ ಅಹಮ್ ಭೂಯಾಸಮ್ ಇತಿ ವಾವ ಏತತ್ ಆಹ

ಅಗ್ನಿಯೇ! ಈ ಮಂತ್ರವು ನೀನು ಸೂರ್ಯನ ವರ್ಚಸ್ಸಿನಿಂದಲೂ, ಋಷಿಗಳ ಸ್ತೋತ್ರ ಗಳಿಂದಲೂ, ಪ್ರಿಯವಾದ ಸ್ಥಾನಗಳಿಂದಲೂ ಕೂಡಿರುವೆಯೆಂದು ಹೇಳುತ್ತದೆ. ನಾನೂ ನಿನ್ನಂತೆಯೇ ಸೂರ್ಯನಂತೆ ವರ್ಚಸ್ಸುಳ್ಳವನೂ, ಪ್ರಶಂಸಾರ್ಹನೂ, ಒಳ್ಳೆಯ ಸ್ಥಾನವನ್ನು ಪಡೆದವನೂ ಆಗಬೇಕೆಂದು ಯಜ ಮಾನನು ಪ್ರಾರ್ಥಿಸುತ್ತಾನೆ ಎಂಬುದೇ ಈ ಭಾಗದ ಅಭಿಪ್ರಾಯವೆಂದು ಶ್ರುತಿಯು ಹೇಳುತ್ತದೆ.

## 'ತ್ವಮಗ್ನೇ....' ಎಂಬ ಮಂತ್ರಭಾಗದ ವಿವರಣೆ

ತ್ವಮ್ ಅಗ್ನೇ ಸೂರ್ಯ ವರ್ಚಾಃ ಅಸಿ ಇತಿ ಆಹ ಆಶಿಷಮ್ ಏವ ಏತಾಮ್ ಆಶಾಸ್ತೇ ।

'ತ್ವಮಗ್ನೇ' ಎಂಬ ಮಂತ್ರಭಾಗವು 'ಯಜಮಾನನು ಆಯುಸ್ಸನ್ನೂ, ವರ್ಚಸ್ಸನ್ನೂ, ಪ್ರಜೆಗಳನ್ನೂ ಅಗ್ನಿ ಯನ್ನು ಸಂಬೋಧಿಸಿ ಕೇಳಿಕೊಳ್ಳುತ್ತಾನೆ' ಎಂಬುದೇ ಈ ಭಾಗದ ಅಭಿಪ್ರಾಯವೆಂದು ಶ್ರುತಿಯು ಹೇಳುತ್ತದೆ.

---

## ॥ ಅಷ್ಟಮೋಽನುವಾಕಃ ॥

ಸಂ ಪಶ್ಯಾಮಿ ಪ್ರಜಾ ಅಹಮಿತ್ಯಾಹ ಯಾವಂತ ಏವ ಗ್ರಾಮ್ಯಾಃ ಪಶವಸ್ತಾನೇವಾವರುಂಧೇಽಂಭಸ್ಸ್ಥಾಂಭೋ ವೋ ಭಕ್ಷೀಯೇತ್ಯಾಹಾಂಭೋ ಹ್ಯೇತಾ

---

ಸಮಿತಿ । ಪಶ್ಯಾಮಿ । ಪ್ರಜಾ ಇತಿ ಪ್ರ-ಜಾಃ । ಅಹಮ್ । ಇತಿ । ಆಹ । ಯಾವಂತಃ। ಏವ । ಗ್ರಾಮ್ಯಾಃ । ಪಶವಃ । ತಾನ್ । ಏವ । ಅವೇತಿ । ರುಂಧೇ । ಅಂಭಃ । ಸ್ಥ। ಅಂಭಃ । ವಃ । ಭಕ್ಷೀಯ । ಇತಿ । ಆಹ । ಅಂಭಃ । ಹಿ । ಏತಾಃ ।

---

**'ಸಂ ಪಶ್ಯಾಮಿ...' ಎಂಬ ಮಂತ್ರದಲ್ಲಿರುವ 'ಇಡಪ್ರಜಸಃ ಮಾನವೀಃ' ಎಂಬುದರ ವಿವರಣೆ**

| | |
|---|---|
| ಸಮ್ ಪಶ್ಯಾಮಿ ಪ್ರಜಾಃ ಅಹಮ್ ಇತಿ ಆಹ | 'ಸಂ ಪಶ್ಯಾಮಿ' ಎಂಬ ಮಂತ್ರದ ಅಭಿಪ್ರಾಯವನ್ನು ಶ್ರುತಿಯು ಹೀಗೆ ಹೇಳುತ್ತದೆ. |
| ಯಾವಂತಃ ಏವ ಗ್ರಾಮ್ಯಾಃ ಪಶವಃ ತಾನ್ ಏವ ಅವರುಂಧೇ | *ಗ್ರಾಮ್ಯವಾದ [ಗ್ರಾಮದಲ್ಲಿರುವ] ಪಶುಗಳು ಎಷ್ಟು ಇವೆಯೋ, ಅವೆಲ್ಲವನ್ನೂ ಯಜಮಾನನು [ಈ ಮಂತ್ರೋಚ್ಚಾರಣೆಯಿಂದ] ಪಡೆದುಕೊಳ್ಳುತ್ತಾನೆ. [ಎಂದು ಶ್ರುತಿಯು ಹೇಳುತ್ತದೆ] |

**ಪಶುಶಾಲೆಯ ಉಪಸ್ಥಾನದ ಮಂತ್ರಗಳ ವಿವರಣೆ**

| | |
|---|---|
| ಅಂಭಃ ಸ್ಥ ಅಂಭಃ ವಃ ಭಕ್ಷೀಯ ಇತಿ ಆಹ ಅಂಭಃ ಹಿ ಏತಾಃ | 'ಅಂಭಃ ಸ್ಥ' ಎಂಬ ಪದವು 'ಕುಡಿದ ನೀರಿನ ಸಾರದಿಂದ ಉಂಟಾದ ಹಾಲನ್ನು ಕೊಡುವುದರಿಂದ ಈ ಗೋವುಗಳೂ ಅಂಭಸ್ಸ್ವರೂಪವೇ ಆಗಿವೆಯಷ್ಟೆ [ಅನ್ನ ಸ್ವರೂಪವೂ ಆಗಿದೆಯಷ್ಟೆ]' ಎಂದು ಹೇಳುತ್ತದೆ [ಎಂದು ಶ್ರುತಿಯು ಹೇಳುತ್ತದೆ] |

---

*ಗೋವು, ಕುದುರೆ, ಆಡು, ಕುರಿ, ಮನುಷ್ಯ, ಕತ್ತೆ ಮತ್ತು ಒಂಟೆ ಇವು ಏಳು ಗ್ರಾಮ್ಯಪಶುಗಳು.

ಮಹಸ್ಸ್ಥ ಮಹೋ ವೋ ಭಕ್ಷೀಯೇತ್ಯಾಹ ಮಹೋ ಹ್ಯೇತಾ

ಸ್ಸಹಸ್ಸ್ಥ ಸಹೋ ವೋ ಭಕ್ಷೀಯೇತ್ಯಾಹ ಸಹೋ ಹ್ಯೇತಾ

ಊರ್ಜಸ್ಸ್ಥೋರ್ಜಂ ವೋ ಭಕ್ಷೀಯೇತ್ಯಾ [ಭಕ್ಷೀಯೇತಿ (೧)

ಆಹೋರ್ಜೋ]ಹೋರ್ಜೋ ಹ್ಯೇತಾ

---

ಮಹಃ । ಸ್ಥ । ಮಹಃ । ವಃ । ಭಕ್ಷೀಯ । ಇತಿ । ಆಹ । ಮಹಃ । ಹಿ । ಏತಾಃ।

ಸಹಃ। ಸ್ಥ । ಸಹಃ । ವಃ । ಭಕ್ಷೀಯ । ಇತಿ । ಆಹ । ಸಹಃ । ಹಿ । ಏತಾಃ। ಊರ್ಜಃ।

ಸ್ಥ । ಊರ್ಜಮ್ । ವಃ । ಭಕ್ಷೀಯ । ಇತಿ (೧) ॥ ಆಹ । ಊರ್ಜಃ । ಹಿ । ಏತಾಃ।

---



| | |
|---|---|
| ಮಹಃ ಸ್ಥ ಮಹಃ ವಃ ಭಕ್ಷೀಯ ಇತಿ ಆಹ ಮಹಃ ಹಿ ಏತಾಃ | ಎಲ್ಲರಿಂದಲೂ ಆದರಣೀಯವಾದುದರಿಂದ ಮಹಃ ಎಂದೆನಿಸಿಕೊಳ್ಳುವ ಹಾಲನ್ನು ಕೊಡುವುದರಿಂದ ಗೋವುಗಳು ಮಹಸ್ಸ್ವರೂಪವೇ ಆಗಿವೆಯಷ್ಟೆ ಎಂಬುದು ಮಹಃಪದದ ತಾತ್ಪರ್ಯವೆಂದು [ಶ್ರುತಿಯು ಹೇಳುತ್ತದೆ] [ಮಹಃ = ಪೂಜಾ /ಯಾಗ. ಅದಕ್ಕೆ ಸಾಧನವಾದುದರಿಂದ ಕ್ಷೀರವೂ ಮಹಃ] |
| ಸಹಃ ಸ್ಥ ಸಹಃ ವಃ ಭಕ್ಷೀಯ ಇತಿ ಆಹ ಸಹಃ ಹಿ ಏತಾಃ | **'ಸಹಃ ಸ್ಥ'** ಎಂಬ ಮಂತ್ರಭಾಗವು —[ಸಹೋ ಹ್ಯೇತಾಃ ಎಂಬುದಾಗಿ] 'ಬಲಕ್ಕೆ ಕಾರಣವಾದ ತುಪ್ಪಕ್ಕೆ **'ಸಹಃ'** ಎಂದು ಹೆಸರು. ತುಪ್ಪಕ್ಕೆ ಕಾರಣವಾದ ಗೋವುಗಳೂ ಸಹಸ್ಸ್ವರೂಪಗಳೇ ಆಗಿವೆ' ಎಂದು– ವಿವರಿಸುತ್ತದೆ. |
| ಊರ್ಜಃ ಸ್ಥ ಊರ್ಜಮ್ ವಃ ಭಕ್ಷೀಯ ಇತಿ ಆಹ ಊರ್ಜಃ ಹಿ ಏತಾಃ | ಕ್ಷೀರಾದಿರಸಗಳು **'ಊರ್ಜಃ'** ಎನ್ನಿಸಿಕೊಳ್ಳುತ್ತವೆ. ಅವುಗಳಿಗೆ ಕಾರಣವಾಗಿರುವ ಈ ಗೋವುಗಳೂ ಸಹ ಊರ್ಜಸ್ಸ್ವರೂಪಗಳಷ್ಟೆ [ಎಂದು ಶ್ರುತಿಯು ಹೇಳುತ್ತದೆ] |

ರೇವತೀ ರಮದ್ಧ್ವಮಿತ್ಯಾಹ ಪಶವೋ ವೈ ರೇವತೀಃ ಪಶೂನೇ ವಾತ್ಮನ್ರಮಯತ ಇಹೈವ ಸ್ತೇತೋ ಮಾಽಪಗಾತೇತ್ಯಾಹ ಧ್ರುವಾ ಏವೈನಾ ಅನಪಗಾಃ ಕುರುತ ಇಷ್ಟಕಚಿದ್ವಾ ಅನ್ಯೋಽಗ್ನಿಃ

---

ರೇವತೀಃ । ರಮದ್ಧ್ವಮ್। ಇತಿ । ಆಹ । ಪಶವಃ । ವೈ । ರೇವತೀಃ। ಪಶೂನ್ । ಏವ। ಆತ್ಮನ್ । ರಮಯತೇ । ಇಹ । ಏವ । ಸ್ತ । ಇತಃ । ಮಾ । ಅಪೇತಿ । ಗಾತ । ಇತಿ । ಆಹ । ಧ್ರುವಾಃ । ಏವ । ಏನಾಃ । ಅನಪಗಾ ಇತ್ಯನಪ - ಗಾಃ । ಕುರುತೇ । ಇಷ್ಟಕಚಿದಿತೀಷ್ಟಕ-ಚಿತ್ । ವೈ । ಅನ್ಯಃ । ಅಗ್ನಿಃ ।

---

**'ರೇವತೀ ರಮದ್ಧ್ವಮ್' ಎಂಬ ಮಂತ್ರದ ವಿವರಣೆ**

| | |
|---|---|
| ರೇವತೀಃ ರಮದ್ಧ್ವಮ್ ಇತಿ ಆಹ ಪಶವಃ ವೈ ರೇವತೀಃ | ಕ್ಷೀರ-ಘೃತಾದಿ ಧನಗಳನ್ನು ಹೊಂದಿರುವುದರಿಂದ ಪಶುಗಳು 'ರೇವತಿ'ಗಳೆನ್ನಿಸಿಕೊಳ್ಳುತ್ತವೆ. |
| ಪಶೂನ್ ಏವ ಆತ್ಮನ್ ರಮಯತೇ | [ಈ ಮಂತ್ರವನ್ನು ಹೇಳುವುದರಿಂದ] ಯಜಮಾನನು ತನ್ನ ಮನೆಯಲ್ಲಿ ಪಶುಗಳನ್ನು ಸುಖವಾಗಿ ಕ್ರೀಡಿಸುತ್ತಿರುವಂತೆ ಮಾಡುತ್ತಾನೆ [ಎಂದು ಶ್ರುತಿಯು ಹೇಳುತ್ತದೆ.] |
| ಇಹ ಏವ ಸ್ತ ಇತಃ ಮಾ ಅಪ ಗಾತ ಇತಿ ಆಹ ಧ್ರುವಾಃ ಏವ ಏನಾಃ ಅನಪಗಾಃ ಕುರುತೇ | **'ಇಹೈವ ಸ್ತ' 'ಇತೋ ಮಾಽಪಗಾತ'** ಎಂದು ಹೇಳುವುದರಿಂದ 'ಯಜಮಾನನು ತನ್ನ ಮನೆಯಲ್ಲಿ ಗೋವುಗಳು ಸ್ಥಿರವಾಗಿರುವಂತೆಯೂ, ಆಗಲಿ ಹೋಗದಂತೆಯೂ ಮಾಡುತ್ತಾನೆ' [ಎಂದು ಶ್ರುತಿಯು ಹೇಳುತ್ತದೆ.] |

**'ಸಗ್ಂಹಿತಾಸಿ' ಎಂಬ ಮಂತ್ರದ ಪ್ರಯೋಜನ**

| | |
|---|---|
| ಇಷ್ಟಕಚಿತ್ ವೈ ಅನ್ಯಃ ಅಗ್ನಿಃ | [ಇಟ್ಟಿಗೆಗಳನ್ನು ಮಂತ್ರಗಳಿಂದ ಉಪಧಾನ ಮಾಡಿ ಅಗ್ನಿಯನ್ನು ಸ್ಥಾಪಿಸುತ್ತಾರೆ] ಈ ಅಗ್ನಿಯು **'ಇಷ್ಟಕಚಿತ್'** ಎನಿಸಿಕೊಳ್ಳುವನು. |

ಪಶುಚಿದನ್ಯಸ್ಸಗ್ಂಹಿತಾಽಸಿ ವಿಶ್ವರೂಪೀರಿತಿ ವತ್ಸಮಭಿಮೃಶ

ತ್ಯುಪೈವೈನಂ ಧತ್ತೇ ಪಶುಚಿತಮೇನಂ ಕುರುತೇ ಪ್ರ[೨] ವಾ

ಏಷೋಽಸ್ಮಾಲ್ಲೋಕಾಚ್ಚ್ಯವತೇ

---

ಪಶುಚಿದಿತಿ ಪಶು-ಚಿತ್ । ಅನ್ಯಃ । ಸಗ್ಂಹಿತೇತಿ ಸಮ್-ಹಿತಾ । ಅಸಿ । ವಿಶ್ವರೂಪೀರಿತಿ ವಿಶ್ವ-ರೂಪೀಃ। ಇತಿ। ವತ್ಸಮ್ । ಅಭೀತಿ । ಮೃಶತಿ । ಉಪೇತಿ । ಏವ । ಏನಮ್। ಧತ್ತೇ । ಪಶುಚಿತಮಿತಿ ಪಶು - ಚಿತಮ್ । ಏನಮ್ । ಕುರುತೇ । ಪ್ರೇತಿ । ವೈ । ಏಷಃ । ಅಸ್ಮಾತ್ । ಲೋಕಾತ್ । ಚ್ಯವತೇ ।

---

| | |
|---|---|
| ಪಶುಚಿತ್ ಅನ್ಯಃ | [ಪಶುಗಳನ್ನು ಉಪಧಾನ ಮಾಡಿ ಸ್ಥಾಪಿಸುವ ಅಗ್ನಿಯು] '**ಪಶುಚಿತ್**' ಎನ್ನಿಸಿಕೊಳ್ಳುತ್ತಾನೆ. [ಇವರಿಬ್ಬರೂ ಬೇರೆ ಬೇರೆ ಅಗ್ನಿಗಳು.] |
| ಸಗ್ಂಹಿತಾ ಅಸಿ ವಿಶ್ವರೂಪೀಃ ಇತಿ ವತ್ಸಮ್ ಅಭಿಮೃಶತಿ | '**ಸಗ್ಂಹಿತಾಸಿ**' ಎಂಬ ಮಂತ್ರದಿಂದ ಕರುವನ್ನು ಮುಟ್ಟಬೇಕು. [ವಿಧಿ] |
| ಉಪ ಏವ ಏನಮ್ ಧತ್ತೇ | ಇದರಿಂದ ಪಶುವನ್ನು ಉಪಧಾನ ಮಾಡಿದಂತೆ ಆಗುತ್ತದೆ. |
| ಪಶುಚಿತಮ್ ಏನಮ್ ಕುರುತೇ | [ಹೀಗೆ ಕರುವನ್ನು ಮುಟ್ಟಿದ ನಂತರ ಉಪಸ್ಥಾನ ಮಾಡುವುದರಿಂದ] ಈ ಅಗ್ನಿಯನ್ನು ಪಶುಚಿತನ್ನಾಗಿ ಮಾಡಿದಂತೆ ಆಗುತ್ತದೆ. |

### ಗಾರ್ಹಪತ್ಯೋಪಸ್ಥಾನದ ವಿಧಿ - ಅದಕ್ಕೆ ಕಾರಣ

| | |
|---|---|
| ಪ್ರ ವೈ ಏಷಃ ಅಸ್ಮಾತ್ ಲೋಕಾತ್ ಚ್ಯವತೇ | ಈ ಯಜಮಾನನು ಈ ಭೂಲೋಕದಿಂದ ಚ್ಯುತನಾಗಿ ಹೋಗುತ್ತಾನೆ. |

ಯ ಆಹವನೀಯಮುಪತಿಷ್ಠತೇ ಗಾರ್ಹಪತ್ಯ

ಮುಪತಿಷ್ಠತೇಽಸ್ಮಿನ್ನೇವ ಲೋಕೇ ಪ್ರತಿತಿಷ್ಠತ್ಯಥೋ

ಗಾರ್ಹಪತ್ಯಾಯೈವ ನಿಹ್ನುತೇ

---

ಯಃ । ಆಹವನೀಯಮಿತ್ಯಾ-ಹವನೀಯಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ । ಗಾರ್ಹಪತ್ಯಮಿತಿ ಗಾರ್ಹ-ಪತ್ಯಮ್ । ಉಪೇತಿ । ತಿಷ್ಠತೇ । ಅಸ್ಮಿನ್ । ಏವ । ಲೋಕೇ। ಪ್ರತೀತಿ । ತಿಷ್ಠತಿ । ಅಥೋ ಇತಿ । ಗಾರ್ಹಪತ್ಯಾಯೇತಿ ಗಾರ್ಹ-ಪತ್ಯಾಯ। ಏವ। ನೀತಿ। ಹ್ನುತೇ ।

---

| | |
|---|---|
| ಯಃ ಆಹವನೀಯಮ್ ಉಪ ತಿಷ್ಠತೇ | ಯಾವ ಯಜಮಾನನು ಆಹವನೀಯೋಪಸ್ಥಾನ ಮಾಡುತ್ತಾನೆಯೋ [ಆವನು ಭೂಲೋಕದಿಂದ ಚ್ಯುತನಾಗಿ ಸ್ವರ್ಗವನ್ನು ಸೇರುತ್ತಾನೆ] |
| ಗಾರ್ಹಪತ್ಯಮ್ ಉಪತಿಷ್ಠತೇ | ಗಾರ್ಹಪತ್ಯಾಗ್ನಿಯ ಉಪಸ್ಥಾನವನ್ನು ಮಾಡಬೇಕು. [ವಿಧಿ] |
| ಅಸ್ಮಿನ್ ಏವ ಲೋಕೇ ಪ್ರತಿ ತಿಷ್ಠತಿ | [ಗಾರ್ಹಪತ್ಯೋಪಸ್ಥಾನದಿಂದ] ಈ ಲೋಕದಲ್ಲಿಯೇ ಪ್ರತಿಷ್ಠಿತನಾಗಿರುತ್ತಾನೆ.* |
| ಅಥೋ ಗಾರ್ಹಪತ್ಯಾಯ ಏವ ನಿಹ್ನುತೇ | ಮತ್ತು ಉಪಸ್ಥಾನದಿಂದ ಗಾರ್ಹಪತ್ಯನಿಗೆ ಬಾಗಿದವನಾಗುತ್ತಾನೆ. ತನ್ನ ಪ್ರತಿಷ್ಠಾಸಿದ್ಧಿಗಾಗಿ ಆಹವನೀಯವನ್ನು ಮರೆಮಾಚಿ ಗಾರ್ಹಪತ್ಯನನ್ನು ನೀನೇ ಉಪಸ್ಥಾನಯೋಗ್ಯನೆನ್ನುತ್ತಾನೆ. |

---

*ಅಸ್ಮೈ ವೈ ಲೋಕಾಯ ಗಾರ್ಹಪತ್ಯ ಆಧೀಯತೇ। ಅಮುಷ್ಮಾ ಆಹವನೀಯಃ । **ತೈ ಸಂ. 6.1.8.**

ಸುವರ್ಗೋ ಲೋಕ ಆಹವನೀಯಃ । ಎಂಬ ಶ್ರುತಿವಚನಗಳೂ ಇವೆ. **ತೈ.ಬ್ರಾ. 1.6.3.**

ಗಾಯತ್ರೀಭಿರುಪತಿಷ್ಠತೇ ತೇಜೋ ವೈ ಗಾಯತ್ರೀ ತೇಜ

ಏವಾತ್ಮನ್ಧತ್ತೇಽಥೋ ಯದೇತಂ ತೃಚಮನ್ವಾಹ ಸಂತತ್ಯೈ

---

ಗಾಯತ್ರೀಭಿಃ । ಉಪೇತಿ । ತಿಷ್ಠತೇ । ತೇಜಃ । ವೈ । ಗಾಯತ್ರೀ । ತೇಜಃ । ಏವ।

ಆತ್ಮನ್ನ್ । ಧತ್ತೇ । ಅಥೋ ಇತಿ । ಯತ್ । ಏತಮ್ । ತೃಚಮ್ । ಅನ್ವಾಹೇತ್ಯನು-ಆಹ।

ಸಂತತ್ಯಾ ಇತಿ ಸಮ್-ತತ್ಯೈ ।

---



**ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಉಪಸ್ಥಾನದ ವಿಧಿ-ಪ್ರಯೋಜನ**

| | |
|---|---|
| ಗಾಯತ್ರೀಭಿಃ ಉಪತಿಷ್ಠತೇ | ಗಾಯತ್ರೀಛಂದಸ್ಸಿನ 'ಉಪ ತ್ವಾಽಗ್ನೇ' ಮೊದಲಾದ ಮೂರು ಋಕ್ಕುಗಳಿಂದ ಉಪಸ್ಥಾನ ಮಾಡಬೇಕು. [ವಿಧಿ] |
| ತೇಜಃ ವೈ ಗಾಯತ್ರೀ | [ಪ್ರಜಾಪತಿಯ ಮುಖದಿಂದ ಅಗ್ನಿಯೊಡನೆ ಹುಟ್ಟಿದುದರಿಂದ] ಗಾಯತ್ರಿಯು ತೇಜಸ್ಸ್ವರೂಪಳು. |
| ತೇಜಃ ಏವ ಆತ್ಮನ್ ಧತ್ತೇ | [ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಉಪಸ್ಥಾನ ಮಾಡಿದ ಯಜಮಾನನು] ತೇಜಸ್ಸನ್ನು ತನ್ನಲ್ಲಿ ಧರಿಸುತ್ತಾನೆ. |
| ಅಥೋ ಯತ್ ಏತಮ್ ತೃಚಮ್ ಅನ್ವಾಹ ಸಂತತ್ಯೈ | ಮತ್ತು ಈ ಮೂರು ಋಕ್‌ಗಳಿಂದ ಉಪಸ್ಥಾನ ಮಾಡುವುದು ಮಧ್ಯದಲ್ಲಿ ವಿಚ್ಛಿತ್ತಿ ಇಲ್ಲದಂತೆ ಮಾಡುತ್ತದೆ. |

ಗಾರ್ಹಪತ್ಯಂ ವಾ ಅನು ದ್ವಿಪಾದೋ ವೀರಾಃ ಪ್ರಜಾಯಂತೇ

ಯ ಏವಂ ವಿದ್ವಾನ್ದ್ವಿಪದಾಭಿರ್ಗಾರ್ಹಪತ್ಯಮುಪತಿಷ್ಠತ

[ತಿಷ್ಠತೇ (೩)ಆಽಸ್ಯ] ಆಽಸ್ಯ ವೀರೋ ಜಾಯತ

---

**ಗಾರ್ಹಪತ್ಯಮಿತಿ ಗಾರ್ಹ-ಪತ್ಯಮ್ । ವೈ । ಅನ್ವಿತಿ । ದ್ವಿಪಾದ ಇತಿ ದ್ವಿ-ಪಾದಃ। ವೀರಾಃ । ಪ್ರೇತಿ । ಜಾಯಂತೇ । ಯಃ । ಏವಮ್ । ವಿದ್ವಾನ್ । ದ್ವಿಪದಾಭಿರಿತಿ ದ್ವಿ-ಪದಾಭಿಃ । ಗಾರ್ಹಪತ್ಯಮಿತಿ ಗಾರ್ಹ-ಪತ್ಯಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ (೩) । ಏತಿ । ಅಸ್ಯ । ವೀರಃ । ಜಾಯತೇ ।**

---

**ದ್ವಿಪದೆಗಳಿಂದ ಉಪಸ್ಥಾನ ಮಾಡಬೇಕೆಂಬ ವಿಧಿ-ಪ್ರಯೋಜನ**

| | |
|---|---|
| ಗಾರ್ಹಪತ್ಯಮ್ ವೈ ಅನು ದ್ವಿಪಾದಃ ವೀರಾಃ ಪ್ರಜಾಯಂತೇ ಯಃ ಏವಮ್ ವಿದ್ವಾನ್ ದ್ವಿಪದಾಭಿಃ ಗಾರ್ಹಪತ್ಯಮ್ ಉಪತಿಷ್ಠತೇ | ಗಾರ್ಹಪತ್ಯಾಗ್ನಿಯನ್ನು ಅನುಸರಿಸಿ, ಎರಡು ಪಾದಗಳುಳ್ಳ ವೀರರು [ಮಾನವವೀರರು] ಶ್ರೇಷ್ಠವಾಗಿ ಹುಟ್ಟುತ್ತಾರೆ. ಹೀಗೆ ತಿಳಿದ ಯಾವ ಯಜಮಾನನು 'ಅಗ್ನೇ ತ್ವಂ ನೋ ಅಂತಮಃ' ಮೊದಲಾದ ಮೂರು ದ್ವಿಪದೆಗಳಿಂದ [ನಾಲ್ಕನೆಯದು ಶಾಖಾಂತರೀಯ] ಗಾರ್ಹಪತ್ಯೋಪಸ್ಥಾನ ಮಾಡುತ್ತಾನೆಯೋ[ವಿಧಿ] |
| ಆ ಅಸ್ಯ ವೀರಃ ಜಾಯತೇ | ಈ ಯಜಮಾನನಿಗೆ ವೀರನಾದ ಪುತ್ರನು ಹುಟ್ಟುತ್ತಾನೆ. |

ಊರ್ಜಾ ವಃ ಪಶ್ಯಾಮ್ಯೂರ್ಜಾ ಮಾ ಪಶ್ಯತೇತ್ಯಾಹಾಽಽಶಿಷ
ಮೇವೈತಾಮಾಶಾಸ್ತೇ ತತ್ಸವಿತುರ್ವರೇಣ್ಯಮಿತ್ಯಾಹ
ಪ್ರಸೂತ್ಯೈ

---

ಊರ್ಜಾ । ವಃ । ಪಶ್ಯಾಮಿ । ಊರ್ಜಾ । ಮಾ । ಪಶ್ಯತ । ಇತಿ । ಆಹ । ಆಶಿಷ
ಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ತತ್ । ಸವಿತುಃ । ವರೇಣ್ಯಮ್।
ಇತಿ । ಆಹ । ಪ್ರಸೂತ್ಯಾ ಇತಿ ಪ್ರ-ಸೂತ್ಯೈ ।

---

**ಗೃಹ-ಪಶುಪ್ರೇಕ್ಷಣ (ಉಪಸ್ಥಾನ)ದಲ್ಲಿ ವಿನಿಯುಕ್ತವಾದ 'ಊರ್ಜಾ ವಃ' ಎಂಬ ಮಂತ್ರದ ವಿವರಣೆ**

| | |
|---|---|
| ಊರ್ಜಾ ವಃ ಪಶ್ಯಾಮಿ ಊರ್ಜಾ ಮಾ ಪಶ್ಯತ ಇತಿ ಆಹ | 'ಊರ್ಜಾ ವಃ' ಮೊದಲಾದ ಮಂತ್ರಗಳ ತಾತ್ಪರ್ಯವನ್ನು ಶ್ರುತಿಯು ಹೀಗೆ ಹೇಳುತ್ತದೆ:- |
| ಆಶಿಷಮ್ ಏವ ಏತಾಮ್ ಆಶಾಸ್ತೇ | ಊರ್ಕ್ [ರಸ, ಬಲ] ರಾಯಃ ಪೋಷ [ಧನವೃದ್ಧಿ] ಸುಖ, ಪಶು ಮೊದಲಾದ ವಸ್ತುಗಳು ಬೇಕೆಂಬ ಪ್ರಾರ್ಥನೆಯನ್ನು ಯಜಮಾನನು ಈ ಮಂತ್ರದಿಂದ ಮಾಡಿಕೊಳ್ಳುತ್ತಾನೆ. |

**'ತತ್ಸವಿತುಃ....' ಎಂಬ ಉಪಸ್ಥಾನಮಂತ್ರದ ವಿವರಣೆ**

| | |
|---|---|
| ತತ್ ಸವಿತುಃ ವರೇಣ್ಯಮ್ ಇತಿ ಆಹ ಪ್ರಸೂತ್ಯೈ | 'ಎಲ್ಲಕ್ಕೂ ಅನುಮತಿಯನ್ನು ಕೊಡುವ ಸವಿತೃದೇವನನ್ನು ಈ ಉಪಸ್ಥಾನಮಂತ್ರದಿಂದ ಯಜಮಾನನು ಪ್ರಾರ್ಥಿಸುವುದು ಸವಿತೃವಿನ ಅನುಮತಿಗಾಗಿ ಆಗುತ್ತದೆ' ಎಂದು ಶ್ರುತಿಯು ಹೇಳುತ್ತದೆ. |

ಸೋಮಾನಗ್ಗ್ಂ ಸ್ವರಣಮಿತ್ಯಾಹ ಸೋಮಪೀಥಮೇವಾವ ರುಂಧೇ ಕೃಣುಹಿ ಬ್ರಹ್ಮಣಸ್ಪತ ಇತ್ಯಾಹ ಬ್ರಹ್ಮವರ್ಚಸ ಮೇವಾವರುಂಧೇ ಕದಾ ಚನ ಸ್ತರೀರಸೀತ್ಯಾಹ

---

ಸೋಮಾನಮ್ । ಸ್ವರಣಮ್ । ಇತಿ । ಆಹ । ಸೋಮಪೀಥಮಿತಿ ಸೋಮ-ಪೀಥಮ್। ಏವ । ಅವೇತಿ। ರುಂಧೇ । ಕೃಣುಹಿ । ಬ್ರಹ್ಮಣಃ । ಪತೇ । ಇತಿ । ಆಹ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಏವ । ಅವೇತಿ । ರುಂಧೇ । ಕದಾ । ಚನ । ಸ್ತರೀಃ । ಅಸಿ। ಇತಿ । ಆಹ ।

---

**'ಸೋಮಾನಮ್....' ಎಂಬ ಮಂತ್ರದಲ್ಲಿನ 'ಸೋಮಾನಮ್' 'ಬ್ರಹ್ಮಣಸ್ಪತೇ' ಎಂಬುದರ ವಿವರಣೆ**

| | |
|---|---|
| ಸೋಮಾನಮ್ ಸ್ವರಣಮ್ ಇತಿ ಆಹ ಸೋಮಪೀಥಮ್ ಏವ ಅವ ರುಂಧೇ | '**ಸೋಮಾನಮ್**' ಶಬ್ದಯುಕ್ತವಾದ ಮಂತ್ರದಿಂದ ಉಪಸ್ಥಾನ ಮಾಡುವುದರಿಂದ ಯಜಮಾನನು ಸೋಮಪೀಥ [ಸೋಮಪಾನ / ಸೋಮಯಾಗ ಫಲ]ವನ್ನು ಹೊಂದುತ್ತಾನೆ' ಎಂದು ಶ್ರುತಿಯು ಹೇಳುತ್ತದೆ. |
| ಕೃಣುಹಿ ಬ್ರಹ್ಮಣಸ್ಪತ ಇತಿ ಆಹ ಬ್ರಹ್ಮವರ್ಚಸಮ್ ಏವ ಅವ ರುಂಧೇ | ಈ ಮಂತ್ರದಲ್ಲಿಯೇ '**ಕೃಣುಹಿ ಬ್ರಹ್ಮಣಸ್ಪತೇ**' ಎಂದು ಅಗ್ನಿಯ ಸಂಬೋಧನೆ ಇರುವುದರಿಂದ [ಬ್ರಹ್ಮಪತಿಯಾದ ಅಗ್ನಿಯ ಅನುಗ್ರಹದಿಂದ] ಯಜಮಾನನು ಬ್ರಹ್ಮವರ್ಚಸವನ್ನು ಹೊಂದು ತ್ತಾನೆ ಎಂದು ಶ್ರುತಿಯು ಹೇಳುತ್ತದೆ. |

**'ಕದಾ ಚನ....' ಎಂಬ ಮಂತ್ರದ ವ್ಯಾಖ್ಯಾನ**

| | |
|---|---|
| ಕದಾ ಚನ ಸ್ತರೀಃ ಅಸಿ ಇತಿ ಆಹ | '**ಕದಾ ಚನ ಸ್ತರೀರಸಿ**' ಎಂಬ ಶ್ರುತಿಯು ಹೀಗೆ ಹೇಳುತ್ತದೆ :- |

ನ ಸ್ತರೀಗ್ಂ ರಾತ್ರಿಂ ವಸತಿ[ಳ] ಯ ಏವಂ ವಿದ್ವಾನಗ್ನಿಮು ಪತಿಷ್ಠತೇ ಪರಿ ತ್ವಾಽಗ್ನೇ ಪುರಂ ವಯಮಿತ್ಯಾಹ ಪರಿಧಿ ಮೇವೈತಂ ಪರಿದಧಾತ್ಯಸ್ಕಂದಾಯಾಗ್ನೇ ಗೃಹಪತ ಇತ್ಯಾಹ

---

ನ । ಸ್ತರೀಮ್ । ರಾತ್ರಿಮ್ । ವಸತಿ । ಯಃ । ಏವಮ್ । ವಿದ್ವಾನ್ । ಅಗ್ನಿಮ್। ಉಪತಿಷ್ಠತ ಇತ್ಯುಪ-ತಿಷ್ಠತೇ । ಪರೀತಿ । ತ್ವಾ । ಅಗ್ನೇ । ಪುರಮ್ । ವಯಮ್ । ಇತಿ । ಆಹ । ಪರಿಧಿಮಿತಿ ಪರಿ-ಧಿಮ್ । ಏವ । ಏತಮ್ । ಪರೀತಿ । ದಧಾತಿ । ಅಸ್ಕಂದಾಯ । ಅಗ್ನೇ । ಗೃಹಪತ ಇತಿ ಗೃಹ-ಪತೇ । ಇತಿ । ಆಹ ।

---

| | |
|---|---|
| ಯಃ ಏವಮ್ ವಿದ್ವಾನ್ ಅಗ್ನಿಮ್ ಉಪತಿಷ್ಠತೇ | 'ಕದಾ ಚನ ಸ್ತರೀಃ' ಎಂಬ ಮಂತ್ರದ ಅರ್ಥವನ್ನು ತಿಳಿದು ಯಾವ ಯಜಮಾನನು ಅಗ್ನ್ಯುಪಸ್ಥಾನ ಮಾಡುತ್ತಾನೆಯೋ, ಅವನು |
| ನ ಸ್ತರೀಮ್ ರಾತ್ರಿಮ್ ವಸತಿ | ಅಂಧಕಾರಯುಕ್ತವಾದ, ಚೋರವೃಶ್ಚಿಕಾದಿಬಾಧಾ ಯುಕ್ತವಾದ ರಾತ್ರಿಯನ್ನು ಕಳೆಯುವುದಿಲ್ಲ. ಸುಖವಾದ ರಾತ್ರಿಯನ್ನೇ ಕಳೆಯುತ್ತಾನೆ'. |

**'ಪರಿ ತ್ವಾಽಗ್ನೇ....' ಎಂಬುದರಿಂದ ಮಾಡುವ ಉಪಸ್ಥಾನ-ಫಲ**

| | |
|---|---|
| ಪರಿ ತ್ವಾಽಗ್ನೇ ಪುರಮ್ ವಯಮ್ ಇತಿ ಆಹ ಪರಿಧಿಮ್ ಏವ ಏತಮ್ ಪರಿ ದಧಾತಿ ಅಸ್ಕಂದಾಯ | ಗಾರ್ಹಪತ್ಯೋಪಸ್ಥಾನದ 'ಪರಿ ತ್ವಾಗ್ನೇ' ಎಂಬ ಮಂತ್ರವು ಹೀಗೆ ಹೇಳುತ್ತದೆ. ['ಪರಿಧೀಮಹಿ' ಎಂದು ಮಂತ್ರದಲ್ಲಿರುವುದರಿಂದ] ಅತ್ತಿತ್ತ ಚದುರಿ ಹೋಗದಂತೆ ಮಾಡಲು ಈ ಮಂತ್ರದಿಂದ ಯಜಮಾನನು ಅಗ್ನಿಗೆ ಸುತ್ತಲೂ ಪರಿಧಿಯನ್ನು ಹಾಕಿದಂತಾಗುತ್ತದೆ' [ಎಂದು ಶ್ರುತಿಯು ಹೇಳುತ್ತದೆ] |
| ಅಗ್ನೇ ಗೃಹಪತೇ ಇತಿ ಆಹ | 'ಅಗ್ನೇ ಗೃಹಪತೇ' ಎಂಬ ಯಜುರ್ಮಂತ್ರವು |

यथायजुरेवैतच्छतग्ं हिमा इत्याह शतं त्वा हेमन्तानिन्धिषीयेति वावैतदाह पुत्रस्य नाम गृह्णात्यन्नादमेवैनं करोति

ಯಥಾಯಜುರೇವೈತಚ್ಛತಗ್ಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನಿನ್ಧಿಷೀಯೇತಿ ವಾವೈತದಾಹ ಪುತ್ರಸ್ಯ ನಾಮ ಗೃಹ್ಣಾತ್ಯನ್ನಾದಮೇವೈನಂ ಕರೋತಿ

---

ಯಥಾಯಜುರಿತಿ ಯಥಾ-ಯಜುಃ । ಏವ । ಏತತ್ । ಶತಮ್ । ಹಿಮಾಃ । ಇತಿ । ಆಹ । ಶತಮ್ । ತ್ವಾ । ಹೇಮಂತಾನ್ । ಇಂಧಿಷೀಯ । ಇತಿ । ವಾವ । ಏತತ್। ಆಹ । ಪುತ್ರಸ್ಯ । ನಾಮ । ಗೃಹ್ಣಾತಿ । ಅನ್ನಾದಮಿತ್ಯನ್ನ-ಅದಮ್ । ಏವ । ಏನಮ್। ಕರೋತಿ ।

---

| | |
|---|---|
| ಯಥಾಯಜುಃ ಏವ ಏತತ್ | ಸ್ಪಷ್ಟಾರ್ಥವಾಗಿದೆ ಎಂದು ಶ್ರುತಿಯು ಹೇಳುತ್ತದೆ. |

**'ಶತಮ್ ಹಿಮಾಃ....' ಎಂಬ ಮಂತ್ರದ ವ್ಯಾಖ್ಯಾನ**

| | |
|---|---|
| ಶತಮ್ ಹಿಮಾಃ ಇತಿ ಆಹ ಶತಮ್ ತ್ವಾ ಹೇಮಂತಾನ್ ಇಂಧಿಷೀಯ ಇತಿ ವಾವ ಏತತ್ ಆಹ | 'ಶತಮ್ ಹಿಮಾಃ' ಎಂಬ ಮಂತ್ರಭಾಗವು 'ಅಗ್ನಿಯೇ! ನಿನ್ನನ್ನು ನೂರು ಹೇಮಂತ ಋತುಗಳ ಕಾಲ[ನೂರು ಸಂವತ್ಸರಗಳ ಕಾಲ] ಪ್ರಜ್ವಲಿಸುವಂತೆ ಧಾರಣೆ ಮಾಡುವೆನು' ಎಂದು ಯಜಮಾನನು ಹೇಳಿದಂತಾಗುತ್ತದೆಯೆಂಬ ತಾತ್ಪರ್ಯವನ್ನು ಹೊಂದಿದೆಯೆಂದು ಈ ಶ್ರುತಿಯು ಹೇಳುತ್ತದೆ. |

**ಪುತ್ರನಾಮಗ್ರಹಣವಿಧಿ - ಅದರ ಪ್ರಯೋಜನ**

| | |
|---|---|
| ಪುತ್ರಸ್ಯ ನಾಮ ಗೃಹ್ಣಾತಿ ಅನ್ನಾದಮ್ ಏವ ಏನಮ್ ಕರೋತಿ | *ಪುತ್ರನ ಹೆಸರನ್ನು ಗ್ರಹಣ ಮಾಡಬೇಕು. ಈ ನಾಮಗ್ರಹಣದಿಂದ ಆ ಪುತ್ರನನ್ನು ಅನ್ನಭೋಜನ ಸಮರ್ಥನನ್ನಾಗಿ ಯಜಮಾನನು ಮಾಡುತ್ತಾನೆ. |

---

* ಯಜಮಾನನು ಈ ಉಪಸ್ಥಾನಮಂತ್ರದಲ್ಲಿ 'ಅಮುಷ್ಯೈ' ಎಂಬ ಪದದ ಸ್ಥಾನದಲ್ಲಿ 'ಕೇಶವಶರ್ಮಣೇ' ಮೊದಲಾದ ಪುತ್ರನ ಹೆಸರನ್ನು ಹೇಳಬೇಕು.

ತಾಮಾಶಿಷಮಾಶಾಸೇ ತಂತವೇ ಜ್ಯೋತಿಷ್ಮತೀಮಿತಿ
ಬ್ರೂಯಾದ್ಯಸ್ಯ ಪುತ್ರೋಽಜಾತಃ ಸ್ಯಾತ್ತೇಜಸ್ವ್ಯೇವಾಸ್ಯ
ಬ್ರಹ್ಮವರ್ಚಸೀ ಪುತ್ರೋ ಜಾಯತೇ

---

ತಾಮ್ । ಆಶಿಷಮಿತ್ಯಾ-ಶಿಷಮ್ । ಏತಿ । ಶಾಸೇ । ತಂತವೇ । ಜ್ಯೋತಿಷ್ಮತೀಮ್।

ಇತಿ ಬ್ರೂಯಾತ್ । ಯಸ್ಯ । ಪುತ್ರಃ । ಅಜಾತಃ। ಸ್ಯಾತ್। ತೇಜಸ್ವೀ । ಏವ । ಅಸ್ಯ।

ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ। ಪುತ್ರಃ । ಜಾಯತೇ ।



---

| | |
|---|---|
| ಯಸ್ಯ ಪುತ್ರಃ ಅಜಾತಃ ಸ್ಯಾತ್ | ಯಾವ ಯಜಮಾನನಿಗೆ ಮಗನು ಇನ್ನೂ ಹುಟ್ಟಿಲ್ಲವೋ ಆ ಯಜಮಾನನು |
| ತಾಮ್ ಆಶಿಷಮ್ ಆಶಾಸೇ ತನ್ತವೇ ಜ್ಯೋತಿಷ್ಮತೀಮ್ ಇತಿ ಬ್ರೂಯಾತ್ | 'ತಾಮ್.... ಜ್ಯೋತಿಷ್ಮತೀಮ್' ಎಂದು ಹೇಳಿ ಅಗ್ನ್ಯುಪಸ್ಥಾನ ಮಾಡಬೇಕು. |
| ತೇಜಸ್ವೀ ಏವ ಅಸ್ಯ ಬ್ರಹ್ಮವರ್ಚಸೀ ಪುತ್ರಃ ಜಾಯತೇ | ಈ ಯಜಮಾನನಿಗೆ ತೇಜಸ್ವಿಯಾಗಿಯೂ, ಬ್ರಹ್ಮವರ್ಚಸವುಳ್ಳವನಾಗಿಯೂ ಇರುವ ಮಗನೇ ಹುಟ್ಟುತ್ತಾನೆ. |

ತಾಮಾಶಿಷಮಾಶಾಸೇಽಮುಷ್ಮೈ ಜ್ಯೋತಿಷ್ಮತೀಮಿತಿ

ಬ್ರೂಯಾದ್ಯಸ್ಯ ಪುತ್ರೋ ಜಾತಃ ಸ್ಯಾತ್ತೇಜ ಏವಾಸ್ಮಿನ್ಬ್ರಹ್ಮ

ವರ್ಚಸಂ ದಧಾತಿ ॥ ೮-35 ॥

[ಊರ್ಜಂ ವೋ ಭಕ್ಷೀಯೇತಿ ಪ್ರ ಗಾರ್ಹಪತ್ಯಮುಪತಿಷ್ಠತೇ ವಸತಿ

ಜ್ಯೋತಿಷ್ಮತೀಮೇಕಾನ್ನತ್ರಿಗ್ಂಶಚ್ಚ।]

---

ತಾಮ್ । ಆಶಿಷಮಿತ್ಯಾ-ಶಿಷಮ್ । ಏತಿ । ಶಾಸೇ । ಅಮುಷ್ಮೈ । ಜ್ಯೋತಿಷ್ಮತೀಮ್।

ಇತಿ। ಬ್ರೂಯಾತ್ । ಯಸ್ಯ । ಪುತ್ರಃ । ಜಾತಃ । ಸ್ಯಾತ್ । ತೇಜಃ । ಏವ । ಅಸ್ಮಿನ್ನ್।

ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ದಧಾತಿ ॥ ೮ ॥

---

| | |
|---|---|
| ಯಸ್ಯ ಪುತ್ರಃ ಜಾತಃ ಸ್ಯಾತ್ | ಯಾವ ಯಜಮಾನನಿಗೆ ಮಗನು ಹುಟ್ಟಿದ್ದಾನೆಯೋ, ಆ ಯಜಮಾನನು |
| ತಾಮ್ ಆಶಿಷಮ್ ಆಶಾಸೇ ಅಮುಷ್ಮೈ ಜ್ಯೋತಿಷ್ಮತೀಮ್ ಇತಿ ಬ್ರೂಯಾತ್ | ಈ ಮಂತ್ರಭಾಗವನ್ನು 'ಅಮುಷ್ಮೈ' 'ಕೇಶವ ಶರ್ಮಣೇ' ಎಂದು ನಾಮಗ್ರಹಣಯುಕ್ತವಾಗಿ ಹೇಳಬೇಕು. |
| ತೇಜಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ । | 'ಹೀಗೆ ನಾಮಗ್ರಹಣಯುಕ್ತವಾಗಿ ಉಪಸ್ಥಾನ ಮಾಡುವುದರಿಂದ ಆ ಮಗನಲ್ಲಿ ತೇಜಸ್ಸನ್ನೂ, ಬ್ರಹ್ಮವರ್ಚಸವನ್ನೂ ಯಜಮಾನನು ಉಂಟು ಮಾಡುತ್ತಾನೆ. |

## ಅನುವಾಕದ ವಿಶೇಷವಿಷಯಗಳು

## ಮೀಮಾಂಸಾ

**೧) ಶ್ರುತಿ-ಲಿಂಗಗಳ ಬಲಾಬಲವಿಚಾರ [ಜೈ.ಸೂ. 3.3.]**

'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' [ಮೈ. ಸಂ. 3.2.4.] ಎಂಬ ಶ್ರುತಿವಾಕ್ಯವಿದೆ. 'ಕದಾ ಚನ ಸ್ತರೀರಸಿ ನೇಂದ್ರ ಸಶ್ಚಸಿ' ಎಂಬ ಮಂತ್ರವು ಇಂದ್ರನನ್ನು ಪ್ರಧಾನವಾಗಿ ಸ್ತುತಿಸುವುದರಿಂದ ಐಂದ್ರಮಂತ್ರವಾಗಿದೆ. 'ಇಂದ್ರದೇವತಾಕವಾದ ಈ ಮಂತ್ರದಿಂದ ಗಾರ್ಹಪತ್ಯದ ಉಪಸ್ಥಾನ ಮಾಡಬೇಕು' ಎಂದು ಮೇಲಿನ ಶ್ರುತಿವಾಕ್ಯದ ಅರ್ಥವಾಗುತ್ತದೆ. ಇಲ್ಲಿ ಇಂದ್ರಪ್ರಕಾಶನಸಾಮರ್ಥ್ಯರೂಪವಾದ ಲಿಂಗವು ಪ್ರಧಾನವೇ? 'ಗಾರ್ಹಪತ್ಯಮ್' ಎಂಬ ದ್ವಿತೀಯಾಶ್ರುತಿಯೂ ಲಿಂಗವೂ ಸಮಾನಬಲಗಳೇ? ಅಥವಾ 'ಗಾರ್ಹಪತ್ಯಮ್' ಎಂಬ ದ್ವಿತೀಯಾಶ್ರುತಿಯೇ ಪ್ರಧಾನವೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿ ಮೂರು ಪೂರ್ವಪಕ್ಷಗಳಿವೆ.

**ಪೂರ್ವಪಕ್ಷ-೧**

ಶ್ರುತಿ-ಲಿಂಗ ಎರಡೂ ವಿನಿಯೋಜಕಪ್ರಮಾಣಗಳಾದುದರಿಂದ 'ವ್ರೀಹಿಭಿರ್ಯಜೇತ-ಯುವೈರ್ಯಜೇತ' ಎಂಬಂತೆ ವಿಕಲ್ಪವೇ ಯುಕ್ತ. ಆದುದರಿಂದ ಈ ಮಂತ್ರದಿಂದ ಇಂದ್ರೋಪಸ್ಥಾನವನ್ನಾದರೂ ಮಾಡಬೇಕು. ಅಗ್ನ್ಯುಪಸ್ಥಾನವನ್ನಾದರೂ ಮಾಡಬೇಕು.

**ಪೂರ್ವಪಕ್ಷ-೨**

ಮಂತ್ರವು ಉಪಸ್ಥಾನಕ್ಕೆ ಅಂಗವಾದುದರಿಂದ 'ಪ್ರತಿಪ್ರಧಾನಂ ಗುಣಾವೃತ್ತಿ:' ಎಂಬ ನ್ಯಾಯದಂತೆ ಮಂತ್ರಾವೃತ್ತಿಯನ್ನು ಮಾಡಿ ಇಂದ್ರೋಪಸ್ಥಾನವನ್ನೂ, ಗಾರ್ಹಪತ್ಯೋಪಸ್ಥಾನವನ್ನೂ ಮಾಡಬೇಕು.

**ಪೂರ್ವಪಕ್ಷ-೩**

ಇಂದ್ರಶಬ್ದವು ಅಗ್ನಿಪ್ರಕಾಶನದಲ್ಲಿ ಅಸಮರ್ಥವಾದುದರಿಂದ ಈ ಮಂತ್ರದಿಂದ ಇಂದ್ರೋಪಸ್ಥಾನವನ್ನೇ ಮಾಡಬೇಕು.

**ಸಿದ್ಧಾಂತ**

ರೂಢಿಯಿಂದ ಇಂದ್ರಪದವು ಅಗ್ನಿಯನ್ನು ಪ್ರಕಾಶನ ಮಾಡದಿದ್ದರೂ, 'ಇದಿ-ಪರಮೈಶ್ವರ್ಯೇ' ಎಂಬ ಧಾತುವಿನ ಅರ್ಥದ ಮೂಲಕವಾಗಿ

'ಇಂದ್ರನು= ಪರಮೈಶ್ವರ್ಯಯುಕ್ತನು' ಎಂದು ಅರ್ಥವಾಗುವುದರಿಂದ ಗೌಣರೀತಿಯಿಂದ ಅಗ್ನಿಯನ್ನೂ ಪ್ರಕಾಶನ ಮಾಡಬಲ್ಲದು. ಅದರಂತೆಯೇ ಮಂತ್ರದಲ್ಲಿ 'ಮಘವನ್' ಶಬ್ದವೂ 'ಧನವುಳ್ಳವನು' ಎಂಬ ಯೋಗಾರ್ಥದಿಂದ ಅಗ್ನಿಯನ್ನೂ ಪ್ರಕಾಶನ ಮಾಡಬಲ್ಲುದು.

ಲಿಂಗವು ಶ್ರುತಿಯನ್ನು ಅನುಮಾನ ಮಾಡಿ ವಿನಿಯೋಜಕವಾಗಬೇಕು. ಶ್ರುತಿಯು ಸ್ವತಃ ವಿನಿಯೋಜಕವಾಗುತ್ತದೆ. ಆದುದರಿಂದ ಪ್ರಬಲವಾದ ಶ್ರುತಿಗೆ ಅನುಸಾರವಾಗಿ ಅಗ್ನ್ಯುಪಸ್ಥಾನವನ್ನೇ ಮಾಡಬೇಕು.



## ॥ ನವಮೋಽನುವಾಕಃ ॥

ಅಗ್ನಿಹೋತ್ರಂ ಜುಹೋತಿ ಯದೇವ ಕಿಂಚ ಯಜಮಾನಸ್ಯ

ಸ್ವಂ ತಸ್ಯೈವ ತದ್ರೇತಸ್ಸಿಂಚತಿ ಪ್ರಜನನೇ

---

ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್ । ಜುಹೋತಿ । ಯತ್ । ಏವ । ಕಿಮ್ । ಚ । ಯಜಮಾನಸ್ಯ । ಸ್ವಮ್ । ತಸ್ಯ । ಏವ । ತತ್ । ರೇತಃ । ಸಿಂಚತಿ ಪ್ರಜನನ ಇತಿ ಪ್ರ-ಜನನೇ ।

---

ಹಿಂದಿನ ಅನುವಾಕಗಳಲ್ಲಿ ಹೇಳಿದ ಉಪಸ್ಥಾನವು ಅಗ್ನಿಹೋತ್ರದ ಅಂಗವೆಂದು ಈ ಒಂಬತ್ತನೆಯ ಅನುವಾಕದಲ್ಲಿ ಹೇಳಲ್ಪಡುತ್ತದೆ. ಅಗ್ನಿಹೋತ್ರವಿಧಿಯೂ, ಉಪಸ್ಥಾನ ವಿಧಿಯೂ, ಅದರ ಪ್ರಶಂಸೆಯೂ ಈ ಅನುವಾಕದಲ್ಲಿದೆ.

### ಅಗ್ನಿಹೋತ್ರಹೋಮವಿಧಿ-ಅದರ ಪ್ರಶಂಸೆ

| | |
|---|---|
| ಅಗ್ನಿಹೋತ್ರಂ ಜುಹೋತಿ | ಯಜಮಾನನು ಅಗ್ನಿಹೋತ್ರಹೋಮವನ್ನು ಮಾಡಬೇಕು. [ವಿಧಿ] **'ಪಯಸಾ ಜುಹೋತಿ'** ಮೊದಲಾದ ವಾಕ್ಯಗಳಿಂದ ವಿಹಿತವಾದ ಕ್ಷೀರಾದಿದ್ರವ್ಯಗಳಿಂದ **'ಅಗ್ನಿಹೋತ್ರ'** ಎಂಬ ಹೆಸರುಳ್ಳ ಹೋಮವನ್ನು ಮಾಡಬೇಕು. |
| ಯತ್ ಏವ ಕಿಂ ಚ ಯಜಮಾನಸ್ಯ ಸ್ವಮ್ ತಸ್ಯ ಏವ ತತ್ [ಸ್ವಮ್] | ತನ್ನದಾದ ಯಾವುದೊಂದು ವಸ್ತುವನ್ನು ಯಜಮಾನನು ಹೋಮ ಮಾಡುತ್ತಾನೆಯೋ, ಆ ವಸ್ತುವು [ನಾಶ ಹೊಂದದೆ]ಯಜಮಾನನ ಸ್ವತ್ತಾಗಿಯೇ ಇರುತ್ತದೆ. |

### ಪುನರ್ವಿವರಣೆ

| | |
|---|---|
| ರೇತಃ ಸಿಂಚತಿ ಪ್ರಜನನೇ | ಯೋನಿಯಲ್ಲಿ ರೇತಸ್ಸನ್ನು ಸೇಕಮಾಡಿದಂತಾಗುತ್ತದೆ. |

ಪ್ರಜನನಗ್ಂ ಹಿ ವಾ ಅಗ್ನಿರಥೌಷಧೀರಂತಗತಾ ದಹತಿ ತಾಸ್ತ ತೋ ಭೂಯಸೀಃ ಪ್ರಜಾಯಂತೇ ಯತ್ಸಾಯಂ ಜುಹೋತಿ

---

ಪ್ರಜನನಮಿತಿ ಪ್ರ-ಜನನಮ್ । ಹಿ । ವೈ । ಅಗ್ನಿಃ । ಅಥ । ಓಷಧೀಃ । ಅಂತಗತಾ ಇತ್ಯಂತ-ಗತಾಃ । ದಹತಿ । ತಾಃ । ತತಃ । ಭೂಯಸೀಃ । ಪ್ರೇತಿ । ಜಾಯಂತೇ। ಯತ್। ಸಾಯಮ್ । ಜುಹೋತಿ ।

---

| | |
|---|---|
| ಪ್ರಜನನಂ ಹಿ ವೈ ಅಗ್ನಿಃ | ಅಗ್ನಿಯು ಪ್ರಜೋತ್ಪಾದಕವಾದ ಯೋನಿಯಂತೆ ಇದ್ದಾನಷ್ಟೆ. [ಯೋನಿಯಲ್ಲಿ ಸಿಕ್ತವಾದ ರೇತಸ್ಸು ನಷ್ಟವಾಗಿ ಹೋಗುವುದಿಲ್ಲ. ಪ್ರಜೋತ್ಪಾದಕ ವಾಗುತ್ತದೆ. ಹಾಗೆಯೇ ಅಗ್ನಿಯಲ್ಲಿ ಮಾಡಿದ ಹೋಮವು ಬಹುಮುಖವಾಗಿ ಫಲಿಸುತ್ತದೆ.] |

**ದೃಷ್ಟಾಂತದ ಮೂಲಕ ಸಮರ್ಥನೆ**

| | |
|---|---|
| ಅಥ ಓಷಧೀಃ ಅಂತಗತಾಃ ದಹತಿ ತಾಃ ತತಃ ಭೂಯಸೀಃ ಪ್ರಜಾಯಂತೇ | [ಅಗ್ನಿಃ = ಅಗ್ನಿಯು / ಕಾಡುಗಿಚ್ಚು; ಬೇಸಿಗೆಯಲ್ಲಿ] ಸಮೀಪದಲ್ಲಿರುವ ಸಸ್ಯಗಳನ್ನು ಸುಟ್ಟು ಹಾಕುತ್ತಾನೆ. ಅನಂತರ [ಮಳೆಗಾಲದಲ್ಲಿ] ಆ ಓಷಧಿಗಳು ಮತ್ತಷ್ಟು ಹೆಚ್ಚಾಗಿ ಹುಟ್ಟಿ ಬೆಳೆಯುತ್ತವೆ. [ಹಾಗೆಯೇ ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಮಾಡಿದ ಹೋಮವೂ ನಷ್ಟವಾಗದೆ ಬಹುಮುಖವಾಗಿ ಫಲಿಸುತ್ತದೆ.] |

**ಅಗ್ನಿಹೋತ್ರಹೋಮದ ಕಾಲವಿಧಿ-ಪ್ರಶಂಸೆ**

| | |
|---|---|
| ಯತ್ ಸಾಯಂ ಜುಹೋತಿ | [ಯಜಮಾನನು] ಸಾಯಂಕಾಲ ಅಗ್ನಿಹೋತ್ರವನ್ನು ಮಾಡುತ್ತಾನೆ ಎಂಬುದು ಯಾವುದುಂಟೋ, |

ರೇತ ಏವ ತತ್ಸಿಂಚತಿ ಪ್ರೈವ ಪ್ರಾತಸ್ತನೇನ ಜನಯತಿ

ತದ್ರೇತಸ್ಸಿಕ್ತಂ ನ ತ್ವಷ್ಟ್ರಾಽವಿಕೃತಂ ಪ್ರಜಾಯತೇ

---

ರೇತಃ । ಏವ । ತತ್ । ಸಿಂಚತಿ । ಪ್ರೇತಿ । ಏವ । ಪ್ರಾತಸ್ತನೇನೇತಿ ಪ್ರಾತಃ-ತನೇನ। ಜನಯತಿ । ತತ್ । ರೇತಃ। ಸಿಕ್ತಮ್ । ನ । ತ್ವಷ್ಟ್ರಾ । ಅವಿಕೃತಮಿತ್ಯವಿ-ಕೃತಮ್ । ಪ್ರೇತಿ । ಜಾಯತೇ ।

---

| | |
|---|---|
| ರೇತಃ ಏವ ತತ್ ಸಿಂಚತಿ | ಅದು [ಯೋನಿಯಲ್ಲಿ] ರೇತಸ್ಸನ್ನು ಸೇಚನ ಮಾಡಿದಂತೆ ಆಗುತ್ತದೆ. |
| ಪ್ರ ಏವ ಪ್ರಾತಸ್ತನೇನ ಜನಯತಿ | ಬೆಳಗಿನ ಹೋಮದಿಂದ ಅದು ಉತ್ಪನ್ನವಾಗಿ ವೃದ್ಧಿ ಹೊಂದುತ್ತದೆ. [ಹೀಗೆ ಸಾಯಂಕಾಲ ಪ್ರಾತಃಕಾಲಗಳಲ್ಲಿ ಹೋಮವನ್ನು ಮಾಡಬೇಕು. [ವಿಧಿ] |

### ಅಗ್ನ್ಯುಪಸ್ಥಾನವಿಧಿ-ಅದರ ಪ್ರಯೋಜನ-ಪ್ರಶಂಸೆ

| | |
|---|---|
| ತತ್ ರೇತಃ ಸಿಕ್ತಮ್ ನ ತ್ವಷ್ಟ್ರಾ ಅವಿಕೃತಮ್ ಪ್ರ ಜಾಯತೇ | ಯೋನಿಯಲ್ಲಿ ಸಿಕ್ತವಾದ ರೇತಸ್ಸು-ವಿಶ್ವಕರ್ಮನು [ತ್ವಷ್ಟೃವು] ಅದನ್ನು ವಿಕಾರಗೊಳಿಸದಿದ್ದರೆ –ಪ್ರಜೋತ್ಪಾದಕವಾಗುವುದಿಲ್ಲ. |

ಯಾವಚ್ಛೋ ವೈ ರೇತಸಃ ಸಿಕ್ತಸ್ಯ [ಸಿಕ್ತಸ್ಯ (೧)ತ್ವಷ್ಟಾ] ತ್ವಷ್ಟಾ ರೂಪಾಣಿ ವಿಕರೋತಿ ತಾವಚ್ಛೋ ವೈ ತತ್ಪ್ರಜಾಯತ ಏಷ ವೈ ದೈವ್ಯಸ್ತ್ವಷ್ಟಾ ಯೋ ಯಜತೇ ಬಹ್ವೀಭಿರುಪತಿಷ್ಠತೇ

---

ಯಾವಚ್ಛ ಇತಿ ಯಾವತ್-ಶಃ । ವೈ । ರೇತಸಃ । ಸಿಕ್ತಸ್ಯ (೧) । ತ್ವಷ್ಟಾ । ರೂಪಾಣಿ । ವಿಕರೋತೀತಿ ವಿ - ಕರೋತಿ । ತಾವಚ್ಛ ಇತಿ ತಾವತ್-ಶಃ । ವೈ । ತತ್ । ಪ್ರೇತಿ । ಜಾಯತೇ । ಏಷಃ । ವೈ । ದೈವ್ಯಃ । ತ್ವಷ್ಟಾ । ಯಃ । ಯಜತೇ । ಬಹ್ವೀಭಿಃ । ಉಪೇತಿ । ತಿಷ್ಠತೇ ।

---

| | |
|---|---|
| ಯಾವಚ್ಛಃ ವೈ ರೇತಸಃ ಸಿಕ್ತಸ್ಯ ತ್ವಷ್ಟಾ ರೂಪಾಣಿ ವಿಕರೋತಿ | ಎಷ್ಟು ರೂಪಗಳನ್ನು ಉದ್ದೇಶಿಸಿ ವಿಶ್ವಕರ್ಮನು ರೇತಸ್ಸಿನ ರೂಪಗಳನ್ನು ವಿಕಾರಗೊಳಿಸುತ್ತಾನೆಯೋ [ವಿವಿಧವಾಗಿ ಮಾಡುತ್ತಾನೆಯೋ] |
| ತಾವಚ್ಛಃ ವೈ ತತ್ ಪ್ರಜಾಯತೇ | ಆ ರೇತಸ್ಸು ಅಷ್ಟು ರೂಪಗಳನ್ನು ಹೊಂದಿ ಹುಟ್ಟುತ್ತದೆ. |
| ಏಷಃ ವೈ ದೈವ್ಯಃ ತ್ವಷ್ಟಾ ಯಃ ಯಜತೇ | ಯಾವ ಯಜಮಾನನು ಯಾಗ ಮಾಡುತ್ತಾನೆಯೋ, ಈತನು ದೇವತೆಗಳ ಅನುಗ್ರಹವನ್ನು ಪಡೆದ ಮನುಷ್ಯವಿಶ್ವಕರ್ಮನೇ ಆಗಿರುತ್ತಾನೆ. |
| ಬಹ್ವೀಭಿಃ ಉಪತಿಷ್ಠತೇ | ಹಲವು ಋಙ್ಮಂತ್ರಗಳಿಂದ ಉಪಸ್ಥಾನ ಮಾಡಬೇಕು. [ವಿಧಿ] |

ರೇತಸ ಏವ ಸಿಕ್ತಸ್ಯ ಬಹುಶೋ ರೂಪಾಣಿ ವಿಕರೋತಿ ಸ ಪ್ರೈವ ಜಾಯತೇ ಶ್ವಶ್ಶ್ವೋ ಭೂಯಾನ್ಭವತಿ ಯ ಏವಂ ವಿದ್ವಾನಗ್ನಿಮುಪತಿಷ್ಠತೇಽಹರ್ದೇವಾನಾಮಾಸೀದ್ರಾತ್ರಿರಸುರಾಣಾಂ

---

ರೇತಸಃ । ಏವ । ಸಿಕ್ತಸ್ಯ । ಬಹುಶ ಇತಿ ಬಹು-ಶಃ । ರೂಪಾಣಿ । ವೀತಿ । ಕರೋತಿ। ಸಃ । ಪ್ರೇತಿ । ಏವ । ಜಾಯತೇ । ಶ್ವಶ್ಶ್ವ ಇತಿ ಶ್ವಃ-ಶ್ವಃ। ಭೂಯಾನ್ । ಭವತಿ । ಯಃ । ಏವಮ್ । ವಿದ್ವಾನ್ । ಅಗ್ನಿಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ । ಅಹಃ। ದೇವಾನಾಮ್ । ಆಸೀತ್ । ರಾತ್ರಿಃ । ಅಸುರಾಣಾಮ್ ।

---



| | |
|---|---|
| ರೇತಸಃ ಏವ ಸಿಕ್ತಸ್ಯ ಬಹುಶಃ ರೂಪಾಣಿ ವಿಕರೋತಿ | [ಹೀಗೆ ಹಲವು ಮಂತ್ರಗಳಿಂದ ಉಪಸ್ಥಾನ ಮಾಡುವುದರಿಂದ] ಯೋನಿಸಿಕ್ತವಾದ ರೇತಸ್ಸಿನಲ್ಲಿ ಹಲವು ವಿವಿಧ ರೂಪಗಳನ್ನು ಮಾಡಿದಂತೆ ಆಗುತ್ತದೆ. |
| ಯಃ ಏವಮ್ ವಿದ್ವಾನ್ ಅಗ್ನಿಮ್ ಉಪ ತಿಷ್ಠತೇ ಸಃ ಪ್ರ ಏವ ಜಾಯತೇ | ಹೀಗೆ ತಿಳಿದ ಯಾವ ಯಜಮಾನನು ಅಗ್ನ್ಯುಪಸ್ಥಾನ ಮಾಡುತ್ತಾನೆಯೋ ಆ ಯಜಮಾನನು ಪ್ರಕೃಷ್ಟವಾದ ಪ್ರಜೆಯನ್ನೇ ಹೊಂದುತ್ತಾನೆ. |
| ಶ್ವಃ ಶ್ವಃ ಭೂಯಾನ್ ಭವತಿ | ನಾಳೆ ನಾಳೆಗೆ [ದಿನದಿನಕ್ಕೆ] ಎಲ್ಲದರಲ್ಲಿಯೂ ಅಭಿವೃದ್ಧಿಯನ್ನು ಹೊಂದುತ್ತಾನೆ. |

**ಉಪಸ್ಥಾನದ ಬಗೆ ಬಗೆಯ ಪ್ರಶಂಸೆ**

| | |
|---|---|
| ಅಹಃ ದೇವಾನಾಮ್ ಆಸೀತ್ ರಾತ್ರಿಃ ಅಸುರಾಣಾಮ್ | ಹಗಲು ದೇವತೆಗಳ ಭಾಗವಾಗಿತ್ತು. ರಾತ್ರಿಯು ರಾಕ್ಷಸರ ಭಾಗವಾಗಿತ್ತು. |

ತೇಽಸುರಾ ಯದ್ದೇವಾನಾಂ ವಿತ್ತಂ ವೇದ್ಯಮಾಸೀತ್ತೇನ ಸಹ

[೨] ರಾತ್ರಿಂ ಪ್ರಾವಿಶನ್ತೇ ದೇವಾ ಹೀನಾ ಅಮನ್ಯಂತ

ತೇಽಪಶ್ಯನ್ನಾಗ್ನೇಯೀ ರಾತ್ರಿರಾಗ್ನೇಯಾಃ ಪಶವ

---

ತೇ । ಅಸುರಾಃ । ಯತ್ । ದೇವಾನಾಮ್ । ವಿತ್ತಮ್ । ವೇದ್ಯಮ್ । ಆಸೀತ್ ।

ತೇನ । ಸಹ [೨] । ರಾತ್ರಿಮ್ । ಪ್ರೇತಿ । ಅವಿಶನ್ನ್ । ತೇ । ದೇವಾಃ । ಹೀನಾಃ ।

ಅಮನ್ಯಂತ । ತೇ । ಅಪಶ್ಯನ್ನ್ । ಆಗ್ನೇಯೀ । ರಾತ್ರಿಃ । ಆಗ್ನೇಯಾಃ । ಪಶವಃ ।

---

| | |
|---|---|
| ತೇ ಅಸುರಾಃ ಯತ್ ದೇವಾನಾಮ್ ವಿತ್ತಂ ವೇದ್ಯಮ್ ಆಸೀತ್ | ಆ ಅಸುರರು ದೇವತೆಗಳು ಸಂಪಾದಿಸಿದ್ದ ಪಶುರೂಪಧನವೂ, ಸಂಪಾದಿಸಬಹುದಾದ ಧನವೂ ಯಾವುದಿತ್ತೋ |
| ತೇನ ಸಹ ರಾತ್ರಿಮ್ ಪ್ರಾವಿಶನ್ನ್ | ಆ ಧನವನ್ನು ಅಪಹರಿಸಿ ಅದರೊಡನೆ ಕತ್ತಲೆಯಲ್ಲಿ ಅಡಗಿಕೊಂಡರು. |
| ತೇ ದೇವಾಃ ಹೀನಾಃ ಅಮನ್ಯಂತ | ಆ ದೇವತೆಗಳು [ಪಶುಗಳನ್ನು ಕಳೆದುಕೊಂಡು] 'ನಾವು ರಾಕ್ಷಸರಿಂದ ಹೀನರಾದೆವು' ಎಂದು ತಿಳಿದು ವ್ಯಸನ ಹೊಂದಿದರು. |
| ತೇ ಅಪಶ್ಯನ್ನ್ | ಅವರು ಆಲೋಚಿಸಿ ಉಪಾಯವನ್ನು ತಿಳಿದುಕೊಂಡರು. |
| ಆಗ್ನೇಯೀ ರಾತ್ರಿಃ ಆಗ್ನೇಯಾಃ ಪಶವಃ | [ಅವರು ತಿಳಿದ ಉಪಾಯವಿದು] [ಅಗ್ನಿಯು] ರಾತ್ರಿಯಲ್ಲಿ ಅಧಿಕವಾಗಿ ಪ್ರಕಾಶಿಸುವುದರಿಂದ ರಾತ್ರಿಯು ಅಗ್ನಿಸಂಬಂಧಿಯಾಗಿದೆ. ಅಗ್ನಿಯು ಪಶುಸ್ವಾಮಿ[ರುದ್ರರೂಪದಿಂದ]ಯಾಗಿರುವುದ ರಿಂದ ಪಶುಗಳೂ ಆಗ್ನೇಯಗಳೇ. |

ಇಮಮೇವಾಗ್ನಿಗ್‌ಂ ಸ್ತವಾಮ ಸ ನಃ ಸ್ತುತಃ ಪಶೂನ್ಪುನರ್ದಾ ಸ್ಯತೀತಿ ತೇಽಗ್ನಿಮಸ್ತುವನ್ಸ ಏಭ್ಯಃ ಸ್ತುತೋ ರಾತ್ರಿಯಾ ಅಧ್ಯ ಹರಭಿ ಪಶೂನ್ನಿರಾರ್ಜತ್ತೇ ದೇವಾಃ ಪಶೂನ್, ವಿತ್ವಾ ಕಾಮಾಗ್‌ಂ ಅಕುರ್ವತ

---

ಇಮಮ್। ಏವ । ಅಗ್ನಿಮ್ । ಸ್ತವಾಮ । ಸಃ। ನಃ । ಸ್ತುತಃ । ಪಶೂನ್ । ಪುನಃ। ದಾಸ್ಯತಿ । ಇತಿ । ತೇ । ಅಗ್ನಿಮ್ । ಅಸ್ತುವನ್ । ಸಃ । ಏಭ್ಯಃ । ಸ್ತುತಃ । ರಾತ್ರಿಯಾಃ। ಅಧೀತಿ । ಅಹಃ । ಅಭೀತಿ । ಪಶೂನ್ । ನಿರಿತಿ । ಆರ್ಜತ್ । ತೇ । ದೇವಾಃ । ಪಶೂನ್ । ವಿತ್ವಾ । ಕಾಮಾನ್ । ಅಕುರ್ವತ ।

---

| | |
|---|---|
| ಇಮಮ್ ಏವ ಅಗ್ನಿಮ್ ಸ್ತವಾಮ. | [ಆದುದರಿಂದ] ಈ ಅಗ್ನಿಯನ್ನೇ ಸ್ತೋತ್ರ ಮಾಡೋಣ. |
| ಸಃ ನಃ ಸ್ತುತಃ ಪಶೂನ್ ಪುನಃ ದಾಸ್ಯತಿ ಇತಿ | [ಹೀಗೆ] ನಮ್ಮಿಂದ ಸ್ತುತನಾದ ಅಗ್ನಿಯು ಪಶುಗಳನ್ನು ನಮಗೆ ಮತ್ತೆ ತಂದು ಕೊಡುವನು' [ಎಂದು ಉಪಾಯವನ್ನು ತಿಳಿದುಕೊಂಡರು.] |
| ತೇ ಅಗ್ನಿಮ್ ಅಸ್ತುವನ್ | ಆ ದೇವತೆಗಳು ಅಗ್ನಿಯನ್ನು [ಉಪಸ್ಥಾನ ಮಂತ್ರಗಳಿಂದ] ಸ್ತುತಿಸಿದರು. |
| ಸಃ ಏಭ್ಯಃ ಸ್ತುತಃ ರಾತ್ರಿಯಾಃ ಅಧಿ ಅಹಃ ಅಭಿ ಪಶೂನ್ ನಿರಾರ್ಜತ್ | ಈ ದೇವರಿಂದ ಸ್ತುತಿಸಲ್ಪಟ್ಟ ಆ ಅಗ್ನಿಯು ರಾತ್ರಿಯಿಂದ ತಂದು ಪಶುಗಳನ್ನು ಹಗಲಿಗೆ ಅಭಿಮುಖವಾಗಿ ಹೊರತಂದುಕೊಟ್ಟನು. |
| ತೇ ದೇವಾಃ ಪಶೂನ್ ವಿತ್ವಾ ಕಾಮಾನ್ ಅಕುರ್ವತ | ಆ ದೇವತೆಗಳು ಹಸುಗಳನ್ನು ಪಡೆದು ತಮ್ಮ ಕಾಮನೆಗಳನ್ನು ಪೂರೈಸಿಕೊಂಡರು. |

ಯ ಏವಂ ವಿದ್ವಾನಗ್ನಿಮುಪತಿಷ್ಠತೇ ಪಶುಮಾನ್ಭವತ್ಯಾದಿ

ತ್ಯೋ [ಪಶುಮಾನ್ಭವತಿ[೩] ಆದಿತ್ಯೋ...] ವಾ ಅಸ್ಮಾಲ್ಲೋ

ಕಾದಮುಂ ಲೋಕಮೈತ್ಸೋಽಮುಂ ಲೋಕಂ ಗತ್ವಾ ಪುನರಿಮಂ

———————.

ಯಃ । ಏವಮ್ । ವಿದ್ವಾನ್ । ಅಗ್ನಿಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ । ಪಶುಮಾನಿತಿ

ಪಶು-ಮಾನ್ । ಭವತಿ [೩] । ಆದಿತ್ಯಃ । ವೈ । ಅಸ್ಮಾತ್ । ಲೋಕಾತ್ । ಅಮುಮ್ ।

ಲೋಕಮ್ । ಐತ್ । ಸಃ । ಅಮುಮ್ । ಲೋಕಮ್ । ಗತ್ವಾ । ಪುನಃ । ಇಮಮ್ ।

———————

| | |
|---|---|
| ಯಃ ಏವಮ್ ವಿದ್ವಾನ್ ಅಗ್ನಿಮ್ ಉಪತಿಷ್ಠತೇ ಪಶುಮಾನ್ ಭವತಿ | ಹೀಗೆ ತಿಳಿದಿರುವ ಯಾವ ಯಜಮಾನನು ಅಗ್ನ್ಯುಪಸ್ಥಾನ ಮಾಡುತ್ತಾನೆಯೋ, ಅವನು ಪಶುಮಂತ[ಹಸುಗಳ ಒಡೆಯ]ನಾಗುತ್ತಾನೆ. |

**ಅಗ್ನ್ಯುಪಸ್ಥಾನದ ಪ್ರಶಂಸೆ-ಇನ್ನೊಂದು ಉಪಾಖ್ಯಾನ**

| | |
|---|---|
| ಆದಿತ್ಯಃ ವೈ ಅಸ್ಮಾತ್ ಲೋಕಾತ್ ಅಮುಮ್ ಲೋಕಮ್ ಐತ್ | [ಪೂರ್ವಕಾಲದಲ್ಲಿ] ಆದಿತ್ಯನು ಈ ಭೂಲೋಕದಿಂದ ಸ್ವರ್ಗಲೋಕಕ್ಕೆ ಹೋದನು. |
| ಸಃ ಅಮುಮ್ ಲೋಕಮ್ ಗತ್ವಾ ಪುನಃ ಇಮಮ್ | ಆ ಆದಿತ್ಯನು ಸ್ವರ್ಗಲೋಕಕ್ಕೆ ಹೋಗಿ ಮತ್ತೆ ಈ |

ಲೋಕಮಭ್ಯಧ್ಯಾಯತ್ಸ ಇಮಂ ಲೋಕಮಾಗತ್ಯ ಮೃತ್ಯೋ ರಬಿಭೇನ್ಮೃತ್ಯುಸಂಯುತ ಇವ ಹ್ಯಯಂ ಲೋಕಸ್ಸೋಽಮನ್ಯ ತೇಮಮೇವಾಗ್ನಿಗ್ಗ್ಂ ಸ್ತವಾನಿ ಸ ಮಾ ಸ್ತುತಃ ಸುವರ್ಗಂ ಲೋಕಂ

---

ಲೋಕಮ್ । ಅಭೀತಿ । ಅಧ್ಯಾಯತ್ । ಸಃ । ಇಮಮ್ । ಲೋಕಮ್ । ಆಗತ್ಯೇತ್ಯಾ-ಗತ್ಯ । ಮೃತ್ಯೋಃ। ಅಬಿಭೇತ್ । ಮೃತ್ಯುಸಂಯುತ ಇತಿ ಮೃತ್ಯು-ಸಂಯುತಃ । ಇವ । ಹಿ। ಅಯಮ್ । ಲೋಕಃ । ಸಃ । ಅಮನ್ಯತ । ಇಮಮ್ । ಏವ । ಅಗ್ನಿಮ್ । ಸ್ತವಾನಿ। ಸಃ । ಮಾ । ಸ್ತುತಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ ।

---

| | |
|---|---|
| ಲೋಕಮ್ ಅಭಿ ಅಧ್ಯಾಯತ್ | ಭೂಲೋಕವನ್ನು ಹೊಂದಬೇಕೆಂದು ಧ್ಯಾನಿಸಿದನು. |
| ಸಃ ಇಮಮ್ ಲೋಕಮ್ ಆಗತ್ಯ ಮೃತ್ಯೋಃ ಅಬಿಭೇತ್ | ಆ ಸೂರ್ಯನು ಮತ್ತೆ ಭೂಲೋಕಕ್ಕೆ ಬಂದು ಮೃತ್ಯುವಿನಿಂದ ಹೆದರಿದನು. |
| ಮೃತ್ಯುಸಂಯುತಃ ಇವ ಹಿ ಅಯಮ್ ಲೋಕಃ | [ಈ ಭೂಲೋಕವು ಮರ್ತ್ಯ(ಮರಣಶೀಲ/ಮನುಷ್ಯ) ಲೋಕವಾದದುರಿಂದ] ಮೃತ್ಯುವಿನಿಂದ ಕೂಡಿದಂತೆಯೇ ಇದೆಯಷ್ಟೆ. |
| ಸಃ ಅಮನ್ಯತ ಇಮಮ್ ಏವ ಅಗ್ನಿಮ್ ಸ್ತವಾನಿ | ಅವನು [ಹೀಗೆ ಉಪಾಯವನ್ನು ಚಿಂತಿಸಿ] ತಿಳಿದುಕೊಂಡನು:—ಈ ಅಗ್ನಿಯನ್ನೇ [ಉಪಸ್ಥಾನ ಮಂತ್ರಗಳಿಂದ] ಸ್ತುತಿಸುತ್ತೇನೆ. |
| ಸಃ ಮಾ ಸ್ತುತಃ ಸುವರ್ಗಂ ಲೋಕಮ್ | ಹೀಗೆ ನನ್ನಿಂದ ಸ್ತುತಿಸಲ್ಪಟ್ಟ ಅಗ್ನಿಯು ನನ್ನನ್ನೂ ಸ್ವರ್ಗಲೋಕವನ್ನೂ |

ಗಮಯಿಷ್ಯತೀತಿ ಸೋಽಗ್ನಿಮಸ್ತೌತ್ಸ ಏನಗ್ಂ ಸ್ತುತಸ್ಸುವ
ರ್ಗಂ ಲೋಕಮಗಮಯದ್ಯ [ಲೋಕಮಗಮಯದ್ಯಃ [೪]
ಏವಂ....] ಏವಂ ವಿದ್ವಾನಗ್ನಿಮುಪತಿಷ್ಠತೇ ಸುವರ್ಗಮೇವ
ಲೋಕಮೇತಿ

---

ಗಮಯಿಷ್ಯತಿ । ಇತಿ । ಸಃ । ಅಗ್ನಿಮ್ । ಅಸ್ತೌತ್ । ಸಃ । ಏನಮ್ । ಸ್ತುತಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಅಗಮಯತ್ । ಯಃ [೪] ಏವಮ್ । ವಿದ್ವಾನ್ । ಅಗ್ನಿಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ । ಸುವರ್ಗಮಿತಿ ಸುವಃ-ಗಮ್। ಏವ । ಲೋಕಮ್ । ಏತಿ ।

---

| | |
|---|---|
| ಗಮಯಿಷ್ಯತಿ ಇತಿ | ಹೊಂದಿಸುವನು ಎಂದು [ಆದಿತ್ಯನು ತಿಳಿದುಕೊಂಡನು.] |
| ಸಃ ಅಗ್ನಿಮ್ ಅಸ್ತೌತ್ | [ಹೀಗೆ ತಿಳಿದುಕೊಂಡ] ಆದಿತ್ಯದೇವನು ಅಗ್ನಿದೇವನನ್ನು [ಉಪಸ್ಥಾನಮಂತ್ರಗಳಿಂದ] ಸ್ತುತಿಸಿದನು. |
| ಸ ಏನಮ್ ಸ್ತುತಃ ಸುವರ್ಗಮ್ ಲೋಕಮ್ ಅಗಮಯತ್ | ಹೀಗೆ ಸ್ತುತಿಸಲ್ಪಟ್ಟ ಅಗ್ನಿದೇವನು ಈ ಆದಿತ್ಯವನ್ನು ಸ್ವರ್ಗಕ್ಕೆ ಒಯ್ದನು. |
| ಯಃ ಏವಮ್ ವಿದ್ವಾನ್ ಅಗ್ನಿಮ್ ಉಪತಿಷ್ಠತೇ ಸುವರ್ಗಮ್ ಏವ ಲೋಕಮ್ ಏತಿ | ಹೀಗೆ ತಿಳಿದುಕೊಂಡಿರುವ ಯಾವ ಯಜಮಾನನು ಉಪಸ್ಥಾನಮಂತ್ರಗಳಿಂದ ಅಗ್ನಿಯನ್ನು ಸ್ತುತಿಸುತ್ತಾನೆಯೋ, ಅವನು ಸ್ವರ್ಗಲೋಕವನ್ನು ಹೊಂದುತ್ತಾನೆ. |

ಸರ್ವಮಾಯುರೇತ್ಯಭಿ ವಾ ಏಷೋಽಗ್ನೀ ಆರೋಹತಿ ಯ ಏನಾವುಪತಿಷ್ಠತೇ ಯಥಾ ಖಲು ವೈ ಶ್ರೇಯಾನಭ್ಯಾರೂಢಃ ಕಾಮಯತೇ ತಥಾ ಕರೋತಿ

---

ಸರ್ವಮ್ । ಆಯುಃ । ಏತಿ । ಅಭೀತಿ । ವೈ । ಏಷಃ । ಅಗ್ನೀ ಇತಿ। ಏತಿ । ರೋಹತಿ। ಯಃ । ಏನೌ । ಉಪತಿಷ್ಠತ ಇತ್ಯುಪ-ತಿಷ್ಠತೇ । ಯಥಾ । ಖಲು । ವೈ। ಶ್ರೇಯಾನ್। ಅಭ್ಯಾರೂಢ ಇತ್ಯಭಿ-ಆರೂಢಃ । ಕಾಮಯತೇ । ತಥಾ । ಕರೋತಿ ।

---

| | |
|---|---|
| ಸರ್ವಮ್ ಆಯುಃ ಏತಿ | ಸಂಪೂರ್ಣವಾದ ಆಯುಸ್ಸನ್ನು ಪಡೆಯುತ್ತಾನೆ. |

**ಅಗ್ನ್ಯುಪಸ್ಥಾನದ ಇನ್ನೊಂದು ರೀತಿಯ ಪ್ರಶಂಸೆ**

| | |
|---|---|
| ಅಭಿ ವೈ ಏಷಃ ಅಗ್ನೀ ಆರೋಹತಿ ಯಃ ಏನೌ ಉಪತಿಷ್ಠತೇ | ಯಾವ ಯಜಮಾನನು ಈ ಗಾರ್ಹಪತ್ಯ-ಆಹವನೀಯಾಗ್ನಿಗಳನ್ನು ಉಪಸ್ಥಾನ ಮಾಡಿ ಒಲಿಸಿಕೊಳ್ಳುತ್ತಾನೆಯೋ, ಈತನು ಆ ಅಗ್ನಿಗಳನ್ನು ಏರುತ್ತಾನೆ. [ತನ್ನ ಪ್ರಾರ್ಥನೆಗಳನ್ನು ನೆರವೇರಿಸಿಕೊಡುವಂತೆ ಮಾಡುತ್ತಾನೆ]. |
| ಯಥಾ ಖಲು ವೈ ಶ್ರೇಯಾನ್ ಅಭ್ಯಾರೂಢಃ ಕಾಮಯತೇ ತಥಾ ಕರೋತಿ | [ಮೊದಲು ಸಾಮಾನ್ಯನಾಗಿದ್ದವನು] ತಾನು ಶ್ರೇಷ್ಠನಾಗಬೇಕೆಂದೂ, ಉತ್ತಮವಾದ ಪದವಿಗೆ ಏರಬೇಕೆಂದೂ ಅಪೇಕ್ಷಿಸಿ, ಪ್ರಯತ್ನಿಸಿ ಹೇಗೆ ಅದನ್ನು ಪಡೆದುಕೊಳ್ಳುತ್ತಾನೆಯೋ [ಹಾಗೆಯೇ ಈ ಯಜಮಾನನೂ ಉಪಸ್ಥಾನದಿಂದ ಶ್ರೇಷ್ಠತೆಯನ್ನು ಸಾಧಿಸಿಕೊಳ್ಳುತ್ತಾನೆ]. [ಆದುದರಿಂದ ಉಪಸ್ಥಾನವು ಪ್ರಶಸ್ತವಾಗಿದೆ.] |

ನಕ್ತಮುಪತಿಷ್ಠತೇ ನ ಪ್ರಾತಸ್ಸಗ್ಂ ಹಿ ನಕ್ತಂ ವ್ರತಾನಿ

ಸೃಜ್ಯಂತೇ ಸಹ ಶ್ರೇಯಾಗ್ಂಶ್ಚ ಪಾಪೀಯಾಗ್ಂಶ್ಚಾಸಾತೇ

ಜ್ಯೋತಿರ್ವಾ ಅಗ್ನಿಸ್ತಮೋ ರಾತ್ರಿರ್ಯ [......ರ್ಯತ್ (೫)

ನಕ್ತ...] ನ್ನಕ್ತಮುಪತಿಷ್ಠತೇ

---

ನಕ್ತಮ್ । ಉಪೇತಿ । ತಿಷ್ಠತೇ । ನ । ಪ್ರಾತಃ । ಸಮಿತಿ । ಹಿ । ನಕ್ತಮ್ । ವ್ರತಾನಿ।

ಸೃಜ್ಯಂತೇ। ಸಹ । ಶ್ರೇಯಾನ್। ಚ । ಪಾಪೀಯಾನ್ । ಚ । ಆಸಾತೇ ಇತಿ । ಜ್ಯೋತಿಃ।

ವೈ । ಅಗ್ನಿಃ । ತಮಃ । ರಾತ್ರಿಃ । ಯತ್(೫)। ನಕ್ತಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ।

---

### ಅಗ್ನ್ಯುಪಸ್ಥಾನದಲ್ಲಿ ಶ್ರುತ್ಯುಕ್ತವಾದ ಪೂರ್ವಪಕ್ಷ

| | |
|---|---|
| ನಕ್ತಮ್ ಉಪತಿಷ್ಠತೇ ನ ಪ್ರಾತಃ ಸಮ್ ಹಿ ನಕ್ತಮ್ ವ್ರತಾನಿ ಸೃಜ್ಯಂತೇ | ಅಗ್ನ್ಯುಪಸ್ಥಾನಗಳನ್ನು ರಾತ್ರಿಯಲ್ಲಿ ಮಾಡಬೇಕು. ಬೆಳಗಿನ ಹೊತ್ತು ಮಾಡಬಾರದು. [ಏಕೆಂದರೆ] ಶುಭಾಶುಭಕರ್ಮಗಳು ರಾತ್ರಿಯಲ್ಲಿ ಒಂದರೊಡನೆ ಇನ್ನೊಂದು ಸೇರಿಕೊಂಡಿರುತ್ತವೆ. |
| ಸಹ ಶ್ರೇಯಾನ್ ಚ ಪಾಪೀಯಾನ್ ಚ ಆಸಾತೇ | ಶಾಸ್ತ್ರಾನುಸಾರವಾಗಿ ಮಾಡಿದ ಕರ್ಮವೂ ಅಶಾಸ್ತ್ರೀಯವಾಗಿ ಮಾಡಿದ ಕರ್ಮವೂ ಜೊತೆಯಾಗಿಯೇ ಇರುತ್ತವೆ. [ವ್ಯತ್ಯಾಸವು ತಿಳಿಯುವುದಿಲ್ಲ.] |
| ಜ್ಯೋತಿಃ ವೈ ಅಗ್ನಿಃ ತಮಃ ರಾತ್ರಿಃ ಯತ್ ನಕ್ತಮ್ ಉಪತಿಷ್ಠತೇ | ಅಗ್ನಿಯು ಪ್ರಕಾಶಿಸುವ ಜ್ಯೋತಿಯಷ್ಟೆ. ರಾತ್ರಿಯೇ ಕತ್ತಲೆಯಾಗಿದೆ. ರಾತ್ರಿಯಲ್ಲಿ ಅಗ್ನ್ಯುಪಸ್ಥಾನ ಮಾಡುತ್ತಾನೆ ಎಂಬುದು ಯಾವುದುಂಟೋ ಆದರಿಂದ |

ಜ್ಯೋತಿಷೈವ ತಮಸ್ತರತ್ಯುಪಸ್ಥೇಯೋಽಗ್ನೀ3ರ್ನೋಪಸ್ಥೇ

ಯಾ3 ಇತ್ಯಾಹುರ್ಮನುಷ್ಯಾಯೇನ್ನ್ವೈ ಯೋಽಹರಹರಾಹೃ

ತ್ಯಾಥೈನಂ ಯಾಚತಿ

---

ಜ್ಯೋತಿಷಾ । ಏವ । ತಮಃ । ತರತಿ । ಉಪಸ್ಥೇಯ ಇತ್ಯುಪ-ಸ್ಥೇಯಃ । ಅಗ್ನೀ3: ।

ನ । ಉಪಸ್ಥೇಯಾ3 ಇತ್ಯುಪ-ಸ್ಥೇಯಾ3: । ಇತಿ । ಆಹುಃ । ಮನುಷ್ಯಾಯ । ಇತ್ ।

ನು । ವೈ । ಯಃ । ಅಹರಹರಿತ್ಯಹಃ-ಅಹಃ । ಆಹೃತ್ಯೇತ್ಯಾ-ಹೃತ್ಯ । ಅಥ । ಏನಮ್ ।

ಯಾಚತಿ ।

---

| | |
|---|---|
| ಜ್ಯೋತಿಷಾ ಏವ ತಮಃ ತರತಿ | ಪ್ರಕಾಶದಿಂದಲೇ ಕತ್ತಲೆಯನ್ನು ದಾಟುತ್ತಾನೆ. [ರಾತ್ರಿಪ್ರಯುಕ್ತವಾದ ದೋಷಗಳನ್ನು ಪರಿಹರಿಸಿ ಕೊಳ್ಳುತ್ತಾನೆ. ಆದುದರಿಂದ ರಾತ್ರಿಯಲ್ಲಿ ಮಾತ್ರ ಉಪಸ್ಥಾನ ಮಾಡಬೇಕು. ಹಗಲಿನಲ್ಲಿ ಎಲ್ಲವೂ ಸ್ಪಷ್ಟವಾಗಿ ತಿಳಿಯುವುದರಿಂದ ಅಗ್ನ್ಯುಪಸ್ಥಾನವು ಬೇಕಾಗಿಲ್ಲ.] |

**ಉಪಸ್ಥಾನವೇ ಬೇಕಾಗಿಲ್ಲವೆಂಬ ಇನ್ನೊಂದು ಪೂರ್ವಪಕ್ಷ**

| | |
|---|---|
| ಉಪಸ್ಥೇಯಃ ಅಗ್ನೀ3: ನ ಉಪಸ್ಥೇಯಾ3: ಇತಿ ಆಹುಃ | ಅಗ್ನಿಯು ಉಪಸ್ಥಾನ ಮಾಡಬೇಕಾದವನೇ? ಉಪಸ್ಥಾನ ಮಾಡಬಾರದವನೇ? ಹೀಗೆ[ಬ್ರಹ್ಮವಾದಿಗಳು] ವಿಚಾರ ಮಾಡುತ್ತಾರೆ. |
| ಮನುಷ್ಯಾಯ ಇತ್ ನು ವೈ ಯಃ ಅಹರಹಃ ಆಹೃತ್ಯ ಅಥ ಏನಮ್ ಯಾಚತಿ | ಯಾವ ದರಿದ್ರನಾದವನು ರಾಜನೇ ಮೊದಲಾದ ಶ್ರೇಷ್ಠಪುರುಷರಿಗೆ ಪ್ರತಿದಿನವೂ [ನಿಂಬೆ ಹಣ್ಣು ಮೊದಲಾದ] ಅಲ್ಪಕಾಣಿಕೆಯನ್ನು ಕೊಟ್ಟು, ಅನಂತರ ತನಗೆ ಬೇಕಾದ ಭೂಮಿಧನಾದಿಗಳನ್ನು ಕೇಳಿಕೊಳ್ಳು ತ್ತಾನೆಯೋ, |

ಸ ಇನ್ನ್ವೈ ತಮುಪಾರ್ಛತ್ಯಥ ಕೋ ದೇವಾನಹರಹರ್ಯಾಚಿಷ್ಯ

ತೀತಿ ತಸ್ಮಾನ್ನೋಽಪಸ್ಥೇಯೋಽಥೋ ಖಲ್ವಾಹುರಾಶಿಷೇ ವೈ

ಕಂ ಯಜಮಾನೋ ಯಜತ

---

ಸಃ । ಇತ್ । ನು । ವೈ । ತಮ್ । ಉಪೇತಿ । ಋಚ್ಛತಿ । ಅಥ । ಕಃ । ದೇವಾನ್। ಅಹರಹರಿತ್ಯಹಃ - ಅಹಃ । ಯಾಚಿಷ್ಯತಿ । ಇತಿ । ತಸ್ಮಾತ್ । ನ । ಉಪಸ್ಥೇಯ ಇತ್ಯುಪ - ಸ್ಥೇಯಃ । ಅಥೋ ಇತಿ । ಖಲು । ಆಹುಃ। ಆಶಿಷ ಇತ್ಯಾ-ಶಿಷೇ । ವೈ। ಕಮ್ । ಯಜಮಾನಃ । ಯಜತೇ ।

---

| | |
|---|---|
| ಸಃ ಇತ್ ನು ವೈ ತಮ್ ಉಪಾರ್ಛತಿ | ಆ ದರಿದ್ರನು ಆ ಶ್ರೇಷ್ಠಪುರುಷನನ್ನು ಪೀಡಿಸಿಯೇ ಪೀಡಿಸುತ್ತಾನೆ. [ಇದು ಆತನ ಆಗ್ರಹ/ಕೋಪಕ್ಕೆ ಕಾರಣವಾಗಬಹುದು] |
| ಅಥ ಕಃ ದೇವಾನ್ ಅಹರಹಃ ಯಾಚಿಷ್ಯತಿ ಇತಿ | ಹೀಗಿರುವಾಗ ಯಾವನು ತಾನೇ ಮಹಾಪ್ರಭಾವ ಶಾಲಿಗಳಾದ ದೇವತೆಗಳನ್ನು ಪ್ರತಿದಿನವೂ ಮತ್ತೆ ಮತ್ತೆ ಕೇಳಿಕೊಂಡು ಅವರ ಕೋಪಕ್ಕೆ ಕಾರಣ ನಾದಾನು? [ಎಂದು ಹೇಳುತ್ತಾರೆ.] |
| ತಸ್ಮಾತ್ ನ ಉಪಸ್ಥೇಯಃ | ಆದುದರಿಂದ ಅಗ್ನಿಯು ಉಪಸ್ಥಾನ ಮಾಡತಕ್ಕವ ನಲ್ಲ [ಅಗ್ನ್ಯುಪಸ್ಥಾನವನ್ನು ಮಾಡಬಾರದು] |
| ಅಥೋ ಖಲು ಆಹುಃ | ಈ ವಿಷಯದಲ್ಲಿ [ಬ್ರಹ್ಮವಾದಿಗಳು] ಹೀಗೆ ಹೇಳುತ್ತಾರೆ. |
| ಆಶಿಷೇ ವೈ ಕಂ ಯಜಮಾನಃ ಯಜತೇ | ಯಜಮಾನನು ತನ್ನ ಶುಭಾಶಂಸನೆಗಳನ್ನು ಕೇಳಿ ಕೊಳ್ಳುವುದಕ್ಕಾಗಿಯೇ ಸರ್ವದೇವಾತ್ಮಕನಾದ, ಪ್ರಜಾಪತಿಸದೃಶನಾಗಿರುವ ಅಗ್ನಿಯನ್ನು ಯಾಗ ದಿಂದ ಆರಾಧಿಸುತ್ತಾನಷ್ಟೆ. [ತಕ್ಕ ಸಮಯದಲ್ಲಿ |

ಇತ್ಯೇಷಾ ಖಲು [ವೈ(೬)]ವಾ ಆಹಿತಾಗ್ನೇರಾಶೀರ್ಯದಗ್ನಿಮು

ಪತಿಷ್ಠತೇ ತಸ್ಮಾದುಪಸ್ಥೇಯಃ ಪ್ರಜಾಪತಿಃ ಪಶೂನಸೃಜತ

---

ಇತಿ। ಏಷಾ । ಖಲು। ವೈ [೬] ಆಹಿತಾಗ್ನೇರಿತ್ಯಾಹಿತ-ಅಗ್ನೇಃ । ಆಶೀರಿತ್ಯಾ-ಶೀಃ। ಯತ್।

ಅಗ್ನಿಮ್ । ಉಪತಿಷ್ಠತ ಇತ್ಯುಪ-ತಿಷ್ಠತೇ । ತಸ್ಮಾತ್ । ಉಪಸ್ಥೇಯ ಇತ್ಯುಪ-ಸ್ಥೇಯಃ।

ಪ್ರಜಾಪತಿರಿತಿ ಪ್ರಜಾ-ಪತಿಃ । ಪಶೂನ್ । ಅಸೃಜತ ।

---

| | |
|---|---|
| ಇತಿ | ಪ್ರಾರ್ಥನೆ ಮಾಡಿಕೊಳ್ಳುವುದು ಫಲಪ್ರದವೆಂದು ಲೋಕಪ್ರಸಿದ್ಧವಾಗಿಯೇ ಇದೆ. ಆದುದರಿಂದ ಉಪಸ್ಥಾನದಿಂದ ಶುಭಾಶಂಸನೆಯು ಫಲದಾಯಕವೇ ಎಂದು ಹೇಳುತ್ತಾರೆ] |
| ಏಷಾ ಖಲು ವೈ ಆಹಿತಾಗ್ನೇಃ ಆಶೀಃ ಯತ್ ಅಗ್ನಿಮ್ ಉಪತಿಷ್ಠತೇ | ಆಹಿತಾಗ್ನಿಯಾಗಿ ಅಗ್ನಿಯನ್ನು ಆರಾಧಿಸುವ ಯಜಮಾನನು ಅಗ್ನ್ಯುಪಸ್ಥಾನ ಮಾಡುವುದು ಯಾವುದುಂಟೋ ಆ ಅಗ್ನ್ಯುಪಸ್ಥಾನವು ಆ ಯಜಮಾನನ ಶುಭಾಶಂಸನೆಯೇ ಆಗಿದೆಯಷ್ಟೆ.[ಆಯುರ್ಮೇ ದೇಹಿ, ವರ್ಚೋ ಮೇ ದೇಹಿ, ತನುವಂ ಮೇ ಪಾಹಿ ಇತ್ಯಾದಿ] |
| ತಸ್ಮಾತ್ ಉಪಸ್ಥೇಯಃ | ಆದುದರಿಂದ ಅಗ್ನಿಯು ಉಪಸ್ಥಾನ ಮಾಡಬೇಕಾದವನು. [ಹಗಲೂ, ರಾತ್ರಿಯೂ ಅಗ್ನ್ಯುಪಸ್ಥಾನ ಮಾಡಬೇಕು] [ಸಿದ್ಧಾಂತ] |

**ಛಂದೋಬದ್ಧಮಂತ್ರಗಳಿಂದ ಅಗ್ನ್ಯುಪಸ್ಥಾನದ ಪ್ರಶಂಸೆ**

| | |
|---|---|
| ಪ್ರಜಾಪತಿಃ ಪಶೂನ್ ಅಸೃಜತ | ಪ್ರಜಾಪತಿಯು [ಬ್ರಹ್ಮನು] ಪಶುಗಳನ್ನು ಸೃಷ್ಟಿ ಮಾಡಿದನು. |

ತೇ ಸೃಷ್ಟಾ ಅಹೋರಾತ್ರೇ ಪ್ರಾವಿಶನ್ತಾಞ್ಛಂದೋಭಿರನ್ವ ವಿಂದದ್ಯಚ್ಛಂದೋಭಿರುಪತಿಷ್ಠತೇ ಸ್ವಮೇವ ತದನ್ವಿಚ್ಛತಿ ನ ತತ್ರ ಜಾಮ್ಯಸ್ತೀತ್ಯಾಹುರ್ಯೋಽಹರಹರುಪತಿಷ್ಠತ ಇತಿ

---

ತೇ । ಸೃಷ್ಟಾಃ । ಅಹೋರಾತ್ರೇ ಇತ್ಯಹಃ-ರಾತ್ರೇ । ಪ್ರೇತಿ । ಅವಿಶನ್ನ್ । ತಾನ್ । ಛಂದೋಭಿರಿತಿ ಛಂದಃ - ಭಿಃ । ಅನ್ವಿತಿ । ಅವಿಂದತ್ । ಯತ್ । ಛಂದೋಭಿರಿತಿ ಛಂದಃ-ಭಿಃ । ಉಪತಿಷ್ಠತ ಇತ್ಯುಪ-ತಿಷ್ಠತೇ। ಸ್ವಮ್ । ಏವ । ತತ್। ಅನ್ವಿತಿ । ಇಚ್ಛತಿ। ನ । ತತ್ರ । ಜಾಮಿ । ಅಸ್ತಿ । ಇತಿ। ಆಹುಃ । ಯಃ । ಅಹರಹರಿತ್ಯಹಃ-ಅಹಃ । ಉಪ ತಿಷ್ಠತ ಇತ್ಯುಪ-ತಿಷ್ಠತೇ । ಇತಿ ।

---

| | |
|---|---|
| ತೇ ಸೃಷ್ಟಾಃ ಅಹೋರಾತ್ರೇ ಪ್ರಾವಿಶನ್ನ್ | ಹೀಗೆ ಸೃಷ್ಟಿಸಲ್ಪಟ್ಟ ಪಶುಗಳು ಅಹೋರಾತ್ರ ದೇವತೆಗಳನ್ನು ಪ್ರವೇಶಿಸಿದವು. |
| ತಾನ್ ಛಂದೋಭಿಃ ಅನ್ವವಿಂದತ್ | ಆ ಪಶುಗಳನ್ನು [ಪ್ರಜಾಪತಿಯು] ಛಂದೋಬದ್ಧ ವಾದ ಮಂತ್ರಗಳಿಂದ ಹುಡುಕಿ ಪಡೆದನು. |
| ಯತ್ ಛಂದೋಭಿಃ ಉಪತಿಷ್ಠತೇ ಸ್ವಮ್ ಏವ ತತ್ ಅನ್ವಿಚ್ಛತಿ | ಛಂದೋಬದ್ಧವಾದ ಮಂತ್ರಗಳಿಂದ ಮಾಡುವ ಯಾವ ಉಪಸ್ಥಾನವುಂಟೋ ಆ ಉಪಸ್ಥಾನವು ತನ್ನದಾಗಿರುವ ವಸ್ತುಗಳನ್ನೇ ಹುಡುಕಿ ತರುತ್ತದೆ. [ಆದುದರಿಂದ ಛಂದಸ್ಸುಗಳಿಂದ ಅಗ್ನಿಯ ಉಪಸ್ಥಾನವು ಪ್ರಶಂಸನೀಯವಾದುದು.] |

**ಉಪಸ್ಥಾನವನ್ನು ನಿತ್ಯವೂ ಮಾಡಬೇಕು**

| | |
|---|---|
| ನ ತತ್ರ ಜಾಮಿ ಅಸ್ತಿ ಇತಿ ಆಹುಃ ಯಃ ಅಹರಹಃ ಉಪತಿಷ್ಠತೇ ಇತಿ | ಯಾವ ಯಜಮಾನನು ಪ್ರತಿನಿತ್ಯವೂ ಹಗಲೂ-ರಾತ್ರಿಯೂ ಅಗ್ನ್ಯುಪಸ್ಥಾನವನ್ನು ಮಾಡುತ್ತಾನೆಯೋ, ಆತನಿಗೆ ಉಪಸ್ಥಾನದಲ್ಲಿ [ಅಭೀಷ್ಟ |

ಯೋ ವಾ ಅಗ್ನಿಂ ಪ್ರತ್ಯಙ್ಙುಪತಿಷ್ಠತೇ ಪ್ರತ್ಯೇನಮೋಷತಿ

ಯಃ ಪರಾಙ್

---

ಯಃ । ವೈ । ಅಗ್ನಿಮ್ । ಪ್ರತ್ಯಙ್ । ಉಪತಿಷ್ಠತ ಇತ್ಯುಪ - ತಿಷ್ಠತೇ । ಪ್ರತೀತಿ ।

ಏನಮ್ । ಓಷತಿ । ಯಃ । ಪರಾಙ್ ।

---

ಪ್ರಾರ್ಥನೆಯಿರುವುದರಿಂದ] ಆಲಸ್ಯವುಂಟಾಗುವುದಿಲ್ಲ. [ಉಪಸ್ಥಾನಕ್ಕೆ ಉದ್ದೇಶ್ಯನಾದ ಅಗ್ನಿಯ ಗುಣಗಾನವೇ ಇರುವುದರಿಂದ ಅಗ್ನಿಗೆ ಬೇಸರವುಂಟಾಗುವುದಿಲ್ಲ. ಹೀಗೆ ಯಾರಿಗೂ ಆಲಸ್ಯವಿಲ್ಲದಿರುವುದರಿಂದ ಪ್ರತಿದಿನವೂ ಉಪಸ್ಥಾನವನ್ನು ಮಾಡಬೇಕು.]

**ಉಪಸ್ಥಾನದ ಸಮಯದಲ್ಲಿ ಸ್ವಲ್ಪ ಅಡ್ಡವಾಗಿ ಮುಖ ಮಾಡಿಕೊಂಡಿರಬೇಕು.**

| | |
|---|---|
| ಯಃ ವೈ ಅಗ್ನಿಮ್ ಪ್ರತ್ಯಙ್ ಉಪತಿಷ್ಠತೇ | ಯಾವ ಯಜಮಾನನು ಪಶ್ಚಿಮಾಭಿಮುಖನಾಗಿ ಅಗ್ನ್ಯುಪಸ್ಥಾನವನ್ನು ಮಾಡುತ್ತಾನೆಯೋ, |
| ಪ್ರತಿ ಏನಮ್ ಓಷತಿ | ಈ ಯಜಮಾನನನ್ನು ಅಗ್ನಿಯು ಪ್ರತಿಕೂಲನಾಗಿ ಸುಟ್ಟುಬಿಡುತ್ತಾನೆ. |
| ಯಃ ಪರಾಙ್ [ಉಪತಿಷ್ಠತೇ] | ಯಾವನು ಪರಾಙ್ಮುಖನಾಗಿ [ಹಿಂದುಮುಂದಾಗಿ ನಿಂತು] ಉಪಸ್ಥಾನ ಮಾಡುತ್ತಾನೆಯೋ, [ಆ ಯಜಮಾನನು] |

ವಿಷ್ವಙ್ಙ್ರಜಯಾ ಪಶುಭಿರೇತಿ ಕವಾತಿರ್ಯಙ್ಙಿವೋಪತಿಷ್ಠೇತ

ನೈನಂ ಪ್ರತ್ಯೋಷತಿ ನ ವಿಷ್ವಙ್ಙ್ರಜಯಾ ಪಶುಭಿರೇತಿ॥ ೯-42॥

[ಸಿಕ್ತ್ಸ್ಯ ಸಹ ಭವತಿ ಯೋ ಯತ್ಫಲು ವೈ ಪಶುಭಿಸ್ತ್ರಯೋದಶ ಚ ।]

---

ವಿಷ್ವಙ್ । ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಕವಾತಿರ್ಯಙ್ಙಿತಿ ಕವಾ-ತಿರ್ಯಙ್ । ಇವ । ಉಪೇತಿ । ತಿಷ್ಠೇತ । ನ । ಏನಮ್ । ಪ್ರತ್ಯೋಷತೀತಿ ಪ್ರತಿ-ಓಷತಿ । ನ । ವಿಷ್ವಙ್ । ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಏತಿ ॥ ೯ ॥

---

| | |
|---|---|
| ಪ್ರಜಯಾ ಪಶುಭಿಃ ವಿಷ್ವಙ್ ಏತಿ | ಪ್ರಜೆಯಿಂದಲೂ [ಮಕ್ಕಳಿಂದಲೂ] ಪಶುಗಳಿಂದಲೂ ವಿಯುಕ್ತನಾಗುತ್ತಾನೆ. |
| ಕವಾತಿರ್ಯಙ್ ಇವ ಉಪ ತಿಷ್ಠೇತ | ಸ್ವಲ್ಪಮಟ್ಟಿಗೆ ಅಡ್ಡವಾಗಿರುವವನಂತೆ ನಿಂತು ಅಗ್ನಿಯ ಉಪಸ್ಥಾನವನ್ನು ಮಾಡಬೇಕು. |
| ನ ಏನಮ್ ಪ್ರತ್ಯೋಷತಿ ನ ವಿಷ್ವಙ್ ಪ್ರಜಯಾ ಪಶುಭಿಃ ಏತಿ । | [ಹೀಗೆ ಮಾಡಿದರೆ] ಅಗ್ನಿಯು ಇವನನ್ನು ಪ್ರತಿಕೂಲವಾಗಿ ಸುಡುವುದಿಲ್ಲ. ಪ್ರಜೆಯಿಂದಲೂ ಪಶುಗಳಿಂದಲೂ ಯಜಮಾನನು ವಿಯುಕ್ತನಾಗುವುದಿಲ್ಲ. |

---

## ॥ ದಶಮೋಽನುವಾಕಃ ॥

**ಮಮ ನಾಮ ಪ್ರಥಮಂ ಜಾತವೇದಃ ಪಿತಾ ಮಾತಾ ಚ ದಧತುರ್ಯದಗ್ರೇ । ತತ್ತ್ವಂ ಬಿಭೃಹಿ**

---

**ಮಮ । ನಾಮ । ಪ್ರಥಮಮ್ । ಜಾತವೇದ ಇತಿ ಜಾತ-ವೇದಃ । ಪಿತಾ । ಮಾತಾ। ಚ । ದಧತುಃ । ಯತ್ । ಅಗ್ರೇ ॥ ತತ್ । ತ್ವಮ್ । ಬಿಭೃಹಿ ।**

---

ಈ ಹತ್ತನೆಯ ಅನುವಾಕದಲ್ಲಿ ಪ್ರವಾಸ ಮಾಡುವ ಯಜಮಾನನಿಗೆ ಸಂಬಂಧಿಸಿದ ಉಪಸ್ಥಾನಮಂತ್ರಗಳು ಮೊದಲ ಭಾಗದಲ್ಲಿ ಹೇಳಲ್ಪಟ್ಟಿವೆ. ಅನಂತರ ದರ್ಶ-ಪೂರ್ಣ ಮಾಸಗಳಿಗೆ ಸಂಬಂಧಿಸಿದ ಕೆಲವು ಮಂತ್ರಗಳಿವೆ.

---

| ಮಂತ್ರ | ವಿನಿಯೋಗ |
| --- | --- |
| ಮಮ...... ಬಿಭರಾಣ್ಯಗ್ನೇ । | ಪ್ರವಾಸಕ್ಕೆ ಹೊರಡುವ ಮೊದಲು ಯಜಮಾನನು ಅಗ್ನ್ಯುಪಸ್ಥಾನದಲ್ಲಿ ಹೇಳಲು. |

---

**ಜಾತವೇದಃ** = ಹುಟ್ಟಿದುದೆಲ್ಲವನ್ನೂ ತಿಳಿದಿರುವ, [ಧನಾದಿಗಳನ್ನುಂಟುಮಾಡುವ] ಜಾತವೇದನಾಮಕನಾದ ಅಗ್ನಿಯೇ! **ಅಗ್ರೇ** = ಮೊದಲು/ಹುಟ್ಟಿದ ಕಾಲದಲ್ಲಿ; **ಪಿತಾ**= ತಂದೆಯೂ; **ಮಾತಾ ಚ**=ತಾಯಿಯೂ ಕೂಡ; **ಯತ್**=ಯಾವ; **ಮಮ** = ನನ್ನ; **ಪ್ರಥಮಮ್ ನಾಮ**=ಮೊದಲನೆಯ ಹೆಸರನ್ನು; **ದಧತುಃ** = ಇಟ್ಟರೋ; **ತತ್**= ಆ ಹೆಸರನ್ನು;

---

ಎಲೈ! ಜಾತವೇದರೂಪನಾದ ಅಗ್ನಿಯೇ! ತಾಯಿ-ತಂದೆಯರು ನನಗೆ *ಮೊದಲು ಇಟ್ಟ

---

*ಬ್ರಾಹ್ಮಣನಿಗೆ ಎರಡು ಹೆಸರುಗಳುಂಟು. ತಾಯಿ-ತಂದೆಗಳು ಜಾತಕರ್ಮದಲ್ಲಿ ಇಟ್ಟ ಹೆಸರುಗಳು[**ಕೇಶವ, ಶಂಕರ ಮುಂತಾದವು**]. ಸೋಮಯಾಗ ಮಾಡಿದ ನಂತರ ಬರುವ "**ದೀಕ್ಷಿತ**", ಅಧ್ಯಾಪನದಿಂದ ಬರುವ '**ಆಚಾರ್ಯ**' ಇತ್ಯಾದಿಗಳು. '**ತಸ್ಮಾದ್ದ್ವಿನಾಮಾ ಬ್ರಾಹ್ಮಣೋಽರ್ಧುಕಃ**' [**ತೈ.ಸಂ. 6.3.1**] ಎಂಬ ಶ್ರುತಿವಚನವೂ ಇದೆ.

ಪುನರಾಮದ್ಯೈತೋಸ್ತ್ವಾಹಂ ನಾಮ ಬಿಭರಾಣ್ಯಗ್ನೇ ॥ ಮಮ ನಾಮ ತವ ಚ ಜಾತವೇದೋ ವಾಸಸೀ ಇವ ವಿವಸಾನೌ ಯೇ ಚರಾವಃ ।

ಪುನಃ । ಏತಿ । ಮತ್ । ಇತೋರಿತ್ಯಾ-ಏತೋಃ । ತವ । ಅಹಮ್ । ನಾಮ । ಬಿಭರಾಣಿ । ಅಗ್ನೇ ॥ ಮಮ । ನಾಮ । ತವ । ಚ । ಜಾತವೇದ ಇತಿ ಜಾತ-ವೇದಃ । ವಾಸಸೀ ಇತಿ । ಇವ । ವಿವಸಾನಾವಿತಿ ವಿ-ವಸಾನೌ । ಯೇ ಇತಿ । ಚರಾವಃ ॥

| ಮಂತ್ರ | ವಿನಿಯೋಗ |
|---|---|
| ಮಮ ನಾಮ ತವ ...ಪುನಸ್ತ್ವೇ। | ಪ್ರವಾಸದಿಂದ ಹಿಂದಿರುಗಿದ ಯಜಮಾನನು ಆಹವನೀಯೋಪಸ್ಥಾನದಲ್ಲಿ ಹೇಳುವ ಮೊದಲನೆಯ ಮಂತ್ರ. |

**ಪುನಃ** = ಮತ್ತೆ; **ಮತ್ ಐತೋಃ ಆ** = ನಾನು ಬರುವವರೆಗೂ; **ತ್ವಮ್** = ನೀನು; **ಬಿಭೃಹಿ** = ಧರಿಸು. **ಅಗ್ನೇ** = ಅಗ್ನಿದೇವನೇ! **ಅಹಮ್** = ನಾನು; **ತವ** = ನಿನ್ನ; **ನಾಮ** = ಹೆಸರನ್ನು; **ಬಿಭರಾಣಿ** = ಧರಿಸುತ್ತೇನೆ. [ಜಾತವೇದಃ*! ಪಿತಾ ಮಾತಾ ಚ ಮಮ ಪ್ರಥಮಂ ನಾಮ ದಧತುಃ । **ಅಗ್ರೇ ಯತ್** = ನಾಮ ಅಗ್ನೇ! ತತ್ ಪುನಃ ಆ ಮತ್ * ಐತೋಃ ತ್ವಂ ಬಿಭೃಹಿ । ತವ ನಾಮ ಅಹಂ ಬಿಭರಾಣಿ] ✢ **ಜಾತವೇದಃ**= ಅಗ್ನಿದೇವನೇ । **ಯೇ** = ಯಾವ ಎರಡಾಗಿರುವ; **ಮಮ ನಾಮ** = ನನ್ನ ಹೆಸರನ್ನೂ; **ಚ** = ಮತ್ತು; **ತವ ನಾಮ** = ನಿನ್ನ ಹೆಸರನ್ನೂ; **ವಾಸಸೀ ಇವ** = ಎರಡು ಬಟ್ಟೆಗಳಂತೆ; **ವಿವಸಾನೌ** = ವ್ಯತ್ಯಾಸ ಮಾಡಿ ಇಟ್ಟುಕೊಂಡವರಾಗಿ; **ಚರಾವಃ** = ಸಂಚರಿಸುತ್ತಾ ಇರುವೆವೋ;

ಹೆಸರನ್ನು ನಾನು ಪ್ರವಾಸದಿಂದ ಹಿಂದಿರುಗಿ ಬರುವವರೆಗೂ ನೀನು ಧರಿಸು. [ನೀನು]

* ಭ.ಭಾ. ಮಿಶ್ರರು ಮಾಡಿರುವ ಅನ್ವಯದಂತೆ. ಇದರ ಪ್ರಯೋಜನವು ಸ್ವರಕ್ಕೆ ಸಂಬಂಧಿಸಿದೆ.
*ಮತ್-ಪಂಚಮೀವಿಭಕ್ತಿ । ಐತೋಃ ಎಂಬುದು ಇದಕ್ಕೆ ವಿಶೇಷಣ. ಅಥವಾ ಮತ್ ಎಂಬುದು ಷಷ್ಠೀ. ಮಮ = ನನ್ನ ಎಂದು ಅರ್ಥ. ಆಗ ಮತ್ ಆ ಐತೋಃ ಎಂದು ಅನ್ವಯ.
ಯತ್ ಎಂಬುದನ್ನು 'ದಧತುಃ' ಎಂಬಲ್ಲಿ ಅನ್ವಯಿಸಿದರೆ ರೂಪವು ಹೀಗಾಗುತ್ತದೆ 'ದಧತುಃ'. ಎರಡು ವಾಕ್ಯಗಳನ್ನು ಮಾಡಿರುವುದರಿಂದ 'ಯತ್ ಅಗ್ರೇ ವರ್ತತೇ ತತ್ ತ್ವಂ ಬಿಭೃಹಿ' ಎಂದಾಗುವುದರಿಂದ, ಶ್ರುತಿಯಲ್ಲಿರುವ 'ದಧತುಃ' ಎಂಬ ಸ್ವರವು ಸಮಂಜಸವಾಗುವುದು.

ಆಯುಷೇ ತ್ವಂ ಜೀವಸೇ ವಯಂ ಯಥಾಯಥಂ ವಿಪರಿದಧಾ

ವಹೈ ಪುನಸ್ತೇ ॥ ನಮೋಽಗ್ನಯೇಽಪ್ರತಿವಿದ್ಧಾಯ

ನಮೋಽನಾಧೃಷ್ಟಾಯ ನಮಸ್ಸಮ್ರಾಜೇ ।

---

ಆಯುಷೇ । ತ್ವಮ್ । ಜೀವಸೇ । ವಯಮ್ । ಯಥಾಯಥಮಿತಿ ಯಥಾ-ಯಥಮ್।

ವಿ । ಪರೀತಿ । ದಧಾವಹೈ । ಪುನಃ । ತೇ ಇತಿ ॥ ನಮಃ । ಅಗ್ನಯೇ । ಅಪ್ರತಿವಿದ್ಧಾಯೇತ್ಯ

ಪ್ರತಿ-ವಿದ್ಧಾಯ । ನಮಃ । ಅನಾಧೃಷ್ಟಾಯೇತ್ಯನಾ-ಧೃಷ್ಟಾಯ । ನಮಃ । ಸಮ್ರಾಜ

ಇತಿ ಸಮ್-ರಾಜೇ ।

---

| ಮಂತ್ರ | ವಿನಿಯೋಗ |
|---|---|
| ನಮೋಽಗ್ನಯೇ....ಗಂಧರ್ವಃ॥ | ಆಹವನೀಯೋಪಸ್ಥಾನದಲ್ಲಿ ಎರಡನೆಯ ಮಂತ್ರ.<br>ಗಾರ್ಹಪತ್ಯೋಪಸ್ಥಾನದ ಮಂತ್ರ [ಭ. ಭಾ.] |

---

**ತೇ** = ಆ ಎರಡು ಹೆಸರನ್ನೂ; **ಆಯುಷೇ** = ಆಯುಸ್ಸಿಗಾಗಿಯೂ; **ಜೀವಸೇ** = [ಧನಾದಿಸಮೃದ್ಧಿಯಿಂದ] ಉತ್ತಮ ಜೀವನಕ್ಕಾಗಿ; **ತ್ವಮ್** = ನೀನು; **ವಯಮ್** = ನಾವು [ನಾನು] **ಪುನಃ** = ಮತ್ತೆ; **ಯಥಾಯಥಮ್** = ಮೊದಲಿನಂತೆ; **ವಿಪರಿದಧಾವಹೈ** = ಬದಲಾಯಿಸಿಕೊಂಡು ಧರಿಸೋಣ; [ಆಯುಷೇ = ಅನ್ನಾಯ/ಹವೀರೂಪವಾದ ಅನ್ನಕ್ಕಾಗಿ ನಿನ್ನ ಹೆಸರನ್ನು ನೀನು ಧರಿಸು; ಜೀವಸೇ=ಉತ್ತಮ ಜೀವನಕ್ಕಾಗಿ ನನ್ನ ಹೆಸರನ್ನು ನಾನು ಧರಿಸುತ್ತೇನೆ.] ✢ **ಅಪ್ರತಿವಿದ್ಧಾಯ** = ಯಾರಿಂದಲೂ ಪ್ರಹರಿಸಲು ಸಾಧ್ಯವಾಗದ; **ಅಗ್ನಯೇ** = ಅಗ್ನಿದೇವನಿಗೆ; **ನಮಃ** = ನಮಸ್ಕಾರವು; **ಅನಾಧೃಷ್ಟಾಯ** = ಯಾರಿಂದಲೂ ತಿರಸ್ಕರಿಸಲು ಸಾಧ್ಯವಿಲ್ಲದ; **ಅಗ್ನಯೇ** = ಅಗ್ನಿಗೆ; **ನಮಃ** = ನಮಸ್ಕಾರವು; **ಸಮ್ರಾಜೇ** = ಚೆನ್ನಾಗಿ ಪ್ರಕಾಶಿಸುವ ಅಗ್ನಿಗೆ; **ನಮಃ** = ನಮಸ್ಕಾರವು.

---

ಇಲ್ಲಿಯ ಕಾರ್ಯಗಳಲ್ಲಿ ವೈಕಲ್ಯವಿಲ್ಲದಂತೆ ನೋಡಿಕೋ.] ನಾನು ಅಲ್ಲಿಯವರೆಗೂ ನಿನ್ನ ಹೆಸರನ್ನು ಧರಿಸುತ್ತೇನೆ. [ಇದರಿಂದ ಪ್ರವಾಸದಲ್ಲಿರುವ ನನಗೆ ಯಾವ ವೈಕಲ್ಯವೂ ಸಂಭವಿಸಲಾರದು.]

**ಅಷಾಢೋ [ಅಷಾಢಃ (೧)] ಅಗ್ನಿರ್ಬೃಹದ್ವಯಾ**

**ವಿಶ್ವಜಿತ್ಸಹಂತ್ಯಶ್ರ್ರೇಷ್ಠೋ ಗಂಧರ್ವಃ ॥**

---

ಅಷಾಢಃ (೧) । ಅಗ್ನಿಃ । ಬೃಹದ್ವಯಾ ಇತಿ ಬೃಹತ್-ವಯಾಃ । ವಿಶ್ವಜಿದಿತಿ ವಿಶ್ವ-ಜಿತ್।

ಸಹಂತ್ಯಃ । ಶ್ರೇಷ್ಠಃ । ಗಂಧರ್ವಃ ॥

---

**ಅಗ್ನಿಃ** = ಈ ಅಗ್ನಿದೇವನು; **ಅಷಾಢಃ** = ಯಾರಿಂದಲೂ [ಶತ್ರುಗಳಿಗೆ] ಸಹಿಸಲು ಸಾಧ್ಯವಿಲ್ಲದವನು; **ಬೃಹದ್ವಯಾಃ** = ಅಪರಿಮಿತವಾದ ಅನ್ನವುಳ್ಳವನು; **ವಿಶ್ವಜಿತ್** = ಸರ್ವವನ್ನೂ ಜಯಸಿದವನು; **ಸಹಂತ್ಯಃ** = ಸಹಿಷ್ಣುವಾದವನು; [ಶತ್ರುಗಳನ್ನು ಸೋಲಿಸುವವನು] **ಶ್ರೇಷ್ಠಃ ಗಂಧರ್ವಃ** = ಸಂಗೀತ ಮೊದಲಾದ ಕಲೆಗಳನ್ನು ತಿಳಿದವನು. [ಶ್ರೇಷ್ಠನೂ, ಎಲ್ಲರ ಸ್ತುತಿಗೂ ಆಶ್ರಯನೂ] ಆಗಿರುತ್ತಾನೆ.

---

ಎಲೈ! ಅಗ್ನಿದೇವನೇ! ನಾನೂ ನೀನೂ ವಸ್ತ್ರಗಳನ್ನು ವ್ಯತ್ಯಾಸಗೊಳಿಸಿ ಧರಿಸುವಂತೆ ಇದುವರೆಗೂ ಹೆಸರುಗಳನ್ನು ವ್ಯತ್ಯಾಸ ಮಾಡಿ ಇಟ್ಟುಕೊಂಡಿದ್ದೆವು. ಇನ್ನು ಮೇಲೆ ಮೊದಲಿನಂತೆ ನಿನ್ನ ಹೆಸರನ್ನು ನೀನು ಧರಿಸು; ಆಯುಸ್ಸಿಗಾಗಿಯೂ ಉತ್ತಮಜೀವನಕ್ಕಾಗಿಯೂ ನನ್ನ ಹೆಸರನ್ನು ನಾನು ಇಟ್ಟುಕೊಳ್ಳುತ್ತೇನೆ. [ಹವಿಸ್ಸಿನ ಸ್ವೀಕಾರಕ್ಕಾಗಿ ನಿನ್ನ ಹೆಸರನ್ನು ನೀನು ಇಟ್ಟುಕೋ. ಉತ್ತಮಜೀವನಕ್ಕಾಗಿ ನನ್ನ ಹೆಸರನ್ನು ನಾನು ಇಟ್ಟುಕೊಳ್ಳುತ್ತೇನೆ.]

ಅಗ್ನಿಯನ್ನು ಯಾರೂ ಪ್ರಹರಿಸಲು ಸಾಧ್ಯವಿಲ್ಲ. ತಿರಸ್ಕರಿಸಲೂ ಸಾಧ್ಯವಾಗದು. ಆತನು ಅತಿಪ್ರಕಾಶಯುಕ್ತನು. ಇಂತಹ ಅಗ್ನಿದೇವನಿಗೆ ನಮಸ್ಕರಿಸುತ್ತೇನೆ.

**ತ್ವತ್ಪಿತಾರೋ ಅಗ್ನೇ ದೇವಾಸ್ತ್ವಾಮಾಹುತಯಸ್ತ್ವದ್ವಿವಾಚ**

**ನಾಃ। ಸಂ ಮಾಮಾಯುಷಾ ಸಂ ಗೌಪತ್ಯೇನ ಸುಹಿತೇ ಮಾ ಧಾಃ॥**

---

**ತ್ವತ್ಪಿತಾರ ಇತಿ ತ್ವತ್-ಪಿತಾರಃ । ಅಗ್ನೇ । ದೇವಾಃ । ತ್ವಾಮಾಹುತಯ ಇತಿ ತ್ವಾಮ್-ಆಹುತಯಃ । ತ್ವದ್ವಿವಾಚನಾ ಇತಿ ತ್ವತ್-ವಿವಾಚನಾಃ ॥ ಸಮಿತಿ । ಮಾಮ್ । ಆಯುಷಾ॥ ಸಮಿತಿ । ಗೌಪತ್ಯೇನ । ಸುಹಿತ ಇತಿ ಸು-ಹಿತೇ । ಮಾ । ಧಾಃ ॥**

---

| **ಮಂತ್ರ** | **ವಿನಿಯೋಗ** |
|---|---|
| **ತ್ವತ್ಪಿತಾರಃ...... ಮಾ ಧಾಃ।** | ಆಹವನೀಯೋಪಸ್ಥಾನದ ಮೂರನೆಯ ಋಕ್ಕು. ಅನ್ವಾಹಾರ್ಯಪಚನೋಪಸ್ಥಾನದ ಮಂತ್ರ. **ಛ.** |

---

✣**ಅಗ್ನೇ** = ಅಗ್ನಿದೇವನೇ! **ದೇವಾಃ** = ದೇವತೆಗಳು; **ತ್ವತ್ಪಿತಾರಃ** = ನೀನೇ ರಕ್ಷಕ [ತಂದೆ]ನಾಗಿ ಉಳ್ಳವರು; **ತ್ವಾಮಾಹುತಯಃ** = ನಿನ್ನಲ್ಲಿ ಯಜಮಾನರು ಸಮರ್ಪಿಸುವ ಆಹುತಿಯುಳ್ಳವರು; **ತ್ವದ್ವಿವಾಚನಾಃ** = ನಿನ್ನಿಂದಲೇ ವಿಶೇಷವಾದ ಪ್ರಖ್ಯಾತಿಯುಳ್ಳವರೂ ಆಗಿದ್ದಾರೆ; [ಅಂತಹ ನೀನು] **ಮಾಮ್** = ನನ್ನನ್ನು; **ಆಯುಷಾ** = ಆಯುಸ್ಸಿನಿಂದ; **ಸಮ್ ಧಾಃ** = ಸೇರಿಸು; **ಗೌಪತ್ಯೇನ** = ಪಶುಸ್ವಾಮಿತ್ವದಿಂದ; **ಸಮ್ ಧಾಃ** = ಸೇರಿಸು; **ಸುಹಿತೇ** = ಶ್ರೇಷ್ಠಪುರುಷಾರ್ಥದಲ್ಲಿ [ಒಳ್ಳೆಯ ಹಿತಕ್ಕಾಗಿ]; **ಮಾ** = ನನ್ನನ್ನು; **ಸಮ್ ಧಾಃ** = ಸೇರಿಸು.

---

ಅಗ್ನಿದೇವನು ಯಾರಿಂದಲೂ ಸಹಿಸಲು ಅಸಾಧ್ಯನು. ಆರಾಧಿಸಿದವರಿಗೆ ಅಪರಿಮಿತವಾದ ಅನ್ನವನ್ನು ಕೊಡುವವನು. ವಿಶ್ವವನ್ನು ಜಯಿಸಿದವನು. ಸ್ವಯಂ ಸಹನಶೀಲನು.

ಅಯಮಗ್ನಿಶ್ಶ್ರೇಷ್ಠತಮೋಽಯಂ ಭಗವತ್ತಮೋಽಯಗ್ಂ

ಸಹಸ್ರಸಾತಮಃ । ಅಸ್ಮಾ ಅಸ್ತು ಸುವೀರ್ಯಮ್ ॥

ಅಯಮ್ । ಅಗ್ನಿಃ । ಶ್ರೇಷ್ಠತಮ ಇತಿ ಶ್ರೇಷ್ಠ-ತಮಃ । ಅಯಮ್ । ಭಗವತ್ತಮ ಇತಿ ಭಗವತ್-ತಮಃ । ಅಯಮ್ । ಸಹಸ್ರಸಾತಮ ಇತಿ ಸಹಸ್ರ-ಸಾತಮಃ ॥ ಅಸ್ಮೈ । ಅಸ್ತು । ಸುವೀರ್ಯಮಿತಿ ಸು-ವೀರ್ಯಮ್ ॥

| ಮಂತ್ರ | ವಿನಿಯೋಗ |
|---|---|
| ಅಯಮಗ್ನಿಃ.. ಸುವೀರ್ಯಮ್॥ | ಆಹವನೀಯೋಪಸ್ಥಾನದ ನಾಲ್ಕನೆಯ ಋಕ್ಕು. |

✣ ಅಯಮ್ ಅಗ್ನಿಃ = ಈ ಆಹವನೀಯಾಗ್ನಿಯು; ಶ್ರೇಷ್ಠತಮಃ = ಶ್ರೇಷ್ಠರಲ್ಲಿ ಅತಿಶ್ರೇಷ್ಠನು; ಅಯಮ್ = ಈ ಅಗ್ನಿಯು; ಭಗವತ್ತಮಃ = *ಭಗವಂತರಲ್ಲಿ ಶ್ರೇಷ್ಠನು. [ಧನವಂತನು]; ಅಯಮ್ = ಈ ಅಗ್ನಿಯು; ಸಹಸ್ರಸಾತಮಃ = ಸಹಸ್ರಸಂಖ್ಯಾಕಧನವನ್ನು ಕೊಡುವವರಲ್ಲಿ ಅತಿದಾನಿಯು; [ಇಂತಹ ಅಗ್ನಿಯ ಅನುಗ್ರಹದಿಂದ] ಅಸ್ಮೈ= ಈ ಯಜಮಾನನಿಗೆ/ನನಗೆ; ಸುವೀರ್ಯಮ್ = ಒಳ್ಳೆಯ ಸಾಮರ್ಥ್ಯವು; ಅಸ್ತು =ಆಗಲಿ.

ಶತ್ರುಗಳನ್ನು ಸೋಲಿಸುವವನು. ಗಂಧರ್ವರಂತೆ ಸಂಗೀತಾದಿಕುಶಲಕಲೆಗಳನ್ನು ಚೆನ್ನಾಗಿ ತಿಳಿದವನು. ಸ್ತುತಿಪಾತ್ರನಾದ ಶ್ರೇಷ್ಠನೂ ಆಗಿರುತ್ತಾನೆ. ಆತನಿಗೆ ನಮಸ್ಕಾರವು.

ಅಗ್ನಿಯೇ! ನೀನು ದೇವತೆಗಳಿಗೆ ತಂದೆಯಂತಿರುವೆ. ಪಾಲಕನಾಗಿರುವೆ. ನಿನ್ನಲ್ಲಿ ಯಜಮಾನರು ಸಮರ್ಪಿಸಿದ ಆಹುತಿಗಳಿಂದಲೇ ದೇವತೆಗಳು ತೃಪ್ತರಾಗುತ್ತಾರೆ.

*ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ।
ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥
ಈ ಆರು ಗುಣಗಳಿಂದ ಪೂರ್ಣನಾದವನು 'ಭಗವಾನ್' ಎನಿಸಿಕೊಳ್ಳುವನು. ಅಥವಾ
ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಗತಿಂ ಗತಿಮ್ ।
ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥ ಇಂತಹ ಜ್ಞಾನವುಳ್ಳವನು.

**ಮನೋ ಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್ಂ**

**ಸಮಿಮಂ ದಧಾತು । ಯಾ ಇಷ್ಟಾ ಉಷಸೋ ನಿಮ್ರುಚಶ್ಚ**

**ಮನಃ । ಜ್ಯೋತಿಃ । ಜುಷತಾಮ್ । ಆಜ್ಯಮ್ । ವಿಚ್ಛಿನ್ನಮಿತಿ ವಿ-ಛಿನ್ನಮ್। ಯಜ್ಞಮ್ ಸಮಿತಿ । ಇಮಮ್ । ದಧಾತು ॥ ಯಾಃ । ಇಷ್ಟಾಃ । ಉಷಸಃ । ನಿಮ್ರುಚ ಇತಿ ನಿ-ಮ್ರುಚಃ । ಚ ।**

| ಮಂತ್ರ | ವಿನಿಯೋಗ |
|---|---|
| ಮನೋ ಜ್ಯೋತಿಃ....ಘ್ರುತೇನ । | ಪ್ರವಾಸದಲ್ಲಿ ಒಂಬತ್ತು ದಿನಗಳು ಕಳೆದು ಹೋದರೆ ಅನಂತರ ಮಾಡಬೇಕಾದ ಆಜ್ಯಹೋಮದ ಮಂತ್ರ. |

❖**ಮನಃ** = ಸರ್ವರಿಗೂ ಮಾನ್ಯವಾದ; **ಜ್ಯೋತಿಃ** = ಅಗ್ನಿಯ ತೇಜಸ್ಸು/ಜ್ಯೋತೀರೂಪನಾದ ಅಗ್ನಿಯು; **ಆಜ್ಯಮ್** = ಹೋಮ ಮಾಡುತ್ತಿರುವ ಆಜ್ಯ ಹವಿಸ್ಸನ್ನು; **ಜುಷತಾಮ್** = ಸೇವಿಸಲಿ; **ವಿಚ್ಛಿನ್ನಮ್** = [ಆಹುತಿಗಳನ್ನು ಕೊಡದಿರುವುದರಿಂದ] ವಿಚ್ಛಿನ್ನವಾಗಿರುವ; **ಇಮಮ್ ಯಜ್ಞಮ್** = ಈ ಯಜ್ಞವನ್ನು; **ಸಮ್ ದಧಾತು** = ಕೂಡಿಸಲಿ. **ಯಾಃ ಉಷಸಃ** = ಯಾವ ಪ್ರಾತಃಕಾಲದ ಆಹುತಿಗಳು; **ಚ** = ಮತ್ತು; **ನಿಮ್ರುಚಃ** = ಸಾಯಂಕಾಲದ ಆಹುತಿಗಳು; **ಇಷ್ಟಾಃ** = ಬೇರೆಯ ಯಜಮಾನರಿಂದ ಅನುಷ್ಠಿತ

**'ಅಗ್ನಿಮುಖಾ ವೈ ದೇವಾಃ'** ಎಂದು ದೇವತೆಗಳಿಂದಲೇ ಪ್ರಖ್ಯಾತಿಯಿದೆ. ಇಂತಹ ನೀನು ನನಗೆ ದೀರ್ಘಾಯುಸ್ಸನ್ನೂ, ಪಶುಸ್ವಾಮಿತ್ವವನ್ನೂ ಒಳ್ಳೆಯ ಪುರುಷಾರ್ಥಗಳನ್ನೂ ಕೊಡು. ನನಗೆ ಒಳ್ಳೆಯ ಹಿತವನ್ನುಂಟುಮಾಡು.

ಈ ಅಗ್ನಿಯು ಶ್ರೇಷ್ಠರಲ್ಲಿ ಅತಿಶ್ರೇಷ್ಠನು. ಭಗವಂತರೆನಿಸಿಕೊಳ್ಳುವವರಲ್ಲಿಯೂ ಶ್ರೇಷ್ಠನು. ಸಹಸ್ರಸಂಖ್ಯೆಯ [ಅಪರಿಮಿತವಾದ] ಧನವನ್ನು ದಾನಮಾಡುವವರಲ್ಲಿಯೂ ಶ್ರೇಷ್ಠನು. ಇಂತಹ ಅನುಗ್ರಹದಿಂದ ನನಗೆ ಒಳ್ಳೆಯ ಸಾಮರ್ಥ್ಯವು ಲಭಿಸಲಿ. ಈ ಅಗ್ನಿಯೇ ನನಗೆ ಶ್ರೇಷ್ಠವಾದ ಸಾಮರ್ಥ್ಯವುಳ್ಳ ಧನವಾಗಲಿ/ಧನವನ್ನು ಕೊಡುವವನಾಗಲಿ.

ತಾಸ್ಸಂದಧಾಮಿ ಹವಿಷಾ ಘೃತೇನ ॥ ಪಯಸ್ವತೀರೋಷಧ-

ಯಃ [... ಪಯಸ್ವತೀರೋಷಧಯಃ (೩) ಪಯ...] ಪಯಸ್ವ

ದ್ವೀರುಧಾಂ

---

ತಾಃ । ಸಮಿತಿ । ದಧಾಮಿ । ಹವಿಷಾ । ಘೃತೇನ ॥ ಪಯಸ್ವತೀಃ । ಓಷಧಯಃ[೨]।
ಪಯಸ್ವತ್ । ವೀರುಧಾಮ್ ।

---

| ಮಂತ್ರ | ವಿನಿಯೋಗ |
|---|---|
| ✣ಪಯಸ್ವತೀಃ.... ಸೃಜ ॥ | ಯಜಮಾನನು ಆಚಮನ ಮಾಡಲು ಅಥವಾ ಸ್ನಾನ ಮಾಡಲು |

---

ವಾಗಿವೆಯೋ/ನನ್ನಿಂದ ಬಿಡಲ್ಪಟ್ಟಿವೆಯೋ; **ತಾಃ** = ಆ ಆಹುತಿಗಳನ್ನು; **ಘೃತೇನ ಹವಿಷಾ** = ಈ ಆಜ್ಯರೂಪವಾದ ಹವಿಸ್ಸಿನಿಂದ; **ಸಂದಧಾಮಿ** = ಸರಿಹೊಂದಿಸುತ್ತೇನೆ/ಅವಿಚ್ಛಿನ್ನವಾಗಿ ಮಾಡುತ್ತೇನೆ; [ಇಷ್ಟಾಃ = ಹಿಂದೆ ಯಾಗ ಮಾಡಿರುವ; ನಿಮ್ರುಚಃ ಚ = ಬಿಟ್ಟುಬಿಟ್ಟಿರುವ ಯಾಗಗಳನ್ನು; ಸಂದಧಾಮಿ= ಅವಿಚ್ಛಿನ್ನವಾಗುವಂತೆ ಮಾಡುತ್ತೇನೆ] ✣ ಇಂದ್ರ= ಇಂದ್ರನೇ! = **ಓಷಧಯಃ** = ಸಸ್ಯಗಳು; **ಪಯಸ್ವತೀಃ** = ಸಾರವುಳ್ಳವುಗಳು / ರಸವುಳ್ಳವುಗಳು; **ವೀರುಧಾಮ್** = ಬಳ್ಳಿಗಳ; **ಪಯಃ** = ಹಾಲು; **ಪಯಸ್ವತ್** = ಸಾರವುಳ್ಳದ್ದು/ರಸವುಳ್ಳದ್ದು;

---

ಸರ್ವರಿಗೂ ಮಾನ್ಯವಾದ ಅಗ್ನಿಯ ತೇಜಸ್ಸು/ಅಗ್ನಿಯು ಹೋಮ ಮಾಡದಿರುವುದರಿಂದ ವಿಚ್ಛಿನ್ನವಾಗಿರುವ ಯಜ್ಞವನ್ನು ಕೂಡಿಸಿಕೊಡಲಿ. ಬೇರೆ ಯಜಮಾನರು ಹೋಮ ಮಾಡಿರುವ, ಆದರೆ ನಾನು ಬಿಟ್ಟಿರುವ ಪ್ರಾತಃಕಾಲದ ಮತ್ತು ಸಾಯಂಕಾಲದ ಆಹುತಿಗಳನ್ನು ಈ ಘೃತರೂಪವಾದ ಹವಿಸ್ಸಿನಿಂದ ವಿಚ್ಛಿತ್ತಿಯಿಲ್ಲದಂತೆ, ಕೂಡಿಕೊಂಡಿರುವಂತೆ ಮಾಡುತ್ತೇನೆ. ಅಗ್ನಿಯು ವಿಚ್ಛಿತ್ತಿದೋಷವನ್ನೂ ಪರಿಹರಿಸಲಿ.

**ಉಪಸ್ಥಾನಪ್ರಕರಣವು ಮುಗಿಯಿತು.**

---

✣ ಕಾಂಡಪಾಠದಂತೆ ಇಲ್ಲಿಂದ ಈ ಅನುವಾಕ ಪೂರ್ಣವಾಗುವವರೆಗಿನ ಮಂತ್ರಗಳು ಪ್ರಾಜಾಪತ್ಯಕಾಂಡಕ್ಕೆ ಸೇರಿವೆ. ಅವು ದರ್ಶ–ಪೂರ್ಣಮಾಸಗಳಿಗೆ ಸಂಬಂಧಿಸಿದ ಯಾಜಮಾನಮಂತ್ರಗಳು.

**ಪಯಃ । ಅಪಾಂ ಪಯಸೋ ಯತ್ಪಯಸ್ತೇನ ಮಾಮಿಂದ್ರ ಸಗ್ಂ ಸೃಜ ॥ ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ**

---

ಪಯಃ ॥ ಅಪಾಮ್ । ಪಯಸಃ । ಯತ್ । ಪಯಃ । ತೇನ । ಮಾಮ್ । ಇಂದ್ರ। ಸಮಿತಿ । ಸೃಜ ॥ ಅಗ್ನೇ । ವ್ರತಪತ ಇತಿ ವ್ರತ-ಪತೇ । ವ್ರತಮ್ । ಚರಿಷ್ಯಾಮಿ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ವ್ರತಪತೇ..ರಾಧ್ಯತಾಮ್॥ | ದರ್ಶ-ಪೂರ್ಣಮಾಸಾಂಗವಾಗಿ ಯಜಮಾನನು ವ್ರತವನ್ನು [ನಿಯಮ] ಹೊಂದಲು. |

---

**ಅಪಾಮ್** = ನೀರುಗಳ; **ಪಯಸಃ** = ಹಸುಗಳ ಹಾಲಿನ; **ಯತ್ ಪಯಃ** = ಯಾವ ಸಾರವುಂಟೋ; **ತೇನ** = ಅದರಿಂದ; **ಮಾಮ್** = ನನ್ನನ್ನು; **ಸಮ್ ಸೃಜ** = ಸೇರಿಸು [ಆ ಸಾರವು ನನ್ನಲ್ಲಿರುವಂತೆ ಮಾಡು.] ✢ **ವ್ರತಪತೇ** =[ಬ್ರಹ್ಮಚರ್ಯಾದಿ] ವ್ರತರಕ್ಷಕನಾದ; **ಅಗ್ನೇ** = ಅಗ್ನಿಯೇ! [ನಾನು] **ವ್ರತಮ್** = ಉಕ್ತವಾಗಿರುವ ನಿಯಮಗಳನ್ನು; **ಚರಿಷ್ಯಾಮಿ** = ಆಚರಿಸುತ್ತೇನೆ.

---

ಓಷಧಿಗಳು,*[ಬತ್ತ ಮುಂತಾದವುಗಳು] ಸಸ್ಯಗಳು ಸಾರವಾದ ರಸವುಳ್ಳವುಗಳಾಗಿವೆ. ಬಳ್ಳಿಗಳ ರಸವೂ ಸಾರವುಳ್ಳದ್ದಾಗಿದೆ. ನೀರಿನ ರಸವೂ ಸಾರವತ್ತಾಗಿದೆ. ಹಸುಗಳ ಹಾಲಿನ ರಸವೂ ಸಾರವತ್ತಾಗಿದೆ. ಎಲೈ! ಇಂದ್ರದೇವನೇ! ಇಂತಹ ಎಲ್ಲ ವಸ್ತುಗಳಲ್ಲಿರುವ ಸಾರವಾದ ರಸದಿಂದ ನನ್ನನ್ನು ಕೂಡಿಕೊಂಡವನನ್ನಾಗಿ ಮಾಡು. [ಓಷಧಿಗಳ ರಸವು ಸಾರವತ್ತಾಗಿದೆ. ಲತೆಗಳ ರಸವು ಇನ್ನೂ ಸಾರವತ್ತಾಗಿದೆ. ನೀರುಗಳ ರಸವು ಎಲ್ಲ ಹಾಲುಗಳಿಗಿಂತಲೂ ಹೆಚ್ಚು ರಸವತ್ತಾಗಿದೆ.]

---

***'ಓಷಧ್ಯಃ ಫಲಪಾಕಾಂತಾಃ....' ಅಮರಕೋಶ, ವನೌಷಧಿವರ್ಗ.**

**ತಚ್ಛಕೇಯಂ ತನ್ಮೇ ರಾಧ್ಯತಾಮ್ ॥ ಅಗ್ನಿಗ್ಂ ಹೋತಾರ ಮಿಹ ತಗ್ಂ ಹುವೇ ದೇವಾನ್, ಯಜ್ಞಿಯಾನಿಹ ಯಾನ್, ಹವಾಮಹೇ ।**

---

ತತ್ । ಶಕೇಯಮ್ । ತತ್ । ಮೇ । ರಾಧ್ಯತಾಮ್ ॥ ಅಗ್ನಿಮ್ । ಹೋತಾರಮ್।

ಇಹ । ತಮ್। ಹುವೇ । ದೇವಾನ್ । ಯಜ್ಞಿಯಾನ್ । ಇಹ । ಯಾನ್ । ಹವಾಮಹೇ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿಗ್ಂ.... ಅಸ್ಯ । | ಹವಿಸ್ಸಿನ ಅಥವಾ ನಿರ್ವಪಣಪಾತ್ರೆಯ ಅಭಿಮಂತ್ರಣ. [ದರ್ಶ-ಪೂರ್ಣಮಾಸದಲ್ಲಿನ ಹವಿರ್ನಿರ್ವಾಪದಲ್ಲಿ ನಿರ್ವಪಣ ಮಾಡುವಾಗ] |

---

**ತತ್** = ವ್ರತವನ್ನು [ಅನುಷ್ಠಿಸಲು] **ಶಕೇಯಮ್** = ಶಕ್ತನಾಗುವಂತಾಗಲಿ; **ತತ್** = ಆ ವ್ರತವು; **ಮೇ** = ನನಗೆ; **ರಾಧ್ಯತಾಮ್** = ಸಮೃದ್ಧವಾಗಲಿ/ಸಿದ್ಧಿಸಲಿ. ÷ **ಇಹ** = ಈ ಯಜ್ಞಕರ್ಮದಲ್ಲಿ; **ಹೋತಾರಮ್**= ದೇವತೆಗಳನ್ನು ಆಹ್ವಾನಿಸುವ; **ತಮ್ ಅಗ್ನಿಮ್** = ಆ ಅಗ್ನಿಯನ್ನು; **ಹುವೇ** = ಆಹ್ವಾನಿಸುತ್ತೇನೆ; **ಇಹ** = ಈ ಯಾಗದಲ್ಲಿ; **ಯಾನ್ ದೇವಾನ್** = ಯಾವ ದೇವತೆಗಳನ್ನುದ್ದೇಶಿಸಿ [ಯಾಗ ಮಾಡುತ್ತೇವೆಯೋ] **ತಾನ್** = ಆ; **ಯಜ್ಞಿಯಾನ್** = ಯಜ್ಞಾರ್ಹರಾದ; **ದೇವಾನ್** = ದೇವತೆಗಳನ್ನು; **ಹವಾಮಹೇ** = ಆಹ್ವಾನಿಸುತ್ತೇವೆ.

---

ಎಲೈ! ಅಗ್ನಿಯೇ! ನೀನು ಬ್ರಹ್ಮಚರ್ಯಾದಿವ್ರತಪಾಲಕನಾಗಿದ್ದೀಯೆ. ನಿನ್ನ ಸನ್ನಿಧಿಯಲ್ಲಿ ದರ್ಶ-ಪೂರ್ಣಮಾಸಗಳಿಗೆ ಸಂಬಂಧಿಸಿದ ವ್ರತಾನುಷ್ಠಾನವನ್ನು ಕೈಗೊಳ್ಳುತ್ತೇನೆ. ಅದನ್ನು ಆಚರಿಸಲು ನಾನು ಶಕ್ತನಾಗುವಂತಾಗಲಿ. ನಿನ್ನ ಅನುಗ್ರಹದಿಂದ ಆ ವ್ರತವು ನನಗೆ ಸಮೃದ್ಧವಾಗಿ ಸಿದ್ಧಿಸಲಿ.

ಆ ಯಂತು ದೇವಾಸ್ಸುಮನಸ್ಯಮಾನಾ ವಿಯಂತು ದೇವಾ ಹವಿಷೋ ಮೇ ಅಸ್ಯ ॥ ಕಸ್ತ್ವಾ ಯುನಕ್ತಿ ಸ ತ್ವಾ ಯುನಕ್ತು

---

ಏತಿ । ಯಂತು । ದೇವಾಃ । ಸುಮನಸ್ಯಮಾನಾ ಇತಿ ಸು-ಮನಸ್ಯಮಾನಾಃ । ವಿಯಂತು। ದೇವಾಃ । ಹವಿಷಃ । ಮೇ । ಅಸ್ಯ ॥ ಕಃ । ತ್ವಾ । ಯುನಕ್ತಿ । ಸಃ । ತ್ವಾ । ಯುನಕ್ತು।

---

| ಮಂತ್ರ | ವಿನಿಯೋಗ |
| --- | --- |
| ಕಸ್ತ್ವಾ... ಯುನಕ್ತು। | *ಯಜ್ಞಯೋಗದಲ್ಲಿ / ಯಾಗಭೂಮಿಯನ್ನು ನೋಡಲು. |

---

**ದೇವಾಃ** = ಆ ದೇವತೆಗಳು; **ಸುಮನಸ್ಯಮಾನಾಃ** = [ನಮ್ಮ ವಿಷಯದಲ್ಲಿ] ಒಳ್ಳೆಯ ಮನಸ್ಸುಳ್ಳವರಾಗಿ; **ಆ ಯಂತು** = ಆಗಮಿಸಲಿ. **ಮೇ** = ನನ್ನ; **ಅಸ್ಯ ಹವಿಷಃ** = ಈ ಹವಿಸ್ಸಿನ ಭಾಗವನ್ನು/ಹವಿಸ್ಸನ್ನು, **ದೇವಾಃ** = ದೇವತೆಗಳು, **ವಿಯಂತು** = ಭಕ್ಷಿಸಲಿ; ✣ [ಎಲೈ! ಯಜ್ಞವೇ!] **ಕಃ** = ಪ್ರಜಾಪತಿಯು; **ತ್ವಾ** = ನಿನ್ನನ್ನು; **ಯುನಕ್ತಿ** = [ಎಲ್ಲಾ ಕಡೆಗಳಲ್ಲಿಯೂ] ಯೋಗ್ಯನನ್ನಾಗಿ/ಸಂಬಂಧಿಸಿದವನನ್ನಾಗಿ ಮಾಡುತ್ತಾನೆ; **ಸಃ** = ಆ ಪ್ರಜಾಪತಿಯು; **ತ್ವಾ** = ನಿನ್ನನ್ನು; **ಯುನಕ್ತು** = ಇಲ್ಲಿ ಯುಕ್ತನನ್ನಾಗಿ ಮಾಡಲಿ.

---

ಈ ಯಾಗದಲ್ಲಿ ದೇವತೆಗಳನ್ನು ಆಹ್ವಾನಿಸುವ ಅಗ್ನಿಯನ್ನು ಕರೆಯುತ್ತೇನೆ. ಯಾವ ದೇವತೆಗಳನ್ನುದ್ದೇಶಿಸಿ ಹವಿಸ್ಸನ್ನು ಕೊಡುತ್ತೇವೆಯೋ, ಆ ಯಜ್ಞಾರ್ಹರಾದ ದೇವತೆಗಳನ್ನು ಆಹ್ವಾನಿಸುತ್ತೇವೆ. ಆ ದೇವತೆಗಳು ಒಳ್ಳೆಯ ಮನಸ್ಸುಳ್ಳರಾಗಿ ಯಾಗಕ್ಕೆ ಬರಲಿ. ಆ ದೇವತೆಗಳು ನಾನು ಕೊಡುವ ಹವಿಸ್ಸನ್ನು ಸ್ವೀಕರಿಸಿ ತೃಪ್ತರಾಗಲಿ.

---

*ಈ ಮಂತ್ರೋಚ್ಚಾರಣೆಯೇ ಯಜ್ಞಯೋಗ. ಕೊನೆಯಲ್ಲಿ 'ಯಜ್ಞಮೋಚನ'. ಅಲ್ಲಿಯವರೆಗೆ ಯಜ್ಞನಿಯಮಗಳನ್ನು ಪಾಲಿಸಬೇಕು. ಅದು ಇದರ ಉದ್ದೇಶ.

**ಯಾನಿ ಘರ್ಮೇ ಕಪಾಲಾನ್ಯುಪಚಿನ್ವಂತಿ ವೇಧಸಃ ।**

**ಪೂಷ್ಣಸ್ತಾನ್ಯಪಿ ವ್ರತ ಇಂದ್ರವಾಯೂ ವಿಮುಂಚತಾಮ್ ॥**

---

ಯಾನಿ । ಘರ್ಮೇ । ಕಪಾಲಾನಿ । ಉಪಚಿನ್ವಂತೀತ್ಯುಪ-ಚಿನ್ವಂತಿ । [೩] ವೇಧಸಃ ॥ ಪೂಷ್ಣಃ । ತಾನಿ । ಅಪೀತಿ । ವ್ರತೇ । ಇಂದ್ರವಾಯೂ ಇತೀಂದ್ರ-ವಾಯೂ । ವೀತಿ। ಮುಂಚತಾಮ್ ॥

---

| ಮಂತ್ರ | ವಿನಿಯೋಗ |
|---|---|
| ಯಾನಿ.....ವಿಮುಂಚತಾಮ್ ॥ | ಅಧ್ವರ್ಯು-ಯಜಮಾನರು ಮಾಡುವ ಕಪಾಲ-ವಿಮೋಚನಜಪದಲ್ಲಿ |

---

✢ **ವೇಧಸಃ** = ಬ್ರಹ್ಮಸಮಾನರಾದ; **ಪೂಷ್ಣಃ** = ಪೋಷಕರಾದ ಋತ್ವಿಜರು; **ಘರ್ಮೇ** = ಅಗ್ನಿಯಲ್ಲಿ; **ಯಾನಿ ಕಪಾಲಾನಿ** = ಯಾವ ಕಪಾಲಗಳನ್ನು; **ಉಪಚಿನ್ವಂತಿ** = ಸ್ಥಾಪಿಸುತ್ತಾರೆಯೋ; **ತಾನಿ** = ಆ ಎಲ್ಲಾ ಕಪಾಲಗಳನ್ನೂ; **ವ್ರತೇ ಅಪಿ** [ಇತೇ ಸತಿ] = ಯಾಗರೂಪವ್ರತವು ಸಮಾಪ್ತವಾಗಲಾಗಿ; **ಇಂದ್ರವಾಯೂ** = ಇಂದ್ರನೂ ಮತ್ತು ವಾಯುವೂ; **ವಿಮುಂಚತಾಮ್** = ತೆಗೆದಿಡಲಿ. [ಪೂಷ್ಣಃ ವ್ರತೇ ಅಪಿ = ಪೋಷಕನಾದ ಅಗ್ನಿಯ ಯಾಗವು ಮುಕ್ತಾಯವಾಗಲಾಗಿ]

---

ಎಲೈ! ಯಜ್ಞವೇ! ಪ್ರಜಾಪತಿಯು ನಿನ್ನನ್ನು ಎಲ್ಲೆಲ್ಲಿಯೂ ಯುಕ್ತನನ್ನಾಗಿ ಮಾಡುತ್ತಾನೆ. ಆ ಪ್ರಜಾಪತಿಯೇ ಇಲ್ಲಿಯೂ ನಿನ್ನನ್ನು ಸನ್ನಿಹಿತನಾಗಿರುವಂತೆ ಮಾಡಲಿ.

ಬ್ರಹ್ಮಸಮಾನರಾದ, ಯಜ್ಞಪೋಷಕರಾದ ಋತ್ವಿಜರು ಅಗ್ನಿಯಲ್ಲಿ ಯಾವ ಕಪಾಲಗಳನ್ನು ಜೋಡಿಸಿರುತ್ತಾರೆಯೋ [ಪುಷ್ಟಿಕಾರಕನಾದ ಅಗ್ನಿಯ] ಯಾಗವ್ರತವು ಸಮಾಪ್ತವಾಗಲಾಗಿ ಆ ಕಪಾಲಗಳನ್ನು ಇಂದ್ರವಾಯುದೇವತೆಗಳು ಬೇರ್ಪಡಿಸಿಡಲಿ.

**ಅಭಿನ್ನೋ ಘರ್ಮೋ ಜೀರದಾನುರ್ಯತ ಆತ್ತಸ್ತದಗನ್ಪುನಃ।**

**ಇಧ್ಮೋ ವೇದಿಃ ಪರಿಧಯಶ್ಚ ಸರ್ವೇ ಯಜ್ಞಸ್ಯಾಯುರನು**

**ಸಂಚರಂತಿ ॥**

---

**ಅಭಿನ್ನಃ** । ಘರ್ಮಃ । ಜೀರದಾನುರಿತಿ ಜೀರ - ದಾನುಃ । ಯತಃ । ಆತ್ತಃ । ತತ್ । ಅಗನ್ । ಪುನಃ ॥ ಇಧ್ಮಃ । ವೇದಿಃ । ಪರಿಧಯ ಇತಿ ಪರಿ-ಧಯಃ । ಚ । ಸರ್ವೇ। ಯಜ್ಞಸ್ಯ । ಆಯುಃ । ಅನು । ಸಮಿತಿ । ಚರಂತಿ ॥

| ಮಂತ್ರ | ವಿನಿಯೋಗ |
|---|---|
| ಅಭಿನ್ನೋ..... ಚರಂತಿ। | ಕಪಾಲವು ಒಡೆದರೆ ಅದನ್ನು ಜೋಡಿಸಿ ಅಗ್ನಿಯ ಮೇಲೆ ಹಿಡಿದು 'ಮನೋ ಜ್ಯೋತಿಃ' ಎಂಬುದರಿಂದ ಹೋಮ ಮಾಡಿ ನಂತರ ಕಪಾಲವನ್ನು ನೀರಿನಲ್ಲಿ ಹಾಕಲು. —ಆಪ. |
| ೧) ಅಭಿನ್ನಃ.... ಪುನಃ । | ಉತ್ಕರದಲ್ಲಿ ಕಪಾಲವನ್ನು ಹಾಕಲು |
| ೨) ಇಧ್ಮೋ.... ಸ್ವಾಹಾ । | ಆಹವನೀಯದಲ್ಲಿ ಹೋಮಮಾಡಲು. —ಬೌ. |

---

✢ **ಘರ್ಮಃ** = ಕಾದಿರುವ ಈ ಕಪಾಲವು; [ಭಿನ್ನವಾಗಿದ್ದರೂ ಮಂತ್ರಸಾಮರ್ಥ್ಯದಿಂದ] **ಅಭಿನ್ನಃ** = ಭಿನ್ನವಲ್ಲದುದೇ ಆಗಿದೆ; [ಏಕೆಂದರೆ ಅದು] **ಜೀರದಾನುಃ** = [ಪುರೋಡಾಶ ಶ್ರಪಣಸಾಧನವಾಗಿ] ಯಜ್ಞಕ್ಕೆ ಜೀವನವನ್ನು ಕೊಡುತ್ತದೆ; [ಆದುದರಿಂದ ಅದು ಭಿನ್ನವಾಗುವುದಿಲ್ಲ.] [ಆ ಕಪಾಲವು] **ಯತಃ ಆತ್ತಃ** = ಯಾವ ಮಣ್ಣೆಂಬ ಪ್ರಕೃತಿಯಿಂದ ಉಂಟಾಗಿದ್ದಿತೋ; **ತತ್**=ಆ ಮಣ್ಣನ್ನೇ; **ಪುನಃ**=ಮತ್ತೆ; **ಅಗನ್** = ಹೊಂದಿತು; **ಇಧ್ಮಃ**= ಸಮಿತ್ತುಗಳು; **ವೇದಿಃ**=ಯಾಗವೇದಿಯು; **ಚ**=ಮತ್ತು; **ಪರಿಧಯಃ**=ಪರಿಧಿಗಳು; **ಸರ್ವೇ**= ಇವೆಲ್ಲವೂ; **ಯಜ್ಞಸ್ಯ** = ಯಜ್ಞದ; **ಆಯುಃ ಅನು** = ಆಯುಸ್ಸನ್ನು ಅನುಸರಿಸಿ; **ಸಂಚರಂತಿ** = ತಮ್ಮ ಕಾರ್ಯಗಳನ್ನು ಮಾಡುತ್ತವೆ; [ಯಜ್ಞದ ಸಂಪೂರ್ಣತೆಗೆ ನೆರವಾಗುತ್ತವೆ.]

---

ಈ ಚೆನ್ನಾಗಿ ಕಾದಿರುವ ಕಪಾಲವು ಪುರೋಡಾಶನಿಷ್ಪತ್ತಿಗೆ ಕಾರಣವಾಗಿ ಯಜ್ಞದ ಸ್ವರೂಪನಿಷ್ಪತ್ತಿಗೆ ಕಾರಣವಾಗುತ್ತದೆ. ಇದು ಭಿನ್ನವಾಗಿದ್ದರೂ ಮಂತ್ರದ ಸಾಮರ್ಥ್ಯ

ತ್ರಯಸ್ತ್ರಿಗ್ಂಶತ್ತಂತವೋ ಯೇ ವಿತತ್ನಿರೇ ಯ ಇಮಂ

ಯಜ್ಞಗ್ಂ ಸ್ವಧಯಾ ದದಂತೇ

---

ತ್ರಯಸ್ತ್ರಿಗ್ಂಶದಿತಿ ತ್ರಯಃ-ತ್ರಿಗ್ಂಶತ್ । ತಂತವಃ । ಯೇ । ವಿತತ್ನಿರ ಇತಿ ವಿ-ತತ್ನಿರೇ।

ಯೇ । ಇಮಮ್ । ಯಜ್ಞಮ್ । ಸ್ವಧಯೇತಿ ಸ್ವ-ಧಯಾ । ದದಂತೇ ।

---

| ಮಂತ್ರ | ವಿನಿಯೋಗ |
|---|---|
| ತ್ರಯಸ್ತ್ರಿಗ್ಂಶತ್...ಅಪ್ಯೇತು॥ | ಮತ್ತೊಂದು ಕಪಾಲವನ್ನು ತಂದು ಕಪಾಲಗಳ ಜೊತೆಗೆ ಜೋಡಿಸಲು-ಆಪ. |

---

ತ್ರಯಸ್ತ್ರಿಂಶತ್ ತಂತವಃ = ಮೂವತ್ತಮೂರು ಯಜ್ಞತನುಗಳು ಇವೆ;* ಯೇ ವಿತತ್ನಿರೇ = [ತಂತುಗಳು ಬಟ್ಟೆಯನ್ನು ಉತ್ಪಾದಿಸುವಂತೆ] ಯಾವ ಯಜ್ಞತನುಗಳು ಯಜ್ಞವನ್ನು ಉತ್ಪಾದಿಸುತ್ತವೆಯೋ; ಯೇ = ಯಾವ ಋತ್ವಿಜಾದಿಗಳು; ಇಮಮ್ ಯಜ್ಞಮ್ = ಈ ಯಜ್ಞವನ್ನು; ಸ್ವಧಯಾ = ಹವಿಸ್ಸಿನಿಂದ; ದದಂತೇ = ಅನುಷ್ಠಿಸುತ್ತಾರೆಯೋ;

---

ದಿಂದ ಅಭಿನ್ನವಾಗಿಯೇ ಇದೆ. ಇದು ಯಾವ ಮಣ್ಣಿನಿಂದ ಉತ್ಪನ್ನವಾಗಿದ್ದಿತೋ, ಅದನ್ನೇ ಮತ್ತೆ ಹೊಂದಿದೆ. ಈ ಕಪಾಲವಿಲ್ಲದಿದ್ದರೂ ಇಧ್ಮ, ವೇದಿ, ಪರಿಧಿ-ಮುಂತಾದವುಗಳು ಯಜ್ಞಕಾರ್ಯದಲ್ಲಿ ನೆರವಾಗಿ ಯಜ್ಞವು ಸಮಾಪ್ತವಾಗುವಂತೆ ಮಾಡುತ್ತವೆ. ಆದುದರಿಂದ ಯಜ್ಞಕ್ಕೆ ಲೋಪವಿಲ್ಲ.

[ನಾಲ್ಕನೆಯ ಕಾಂಡದಲ್ಲಿ ಇಷ್ಟಕೋಪಧಾನಕ್ಕಾಗಿರುವ 'ಪ್ರಜಾಪತಿರ್ಮನಸಾ'

---

* ಇಷ್ಟಕೋಪಧಾನಕ್ಕಾಗಿ ಇರುವ 'ಪ್ರಜಾಪತಿರ್ಮನಸಾ'... [ತೈ.ಸಂ. 4.4.9.] ಎಂಬ ಅನುವಾಕದ 33 ಮಂತ್ರಗಳೇ ಯಜ್ಞತನುಗಳು.

ತೇಷಾಂ ಛಿನ್ನಂ ಪ್ರತ್ಯೇತದ್ದಧಾಮಿ ಸ್ವಾಹಾ ಘರ್ಮೋ

ದೇವಾಗ್ಂ ಅಪ್ಯೇತು ॥ ೧೦-46 ॥

[ಅಷಾಢ ಓಷಧಯ ಉಪಚಿನ್ವಂತಿ ಪಂಚಚತ್ವಾರಿಗ್ಂಶಚ್ಚ।]

---

ತೇಷಾಮ್ । ಛಿನ್ನಮ್ । ಪ್ರತೀತಿ । ಏತತ್ । ದಧಾಮಿ । ಸ್ವಾಹಾ । ಘರ್ಮಃ ।

ದೇವಾನ್ । ಅಪೀತಿ । ಏತು ॥ ೧೦ ॥



---

| ಮಂತ್ರ | ವಿನಿಯೋಗ |
|---|---|
| ಘರ್ಮೋ ದೇವಾಗ್ಂ ಅಪ್ಯೇತು ॥ | ಹೊಸ ಕಪಾಲವನ್ನು ಜೋಡಿಸಲು. ಬೌ. |

---

ತೇಷಾಮ್ ಛಿನ್ನಮ್ ಪ್ರತಿ=ಆ ಯಜ್ಞತನುಗಳ ಮತ್ತು ಋತ್ವಿಗಾದಿಗಳ ನ್ಯೂನತೆಯನ್ನು ಕುರಿತು; ಏತತ್ ದಧಾಮಿ = [ಸಂಧಾನಾರ್ಥವಾಗಿ/ವಿಚ್ಛಿತ್ತಿ ಇಲ್ಲದಂತೆ ಮಾಡಲು] ಇದನ್ನು ಹಾಕುತ್ತೇನೆ. [ಆದುದರಿಂದ] ಸ್ವಾಹಾ = ಚೆನ್ನಾಗಿ ಸೇರಿಕೊಂಡಿರುವ; ಘರ್ಮಃ = ಯಜ್ಞಾಂಗವಿಶೇಷವು [ಕಪಾಲವು]; ದೇವಾನ್ ಅಪ್ಯೇತು = ದೇವತೆಗಳನ್ನು ಹೊಂದಲಿ.

---

ಎಂಬ ಅನುವಾಕದ] 'ಯಜ್ಞತನು'ಗಳೆಂಬ ಹೆಸರುಳ್ಳ ಮೂವತ್ತಮೂರು ಮಂತ್ರಗಳು ತಂತು[ದಾರ]ಗಳು ಬಟ್ಟೆಯನ್ನು ನಿರ್ಮಿಸುವಂತೆ ಯಜ್ಞವನ್ನು ನಿಷ್ಪಾದಿಸುತ್ತವೆ. ಋತ್ವಿಗಾದಿಗಳು ಹವಿಸ್ಸುಗಳಿಂದ ಯಜ್ಞವನ್ನು ನೆರವೇರಿಸುತ್ತಾರೆ. ಇದೆಲ್ಲದರಲ್ಲಿಯೂ ಇರಬಹುದಾದ ಛಿದ್ರದ ನಿವಾರಣೆಗಾಗಿ ಈ ಕಪಾಲವನ್ನು ಹಾಕುತ್ತೇನೆ. ಇದು ಚೆನ್ನಾಗಿ ಸೇರಿಕೊಂಡು ದೇವತೆಗಳನ್ನು ಹೊಂದಲಿ. ಛಿದ್ರದೋಷವು ನಿವಾರಣೆಯನ್ನು ಹೊಂದಲಿ.

## ವಿನಿಯೋಗ ಸಂಗ್ರಹ

ಮಮ[1] ಪ್ರವತ್ಸ್ಯನ್ ಪೂರ್ವಾಗ್ನಿಂ ಮಂತ್ರಯೇತ್ ಪುನರಾಗತಃ ।
[2-5]ಮಮೇತ್ಯಾದ್ಯೈಶ್ಚತುರ್ಮಂತ್ರೈ[6]ರ್ಮನಸ್ತತ್ರ ಜುಹೋತಿ ಹಿ ॥
ಗತಮಗ್ನೇರುಪಸ್ಥಾನಂ ಮಂತ್ರಾಃ ಪ್ರಾಸಂಗಿಕಾ ಅಥ ।
[7]ಪಯೇತ್ಯಾಚಾಮತಿ ಸ್ವಾಮೀ ದರ್ಶಪೂರ್ಣಮಯೋರಪಃ ॥
[8]ಅಗ್ನೇ ಪ್ರಾಗಗ್ನಿಪಾರ್ಶ್ವಸ್ಥೋ ಜಪೇದಗ್ನಿಂ[9] ಹವಿಸ್ತಥಾ ।
ನಿರುಪ್ಯಮಾಣಂ ಸಂಮಂತ್ರ್ಯ [10]ಕಸ್ತ್ವಾ ಯಜ್ಞಂ ಯುನಕ್ತಿ ಹಿ ॥
[11]ಯಾನೀತಿ ಮುಚ್ಯಮಾನಾನಿ ಕಪಾಲಾನ್ಯನುಮಂತ್ರಯೇತ್ ।
[12]ಅಭಿನ್ನೋಽಪ್ಸು ಕ್ಷಿಪೇದ್ಭಿನ್ನಂ ಕಪಾಲಂ [13]ತ್ರಯ ಇತ್ಯತಃ ।
ಕಪಾಲಾಂತರಮಾದಧ್ಯಾದಿತಿ ಪ್ರಾಸಂಗಿಕಾ ಗತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ ಆಪಸ್ತಂಬ—13
ಬೌಧಾಯನ—14



## ॥ ಏಕಾದಶೋಽನುವಾಕಃ ॥

ವೈಶ್ವಾನರೋ ನ ಊತ್ಯಾಽಽಪ್ರಯಾತು ಪರಾವತಃ ।

ಅಗ್ನಿರುಕ್ಥೇನ ವಾಹಸಾ ॥

---

ವೈಶ್ವಾನರಃ । ನಃ । ಊತ್ಯಾ । ಆ । ಪ್ರೇತಿ । ಯಾತು । ಪರಾವತ ಇತಿ ಪರಾ-ವತಃ॥

ಅಗ್ನಿಃ । ಉಕ್ಥೇನ । ವಾಹಸಾ ॥

---

ಈ ಅನುವಾಕದ ಮಂತ್ರಗಳು ಕಾಂಡಪಾಠದಂತೆ ವೈಶ್ವದೇವಕಾಂಡಕ್ಕೆ ಸೇರಿವೆ.

ಕಾಮ್ಯೇಷ್ಟಿಪ್ರಕರಣದಲ್ಲಿ ಅಭಿಶಸ್ಯಮಾನನಿಗೆ [ಪಾತಕಿಯೆಂದು ಜನರ ಆರೋಪಕ್ಕೆ ಗುರಿಯಾದವನಿಗೆ] 'ವೈಶ್ವಾನರಂ ದ್ವಾದಶಕಪಾಲಮ್, ವಾರುಣಂ ಚರುಮ್, ದಧಿಕ್ರಾವ್ಣ್ಣೇ ಚರುಮ್'ಎಂದು ಮೂರುಹವಿಸ್ಸುಗಳುಳ್ಳ ಇಷ್ಟಿಯಲ್ಲಿ ಮೊದಲನೆಯದಾದ ವೈಶ್ವಾನರೇಷ್ಟಿಗೆ ನಾಲ್ಕುಯಾಜ್ಯಾ-ಪುರೋನುವಾಕ್ಯಗಳು* ವಿಕಲ್ಪವಾಗಿ ವಿಹಿತವಾಗಿವೆ.

| ಮಂತ್ರ | ವಿನಿಯೋಗ |
|---|---|
| ವೈಶ್ವಾನರಃ.....ವಾಹಸಾ। | ಮೊದಲನೆಯ ಯಾಜ್ಯಾ-ಪುರೋನುವಾಕ್ಯಗಳಲ್ಲಿ ಪುರೋನುವಾಕ್ಯೆ. |

---

✣ **ವೈಶ್ವಾನರಃ** = ಎಲ್ಲಾ ಮನುಷ್ಯರಿಗೂ ಉಪಕಾರಿಯಾದ [ಸ್ವಾಮಿಯಾದ] ವೈಶ್ವಾನರರೂಪನಾದ; **ಅಗ್ನಿಃ** = ಅಗ್ನಿಯು; **ಊತ್ಯಾ** = ರಕ್ಷಣನಿಮಿತ್ತದಿಂದ [ಮಾರ್ಗದಿಂದ] **ಪರಾವತಃ** = ದೂರಪ್ರದೇಶದಿಂದಾದರೂ; **ಉಕ್ಥೇನ ವಾಹಸಾ** = [ಕರೆತರಬಲ್ಲ]

---

ಸರ್ವಜನೋಪಕಾರಿಯಾದ ವೈಶ್ವಾನರನಾಮಕನಾದ ಅಗ್ನಿಯು ನಮ್ಮ ರಕ್ಷಣೆಗಾಗಿ ದೂರದೇಶದಿಂದಲಾದರೂ ನಮ್ಮ ಸ್ತೋತ್ರವನ್ನು ಕೇಳಿದೊಡನೆಯೇ ಎದ್ದು ಬರುವಿಕೆ

---

ಭ. ಭಾ. ಭಾಷ್ಯದಲ್ಲಿ ಬೇರೆಯ ರೀತಿಯಲ್ಲಿ ಯಾಜ್ಯಾ-ಪುರೋನುವಾಕ್ಯಗಳ ವಿನಿಯೋಗವಿದೆ. ಆ ಕ್ರಮಕ್ಕೆ ಕಾರಣವು ಸ್ಪಷ್ಟವಾಗಿಲ್ಲ.

* ಈ ಅನುವಾಕದಲ್ಲಿರುವ ಯಾಜ್ಯಾ-ಪುರೋನುವಾಕ್ಯಗಳಲ್ಲಿ ಸಾಯಣಾಚಾರ್ಯರ ಮತವನ್ನು ಅನುಸರಿಸಿ ವಿನಿಯೋಗವನ್ನು ತಿಳಿಸಲಾಗಿದೆ.

* ಇಷ್ಟಿಗಳಿಗೂ ಯಾಜ್ಯಾನುವಾಕ್ಯಗಳಿಗೂ ಸಂಖ್ಯೆಯಲ್ಲಿ ಹೊಂದಿಕೆಯಿಲ್ಲ.

* ಮಿಶ್ರರು ಅರ್ಥವನ್ನು ಗಮನಿಸಿ, ವ್ಯತ್ಯಾಸ ಮಾಡಿ ಯಾಜ್ಯಾ-ಪುರೋನುವಾಕ್ಯಗಳನ್ನು ಹೇಳಿರುತ್ತಾರೆ. ಸಾಯಣಾಚಾರ್ಯರು ಸಂಶಯವನ್ನು ವ್ಯಕ್ತಪಡಿಸಿರುತ್ತಾರೆ.

ಋತಾವಾನಂ ವೈಶ್ವಾನರಮೃತಸ್ಯ ಜ್ಯೋತಿಷಸ್ಪತಿಮ್। ಅಜ-

ಸ್ರಂ ಘರ್ಮಮೀಮಹೇ ॥ ವೈಶ್ವಾನರಸ್ಯ ದಗ್‌ಂಸನಾಭ್ಯೋ

---

ಋತಾವಾನಮಿತ್ಯೃತ-ವಾನಮ್ । ವೈಶ್ವಾನರಮ್ । ಋತಸ್ಯ । ಜ್ಯೋತಿಷಃ । ಪತಿಮ್॥

ಅಜಸ್ರಮ್ । ಘರ್ಮಮ್ । ಈಮಹೇ ॥ ವೈಶ್ವಾನರಸ್ಯ । ದಗ್‌ಂಸನಾಭ್ಯಃ ।

---

| ಮಂತ್ರ | ವಿನಿಯೋಗ |
| --- | --- |
| ಋತಾವಾನಂ..ಘರ್ಮಮಿಮಹೇ॥ | ವೈಶ್ವಾನರಯಾಗದ ಯಾಜ್ಯೆಯಿದು. |
| ವೈಶ್ವಾನರಸ್ಯ....ಭೂರಿರೇತಸಾ ॥ | ಎರಡನೆಯ ಯಾಜ್ಯಾ-ಪುರೋನುವಾಕ್ಯೆಗಳ ಜೋಡಿಯಲ್ಲಿ ಪುರೋನುವಾಕ್ಯೆ. |

---

ಉತ್ಥಾನಪೂರ್ವಕವಾದ ಬರುವಿಕೆಯಿಂದ [ಉತ್ಥಾನ = ಏಳುವಿಕೆ/ಪ್ರಯತ್ನ] ನಃ = ನಮ್ಮನ್ನು ಕುರಿತು; ಪ್ರ ಆ ಯಾತು = ಅಭಿಮುಖವಾಗಿ ಬರಲಿ. ✢ಋತಾವಾನಮ್ = ಸತ್ಯವಂತನಾದ; ಜ್ಯೋತಿಷಃ = ಅಭೀಷ್ಟಫಲವನ್ನು ಪ್ರಕಾಶಪಡಿಸುವ/ಫಲಪ್ರಾಪಕವಾದ; ಋತಸ್ಯ = ಯಜ್ಞಕ್ಕೆ; ಪತಿಮ್ = ಪಾಲಕನಾದ; [ಸೂರ್ಯಾದಿ ಜ್ಯೋತಿಸ್ಸುಗಳಿಗೆ ಒಡೆಯನಾದ] ಅಜಸ್ರಮ್ = ಯವಾಗಲೂ; ಘರ್ಮಮ್ = ದೀಪ್ಯಮಾನನಾದ; ವೈಶ್ವಾನರಮ್ = ವೈಶ್ವಾನರಾಗ್ನಿಯನ್ನು; ಈಮಹೇ = ಹೊಂದುತ್ತೇವೆ/ಯಾಚಿಸುತ್ತೇವೆ. ✢ ಕವಿಃ = ಮೇಧಾವಿಯಾದ; ಏಕಃ = ಒಬ್ಬ ಯಜಮಾನನು; ಸ್ವಪಸ್ಯಯಾ = [ವೈಶ್ವಾನರ ಯಾಗವು] ಒಳ್ಳೆಯ ಕರ್ಮವಾದುದರಿಂದ; ವೈಶ್ವಾನರಸ್ಯ = ವೈಶ್ವಾನರಾಗ್ನಿಯ; ದಗ್‌ಂಸನಾಭ್ಯಃ = ಕ್ರಿಯೆಗಳಿಂದ;

---

ಯಿಂದ ನಮ್ಮನ್ನು ಹೊಂದಲಿ. ನಮ್ಮ ಯಾಗಕ್ಕೆ ಬರಲಿ.

ಈ ವೈಶ್ವಾನರನು ಸತ್ಯವಂತನು. ಅಭಿಮತವಾದ ಫಲವನ್ನು ಪ್ರಕಾಶಪಡಿಸುವ ಯಜ್ಞದ ಪಾಲಕನು. ಯಾವಾಗಲೂ ಪ್ರಕಾಶಿಸುವವನು. ಇಂತಹ ವೈಶ್ವಾನರನನ್ನು ಇಷ್ಟಾರ್ಥಸಾಧನೆಗಾಗಿ ನಾವು ಹೊಂದುತ್ತೇವೆ/ಪ್ರಾರ್ಥಿಸುತ್ತೇವೆ.

ಬೃಹದರಿಣಾದೇಕಃ ಸ್ವಪಸ್ಯಯಾ ಕವಿಃ । ಉಭಾ ಪಿತರಾ

ಮಹಯನ್ನಜಾಯತಾಗ್ನಿರ್ದ್ಯಾವಾಪೃಥಿವೀ ಭೂರಿರೇತಸಾ ॥

ಪೃಷ್ಟೋ ದಿವಿ ಪೃಷ್ಟೋ ಅಗ್ನಿಃ ಪೃಥಿವ್ಯಾಂ

---

ಬೃಹತ್ । ಅರಿಣಾತ್ । ಏಕಃ । ಸ್ವಪಸ್ಯಯೇತಿ ಸು-ಅಪಸ್ಯಯಾ । ಕವಿಃ ॥ ಉಭಾ । ಪಿತರಾ । ಮಹಯನ್ನ್ । ಅಜಾಯತ । ಅಗ್ನಿಃ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ। ಭೂರಿರೇತಸೇತಿ ಭೂರಿ-ರೇತಸಾ ॥ ಪೃಷ್ಟಃ । ದಿವಿ । ಪೃಷ್ಟಃ । ಅಗ್ನಿಃ । ಪೃಥಿವ್ಯಾಮ್।

---

| ಮಂತ್ರ | ವಿನಿಯೋಗ |
|---|---|
| ಪೃಷ್ಟೋ ದಿವಿ....ನಕ್ತಮ್ ॥ | ಎರಡನೆಯ ಯಾಜ್ಯಾ-ಪುರೋನುವಾಕ್ಯೆಗಳಲ್ಲಿ ಯಾಜ್ಯಾನುವಾಕ್ಯೆ. |

---

ಬೃಹತ್ = ಮಹಾಫಲವನ್ನು; ಅರಿಣಾತ್ = ಹೊಂದಿದನು; ಅಗ್ನಿಃ = ವೈಶ್ವಾನರಾಗ್ನಿಯು; ಭೂರಿರೇತಸಾ = ಸ್ಥಾವರ-ಜಂಗಮಾತ್ಮಕವಾದ ಪ್ರಪಂಚಕ್ಕೆ ಕಾರಣವಾದ ರೇತಸ್ಸುಳ್ಳ; ದ್ಯಾವಾಪೃಥಿವೀ = ದ್ಯಾವಾ-ಭೂಮಿರೂಪವಾದ; ಉಭಾ ಪಿತರಾ = ಇಬ್ಬರು ತಾಯಿ-ತಂದೆಗಳನ್ನು; ಮಹಯನ್ = ಲೋಕಪೂಜ್ಯರನ್ನಾಗಿ ಮಾಡುತ್ತಾ; ಅಜಾಯತ = ಹುಟ್ಟಿದನು. [ಇಂತಹ ಅಗ್ನಿಯು ಮಹಾಫಲದಾಯಕನು. ನಮಗೆ ಮಹಾಫಲವನ್ನೀಯಲಿ]. ✢ [ಈ ವೈಶ್ವಾನರನು] ದಿವಿ = ದ್ಯುಲೋಕದಲ್ಲಿ; ಪೃಷ್ಟಃ [ಸ್ಪೃಷ್ಟಃ] = [ಆದಿತ್ಯರೂಪದಿಂದ] ಇದ್ದಾನೆ; ಪೃಥಿವ್ಯಾಮ್ = ಭೂಮಿಯಲ್ಲಿ; ಅಗ್ನಿಃ = [ದಾಹ ಪ್ರಕಾಶಕಾರಿಯಾದ]ಅಗ್ನಿರೂಪನಾಗಿ, ಪೃಷ್ಟಃ = ಇರುತ್ತಾನೆ.

---

ಮೇಧಾವಿಯಾದ ಒಬ್ಬ ಯಜಮಾನನು ಒಳ್ಳೆಯ ಕರ್ಮವಾದ ವೈಶ್ವಾನರ ಯಾಗದಿಂದ ವೈಶ್ವಾನರಾಗ್ನಿಯನ್ನು ಸಂತೋಷಗೊಳಿಸಿ, ಆ ವೈಶ್ವಾನರಾಗ್ನಿಗೆ ಸಂಬಂಧಿಸಿದ ಕರ್ಮಗಳಿಂದ ಮಹಾಫಲವನ್ನು ಹೊಂದಿದನು. ಈ ವೈಶ್ವಾನರಾಗ್ನಿಯು ತಾನು

ಪೃಷ್ಟೋ ವಿಶ್ವಾ ಓಷಧೀರಾವಿವೇಶ ॥ ವೈಶ್ವಾನರಸ್ಸಹಸಾ ಪೃಷ್ಟೋ ಅಗ್ನಿಸ್ಸ ನೋ ದಿವಾ ಸ [ಸಃ(೧)] ರಿಷಃ ಪಾತು ನಕ್ತಮ್ ॥ ಜಾತೋ ಯದಗ್ನೇ

---

ಪೃಷ್ಟಃ । ವಿಶ್ವಾಃ । ಓಷಧೀಃ । ಏತಿ । ವಿವೇಶ ॥ ವೈಶ್ವಾನರಃ । ಸಹಸಾ । ಪೃಷ್ಟಃ । ಅಗ್ನಿಃ । ಸಃ । ನಃ । ದಿವಾ । ಸಃ [೧]। ರಿಷಃ । ಪಾತು । ನಕ್ತಮ್ ॥ ಜಾತಃ । ಯತ್। ಅಗ್ನೇ ।

---

| ಮಂತ್ರ | ವಿನಿಯೋಗ |
|---|---|
| ಜಾತೋ ಯದಗ್ನೇ....ಸದಾ ನಃ ॥ | ಮೂರನೆಯ ಯಾಜ್ಯಾ-ಪುರೋನುವಾಕ್ಯೆಗಳ ಜೋಡಿಯಲ್ಲಿ ಪುರೋನುವಾಕ್ಯೆ. |

---

ಪೃಷ್ಟಃ = [ಫಲಪಾಕಕಾರಿಯಾಗಿ] ಸಂಬಂಧ ಹೊಂದಿದವನಾಗಿ; ವಿಶ್ವಾಃ ಓಷಧೀಃ = ಎಲ್ಲಾ ಸಸ್ಯಗಳನ್ನೂ; ಆ ವಿವೇಶ = ವ್ಯಾಪಿಸಿರುತ್ತಾನೆ; ವೈಶ್ವಾನರಃ ಅಗ್ನಿಃ = ವೈಶ್ವಾನರಾಗ್ನಿಯು; ಸಹಸಾ = ಬಲದಿಂದ; ಪೃಷ್ಟಃ = ಕೂಡಿದವನಾಗಿರುತ್ತಾನೆ; ಸಃ = ಆತನು; ನಃ = ನಮ್ಮನ್ನು; ದಿವಾ = ಹಗಲಿನಲ್ಲಿ; ರಿಷಃ = ನಮ್ಮನ್ನು ಹಿಂಸಿಸುವ ಪಾಪದ ದೆಸೆಯಿಂದ; ಪಾತು = ರಕ್ಷಿಸಲಿ. ಸಃ = ಆ ಅಗ್ನಿಯು; ನಕ್ತಮ್ = ರಾತ್ರಿಯಲ್ಲಿಯೂ; [ರಿಷಃ ಪಾತು = ಪಾಪದ ದೆಸೆಯಿಂದ ಕಾಪಾಡಲಿ]. ✣ ವೈಶ್ವಾನರ ಅಗ್ನೇ = ಎಲೈ! ವೈಶ್ವಾನರಾಗ್ನಿಯೇ! ಇರ್ಯಃ = ಹವೀರೂಪವಾದ ಅನ್ನಕ್ಕೆ ಅರ್ಹನಾದ; ಪರಿಜ್ಮಾ = ಎಲ್ಲ ಕಡೆಗಳಿಗೂ ಹೋಗುವ ನೀನು; ಜಾತಃ = ಹುಟ್ಟಿದೊಡನೆಯೇ;

---

ಹುಟ್ಟುತ್ತಲೇ ಸ್ಥಾವರಜಂಗಮಾತ್ಮಕವಾದ ವಿಶ್ವಕ್ಕೆ ಕಾರಣವಾದ ರೇತಸ್ಸುಳ್ಳ [ವೃಷ್ಟಿರೂಪವಾದ] ತಾಯಿ ತಂದೆಗಳಾದ ಭೂಲೋಕ-ದ್ಯುಲೋಕಗಳನ್ನು ಸರ್ವಪೂಜ್ಯರನ್ನಾಗಿ

ಭುವನಾ ವ್ಯಖ್ಯಃ ಪಶುಂ ನ ಗೋಽಪಾ ಇರ್ಯಃ ಪರಿಜ್ಮಾ ।

ವೈಶ್ವಾನರ ಬ್ರಹ್ಮಣೇ ವಿಂದ ಗಾತುಂ ಯೂಯಂ ಪಾತ

ಸ್ವಸ್ತಿಭಿಃ ಸದಾ ನಃ ॥

---

ಭುವನಾ । ವ್ಯಖ್ಯ ಇತಿ ವಿ-ಅಖ್ಯಃ । ಪಶುಮ್ । ನ । ಗೋಪಾ ಇತಿ ಗೋ-ಪಾಃ ।

ಇರ್ಯಃ । ಪರಿಜ್ಮೇತಿ ಪರಿ-ಜ್ಮಾ ॥ ವೈಶ್ವಾನರ । ಬ್ರಹ್ಮಣೇ । ವಿಂದ । ಗಾತುಮ್।

ಯೂಯಮ್ । ಪಾತ । ಸ್ವಸ್ತಿಭಿರಿತಿ ಸ್ವಸ್ತಿ-ಭಿಃ । ಸದಾ । ನಃ ॥

---

**ಗೋಪಾಃ** = ಗೋಪಾಲಕನು; **ಪಶುಮ್ ನ** = [ತನಗೆ ಸಂಬಂಧಿಸಿದ] ಪಶುವನ್ನು ಸುಲಭವಾಗಿ ಪ್ರಕಾಶಪಡಿಸುವಂತೆ; **ಭುವನಾ** = ಲೋಕಗಳನ್ನು; **ವ್ಯಖ್ಯಃ** = ವಿಶೇಷವಾಗಿ ಪ್ರಖ್ಯಾತಿಗೊಳಿಸಿರುತ್ತೀಯೆ; [ನೋಡುತ್ತಿದ್ದೀಯೆ] **ಯತ್** = ಯಾವ ಕಾರಣದಿಂದ [ನೀನು ಹೀಗೆ ಇರುವೆಯೋ ಆ ಕಾರಣದಿಂದ] **ಬ್ರಹ್ಮಣೇ** = ದೃಢವಾದ, ವ್ಯಾಪಕವಾದ ನಮ್ಮ ಯಾಗಕ್ಕೆ; **ಗಾತುಮ್** = ಮಾರ್ಗವನ್ನು; **ವಿಂದ** = ಹೊಂದು; [ಯಜ್ಞಕ್ಕೆ ಬಂದು ಹವಿಸ್ಸನ್ನು ಸ್ವೀಕರಿಸು.] **ಯೂಯಮ್** = ನೀವು [ನೀನು]; **ಸ್ವಸ್ತಿಭಿಃ** = ಶ್ರೇಯಸ್ಸುಗಳಿಂದ; **ಸದಾ** = ಯಾವಾಗಲೂ; **ನಃ** = ನಮ್ಮನ್ನು; **ಪಾತ** [ಪಾಹಿ] = ರಕ್ಷಿಸು.

---

ಮಾಡಿದನು. ಇಂತಹ ಮಹಿಮೆಯುಳ್ಳ ವೈಶ್ವಾನರಾಗ್ನಿಯು ನಮಗೂ ಮಹಾಫಲವನ್ನು ಕೊಡಲಿ.

ವೈಶ್ವಾನರಾಗ್ನಿಯು ಸ್ವರ್ಗಲೋಕದಲ್ಲಿ ಆದಿತ್ಯರೂಪದಿಂದ ಪ್ರಕಾಶಕನಾಗಿದ್ದಾನೆ. ಭೂಮಿಯಲ್ಲಿ ದಾಹ-ಪ್ರಕಾಶಾದಿಗಳಿಂದ ಉಪಕಾರಿಯಾದ ಅಗ್ನಿರೂಪನಾಗಿದ್ದಾನೆ. ಫಲಗಳನ್ನು ಪಕ್ವಮಾಡುತ್ತಾ ಎಲ್ಲ ಸಸ್ಯಗಳನ್ನೂ ವ್ಯಾಪಿಸಿರುತ್ತಾನೆ. ಈ ವೈಶ್ವಾನರಾಗ್ನಿಯು

ತ್ವಮಗ್ನೇ ಶೋಚಿಷಾ ಶೋಶುಚಾನ ಆ ರೋದಸೀ ಅಪೃಣಾ

ಜಾಯಮಾನಃ ।

---

ತ್ವಮ್ । ಅಗ್ನೇ । ಶೋಚಿಷಾ । ಶೋಶುಚಾನಃ । ಏತಿ । ರೋದಸೀ ಇತಿ । ಅಪೃಣಾಃ। ಜಾಯಮಾನಃ ।

---

| ಮಂತ್ರ | ವಿನಿಯೋಗ |
|---|---|
| ತ್ವಮಗ್ನೇ.... ಮಹಿತ್ವಾ ॥ | ಮೂರನೆಯ ಯುಗ್ಮದಲ್ಲಿ ಯಾಜ್ಯೆ. |

---

✢ ಅಗ್ನೇ = ವೈಶ್ವಾನರಾಗ್ನಿಯೇ! ತ್ವಮ್ = ನೀನು; ಶೋಶುಚಾನಃ = ಹೆಚ್ಚಾಗಿ ಪ್ರಕಾಶಮಾನನಾಗಿ; ಜಾಯಮಾನಃ = ಹುಟ್ಟುವವನಾಗಿಯೇ [ಹುಟ್ಟುವಾಗಲೇ] ರೋದಸೀ = ದ್ಯಾವಾಪೃಥಿವಿಗಳನ್ನು; ಶೋಚಿಷಾ = ದೀಪ್ತಿಯಿಂದ, ಆ ಅಪೃಣಾಃ = ತುಂಬಿರುತ್ತೀಯೆ. [ತುಂಬಿದೆ].

---

ಬಲದಿಂದ ಕೂಡಿರುತ್ತಾನೆ. ಆತನು ಹಗಲೂ ರಾತ್ರಿಯೂ ನಮ್ಮನ್ನು ಹಿಂಸಿಸುವ ಪಾಪಗಳಿಂದ ಕಾಪಾಡಲಿ.

ವೈಶ್ವಾನರಾಗ್ನಿಯೇ! ನೀನು–ಹುಟ್ಟಿದೊಡನೆಯೇ ಗೋಪಾಲಕನು ತನ್ನ ಪಶುವನ್ನು ಸುಲಭವಾಗಿ ಪ್ರಕಾಶಪಡಿಸುವಂತೆ [ತಿಳಿಯುವಂತೆ]–ಲೋಕಗಳನ್ನು ಸೂರ್ಯಾಗ್ನಿರೂಪಗಳಿಂದ ಪ್ರಕಾಶಪಡಿಸುತ್ತೀಯೆ/ನೋಡುತ್ತಿದ್ದೀಯೆ. ನೀನು ಹವೀರೂಪವಾದ ಅನ್ನಕ್ಕೆ ಅರ್ಹನಾಗಿದ್ದೀಯೆ. ಎಲ್ಲ ಕಡೆಗಳಲ್ಲಿಯೂ ತಡೆಯಿಲ್ಲದೆ ಸಂಚರಿಸಬಲ್ಲವ ನೀನು. ನೀನು ನಮ್ಮ ವ್ಯಾಪಕವಾದ, ದೃಢವಾದ ಯಾಗಕ್ಕೆ ಬರುವ ಮಾರ್ಗವನ್ನು ಹೊಂದು. ಬಂದು ಹವಿಸ್ಸನ್ನು ಸ್ವೀಕರಿಸು. ತೃಪ್ತನಾಗಿ ಯಾವಾಗಲೂ ಶ್ರೇಯಸ್ಸುಗಳನ್ನು ಕೊಟ್ಟು ನಮ್ಮನ್ನು ಕಾಪಾಡು.

ಅಗ್ನಿಯೇ! ನೀನು ಹೆಚ್ಚಾಗಿ ಪ್ರಕಾಶಿಸುವವನು. ಹುಟ್ಟುವಾಗಲೇ ನಿನ್ನ ತೇಜಸ್ಸಿ

ತ್ವಂ ದೇವಾಗ್ಂ ಅಭಿಶಸ್ತೇರಮುಂಚೋ ವೈಶ್ವಾನರ ಜಾತವೇದೋ ಮಹಿತ್ವಾ ॥ ಅಸ್ಮಾಕಮಗ್ನೇ ಮಘವತ್ಸು ಧಾರಯಾನಾಮಿ ಕ್ಷತ್ರಮಜರಗ್ಂ ಸುವೀರ್ಯಮ್ ।

---

ತ್ವಮ್ । ದೇವಾನ್ । ಅಭಿಶಸ್ತೇರಿತ್ಯಭಿ-ಶಸ್ತೇಃ । ಅಮುಂಚಃ । ವೈಶ್ವಾನರ । ಜಾತವೇದ ಇತಿ ಜಾತ-ವೇದಃ । ಮಹಿತ್ವೇತಿ ಮಹಿ-ತ್ವಾ ॥ ಅಸ್ಮಾಕಮ್ । ಅಗ್ನೇ । ಮಘವತ್ಸ್ವಿತಿ ಮಘವತ್-ಸು । ಧಾರಯ । ಅನಾಮಿ । ಕ್ಷತ್ರಮ್ । ಅಜರಮ್ । ಸುವೀರ್ಯಮಿತಿ ಸು-ವೀರ್ಯಮ್ ॥



---

| ಮಂತ್ರ | ವಿನಿಯೋಗ |
| --- | --- |
| ಅಸ್ಮಾಕಮಗ್ನೇ.....ಸುವೀರ್ಯಮ್ ॥ | ನಾಲ್ಕನೆಯ ಯಾಜ್ಯಾ-ಪುರೋನುವಾಕ್ಯೆಗಳಲ್ಲಿ ಪುರೋನುವಾಕ್ಯೆ. |

---

**ಜಾತವೇದಾಃ** = [ಹುಟ್ಟಿದ ಜಗತ್ತೆಲ್ಲವನ್ನೂ ತಿಳಿದಿರುವ] ಜಾತವೇದನಾದ; **ವೈಶ್ವಾನರ** = ವೈಶ್ವಾನರಾಗ್ನಿಯೇ! **ತ್ವಮ್** = ನೀನು; **ಮಹಿತ್ವಾ** = ನಿನ್ನ ಮಹಿಮೆಯಿಂದ; **ದೇವಾನ್** = ದೇವತೆಗಳನ್ನು; **ಅಭಿಶಸ್ತೇಃ** = ಪಾಪದಿಂದ; **ಅಮುಂಚಃ** = ಬಿಡುಗಡೆ ಮಾಡಿದ್ದೀಯೆ. [ನೀನು ನಮ್ಮ ಮೇಲೆ ಬಂದಿರುವ ಪಾಪಾರೋಪಣೆಯನ್ನು ದೂರಮಾಡು.] ✢ **ಅಗ್ನೇ ವೈಶ್ವಾನರ** = ವೈಶ್ವಾನರಾಗ್ನಿಯೇ! **ಅನಾಮಿ** = ಬೇರೆಯವರಿಗೆ ತಲೆಬಾಗದ ; **ಅಜರಮ್** = ಮುಪ್ಪಿಲ್ಲದ; **ಸುವೀರ್ಯಮ್** = ಎಲ್ಲಿಯೂ ಭಗ್ನವಾಗದ ಸಾಮರ್ಥ್ಯವುಳ್ಳ;

---

ನಿಂದ ದ್ಯಾವಾಭೂಮಿಗಳನ್ನು ತುಂಬಿರುತ್ತೀಯೆ. ನೀನು ಹುಟ್ಟಿದುದೆಲ್ಲವನ್ನೂ ತಿಳಿದವನಾದ ಜಾತವೇದನು. ಇಂತಹ ವೈಶ್ವಾನರನೇ! ನೀನು ನಿನ್ನ ಮಹಿಮೆಯಿಂದ ಋತ್ವಿಜರನ್ನೂ ಪಾಪರಹಿತರನ್ನಾಗಿ ಮಾಡಿರುವೆ. ನಮ್ಮನ್ನೂ ಪಾಪರಹಿತರನ್ನಾಗಿ ಮಾಡು.

ವಯಂ ಜಯೇಮ ಶತಿನಗ್ಂ ಸಹಸ್ರಿಣಂ ವೈಶ್ವಾನರ

[ವೈಶ್ವಾನರ (೨)] ವಾಜಮಗ್ನೇ ತವೋತಿಭಿಃ ॥ ವೈಶ್ವಾನರಸ್ಯ

ಸುಮತೌ ಸ್ಯಾಮ

---

ವಯಮ್ । ಜಯೇಮ । ಶತಿನಮ್ । ಸಹಸ್ರಿಣಮ್ । ವೈಶ್ವಾನರ [೨]॥ ವಾಜಮ್।

ಅಗ್ನೇ। ತವ । ಊತಿಭಿರಿತ್ಯೂತಿ-ಭಿಃ॥ ವೈಶ್ವಾನರಸ್ಯ । ಸುಮತಾವಿತಿ ಸು-ಮತೌ। ಸ್ಯಾಮ।

---

| ಮಂತ್ರ | ವಿನಿಯೋಗ |
|---|---|
| ವೈಶ್ವಾನರಸ್ಯ....ಸೂರ್ಯೇಣ ॥ | ನಾಲ್ಕನೆಯ ಯಾಜ್ಯಾ-ಪುರೋನುವಾಕ್ಯೆಗಳಲ್ಲಿ ಯಾಜ್ಯೆ. |

---

**ಅಸ್ಮಾಕಮ್ ಕ್ಷತ್ರಮ್** = ನಮ್ಮ ಪಾಲಕನಾದ ಪುರುಷನನ್ನು; **ಮಘವತ್ಸು ಧಾರಯ** = ಇಂದ್ರರಲ್ಲಿ ಇಡು/ಇಂದ್ರಸಮಾನನನ್ನಾಗಿ ಮಾಡು; [ವೈಶ್ವಾನರನೇ] **ತವ** = ನಿನ್ನ; **ಊತಿಭಿಃ** = ರಕ್ಷಣೆಗಳಿಂದ; **ವಯಮ್** = ನಾವು; **ಶತಿನಮ್ ಸಹಸ್ರಿಣಮ್** = ಶತಸಹಸ್ರಸಂಖ್ಯಾಕವಾದ; **ವಾಜಮ್** = ಅನ್ನವನ್ನು; **ಜಯೇಮ** = ಗೆಲ್ಲೋಣ. [ನಾವು] **ವೈಶ್ವಾನರಸ್ಯ** = ವೈಶ್ವಾನರಾಗ್ನಿಯ; **ಸುಮತೌ** = ಅನುಗ್ರಹಬುದ್ಧಿಯಲ್ಲಿ; **ಸ್ಯಾಮ** = ಇರುವವರಾಗೋಣ.

---

ಎಲೈ! ವೈಶ್ವಾನರಾಗ್ನಿಯೇ! ನಮಗೆ ರಕ್ಷಕನಾಗಿರುವ ಪುರುಷನನ್ನು ಇಂದ್ರ ಸಮಾನನನ್ನಾಗಿ ಮಾಡು. ಅವನು ನಿನ್ನ ಅನುಗ್ರಹದಿಂದ ಯಾರಿಗೂ ತಲೆ ಬಾಗದಂತಹವವನೂ, ಮುಪ್ಪಿಲ್ಲದವನೂ, ಅತ್ಯಂತ ಸಾಮರ್ಥ್ಯವುಳ್ಳವನೂ ಆಗಲಿ. ನಿನ್ನ ರಕ್ಷಣೆಯಿಂದ ನಾವು ಶತ-ಸಹಸ್ರಸಂಖ್ಯಾಕವಾದ/ಶತ-ಸಹಸ್ರಜನರನ್ನು ಪೋಷಿಸುವ

ರಾಜಾ ಹಿಕಂ ಭುವನಾನಾಮಭಿಶ್ರೀಃ । ಇತೋ ಜಾತೋ ವಿಶ್ವ ಮಿದಂ ವಿಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ॥

---

ರಾಜಾ । ಹಿಕಮ್ । ಭುವನಾನಾಮ್ । ಅಭಿಶ್ರೀರಿತ್ಯಭಿ - ಶ್ರೀಃ ॥ ಇತಃ । ಜಾತಃ । ವಿಶ್ವಮ್ । ಇದಮ್ । ವೀತಿ । ಚಷ್ಟೇ । ವೈಶ್ವಾನರಃ । ಯತತೇ । ಸೂರ್ಯೇಣ ॥

---

**ಅಭಿಶ್ರೀಃ** = ಪ್ರಾಪ್ತವಾದ ಶ್ರೀಯುಳ್ಳ; **ವೈಶ್ವಾನರಃ** = ಈ ವೈಶ್ವಾನರನು; **ಭುವನಾನಾಮ್** = ಎಲ್ಲ ಲೋಕಗಳಿಗೂ; **ರಾಜಾ ಹಿಕಮ್** = ಪ್ರಕಾಶಕನಾಗಿದ್ದಾನಷ್ಟೆ. **ಇತಃ** = ಈ ಕಾರಣದಿಂದಲೇ **ಜಾತಃ** = ಹುಟ್ಟಿದೊಡನೆಯೇ; **ಇದಮ್ ವಿಶ್ವಮ್** = ಈ ಜಗತ್ತೆಲ್ಲವನ್ನೂ; **ವಿಚಷ್ಟೇ** = ವಿಶೇಷವಾಗಿ ಪ್ರಖ್ಯಾತಿಪಡಿಸುತ್ತಾನೆ/ ನೋಡುತ್ತಾನೆ. ವೈಶ್ವಾನರಃ = ವೈಶ್ವಾನರಾಗ್ನಿಯು; **ಸೂರ್ಯೇಣ** = *ಸೂರ್ಯರೂಪದಿಂದ [ಹಗಲಿನಲ್ಲಿ] **ಯತತೇ** = ಇರುತ್ತಾನೆ.

---

ಅನ್ನವನ್ನು ಗೆಲ್ಲುವಂತಾಗಲಿ. [ಎಲೈ! ಅಗ್ನಿಯೇ! ನಮ್ಮ ಪುತ್ರ-ಪೌತ್ರಾದಿಗಳನ್ನು ಮಘವಂತ[ಧನವಂತ]ರನ್ನಾಗಿ ಮಾಡು. ತಲೆಬಾಗದಂತಹ ಕೆಚ್ಚನ್ನೂ, ಬಲವನ್ನೂ, ವಿನಾಶರಾಹಿತ್ಯವನ್ನೂ, ಬೇರೆಯವರು ತಿರಸ್ಕರಿಸಲಾಗದಂತಹ ಸಾಮರ್ಥ್ಯವನ್ನೂ ಅವರಲ್ಲಿ ಅನುಗ್ರಹಿಸು]

ನಾವು ಈ ವೈಶ್ವಾನರಾಗ್ನಿಯ ಅನುಗ್ರಹಬುದ್ಧಿಯಲ್ಲಿರುವಂತಾಗಲಿ. ಶ್ರೀಮಂತನಾದ/ಆಶ್ರಯಣೀಯನಾದ ಈ ವೈಶ್ವಾನರನು ಎಲ್ಲಾ ಲೋಕಗಳಿಗೂ ರಾಜನಾಗಿದ್ದಾನಷ್ಟೆ. ಪ್ರಕಾಶಕನಾಗಿದ್ದಾನಷ್ಟೆ. ಈತನು ಹುಟ್ಟಿದೊಡನೆಯೇ ಲೋಕವೆಲ್ಲವನ್ನೂ ಪ್ರಖ್ಯಾತಿಪಡಿಸಿದನು/ಕಾಣುವಂತೆ ಮಾಡಿದನು/ನೋಡಿದನು.

---

*'ಉದ್ಯಂತಂ ವಾವಾಽಽದಿತ್ಯಮಗ್ನಿರನು ಸಮಾರೋಹತಿ [ತೈ.ಬ್ರಾ. 2-1-2-] ಎಂಬ ವಚನದಂತೆ ಅಗ್ನಿಯು ಹಗಲಿನಲ್ಲಿ ಸೂರ್ಯನೊಡನೆ ಸೇರುತ್ತಾನೆ.

ಅವ ತೇ ಹೇಡೋ ವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ । ಕ್ಷಯನ್ನಸ್ಮಭ್ಯಮಸುರ ಪ್ರಚೇತೋ

---

ಅವೇತಿ । ತೇ । ಹೇಡಃ । ವರುಣ । ನಮೋಭಿರಿತಿ ನಮಃ-ಭಿಃ । ಅವೇತಿ । ಯಜ್ಞೇಭಿಃ । ಈ ಮಹೇ । ಹವಿರ್ಭಿರಿತಿ ಹವಿಃ-ಭಿಃ ॥ ಕ್ಷಯನ್ನ್ । ಅಸ್ಮಭ್ಯಮಿತ್ಯಸ್ಮ-ಭ್ಯಮ್। ಅಸುರ । ಪ್ರಚೇತ ಇತಿ ಪ್ರ-ಚೇತಃ ।

---

| ಮಂತ್ರ | ವಿನಿಯೋಗ |
|---|---|
| ಅವ ತೇ... ಕೃತಾನಿ ॥ | ಎರಡನೆಯದಾದ ವಾರುಣಚರುವಿನ ಪುರೋನುವಾಕ್ಯ. |

---

✢ ವರುಣ = ವರುಣನೇ! ತೇ = ನಿನ್ನ; ಹೇಡಃ = ಕೋಪವನ್ನು; ನಮೋಭಿಃ = ನಮಸ್ಕಾರಗಳಿಂದ; ಅವ ಈಮಹೇ = ಹೋಗಲಾಡಿಸುತ್ತೇವೆ; ಯಜ್ಞೇಭಿಃ = ಯಜ್ಞ ವಿಶೇಷಗಳಿಂದಲೂ/ಪೂಜಾವಿಶೇಷಗಳಿಂದಲೂ; ಹವಿರ್ಭಿಃ = ಚರುವೇ ಮೊದಲಾದ ಹವಿಸ್ಸುಗಳಿಂದಲೂ; ಅವ ಈಮಹೇ = [ನಿನ್ನ ಕೋಪವನ್ನು] ಶಮನಗೊಳಿಸುತ್ತೇವೆ; ಅಸ್ಮಭ್ಯಮ್ = ನಮಗಾಗಿ/ನಮ್ಮ ಹಿತಕ್ಕಾಗಿ; ಕ್ಷಯನ್ನ್ = ಪ್ರಯತ್ನಿಸುವವನೇ/ ವಾಸಿಸುವವನೇ! ಅಸುರ = ಶತ್ರುಗಳನ್ನು ನಾಶಪಡಿಸಲು ಸಮರ್ಥನೇ! ಪ್ರಚೇತಃ = ಶ್ರೇಷ್ಠವಾದ ಮನಸ್ಸುಳ್ಳವನೇ! [ವರುಣನೇ!]

---

ಈ ಅಗ್ನಿಯು ಹಗಲಿನಲ್ಲಿ ಸೂರ್ಯನೊಡನೆ ಸೇರುತ್ತಾನೆ. ಇಂತಹ ವೈಶ್ವಾನರನು ನಮ್ಮನ್ನು ಅನುಗ್ರಹಿಸಲಿ.

ವರುಣನೇ! ನಮ್ಮ ಯಾವುದಾದರೂ ಅಪರಾಧದಿಂದ ಬಂದಿರುವ ನಿನ್ನ ಕೋಪವನ್ನು ನಮಸ್ಕಾರಗಳಿಂದಲೂ, ಯಜ್ಞವಿಶೇಷಗಳಿಂದಲೂ ಪೂಜಾವಿಶೇಷಗಳಿಂದಲೂ,

ರಾಜನ್ನೇನಾಗ್ಂಸಿ ಶಿಶ್ರಥಃ ಕೃತಾನಿ॥ ಉದುತ್ತಮಂ ವರುಣ

ಪಾಶಮಸ್ಮದವಾಧಮಂ ವಿಮಧ್ಯಮಗ್ಂ ಶ್ರಥಾಯ।

---

ರಾಜನ್ । ಏನಾಗ್ಂಸಿ । ಶಿಶ್ರಥಃ । ಕೃತಾನಿ ॥ ಉದಿತಿ । ಉತ್ತಮಮಿತ್ಯುತ್-ತಮಮ್।

ವರುಣ । ಪಾಶಮ್ । ಅಸ್ಮತ್ । ಅವೇತಿ । ಅಧಮಮ್ । ವೀತಿ । ಮಧ್ಯಮಮ್।

ಶ್ರಥಾಯ ॥

---



ಮಂತ್ರ | ವಿನಿಯೋಗ
---|---
ಉದುತ್ತಮಮ್... ಸ್ಯಾಮ ॥ | ವಾರುಣಚರುಯಾಗದ ಯಾಜ್ಯೆ.

---

ರಾಜನ್ = ಪ್ರಕಾಶಿಸುವವನೇ! ಕೃತಾನಿ ಏನಾಗ್ಂಸಿ = [ನಾವು] ಮಾಡಿದ ಪಾಪಗಳನ್ನು; ಶಿಶ್ರಥಃ = ಶಿಥಿಲಗೊಳಿಸು/ಹೋಗಲಾಡಿಸು. ವರುಣ = ವರುಣದೇವನೇ! ಅಸ್ಮತ್ = ನಮ್ಮ ದೆಸೆಯಿಂದ; [ನಮ್ಮ] ಉತ್ತಮಮ್ ಪಾಶಮ್ = ತಲೆಯಲ್ಲಿರುವ ನಿನ್ನ ಪಾಶವನ್ನು; ಉತ್ ಶ್ರಥಾಯ = ಮೇಲಕ್ಕೆಳೆದು ನಾಶಮಾಡು. ಅಧಮಮ್ = ಕೆಳಭಾಗದಲ್ಲಿ ಪಾದಗಳಲ್ಲಿರುವ; ಪಾಶಮ್ = ನಿನ್ನ ಪಾಶವನ್ನು; ಅವ ಶ್ರಥಾಯ = ಕೆಳಕ್ಕೆಳೆದು ನಾಶಮಾಡು; ಮಧ್ಯಮಮ್ = ಮಧ್ಯಭಾಗದಲ್ಲಿರುವ ಪಾಶವನ್ನು; ವಿ ಶ್ರಥಾಯ = ನಾಶಪಡಿಸು.

---

ಹವಿಸ್ಸುಗಳಿಂದಲೂ ಹೋಗಲಾಡಿಸುತ್ತೇವೆ. ನೀನು ನಮ್ಮ ಹಿತಕ್ಕಾಗಿ ಈ ಯಾಗಶಾಲೆಯಲ್ಲಿರುವೆ./ಪ್ರಯತ್ನಿಸುವೆ. ನೀನು ಶತ್ರುಗಳನ್ನು ನಾಶಪಡಿಸತಕ್ಕವನು. ಪ್ರಕಾಶಮಾನನು. ಶ್ರೇಷ್ಠವಾದ ಮನಸ್ಸುಳ್ಳವನು. ಇಂತಹ ವರುಣರಾಜನೇ! ನೀನು ನಮ್ಮ ಪಾಪಗಳನ್ನು ಹೋಗಲಾಡಿಸು.

ಅಥಾ ವಯಮಾದಿತ್ಯ [೩] ವ್ರತೇ ತವಾನಾಗಸೋ ಅದಿತಯೇ ಸ್ಯಾಮ॥ ದಧಿಕ್ರಾವ್ಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ

ಅಥ । ವಯಮ್ । ಆದಿತ್ಯ [೩]। ವ್ರತೇ । ತವ । ಅನಾಗಸಃ । ಅದಿತಯೇ । ಸ್ಯಾಮ॥ ದಧಿಕ್ರಾವ್ಣ್ಣ ಇತಿ ದಧಿ-ಕ್ರಾವ್ಣ್ಣಃ । ಅಕಾರಿಷಮ್ । ಜಿಷ್ಣೋಃ । ಅಶ್ವಸ್ಯ ।

| ಮಂತ್ರ | ವಿನಿಯೋಗ |
|---|---|
| ದಧಿಕ್ರಾವ್ಣ್ಣೋ..ತಾರಿಷತ್ ॥ | 'ದಧಿಕ್ರಾವ್ಣ್ಣೇ ಚರುಮ್' ಎಂದು ವಿಹಿತವಾಗಿರುವ ಮೂರನೆಯ ಯಾಗದ ಪುರೋನುವಾಕ್ಯೆ. |

**ಆದಿತ್ಯ** = ಸೂರ್ಯಸದೃಶನೇ! ಅದಿತಿಪುತ್ರನಾದ ವರುಣನೇ! **ಅಥ** = ಅನಂತರ; **ವಯಮ್** = ನಾವು; **ಅನಾಗಸಃ** = ಪಾಪರಹಿತರಾಗಿ; **ತವ ವ್ರತೇ** = ನಿನಗೆ ಸಂಬಂಧಿಸಿದ ಯಜ್ಞಾದಿಕರ್ಮಗಳಲ್ಲಿ; **ಅದಿತಯೇ** = ಅಖಂಡಿತತ್ವಕ್ಕಾಗಿ [ತಡೆಯಿಲ್ಲದಿರುವುದಕ್ಕಾಗಿ] **ಸ್ಯಾಮ** = ಆಗೋಣ. [ಧರ್ಮಪಾಶಗಳು ಮೂರು ಬಗೆಯಾಗಿರುತ್ತವೆ.] ✢ [ನಾನು] **ಜಿಷ್ಣೋಃ** = ಜಯಶೀಲನಾದ; **ಅಶ್ವಸ್ಯ** = ವ್ಯಾಪಕನಾದ/ ಅಶ್ವರೂಪನಾದ; **ವಾಜಿನಃ** = ಅನ್ನವುಳ್ಳ/ವೇಗವಂತನಾದ; **ದಧಿಕ್ರಾವ್ಣ್ಣಃ** = ದಧಿಕ್ರಾವನೆಂಬ ದಧಿಪ್ರಿಯನಾದ ದೇವನ/ಅಗ್ನಿದೇವನ [ಕಾರ್ಯವನ್ನು] **ಅಕಾರಿಷಮ್** = ಮಾಡಿದೆನು.

ಎಲೈ ವರುಣದೇವನೇ! ನಮ್ಮ ತಲೆಯಲ್ಲಿ ಹಾಕಿರುವ ನಿನ್ನ ಪಾಶವನ್ನು ಮೇಲಕ್ಕೆ ಎಳೆದು ನಾಶಪಡಿಸು. ಕೆಳಗೆ ಕಾಲುಗಳಲ್ಲಿ ಹಾಕಿರುವ ಪಾಶವನ್ನು ಕೆಳಕ್ಕೆ ಎಳೆದು ನಾಶಪಡಿಸು. ನಮ್ಮ ದೇಹದ ಮಧ್ಯಭಾಗದಲ್ಲಿ ಹಾಕಿರುವ ಪಾಶವನ್ನು ನಾಶಪಡಿಸು. ಈ ಪಾಶಗಳನ್ನು ನಮ್ಮಿಂದ ದೂರಮಾಡು. ಅದಿತಿಪುತ್ರನಾದ, ಆದಿತ್ಯಸದೃಶನಾದ ವರುಣನೇ! ಬಳಿಕ ನಾವು ನಿನ್ನ ಅನುಗ್ರಹದಿಂದ ಪಾಪರಹಿತರಾಗಿ ನಿನಗೆ ಸಂಬಂಧಿಸಿದ ಯಾಗಾದಿಗಳನ್ನು ಮಾಡುವುದಕ್ಕೆ ಅಖಂಡಿತರಾಗೋಣ. ತಡೆಯಿಲ್ಲದವರಾಗೋಣ.

ವಾಜಿನಃ । ಸುರಭಿ ನೋ ಮುಖಾ ಕರತ್ಪ್ರ ಣ ಆಯೂಗ್ಂಷಿ

ತಾರಿಷತ್ ॥ ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ

---

ವಾಜಿನಃ ॥ ಸುರಭಿ । ನಃ । ಮುಖಾ । ಕರತ್ । ಪ್ರೇತಿ । ನಃ । ಆಯೂಗ್ಂಷಿ ।

ತಾರಿಷತ್॥ ಏತಿ । ದಧಿಕ್ರಾ ಇತಿ ದಧಿ-ಕ್ರಾಃ । ಶವಸಾ । ಪಂಚ । ಕೃಷ್ಟೀಃ । ಸೂರ್ಯಃ।

---



| ಮಂತ್ರ | ವಿನಿಯೋಗ |
|---|---|
| ಆ ದಧಿಕ್ರಾಃ.... ವಚಾಗ್ಂಸಿ ॥ | ದಧಿಕ್ರಾವಚರುಯಾಗದ ಯಾಜ್ಯೆ. |

---

[ಆ ದೇವನು] ನಃ = ನಮ್ಮ; ಮುಖಾ = ಮುಖವನ್ನು/ಮುಖಗಳನ್ನು; **ಸುರಭಿ** = ಕರ್ಪೂರಾದಿಸುಗಂಧಿಯುಕ್ತವಾಗಿ/ನಮ್ಮ ಪುಣ್ಯಸಮೃದ್ಧಿಯಿಂದ ಸುಗಂಧವನ್ನು ಹೊಂದಿದವುಗಳನ್ನಾಗಿ; **ಕರತ್** = ಮಾಡಲಿ; **ನಃ** = ನಮ್ಮ; **ಆಯೂಗ್ಂಷಿ** = ಆಯುಸ್ಸುಗಳನ್ನು; **ಪ್ರ ತಾರಿಷತ್** = ಪ್ರವೃದ್ಧಿಗೊಳಿಸಲಿ. [೧] **ದಧಿಕ್ರಾಃ** = ದಧಿಕ್ರಾವದೇವನು/ ಅಗ್ನಿಯು; **ಪಂಚ ಕೃಷ್ಟೀಃ** = [ನಿಷಾದನೇ ಐದನೆಯವನಾಗಿರುವ ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ] ಐದು ಬಗೆಯ ಮನುಷ್ಯರನ್ನು; **ಶವಸಾ** = ಅನ್ನದಿಂದ ಯುಕ್ತರನ್ನಾಗಿ ಮಾಡಿ/ರಸ-ಬಲಯುಕ್ತರನ್ನಾಗಿ ಮಾಡಿ **ಸೂರ್ಯಃ** = ಸೂರ್ಯದೇವನು;

---

[೧] ದಧಿ ಕ್ರಾಮತಿ = ಪ್ರಾಪ್ನೋತಿ ಇತಿ ದಧಿಕ್ರಾವಾ, ಕಶ್ಚನ ದಧಿಪ್ರಿಯಃ ದೇವತಾವಿಶೇಷಃ = ದಧಿಪ್ರಿಯನಾದ ಒಬ್ಬ ದೇವತೆಯು ದಧಿಕ್ರಾವಾ, ೨) ದಧೀನಿ = ಧಾರಣಸಮರ್ಥಾನಿ ಹವೀಂಷಿ, ಕಾಷ್ಠಾನಿ ವಾ ಕ್ರಾಮತಿ = ಗಚ್ಛತಿ ಇತಿ ದಧಿಕ್ರಾವಾ = ಹವಿಸ್ಸುಗಳನ್ನು ಅಥವಾ ಕಾಷ್ಠಗಳನ್ನು ಹೊಂದುವವನು ಅಗ್ನಿ-ಹೀಗೆ ದಧಿಕ್ರಾವ ಶಬ್ದಕ್ಕೆ ಎರಡು ವಿಧವಾಗಿ ಅರ್ಥ ಮಾಡಿರುತ್ತಾರೆ.]

ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ: ಶ್ರೀ:

ಇವ ಜ್ಯೋತಿಷಾಽಪಸ್ತತಾನ। ಸಹಸ್ರಸಾಶ್ಶತಸಾ ವಾಜ್ಯರ್ವಾ ಪೃಣಕ್ತು ಮಧ್ವಾ ಸಮಿಮಾ ವಚಾಗ್ಂಸಿ॥ * ಅಗ್ನಿರ್ಮೂರ್ಧಾ *ಭುವಃ ॥

---

ಇವ। ಜ್ಯೋತಿಷಾ । ಅಪಃ । ತತಾನ ॥ ಸಹಸ್ರಸಾ ಇತಿ ಸಹಸ್ರ-ಸಾಃ । ಶತಸಾ ಇತಿ ಶತ-ಸಾಃ । ವಾಜೀ । ಅರ್ವಾ । ಪೃಣಕ್ತು । ಮಧ್ವಾ । ಸಮಿತಿ । ಇಮಾ । ವಚಾಗ್ಂಸಿ॥ ಅಗ್ನಿಃ । ಮೂರ್ಧಾ ॥ ಭುವಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿರ್ಮೂರ್ಧಾ ಭುವಃ । | ಅಗ್ನ್ಯುದ್ವಾಸನೆ ಮಾಡಿದವನಿಗೆ ವಿಹಿತವಾದ ಆಗ್ನೇಯ-ವೈಶ್ವಾನರಯಾಗಗಳಲ್ಲಿ ಆಗ್ನೇಯ ಯಾಗದ ಯಾಜ್ಯಾ-ಪುರೋನುವಾಕ್ಯೆಗಳು. ಇವು ಪ್ರತೀಕಗಳು. |

---

**ಜ್ಯೋತಿಷಾ** = ತನ್ನ ಕಿರಣಗಳಿಂದ; **ಅಪಃ ಇವ** = [ಬೇಸಿಗೆಯಲ್ಲಿ ಆವಿಯಾಗಿ ಸಂಗ್ರಹಿಸಿದ] ನೀರನ್ನು[ವರ್ಷಾಕಾಲದಲ್ಲಿ ವಿಸ್ತಾರವಾಗಿ ಸುರಿಸುವಂತೆ]; **ಆ ತತಾನ** = ಅಭಿವೃದ್ಧಿಗೊಳಿಸಿದನು. [ಸೂರ್ಯಃ ಅಪಃ ಇವ = ಸೂರ್ಯದೇವನು ಕರ್ಮಗಳನ್ನು ವಿಸ್ತರಿಸುವಂತೆ] [ಆ ದೇವನ್ನು] **ಸಹಸ್ರಸಾಃ** = [ಭಕ್ತರಿಗೆ] ಸಹಸ್ರಸಂಖ್ಯೆಯ ಧನಗಳನ್ನು ಕೊಡತಕ್ಕವನು; **ಶತಸಾಃ** = ಶತಸಂಖ್ಯೆಯಲ್ಲಿ ಧನಗಳನ್ನು ಕೊಡತಕ್ಕವನು; **ವಾಜೀ** = ಅನ್ನವಂತನು/ವೇಗವಂತನು; **ಅರ್ವಾ** = ಯಾಗಶಾಲೆಯಲ್ಲಿ ಗಮನವುಳ್ಳವನು; [ಇಂತಹ ದೇವನು] [ಅಗ್ನಿಯು] **ಮಧ್ವಾ** = ಮಧುರವಾದ; **ಇಮಾ ವಚಾಂಸಿ** = ಈ ನಮ್ಮ ಸ್ತುತಿರೂಪವಾದ ಮಾತುಗಳನ್ನು; **ಸಮ್ ಪೃಣಕ್ತು** = ಅಂಗೀಕರಿಸಲಿ. [ಮಧ್ವಾ ಶವಸಾ = ಮಧುರವಾದ ರಸದಿಂದ ಸಂ ಪೃಣಕ್ತು = ಯುಕ್ತವನ್ನಾಗಿ ಮಾಡಲಿ.]

---

*ತೈ. ಸಂ. 1.5.5.
*ತೈ ಸಂ. 4.4.4 ರಲ್ಲಿದೆ. ಅಲ್ಲಿ ವ್ಯಾಖ್ಯಾನವಿರುವುದರಿಂದ ಇಲ್ಲಿ ತಾತ್ಪರ್ಯ ಮಾತ್ರ ನೀಡಿದೆ.

**ಮರುತೋ ಯದ್ಧ ವೋ ದಿವಃ ಸುಮ್ನಾಯಂತೋ ಹವಾಮಹೇ । ಆ ತೂ ನ [ನಃ (ಳ)] ಉಪ ಗಂತನ ॥**

---

ಮರುತಃ । ಯತ್ । ಹ । ವಃ । ದಿವಃ । ಸುಮ್ನಾಯಂತ ಇತಿ ಸುಮ್ನ - ಯಂತಃ । ಹವಾಮಹೇ ॥ ಏತಿ । ತು । ನಃ[ಳ] । ಉಪೇತಿ । ಗಂತನ ।

---

| ಮಂತ್ರ | ವಿನಿಯೋಗ |
|---|---|
| ಮರುತಃ.... ಗಂತನ । | ಗ್ರಾಮಕಾಮನಿಗೆ ವಿಹಿತವಾದ ವೈಶ್ವಾನರ-ಮಾರುತ ಯಾಗದಲ್ಲಿ, ಮಾರುತಯಾಗದ ಪುರೋನುವಾಕ್ಯೆ. |

---

ಮರುತಃ = ಎಲೈ ಮರುದ್ದೇವತೆಗಳೇ! ಯತ್=ಯಾವ ಕಾರಣದಿಂದ; [ನಾವು] ಹ= ನಿಶ್ಚಯವಾಗಿ; ಸುಮ್ನಾಯಂತಃ=ಸುಖವನ್ನು ಬಯಸುವವರಾಗಿ; ವಃ=ನಿಮ್ಮನ್ನು; ದಿವಃ= ದೇವಲೋಕದ ದೆಸೆಯಿಂದ; ಹವಾಮಹೇ=ಆಹ್ವಾನಿಸುತ್ತಿರುವೆವೋ; [ಆ ಕಾರಣದಿಂದ] [ನೀವು] ನಃ=ನಮ್ಮನ್ನು; ಆ ತು ಉಪ ಗಂತನ = ಹೊಂದಿರಿ/ನಮ್ಮ ಯಾಗಕ್ಕೆ ಬನ್ನಿರಿ.

---

ನಾನು ಜಯಶೀಲನಾದ/ಅಶ್ವರೂಪನಾದ* ವ್ಯಾಪಕನಾದ, ಅನ್ನಯುಕ್ತನಾದ/ ವೇಗ ಯುಕ್ತನಾದ ದಧಿಕ್ರಾವದೇವನ/ಅಗ್ನಿದೇವನ ಯಾಗಾದಿಕರ್ಮಗಳನ್ನು ಮಾಡಿದೆನು. ಆತನು ನಮ್ಮ ಮುಖಗಳನ್ನು ಕರ್ಪೂರಾದಿಸುಗಂಧದ್ರವ್ಯಸಮೃದ್ಧಿಯನ್ನು ಕೊಟ್ಟು ಸುರಭಿಗಳನ್ನಾಗಿ ಮಾಡಲಿ.[ಪುಣ್ಯಕರ್ಮಗಳಿಂದ ಸುರಭಿಗಳನ್ನಾಗಿ ಮಾಡಲಿ. '**ಏವಂ ಪುಣ್ಯಸ್ಯ ಕರ್ಮಣೋ ದೂರಾದ್ಗಂಧೋ ವಾತಿ**' ಎಂಬ ಶ್ರುತ್ಯಂತರವೂ ಇದೆ.] ನಮ್ಮ ಆಯುಸ್ಸುಗಳನ್ನು ಪ್ರವೃದ್ಧಿಗೊಳಿಸಲಿ.

ಆ ದಧಿಕ್ರಾವದೇವನು/ಅಗ್ನಿಯು-ಸೂರ್ಯದೇವನು ಕಿರಣಗಳಿಂದ ಸಂಗ್ರಹಿಸಿರುವ ನೀರನ್ನು ವರ್ಷಾಕಾಲದಲ್ಲಿ ಅಧಿಕವಾಗಿ ಸುರಿಸುವಂತೆ –ಬ್ರಹ್ಮ, ಕ್ಷತ್ರಿಯ, ವೈಶ್ಯ,

---

***ಅಗ್ನಿರ್ದೇವೇಭ್ಯೋ ನಿಲಾಯತ । ಅಶ್ವೋ ರೂಪಂ ಕೃತ್ವಾ । [ತೈ.ಬ್ರಾ. 3.8.12] ಎಂಬ ಶ್ರುತಿವಚನದಂತೆ ಅಗ್ನಿಯು ಅಶ್ವರೂಪವನ್ನು ಧರಿಸಿದನು. ಆದುದರಿಂದ ಅಗ್ನಿಯು ಅಶ್ವಸ್ವರೂಪನು. ಭ.ಭಾ.**

ಯಾ ವಶ್ಶರ್ಮ ಶಶಮಾನಾಯ ಸಂತಿ ತ್ರಿಧಾತೂನಿ ದಾಶುಷೇ

ಯಚ್ಛತಾಧಿ ।

---

ಯಾ । ವಃ । ಶರ್ಮ । ಶಶಮಾನಾಯ । ಸಂತಿ । ತ್ರಿಧಾತೂನೀತಿ ತ್ರಿ - ಧಾತೂನಿ । ದಾಶುಷೇ । ಯಚ್ಛತ । ಅಧಿ ॥

---

| ಮಂತ್ರ | ವಿನಿಯೋಗ |
|---|---|
| ಯಾ ವಶ್ಶರ್ಮ.... ಸುವೀರಮ್ ॥ | ಮರುದ್ಯಾಗದ ಯಾಜ್ಯ. |

---

✢ ಮರುತಃ = ಮರುದ್ದೇವತೆಗಳೇ! ವಃ = ನಿಮ್ಮನ್ನು; ಶಶಮಾನಾಯ = ಸೇವಿಸುವವನಿಗೆ; ಯಾ ಶರ್ಮ = ಯಾವ ಸುಖಗಳು; ಸಂತಿ = ಕೊಡಬೇಕಾದವುಗಳಾಗಿವೆಯೋ; ತ್ರಿಧಾತೂನಿ = ಮೂರು ಲೋಕಗಳಲ್ಲಿಯೂ ಇರುವ; [ಯಾವ ಸುಖಗಳನ್ನು] ದಾಶುಷೇ = ಹವಿಸ್ಸನ್ನು ಕೊಡುವ ಯಜಮಾನನಿಗೆ; ಅಧಿ ಯಚ್ಛತ = ಅಧಿಕವಾಗಿ ಕೊಡುತ್ತೀರೋ

---

ಶೂದ್ರ, ನಿಷಾದರೆಂಬ ಐದು ಬಗೆಯ ಮನುಷ್ಯರನ್ನೂ, ಅನ್ನವನ್ನು/ಬಲವನ್ನು ಕೊಟ್ಟು ವೃದ್ಧಿಗೊಳಿಸಿರುತ್ತಾನೆ. ಈ ದೇವನು/ಶತಸಹಸ್ರಸಂಖ್ಯೆಯಲ್ಲಿ ಧನವನ್ನು ಕೊಡತಕ್ಕವನು. ಅನ್ನವುಳ್ಳವನು/ವೇಗವುಳ್ಳವನು. ಹವಿಸ್ಸನ್ನು ಸ್ವೀಕರಿಸಲು ಯಾಗಭೂಮಿಗೆ ಬರತಕ್ಕವನು. ಈತನು ನಮ್ಮ ಮಧುರವಾದ ಈ ಸ್ತೋತ್ರರೂಪವಾದ ಮಾತುಗಳನ್ನು ಸ್ವೀಕರಿಸಲಿ/ನಮ್ಮ ಸ್ತೋತ್ರವಚನಗಳನ್ನು ಮಧುರವಾದ ರಸದಿಂದ ಕೂಡಿಸಲಿ. ಈತನು ನಮ್ಮ ಅಭಿಶಂಸನದೋಷವನ್ನು ಪರಿಹರಿಸಲಿ.

ಅಗ್ನಿರ್ಮೂರ್ಧಾ – ಅಗ್ನಿಯು ಸ್ವರ್ಗಲೋಕಕ್ಕೆ ತಲೆಯಂತೆ ಪ್ರಧಾನಭೂತನು. ಪೃಥಿವಿಗೆ ಪ್ರಧಾನಪಾಲಕನು. ಆತನು ನೀರಿನ ಕಾರ್ಯಗಳಾದ ಲೋಕಗಳನ್ನು ಸಂತೋಷಪಡಿಸುತ್ತಾನೆ.

ಭುವಃ— ಅಗ್ನಿಯು ಯಜ್ಞಕ್ಕೆ ನಾಯಕನು. ನೀರಿಗೂ ನೇತನು. ಈತನ

ಅಸ್ಮಭ್ಯಂ ತಾನಿ ಮರುತೋ ವಿಯಂತ ರಯಿಂ ನೋ ಧತ್ತ ವೃಷಣಃ ಸುವೀರಮ್ ॥ ಅದಿತಿರ್ನ ಉರುಷ್ಯತ್ವದಿತಿಶ್ಯರ್ಮ ಯಚ್ಛತು । ಅದಿತಿಃ ಪಾತ್ವಗ್ಂಹಸಃ ॥

---

ಅಸ್ಮಭ್ಯಮಿತ್ಯಸ್ಮ-ಭ್ಯಮ್ । ತಾನಿ । ಮರುತಃ । ವೀತಿ । ಯಂತ । ರಯಿಮ್ । ನಃ । ಧತ್ತ । ವೃಷಣಃ । ಸುವೀರಮಿತಿ ಸು - ವೀರಮ್ ॥ ಅದಿತಿಃ । ನಃ । ಉರುಷ್ಯತು । ಅದಿತಿಃ । ಶರ್ಮ । ಯಚ್ಛತು ॥ ಅದಿತಿಃ । ಪಾತು । ಅಗ್ಂಹಸಃ ॥

---

| ಮಂತ್ರ | ವಿನಿಯೋಗ |
|---|---|
| ಅದಿತಿರ್ನಃ.... ಅಗ್ಂಹಸಃ । | ಯುದ್ಧಕ್ಕೆ ಹೊರಟವನಿಗೆ ವಿಹಿತವಾದ ಆದಿತ್ಯಚರುಯಾಗದ ಪುರೋನುವಾಕ್ಯೆ. |

---

ತಾನಿ=ಆ ಸುಖಗಳನ್ನು; ಅಸ್ಮಭ್ಯಮ್ = ನಮಗೆ; ವಿಯಂತ = ಕೊಡಿರಿ; ನಃ = ನಮಗೆ; ರಯಿಮ್ = ಧನವನ್ನು; ಧತ್ತ = ಉಂಟುಮಾಡಿರಿ; ಹೇ ವೃಷಣಃ = [ಭಕ್ತರ ಕಾಮನೆಗಳನ್ನು ಮಳೆಯಂತೆ] ಸುರಿಸುವ ಮರುದ್ದೇವತೆಗಳೇ! ಸುವೀರಮ್ = ಒಳ್ಳೆಯ ಮಕ್ಕಳನ್ನು; ಧತ್ತ = ಕೊಡಿರಿ. +ಅದಿತಿಃ = ಅದಿತಿದೇವತೆಯು; ನಃ = ನಮ್ಮನ್ನು; ಉರುಷ್ಯತು=[ಶತ್ರುಗಳಿಂದ] ರಕ್ಷಿಸಲಿ; ಅದಿತಿಃ=ಅದಿತಿಯು; ಶರ್ಮ ಯಚ್ಛತು=ಸುಖವನ್ನು ಕೊಡಲಿ; ಅದಿತಿಃ=ಅದಿತಿಯು; ಅಗ್ಂಹಸಃ = ಪಾಪದಿಂದ; ಪಾತು = ರಕ್ಷಿಸಲಿ;

---

ನಿಯುತಗಳೆಂಬ ಹೆಸರಿನ ಅಶ್ವಗಳುಳ್ಳ ವಾಯುವಿನ ಸಹಾಯದಿಂದ ನೀರನ್ನು [ಮಳೆಯ ಮೋಡಗಳಿಂದ] ಸುರಿಸುತ್ತಾನೆ. ಯಜ್ಞವು ನಡೆಯುವಂತೆ ಮಾಡುತ್ತಾನೆ. ಸ್ವರ್ಗಪ್ರದವಾದ ಯಜ್ಞವು ಸ್ವರ್ಗದ ದೇವತೆಗಳನ್ನು ಸಂತೋಷಗೊಳಿಸುವಂತೆ ಮಾಡುತ್ತಾನೆ. ಅಗ್ನಿಯೇ! ನಿನ್ನ ಜ್ವಾಲೆಯೆಂಬ ಜಿಹ್ವೆಯು ದೇವತೆಗಳಿಗೆ ಹವ್ಯಗಳನ್ನೊಯ್ಯಲಿ.

ಎಲ್ಲೆ ಮರುದ್ದೇವತೆಗಳೇ! ನಾವು ಸುಖವನ್ನು ಇಚ್ಛಿಸುವವರಾಗಿ ದೇವಲೋಕದಿಂದ ನಮ್ಮ ಯಾಗಕ್ಕೆ ಬರುವಂತೆ ನಿಮ್ಮನ್ನು ಆಹ್ವಾನಿಸುತ್ತಿದ್ದೇವೆ. ನೀವು ಬೇರೆಯವರ ಯಾಗಕ್ಕಿಂತಲೂ ಮೊದಲು ನಮ್ಮ ಆಹ್ವಾನವನ್ನು ಮನ್ನಿಸಿ, ನಮ್ಮ ಯಾಗಕ್ಕೆ ಬನ್ನಿರಿ.

**ಮಹೀಮೂ ಷು ಮಾತರಗ್ಂ ಸುವ್ರತಾನಾಮೃತಸ್ಯ ಪತ್ನೀ-**
**ಮವಸೇ ಹುವೇಮ । ತುವಿಕ್ಷತ್ರಾಮಜರಂತೀಮುರೂಚೀಗ್ಂ**

---

ಮಹೀಮ್। ಉ । ಸ್ವಿತಿ । ಮಾತರಮ್। ಸುವ್ರತಾನಾಮಿತಿ ಸು-ವ್ರತಾನಾಮ್ । ಋತಸ್ಯ। ಪತ್ನೀಮ್ । ಅವಸೇ । ಹುವೇಮ ॥ ತುವಿಕ್ಷತ್ರಾಮಿತಿ ತುವಿ-ಕ್ಷತ್ರಾಮ್ । ಅಜರಂತೀಮ್। ಉರೂಚೀಮ್ ।

---

| ಮಂತ್ರ | ವಿನಿಯೋಗ |
| --- | --- |
| ಮಹೀಮೂ ಷು.....ಸುಪ್ರಣೀತಿಮ್ ॥ | ಆದಿತ್ಯಚರುಯಾಗದ ಯಾಜ್ಯೆ. |

---

ಮಹೀಮ್ = ಪೂಜ್ಯಳಾದ, ಗೌರವಾರ್ಹಳಾದ; ಸುವ್ರತಾನಾಮ್ = ಒಳ್ಳೆಯ ಕರ್ಮಗಳನ್ನು ಮಾಡುವವರಿಗೆ; ಮಾತರಮ್ = ತಾಯಿಯಂತೆ ಹಿತಕಾರಿಣಿಯಾದ; ಋತಸ್ಯ = ಸತ್ಯದ/ಯಜ್ಞದ; ಪತ್ನೀಮ್ = ರಕ್ಷಕಳಾದ; *ತುವಿಕ್ಷತ್ರಾಮ್ = ಹಲವು ರಾಜರಿಂದ ಆಳಲ್ಪಟ್ಟಿರುವ; ಅಜರಂತೀಮ್ = ಮುಪ್ಪೇ ಇಲ್ಲದ; ಉರೂಚೀಮ್ = ವಿಸ್ತೀರ್ಣವಾದ ಗತಿಯುಳ್ಳ/ದೊಡ್ಡವರನ್ನು ಹೊಂದಿರುವ;

---

ಮರುದ್ದೇವತೆಗಳೇ! ನಿಮ್ಮನ್ನು ಸೇವಿಸುವವರಿಗೆ ಯಾವ ಸುಖಗಳು ಕೊಡಲ್ಪಡುತ್ತವೆಯೋ, ನಿಮಗೆ ಹವಿಸ್ಸನ್ನು ಸಮರ್ಪಿಸುವ ಯಜಮಾನನಿಗೆ ಮೂರು ಲೋಕಗಳಲ್ಲಿರುವ ಯಾವ ಯಾವ ಸುಖಗಳನ್ನು ಅಧಿಕವಾಗಿ ಕೊಡುತ್ತೀರೋ, ಆ ಎಲ್ಲಾ ಸುಖಗಳನ್ನೂ ನಮಗೆ ಕೊಡಿ. ನೀವು ಭಕ್ತರ ಇಷ್ಟಾರ್ಥಗಳನ್ನು ಮಳೆಯಂತೆ ಸುರಿಸುವವರು. ನೀವು ಧನವನ್ನೂ, ಒಳ್ಳೆಯ ಮಕ್ಕಳನ್ನೂ ನಮಗೆ ಕೊಡಿ.

ಅದಿತಿದೇವಿಯು ನಮ್ಮನ್ನು ಶತ್ರುಗಳಿಂದ ರಕ್ಷಿಸಲಿ. ಅದಿತಿಯು ಸುಖವನ್ನು ಕೊಡಲಿ. ಅದಿತಿದೇವಿಯು ನಮ್ಮನ್ನು ಪಾಪಗಳಿಂದ ರಕ್ಷಿಸಲಿ.

ಆದಿತಿಯು ಭೂಸ್ವರೂಪಳು. ಎಲ್ಲರಿಂದಲೂ ಗೌರವಿಸಲ್ಪಡತಕ್ಕವಳು. ಒಳ್ಳೆಯ ಕರ್ಮಗಳನ್ನು ಮಾಡುವವರಿಗೆ ತಾಯಿಯಂತೆ ಹಿತವನ್ನು ಉಂಟುಮಾಡುವವಳು. ಸತ್ಯದ /ಯಜ್ಞದ ರಕ್ಷಕಿಯು ಅವಳು. ಈ ಭೂಮಿಯನ್ನು ಹಲವು ರಾಜರು ಪಾಲಿಸಿರುತ್ತಾರೆ.

---

* 'ಇಯಂ ವಾ ಅದಿತಿಃ' ಎಂಬ ವಚನದಂತೆ ಅದಿತಿಯನ್ನು ಈ ಮಂತ್ರದಲ್ಲಿ ಭೂಮಿರೂಪದಲ್ಲಿ ವರ್ಣಿಸಲಾಗಿದೆ.

ಸುಶರ್ಮಾಣಮದಿತಿಗ್ಂ ಸುಪ್ರಣೀತಿಮ್ ॥ ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಗ್ಂ ಸುಶರ್ಮಾಣಮದಿತಿಗ್ಂ ಸುಪ್ರಣೀತಿಮ್ ।

---

ಸುಶರ್ಮಾಣಮಿತಿ ಸು-ಶರ್ಮಾಣಮ್। ಅದಿತಿಮ್ । ಸುಪ್ರಣೀತಿಮಿತಿ ಸು-ಪ್ರಣೀತಿಮ್॥ ಸುತ್ರಾಮಾಣಮಿತಿ ಸು-ತ್ರಾಮಾಣಮ್ । ಪೃಥಿವೀಮ್ । ದ್ಯಾಮ್ । ಅನೇಹಸಮ್। ಸುಶರ್ಮಾಣಮಿತಿ ಸು-ಶರ್ಮಾಣಮ್। ಅದಿತಿಮ್ । ಸುಪ್ರಣೀತಿಮಿತಿ ಸು-ಪ್ರಣೀತಿಮ್॥

---

| ಮಂತ್ರ | ವಿನಿಯೋಗ |
| --- | --- |
| ಸುತ್ರಾಮಾಣಂ...ಸ್ವಸ್ತಯೇ ॥ | ಈ ಆದಿತ್ಯಚರುಯಾಗದ ಮತ್ತೊಂದು ಯಾಜ್ಯಾ-ಪುರೋನುವಾಕ್ಯೆಯ ಜೋಡಿಯಲ್ಲಿನ ಪುರೋನುವಾಕ್ಯೆ. |

---

**ಸುಶರ್ಮಾಣಮ್** = ಒಳ್ಳೆಯ ಸುಖವುಳ್ಳ; **ಸುಪ್ರಣೀತಿಮ್** = ಸುಖದಿಂದ / ಅನಾಯಾಸದಿಂದ ಕರ್ಮಗಳನ್ನು ನೆರವೇರಿಸುವ; **ಅದಿತಿಮ್ ಉ** = ಅದಿತಿದೇವಿಯನ್ನೇ; **ಅವಸೇ** =[ನಮ್ಮ] ರಕ್ಷಣೆಗಾಗಿ; **ಸು ಹುವೇಮ** = ಚೆನ್ನಾಗಿ ಆಹ್ವಾನಿಸುತ್ತೇವೆ. [ಆಕೆಯು ಯುದ್ಧದಲ್ಲಿ ನಮಗೆ ಜಯವನ್ನುಂಟುಮಾಡಲಿ] ✢ **ಸುತ್ರಾಮಾಣಮ್** = ಚೆನ್ನಾಗಿ ರಕ್ಷಿಸುವ; **ಪೃಥಿವೀಮ್** = ವಿಸ್ತೀರ್ಣವಾಗಿರುವ; **ದ್ಯಾಮ್** = ಪ್ರಕಾಶಮಾನವಾದ; **ಅನೇಹಸಮ್** = ಕಾಲಸ್ವರೂಪವಾಗಿರುವ / ಚಿರಕಾಲದಿಂದಲೂ ಇರುವ/ಪಾಪರಹಿತವಾದ; **ಸುಶರ್ಮಾಣಮ್** = ಒಳ್ಳೆಯ ಸುಖವುಳ್ಳ/ಸುಖವನ್ನು ಕೊಡುವ;

---

ಆಕೆಯು ಮುಪ್ಪಿಲ್ಲದವಳು. ವಿಸ್ತೀರ್ಣವಾದ ಗತಿಯುಳ್ಳವಳು. ಅನೇಕ ಮಹಾತ್ಮರು ಆಕೆಯಲ್ಲಿ ಜನ್ಮತಾಳಿದ್ದಾರೆ. ಒಳ್ಳೆಯ ಸುಖವುಳ್ಳವಳು. ಸುಖವನ್ನು ಕೊಡುವವಳು. ಸುಖವಾಗಿ ಕರ್ಮವನ್ನು ನೆರವೇರಿಸತಕ್ಕವಳು. ಇಂತಹ ಅದಿತಿದೇವಿಯನ್ನೇ ನಮ್ಮ ರಕ್ಷಣೆಗಾಗಿ ಆಹ್ವಾನಿಸುತ್ತೇವೆ. ಆಕೆಯು ನಮಗೆ ಜಯವನ್ನು ಕೊಡಲಿ.

ದೈವೀಂ ನಾವಗ್ಂ ಸ್ವರಿತ್ರಾಮನಾಗಸಮಸ್ರವಂತೀಮಾರು

ಹೇಮಾ ಸ್ವಸ್ತಯೇ ॥ ಇಮಾಗ್ಂ ಸು ನಾವಮಾರುಹಗ್ಂ

---

ದೈವೀಮ್। ನಾವಮ್। ಸ್ವರಿತ್ರಾಮಿತಿ ಸು-ಅರಿತ್ರಾಮ್ । ಅನಾಗಸಮ್। ಅಸ್ರವಂತೀಮ್।

ಏತಿ । ರುಹೇಮ । ಸ್ವಸ್ತಯೇ ॥ ಇಮಾಮ್ । ಸ್ವಿತಿ । ನಾವಮ್ । ಏತಿ । ಆರುಹಮ್।

---

| ಮಂತ್ರ | ವಿನಿಯೋಗ |
|---|---|
| ಇಮಾಗ್ಂ ಸು..ಪಾರಯಿಷ್ನುಮ್॥ | ಇದು ಅದಿತ್ಯೇಷ್ಟಿಯಲ್ಲಿ ವೈಕಲ್ಪಿಕವಾಗಿ ವಿನಿಯುಕ್ತವಾಗಿದೆ. * ಪುರೋನುವಾಕ್ಯೆ. (ಭ.ಭಾ.) *ಯಾಜ್ಯಾನುವಾಕ್ಯೆ. (ಸಾ.) |

---

**ಅದಿತಿಮ್** = ಅಖಂಡಿತವಾದ; **ಸುಪ್ರಣೀತಿಮ್** = ಸುಖವಾಗಿ ಕರ್ಮಗಳನ್ನು ನೆರವೇರಿಸುವ; **ಸ್ವರಿತ್ರಾಮ್** = ಚೆನ್ನಾಗಿ ಶತ್ರುಗಳಿಂದ ರಕ್ಷಿಸುವ/ಒಳ್ಳೆಯ ನೌಕಾಸ್ತಂಭನದಂಡಗಳುಳ್ಳ; **ಅನಾಗಸಮ್**= ಪಾಪರಹಿತವಾದ/ದೋಷರಹಿತವಾದ; **ಅಸ್ರವಂತೀಮ್** = ಛಿದ್ರಗಳಿಲ್ಲದ/ಸೋರದಿರುವ; **ದೈವೀಮ್ ನಾವಮ್** = ದೇವನಿರ್ಮಿತವಾದ ನೌಕೆಯಂತಿರುವ; **ಅದಿತಿಮ್** = ಅದಿತಿದೇವಿಯನ್ನು; **ಸ್ವಸ್ತಯೇ** = ಕ್ಷೇಮಕ್ಕಾಗಿ; **ಆ ರುಹೇಮ** = ಏರಿದ್ದೇವೆ/ ಆಶ್ರಯಿಸಿದ್ದೇವೆ.

---

[ಇಲ್ಲಿ ಅದಿತಿದೇವಿಯನ್ನು ಒಂದು ದೈವೀನೌಕೆಯೆಂದು ವರ್ಣಿಸಿರುತ್ತಾರೆ.] ಯುದ್ಧವೆಂಬ ಸಮುದ್ರವನ್ನು ದಾಟಲು ಹೊರಟ ಯಜಮಾನನಿಗೆ ಅದಿತಿದೇವಿಯು ದೈವೀನೌಕೆಯಂತೆ ಇರುತ್ತಾಳೆ. ಆಕೆಯು ರಕ್ಷಿಸತಕ್ಕವಳು. ನೌಕೆಯೂ ಜಲದಲ್ಲಿ ರಕ್ಷಣೆ ನೀಡುತ್ತದೆ. ಅದಿತಿಯು ವಿಸ್ತಾರವಾದ ಪೃಥಿವೀಸ್ವರೂಪಳು. ಹಡಗೂ ವಿಸ್ತೀರ್ಣವಾಗಿದೆ. ಅದಿತಿಯು ಕಾಲಸ್ವರೂಪಳು/ಪಾಪರಹಿತಳು. ನೌಕೆಯು ಬಹುಕಾಲದಿಂದಲೂ ಇದೆ. ಅದಿತಿಯು ಸುಖವುಳ್ಳವಳು. ನೌಕೆಯೂ ಸುಖಕರವಾಗಿದೆ. ಅದಿತಿದೇವಿಯಂತೆ

---

*ಗಾಯತ್ರೀ ಛಂದಸ್ಸಿನಲ್ಲಿರುವುದರಿಂದ. * ಮೊದಲು ಬರುವುದರಿಂದ.

ಶತಾರಿತ್ರಾಗ್ಂ ಶತಸ್ಫ್ಯಾಮ್ ॥ ಅಚ್ಛಿದ್ರಾಂ

ಪಾರಯಿಷ್ಣುಮ್ ॥೧೧-51॥

[ದಿವಾ ಸ ಸಹಸ್ರಿಣಂ ವೈಶ್ವಾನರಾSSದಿತ್ಯ ತೂನೋಽನೇಹಸಗ್ಂ

ಸುಶರ್ಮಾಣಮೇಕಾನ್ನವಿಗ್ಂಶತಿಶ್ಚ॥]

---

ಶತಾರಿತ್ರಾಮಿತಿ ಶತ-ಅರಿತ್ರಾಮ್ । ಶತಸ್ಫ್ಯಾಮಿತಿ ಶತ-ಸ್ಫ್ಯಾಮ್ ॥ ಅಚ್ಛಿದ್ರಾಮ್ । ಪಾರಯಿಷ್ಣುಮ್ ॥ ೧೧ ॥

---

✣ **ಶತಾರಿತ್ರಾಮ್** = [ಚೋರಾದಿಗಳಿಂದ ರಕ್ಷಿಸಬಲ್ಲ] ನೂರಾರು ಆಯುಧಗಳಿರುವ/ ನೂರಾರು ನೌಕಾದಂಡಗಳಿರುವ/ದಿಕ್ಪಾಲಕರಿಂದ ರಕ್ಷಿತವಾದ; **ಶತಸ್ಫ್ಯಾಮ್** = ಸ್ಫ್ಯ ಸದೃಶವಾದ ನೂರಾರು ಯಜ್ಞಸಾಧನಗಳುಳ್ಳ/ನೂರಾರು ಹುಟ್ಟುಹಾಕುವ ಕೋಲುಗಳುಳ್ಳ/ ಕೂರ್ಮಾದಿಗಳಿಂದ ಧರಿಸಲ್ಪಟ್ಟಿರುವ; **ಅಚ್ಛಿದ್ರಾಮ್** = ದೃಢವಾಗಿರುವ/ ರಂಧ್ರಗಳು ಇಲ್ಲದ; **ಪಾರಯಿಷ್ಣುಮ್** = ಯಾಗಾದಿಕರ್ಮಗಳನ್ನು ಮುಗಿಸಿಕೊಡಬಲ್ಲ/ ಸಮುದ್ರವನ್ನು ದಾಟಿಸಬಲ್ಲ; **ಇಮಾಮ್** = ಈ ಯಾಗಭೂಮಿರೂಪಿಯಾದ ಅದಿತಿ ದೇವಿಯೆಂಬ **ನಾವಮ್** = ನೌಕೆಯನ್ನು; **ಸು ಆರುಹಮ್** = ಚೆನ್ನಾಗಿ ಏರಿದೆನು/ ಆಶ್ರಯಿಸಿದೆನು. [ಆಕೆಯು ಯುದ್ಧವೆಂಬ ಸಮುದ್ರವನ್ನು ದಾಟಿಸಿ ಕ್ಷೇಮವನ್ನು ಕೊಡಲಿ.]

---

**ನೌಕೆಯೂ ಅಖಂಡಿತವಾಗಿದೆ. ಅದಿತಿಯು ಚೆನ್ನಾಗಿ ಕಾರ್ಯ ವನ್ನು ನಿರ್ವಹಿಸಬಲ್ಲಳು. ನೌಕೆಯೂ ತನ್ನ ಯಾನಕಾರ್ಯವನ್ನು ಚೆನ್ನಾಗಿ ಮಾಡುತ್ತದೆ. ಅದಿತಿಯು ಒಳ್ಳೆ ಅರಿತ್ರವುಳ್ಳವಳು [ಶತ್ರುಗಳಿಂದ ರಕ್ಷಿಸಬಲ್ಲಳು]. ನೌಕೆಯು ಹಲವು ಲಂಗರುಗಳನ್ನು ಹೊಂದಿದೆ. ಅದಿತಿಯಂತೆ ನೌಕೆಯು ದೋಷರಹಿತವಾಗಿದೆ. ಅದಿತಿಯು ಛಿದ್ರರಹಿತಳು. ನೌಕೆಯೂ ರಂಧ್ರರಹಿತವಾಗಿದೆ. ಇಂತಹ ದೈವೀನೌಕೆಯಂತಿರುವ ಅದಿತಿದೇವಿಯನ್ನು ಯುದ್ಧದಲ್ಲಿ ಜಯವನ್ನು ಹೊಂದಿ ಕ್ಷೇಮವಾಗಿರುವುದಕ್ಕಾಗಿ ಏರಿದ್ದೇವೆ/ ಆಶ್ರಯಿಸಿದ್ದೇವೆ.**

**[ಇಲ್ಲಿಯೂ ಅದಿತಿದೇವಿಯನ್ನು ನೌಕೆಯಂತೆ ಸ್ತುತಿಸಲಾಗಿದೆ.] ಅದಿತಿಯು**

ಶತಾರಿತ್ರಳು/ಶತ್ರುಗಳನ್ನು ನಿಗ್ರಹಿಸಬಲ್ಲ ನೂರಾರು ಆಯುಧಗಳುಳ್ಳವಳು/ವಿವಿಧವಾದ ಆಯುಧಗಳನ್ನು ಧರಿಸಿರುವ ದಿಕ್ಪಾಲಕರಿಂದ ರಕ್ಷಿತಳಾದವಳು. ನೌಕೆಯೂ ಶತಾರಿತ್ರವಾಗಿದೆ./ನೂರಾರು ನೌಕಾಸ್ಥಾಪನದಂಡಗಳನ್ನು[ಲಂಗರು] ಹೊಂದಿದೆ. ಅದಿತಿಯು ಶತಸ್ಫ್ಯಾ. [ಕೂರ್ಮಾದಿಗಳಿಂದ ಧೃತಳಾದವಳು]. ನೌಕೆಯೂ ಶತಸ್ಫ್ಯಾ. [ನೂರಾರು ತರಣದಂಡ (ಹುಟ್ಟುಕೋಲು)ಗಳುಳ್ಳದ್ದು.] ಅದಿತಿಯು ಅಚ್ಛಿದ್ರಳು. ದೋಷರಹಿತಳು. ನೌಕೆಯೂ ಅಚ್ಛಿದ್ರ. ರಂಧ್ರರಹಿತವಾದುದು. ಅದಿತಿಯು ಕಷ್ಟಗಳನ್ನು ಪರಿಹರಿಸಿ ಫಲಗಳನ್ನು ಕೊಡತಕ್ಕವಳು. ನೌಕೆಯೂ ಸಮುದ್ರವನ್ನು ದಾಟಿಸಿ ಸುಖವನ್ನು ಕೊಡಬಲ್ಲುದು. ಇಂತಹ ಪೃಥಿವೀರೂಪಳಾದ ಅದಿತಿದೇವಿಯೆಂಬ ನೌಕೆಯನ್ನು ಏರಿರುತ್ತೇನೆ/ಆಶ್ರಯಿಸಿರುತ್ತೇನೆ. ಆಕೆಯು ಗೆಲುವನ್ನು ಕೊಟ್ಟು ಕ್ಷೇಮವನ್ನು ಉಂಟುಮಾಡಲಿ.

* * *



ದೇವಾಸುರಾಃ ಪರಾ ಭೂಮಿರ್ಭೂಮಿರುಪ ಪ್ರಯಂತಸ್ಸಂಪಶ್ಯಾಮ್ಯ

ಯಜ್ಞಸ್ಸಂಪಶ್ಯಾಮ್ಯಗ್ನಿಹೋತ್ರಂ ಮಮ ನಾಮ ವೈಶ್ವಾನರ

ಏಕಾದಶ ॥ ೧೧ ॥

ದೇವಾಸುರಾಃ ಕ್ರುದ್ಧಸ್ಸಂಪಶ್ಯಾಮಿ ಸಂಪಶ್ಯಾಮಿ ನಕ್ತಮುಪಗಂತನ್ನೈಕ

ಪಂಚಾಶತ್ ॥ ೫೧ ॥

॥ ದೇವಾಸುರಾಃ ಪಾರಯಿಷ್ಣುಮ್ ॥

ಹರಿಃ ಓಂ ಶ್ರೀ ಕೃಷ್ಣಾರ್ಪಣಮಸ್ತು.

ಇತಿ ಪ್ರಥಮಕಾಂಡೇ ಪಂಚಮಃ ಪ್ರಶ್ನಃ

## ವಿನಿಯೋಗ ಸಂಗ್ರಹ

ಅಂತ್ಯಾನುವಾಕಗಾ ಯಾಜ್ಯಾ ಯಾಗೇ ವೈಶ್ವಾನರಾಭಿಧೇ ।
1-8 ವೈಶ್ವೇತ್ಯಷ್ಟೌ ವಿಕಲ್ಪಾಃ ಸ್ಯುರವ 9-10 ದ್ವೇ ವಾರುಣೇ ಚರೌ ॥
11-12 ದಧೀತಿ ದಧ್ಯಾದಿಚರಾವಗ್ನ್ಯುದ್ವಾಸನನಾಮಕೇ ।
13-14 ಅಗ್ನಿರ್ಭೂವ ಇತಿ ದ್ವೇ ಸ್ತಃ ಪ್ರತೀಕೇ ತೇ ಉಭೇ ಮತೇ ॥
15-16 ಮರುತ್ಸಪ್ತಕಪಾಲೇಷ್ಟಾವದೀ 17-20 ತ್ಯಾದಿತ್ಯಕೇ ಚರೌ ।
ಚತಸ್ರಃ ಸ್ಯುರ್ವಿಕಲ್ಪಾರ್ಥಾ ಇತಿ ಪ್ರಶ್ನೋಽತ್ರ ಪಂಚಮಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-20**



## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

ಇಲ್ಲಿ ಕೊಟ್ಟಿರುವ ಮೀಮಾಂಸಾವಿಷಯಗಳು ಎರಡನೆಯ ಕಾಂಡದ

**'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್' [ತೈ.ಸಂ. 2.2.5]**

ಎಂಬ ಅನುವಾಕಕ್ಕೆ ಸಂಬಂಧಪಟ್ಟಿವೆ. ಇಲ್ಲಿ ಅವುಗಳ ಸಿದ್ಧಾಂತಗಳನ್ನು ಮಾತ್ರ ಸೂಚಿಸಲಾಗಿದೆ.

೧) 'ಯಸ್ಮಿನ್ ಜಾತೇ' ಎಂದು ವಿಹಿತವಾದ ಇಷ್ಟಿಯಲ್ಲಿ 'ಯದಷ್ಟಾಕಪಾಲೋ ಭವತಿ' ಮೊದಲಾದವುಗಳು ಸ್ತಾವಕಗಳು. ವಿಧಾಯಕಗಳಲ್ಲ.

೨) ವೈಶ್ವಾನರೇಷ್ಟಿಯಲ್ಲಿ ಫಲವು ಹುಟ್ಟಿದ ಮಗನಿಗೇ; ಮಗನ ಫಲವು ತಂದೆಗೆ ಇಷ್ಟವಾದುದರಿಂದ ಆತನು ಯಾಗದಲ್ಲಿ ಪ್ರವೃತ್ತನಾಗುತ್ತಾನೆ.

೩) 'ಯಸ್ಮಿನ್ ಜಾತೇ' ಎಂದಿದ್ದರೂ ಹುಟ್ಟಿದೊಡನೆಯೇ ಮಾಡಬೇಕಾಗಿಲ್ಲ. ಜಾತಕರ್ಮಾನಂತರ ಮಾಡಬೇಕು.

೪) ಜಾತಕರ್ಮಾನಂತರವೇ ಮಾಡಬೇಕಾಗಿಲ್ಲ. ಆಶೌಚವು ಕಳೆದು ಶುಚಿಯಾದ ಮೇಲೆ ಜಾತೇಷ್ಟಿಯನ್ನು ಮಾಡಬೇಕು.

೫) ಪ್ರಾಯಶ್ಚಿತ್ತಾರ್ಥವಾಗಿ ವೈಶ್ವಾನರೇಷ್ಟಿ-ಪಾಥಿಕೃತೇಷ್ಟಿ ಎರಡನ್ನೂ ಮಾಡಬೇಕಾಗಿಲ್ಲ. ವಿಕಲ್ಪದಿಂದ ಯಾವುದಾದರೂ ಒಂದನ್ನು ಮಾಡಬೇಕು.

## ಆ) ಛಂದಸ್ಸು

ಈ ಪ್ರಪಾಠಕದಲ್ಲಿ ಬಂದಿರುವ ಋಕ್‌ಗಳ ಛಂದಸ್ಸನ್ನು ಭಟ್ಟಭಾಸ್ಕರ ಭಾಷ್ಯವನ್ನನುಸರಿಸಿ ನೀಡಲಾಗಿದೆ.

೧. ಈ ಕೆಳಗಿನ ಋಕ್‌ಗಳು ಗಾಯತ್ರೀಛಂದಸ್ಸಿನಲ್ಲಿವೆ.

೧. ಆಯಂ ಗೌಃ......।

೨. ತ್ರಿಗ್ಂಶದ್ಧಾಮ..... ।

೩. ಅಸ್ಯ ಪ್ರಾಣಾತ್......।

೪. ಪುನರೂರ್ಜಾ...... ।

೫. ಸಹ ರಯ್ಯಾ..... ।

೬. ಉಪಪ್ರಯಂತಃ..... ।

೭. ಅಸ್ಯಪ್ರತ್ನಾಮ್...... ।

೮. ಅಗ್ನಿರ್ಮೂರ್ಧಾ....... ।

೯. ಅಗ್ನ ಆಯೂಗ್ಂಷಿ.....।

೧೦. ಅಗ್ನೇ ಪವಸ್ವ............।

೧೧. ಅಗ್ನೇ ಪಾವಕ....... ।

೧೨. ಸ ನಃ ಪಾವಕ........... ।

೧೩. ಅಗ್ನಿಶ್ಶುಚಿವ್ರತತಮಃ.......।

೧೪. ಉದಗ್ನೇ ಶುಚಯಃ.......।

೧೫. ಸಂಪಶ್ಯಾಮಿ........ ।

೧೬. ಉಪ ತ್ವಾಽಗ್ನೇ......... ।

೧೭. ರಾಜಂತಮ್........... ।

೧೮. ಸ ನಃ ಪಿತೇವ.......... ।

೧೯. ತತ್ಸವಿತುಃ......... ।

೨೦. ಸೋಮಾನಮ್......... ।

೨೧. ತ್ವಷ್ಟಿತಾರೋ..। [ಗಾಯತ್ರೀಪ್ರಹಾರಃ]

೨೨. ವೈಶ್ವಾನರೋ ನ..... ।

೨೩. ಋತಾವಾನಮ್...... ।

೨೪. ಅಗ್ನಿರ್ಮೂರ್ಧಾ.......।

೨೫. ಮರುತೋ ಯದ್ಧ....... ।

೨೬. ಅದಿತಿರ್ನ...........।

೨೭. ಇಮಾಗ್ಂ ಸುನಾವಮ್..... ।

೨. ಈ ಕೆಳಗಿನ ಋಕ್‌ಗಳು ಅನುಷ್ಟುಪ್ ಛಂದಸ್ಸಿನಲ್ಲಿವೆ.

೧. ಯತ್ತ್ವಾ ಕ್ರುದ್ಧಃ...... ।
೨. ಯತ್ತೇ ಮನ್ಯು...... ।
೩. ಅಯಂ ತೇ ಯೋನಿಃ ...... ।
೪. ಇಡಾಃ ಸ್ಥ ಮಧುಕೃತಃ..... ।
೫. ಪರಿ ತ್ವಾಗ್ನೇ....... ।
೬. ಅಯಮಗ್ನಿಃ ...... ।
೭. ಪಯಸ್ವತೀಃ ....... ।
೮. ಯಾನಿ ಘರ್ಮೇ..... ।
೯. ದಧಿಕ್ರಾವ್ಣ್ಣಃ.......... ।

೩. ಈ ಕೆಳಗಿನ ಋಕ್‌ಗಳು ತ್ರಿಷ್ಟುಪ್ ಛಂದಸ್ಸಿನಲ್ಲಿವೆ.

೧. ಸಪ್ತ ತೇ ಅಗ್ನೇ.....।
೨. ಉಭಾ ವಾಮ್......... ।
೩. ಮಮ ನಾಮ ಪ್ರಥಮಮ್...।
೪. ನಮೋಽಗ್ನಯೇ........।
೫. ಮನೋ ಜ್ಯೋತಿಃ.......।
೬. ಅಗ್ನಿಗ್ಂ ಹೋತಾರಮ್..।
[ಜಗತೀ ವಾ]
೭. ತ್ರಯಸ್ತ್ರಿಂಶತ್....... ।
೮. ಪೃಷ್ಟೋ ದಿವಿ.......... ।
೯. ಜಾತೋ ಯದಗ್ನೇ.....।
೧೦. ತ್ವಮಗ್ನೇ ಶೋಚಿಷಾ....... ।
೧೧. ವೈಶ್ವಾನರಸ್ಯ ಸುಮತೌ.....।
೧೨. ಅವ ತೇ ಹೇಡಃ....... ।
೧೩. ಉದುತ್ತಮಮ್...... ।
೧೪. ಆ ದಧಿಕ್ರಾಃ ........ ।
೧೫. ಭುವೋ ಯಜ್ಞಸ್ಯ..... ।
೧೬. ಯಾವಶ್ಶರ್ಮ...... ।
೧೭. ಮಹೀಮೂ ಷು............ ।
೧೮. ಸುತ್ರಾಮಾಣಂ ಪೃಥಿವೀಮ್..।

**೪. ಈ ಕೆಳಗಿನ ಋಕ್‌ಗಳು ಜಗತೀಛಂದಸ್ಸಿನಲ್ಲಿವೆ.**

| | | |
|---|---|---|
| ೧. | ಅಯಮಿಹ.........\| | |
| ೨. | ಸಂ ತ್ವಮಗ್ನೇ....\| | [ವೃದ್ಧಪದಾ] |
| ೩. | ಮಮ ನಾಮ ತವ ಚ.... \| | [ವೃದ್ಧಪಾದಾ] |
| ೪. | ವೈಶ್ವಾನರಸ್ಯ ದಗ್‌ಂಸನಾಭ್ಯಃ.... \| | |
| ೫. | ಅಸ್ಮಾಕಮಗ್ನೇ...........\| | |

**೫. ಈ ಕೆಳಗಿನ ಋಕ್‌ಗಳು ನಿರ್ದೇಶಿಸಿರುವ ಬೇರೆಬೇರೆ ಛಂದಸ್ಸಿನಲ್ಲಿ ಇವೆ.**

| | | |
|---|---|---|
| ೧. | ಭೂಮಿರ್ಭೂಮ್ನಾ.... \| | ಉಪರಿಷ್ಟಾದ್ಬೃಹತೀ |
| ೨. | ಕದಾ ಚನ ಸ್ತರೀಃ..... \| | ಪಥ್ಯಾಬೃಹತೀ |
| ೩. | ಮನೋ ಜ್ಯೋತಿಃ..[ಮೊದಲನೆಯದು] | ವಿರಾಟ್ |
| ೪. | ಅಭಿನ್ನೋ ಘರ್ಮಃ..... \| | ಚತುಷ್ಪದಾ ಪಂಕ್ತಿಃ |
| ೫. | ಇಂಧಾನಾಸ್ತ್ವಾ ಶತಮ್..... \| | ಸಪ್ತಪದಾ ಶಕ್ವರೀ |
| ೬. | ಅಗ್ನೇ ತ್ವಂ ನಃ......\| | ದ್ವಿಪದಾ ವಿರಾಡ್ಗಾಯತ್ರ್ಯಃ |
| ೭. | ತಂ ತ್ವಾ ಶೋಚಿಷ್ಠ .......\| | ದ್ವಿಪದಾ ವಿರಾಡ್ಗಾಯತ್ರ್ಯಃ |
| ೮. | ವಸುರಗ್ನಿಃ.............. \| | ದ್ವಿಪದಾ ವಿರಾಡ್ಗಾಯತ್ರ್ಯಃ |
| ೯. | ಲೋಕಃ ಸಲೋಕಃ....... \| | ದ್ವಿಪದಾ ವಿಚ್ಛಂದಸಃ, ಯಜೂಗ್‌ಂಷಿ ವಾ |
| ೧೦. | ಕೇತಃ ಸಕೇತಃ ........\| | ದ್ವಿಪದಾ ವಿಚ್ಛಂದಸಃ, ಯಜೂಗ್‌ಂಷಿ ವಾ |
| ೧೧. | ವಿವಸ್ವಾಗ್‌ಂ ಅದಿತಿಃ....\| | ದ್ವಿಪದಾ ವಿಚ್ಛಂದಸಃ, ಯಜೂಗ್‌ಂಷಿ ವಾ |

# ಅನುಬಂಧ

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ತೃತೀಯಪ್ರಶ್ನಃ

| ಅನುವಾಕ | ಹನುಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| ೧ | ೨ | ೧೧೮ | 2 | 18 | 20 |
| ೨ | ೨ | ೧೦೨ | – | 20 | 20 |
| ೩ | ೧ | ೫೮ | – | 16 | 16 |
| ೪ | ೩ | ೧೩೧ | 5 | 11 | 16 |
| ೫ | ೧ | ೬೦ | 4 | 6 | 10 |
| ೬ | ೨ | ೧೧೯ | 3 | 14 | 17 |
| ೭ | ೨ | ೮೧ | 4 | 10 | 14 |
| ೮ | ೨ | ೯೪ | 6 | 10 | 16 |
| ೯ | ೨ | ೧೦೫ | 1 | 18 | 19 |
| ೧೦ | ೨ | ೭೮ | 1 | 11 | 12 |
| ೧೧ | ೧ | ೭೬ | – | 15 | 15 |
| ೧೨ | ೧ | ೩೪ | 1 | 6 | 7 |
| ೧೩ | ೨ | ೯೭ | 3 | 4 | 7 |
| ೧೪ | ೮ | ೪೧೪ | 28 | – | 28 |
| ೧೪ | ೩೧ | ೧೫೬೭ | **58** | **159** | **217** |

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಚತುರ್ಥಪ್ರಶ್ನಃ

| ಅನುವಾಕ | ಹನುಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| ೧ | ೨ | ೧೦೯ | 4 | 5 | 9 |
| ೨ | ೧ | ೪೭ | – | 7 | 7 |
| ೩ | ೧ | ೫೭ | 1 | 6 | 7 |
| ೪ | ೧ | ೪೩ | 2 | 2 | 4 |
| ೫ | ೧ | ೨೦ | 1 | 2 | 3 |
| ೬ | ೧ | ೧೮ | 1 | 2 | 3 |
| ೭ | ೧ | ೧೯ | 1 | 2 | 3 |
| ೮ | ೧ | ೨೫ | 1 | 2 | 3 |
| ೯ | ೧ | ೨೬ | 1 | 2 | 3 |
| ೧೦ | ೧ | ೪೩ | 1 | 3 | 4 |
| ೧೧ | ೧ | ೪೨ | 1 | 3 | 4 |
| ೧೨ | ೧ | ೨೨ | 1 | – | 1 |
| ೧೩ | ೧ | ೩೫ | 1 | 3 | 4 |
| ೧೪ | ೧ | ೩೦ | – | 14 | 14 |
| ೧೫ | ೧ | ೨೦ | 1 | 2 | 3 |
| ೧೬ | ೧ | ೨೦ | 1 | 2 | 3 |
| ೧೭ | ೧ | ೨೬ | 1 | 2 | 3 |
| ೧೮ | ೧ | ೨೯ | 1 | 2 | 3 |
| ೧೮ | ೧೯ | ೬೩೧ | **20** | **61** | **81** |

| ಅನುವಾಕ | ಹನುಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| | ೧೯ | ೬೩೧ | 20 | 61 | 81 |
| ೧೯ | ೧ | ೨೯ | 1 | 2 | 3 |
| ೨೦ | ೧ | ೧೯ | 1 | 2 | 3 |
| ೨೧ | ೧ | ೨೬ | 1 | 2 | 3 |
| ೨೨ | ೧ | ೭೭ | 3 | 2 | 5 |
| ೨೩ | ೧ | ೨೪ | 1 | 1 | 2 |
| ೨೪ | ೧ | ೨೩ | 1 | 1 | 2 |
| ೨೫ | ೧ | ೧೫ | 1 | 1 | 2 |
| ೨೬ | ೧ | ೧೬ | – | 1 | 1 |
| ೨೭ | ೧ | [illegible] | 2 | 1 | 3 |
| ೨೮ | ೧ | ೨೬ | [illegible] | 1 | 1 |
| ೨೯ | ೧ | ೨೩ | 1 | 2 | 3 |
| ೩೦ | ೧ | ೨೧ | 1 | 2 | 3 |
| ೩೧ | ೧ | ೨೮ | 1 | 2 | 3 |
| ೩೨ | [illegible] | [illegible]೯ | 1 | – | 1 |
| ೩೩ | ೧ | ೧೯ | 1 | – | 1 |
| ೩೪ | ೧ | ೩೬ | – | 12 | 12 |
| ೩೫ | ೧ | ೨೪ | – | 12 | 12 |
| ೩೬ | ೧ | ೧೮ | – | 9 | 9 |
| ೩೭ | ೧ | ೨೬ | 1 | 2 | 3 |
| ೩೮ | ೧ | ೨೩ | 1 | 2 | 3 |
| ೩೮ | ೩೯ | ೧೧೦೫ | 38 | 118 | 156 |



| ಅನುವಾಕ | ಹನ ಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| | ೩೯ | ೧೧೦೫ | 38 | 118 | 156 |
| ೩೯ | ೧ | ೨೭ | 1 | 2 | 3 |
| ೪೦ | ೧ | ೨೬ | 1 | 2 | 3 |
| ೪೧ | ೧ | ೨೬ | 1 | 2 | 3 |
| ೪೨ | ೧ | ೩೦ | 1 | 2 | 3 |
| ೪೩ | ೨ | ೧೧೮ | 6 | 4 | 10 |
| ೪೪ | ೩ | ೧೪೮ | 6 | 3 | 9 |
| ೪೫ | ೩ | ೧೫೬ | 9 | 4 | 13 |
| ೪೬ | ೩ | ೧೬೪ | 14 | – | 14 |
| ೪೬ | ೫೪ | ೧೮೦೦ | 77 | 137 | 214 |



# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಪಂಚಮಪ್ರಶ್ನಃ

[ಮಂತ್ರ ಮತ್ತು ಬ್ರಾಹ್ಮಣಭಾಗ]

| ಅನುವಾಕ | ಹನುಸ್ಸುಗಳು | ಪದಗಳು | ಋಕ್‌ಗಳು |
|---|---|---|---|
| ೧ | ೪ | ೨೨೫ | — |
| ೨ | ೫ | ೨೩೬ | — |
| ೩ | ೩ | ೧೬೩ | 13 [10 + 3] |
| ೪ | ೪ | ೨೨೫ | — |
| ೫ | ೪ | ೨೧೭ | 16 [12 + 4] |
| ೬ | ೪ | ೨೨೯ | 16 [11 + 5] |
| ೭ | ೬ | ೩೧೬ | — |
| ೮ | ೫ | ೨೭೯ | — |
| ೯ | ೭ | ೩೬೩ | — |
| ೧೦ | ೪ | ೧೯೫ | 13 [12 + 1] |
| ೧೧ | ೫ | ೨೬೯ | 20 |
| ೧೧ | ೫೧ | ೨೭೧೭ | **78** |



*ಪಂಚಮಪ್ರಶ್ನೆಯಲ್ಲಿ ಋಕ್‌ಗಳನ್ನುಳಿದ ಭಾಗವೆಲ್ಲವೂ ಯಜುಸ್ಸುಗಳು ಅಥವಾ ಯಜುಬ್ರ್ರಾಹ್ಮಣಗಳಾಗಿರುತ್ತವೆ.

*ಅನುಬಂಧದಲ್ಲಿ ಮಂತ್ರಗಳ ಒಟ್ಟು ಸಂಖ್ಯೆಯನ್ನು ಆಪಸ್ತಂಬ ಮತದಂತೆ ನೀಡಿದೆ.

*ಋಕ್‌ಗಳೆಂದು ನಿರ್ದಿಷ್ಟವಾದವುಗಳು ಕೆಲವೆಡೆ ಮಾತ್ರ ಉಭಯಭಾಷ್ಯ ಸಮ್ಮತವಾಗಿವೆ.

---



# ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ – 1**
(ವೇದಗಳ ಪರಿಚಯ, ಕೃಷ್ಣ ಯಜುರ್ವೇದ ಪರಿಚಯ, ಯಜ್ಞಗಳ ಪರಿಚಯ)

**ಸಂಪುಟ – 2**
ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 1–2 ಪ್ರಪಾಠಕಗಳು)

**ಸಂಪುಟ – 3**
ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 3–4–5 ಪ್ರಪಾಠಕಗಳು

**ಸಂಪುಟ – 4**
ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 6–7–8 ಪ್ರಪಾಠಕಗಳು)

**ಸಂಪುಟ – 5**
ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 1–2 ಪ್ರಪಾಠಕಗಳು)

**ಸಂಪುಟ – 6**
ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 3–4 ಪ್ರಪಾಠಕಗಳು)

**ಸಂಪುಟ – 7**
ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 5–6 ಪ್ರಪಾಠಕಗಳು)

**ಸಂಪುಟ – 8**
ತೈತ್ತಿರೀಯ ಸಂಹಿತೆ
(ತೃತೀಯ ಕಾಂಡ 1–2–3 ಪ್ರಪಾಠಕಗಳು)


ಪ್ರತಿಗಳಿಗೆ :

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ.)**
31, ಪಂಪಮಹಾಕವಿರಸ್ತೆ, ಬೆಂಗಳೂರು–560 004
ದೂರವಾಣಿ : 26677852





ಮುದ್ರಕರು : ಪರಿಮಳ ಮುದ್ರಣಾಲಯ, ಬ್ಯಾಟರಾಯನಪುರ, ಮೈಸೂರು ರಸ್ತೆ, ಬೆಂಗಳೂರು–26. ದೂ : 26758058